

ಕರ್ನಾಟಕ ಸರ್ಕಾರ

# ಕೌಟುಂಬಿಕ ಜೀವನ ಶಿಕ್ಷಣ

# ಶಿಕ್ಷಣ ಮೌಲ್ಯ



ಜೀವನಕ್ಕೆ ಒಂದು ಮಾರ್ಗದರ್ಶಿ

ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ಒಂದು ಪಠ್ಯ ಪುಸ್ತಕ

ಮಾನವತೆಯ ಭವಿಷ್ಯ ಕುಟುಂಬ ಮಾರ್ಗದ
ಮೂಲಕ ಚಲಿಸುತ್ತದೆ.

ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ನಿರ್ದೇಶನಾಲಯ,
ಬಿ.ಪಿ.ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು - 580 004

# ಕೌಟುಂಬಿಕ ಜೀವನ ಶಿಕ್ಷಣ

# ಶಿಕ್ಷಣ ಮೌಲ್ಯ




✍ ಮೇರಿ ಮಿಗ್ನಾನ್ ಮಾಸ್ಕೆರ್ನಾಹಸ್


ಕನ್ನಡಕ್ಕೆ ಅನುವಾದ


ಶ್ರೀ ಶಿವಣ್ಣ

ಯುವಜನ ಸೇವಾ ಇಲಾಖೆ, ಕರ್ನಾಟಕ ರಾಜ್ಯ ಸರಕಾರ

ಬೆಂಗಳೂರು - 580 004



ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ನಿರ್ದೇಶನಾಲಯ,

ಬಿ.ಪಿ.ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು - 580 004

# ಕೌಟುಂಬಿಕ ಜೀವನ ಶಿಕ್ಷಣ

## ವಿಷಯ ಪರಿವಿಡಿ


| ಅಧ್ಯಾಯ | ವಿಷಯ ವಿವರ |
|---|---|
| 1) | ಕೌಟುಂಬಿಕ ಜೀವನ ಶಿಕ್ಷಣ |
| 2) | ಕುಟುಂಬ |
| 3) | ವಿದ್ಯಾರ್ಥಿ ಮತ್ತು ಅವನ : ಅವಳ: ಕುಟುಂಬ |
| 4) | ಸಂಬಂಧಗಳು |
| 5) | ತರುಣ ಮತ್ತು ವ್ಯಕ್ತಿತ್ವದ ಬೆಳವಣಿಗೆ |
| 6) | ಸಮಾಜದಲ್ಲಿ ತರುಣ : ವಿದ್ಯಾರ್ಥಿ ಮತ್ತು ನಾಗರಿಕತನ |
| 7) | ಸಮಾಜೀಕರಣ |
| 8) | ಮನುಷ್ಯನ ಲೈಂಗಿಕ ಪ್ರವೃತ್ತಿ |
| 9) | ಲೈಂಗಿಕ ಪ್ರವೃತ್ತಿಯ ಒಲವು |
| 10) | ಧೂಮಪಾನ-ಮಧ್ಯಸಾರ ಮತ್ತು ಔಷಧಗಳು ಆಫೀಮು |
| 11) | ಹೆಂಗಸರು - ಮತ್ತು ಗಂಡಸರು ಭಾರತದಲ್ಲಿ ಹೆಂಗಸರ ಸ್ಥಾನ |
| 12) | ವಿವಾಹ ಸನ್ನಾಹ ಮತ್ತು ತರುಣ ತರುಣಿಯರನ್ನು ವಿವಾಹಕ್ಕೆ ಸಜ್ಜುಗೊಳಿಸುವುದು |
| 13) | ಬದುಕಿಗೆ ಗೌರವ |
| 14) | ಶಿಶು ಪೋಷಣೆ ಮತ್ತು ಹೊಣೆಯರಿತ ಪೋಷಕತ್ವ |
| 15) | ಜನಸಂಖ್ಯೆ ಶಿಕ್ಷಣ ಮತ್ತು ಕುಟುಂಬ ಯೋಜನೆ |
| 16) | ಮಾನಸಿಕ ಆರೋಗ್ಯ |
| 17) | ಬುದ್ಧಿಮಾತು............... |

# ಕೌಟುಂಬಿಕ ಜೀವನ ಶಿಕ್ಷಣ

## ಮೌಲಿಕ ಶಿಕ್ಷಣ

## ವಿಷಯ ಸೂಚಿ


**ಅಧ್ಯಾಯ - 1** ಕೌಟುಂಬಿಕ ಜೀವನ ಶಿಕ್ಷಣ
ವ್ಯಾಖ್ಯಾನ, ಗುರಿಗಳು, ಧ್ಯೇಯಗಳು ಮತ್ತು ಉದ್ದೇಶಗಳು
ಮೌಲಿಕ ಶಿಕ್ಷಣ, ದೇಹಾತ್ಮವಾದ, ಮೌಲ್ಯ ಮತ್ತು ಆಯ್ಕೆ
ಮೌಲ್ಯಗಳ ಪರಿವರ್ತನೆ, ಮೌಲ್ಯ ಸುಧಾರಿತ ಶಿಕ್ಷಣ, ಶಿಕ್ಷಕರ ಪಾತ್ರ.

**ಅಧ್ಯಾಯ-2** ಕುಟುಂಬ
ವ್ಯಾಖ್ಯಾನ, ಮನೆ, ಭಾರತೀಯ ಕುಟುಂಬ.
ಕೌಟುಂಬಿಕ ಮಾದರಿಗಳ ಪ್ರಕಾರಗಳು,
ಕುಟುಂಬದ ಸಾಮಾಜಿಕ ಪ್ರಕಾರಗಳು,
ಕುಟುಂಬ ಒಬ್ಬ ರಕ್ಷಕನಾಗಿ ಮತ್ತು ಮೌಲ್ಯಗಳ ವಾಹಕವಾಗಿ
ಕುಟುಂಬ.
ಸವಾಲುಗಳು ಮತ್ತು ಬದಲಾವಣೆಗಳು.
ಕುಟುಂಬದಲ್ಲಿ ಘರ್ಷಣೆ
ಕುಟುಂಬ ಸೇವೆಯಲ್ಲಿ ಸಮಾಜ

**ಅಧ್ಯಾಯ-3** ವಿದ್ಯಾರ್ಥಿ ಮತ್ತು ಅವನ : ಅವಳ ಕುಟುಂಬ
ನ್ಯಾಯದತ್ತ ಶಿಕ್ಷಣ (31)
ತಂದೆ ತಾಯಿಗಳ ಆರೋಗ್ಯದಾಯಕ
ಮನೋವೃತ್ತಿಗಳಿಗೆ ವಿದ್ಯಾರ್ಥಿಗಳ ಹಕ್ಕು (32)
ತಲೆಮಾರು ಅಂತರ (33)
ಸ್ವಾತಂತ್ರ್ಯ, ಹೊಣೆಗಾರಿಕೆ ಮತ್ತು ದಕ್ಷತೆ (34)
ಸಂವಾದ ಮತ್ತು ಪಾಲುಗಾರಿಕೆ (36)
ಸಮತೋಲನವನ್ನು ನಿರ್ವಹಿಸುವುದು (37)
ಪೋಷಕರ ಹೊಣೆಗಾರಿಕೆ (38)

**ಅಧ್ಯಾಯ-4** ಸಂಬಂಧಗಳು
ಮಾತೃತ್ವ (48)
ಪಿತೃತ್ವ (50)
ಹಿತವಾದ ಮತ್ತು ನವೀಕೃತ ಪ್ರೀತಿಯ ಶಿಸ್ತು (52)

ಪ್ರಕರಣದ ಅಭ್ಯಾಸ (53)
ಅಧ್ಯಾಯ-5 ತಾರಣ್ಯ ಮತ್ತು ವ್ಯಕ್ತಿತ್ವದ ಬೆಳವಣಿಗೆ
ತಾರುಣ್ಯ (55)
ಮಾನವನ ಅಗತ್ಯತೆಗಳ ತಕ್ಕಡಿ (56)
ತಂದೆ ತಾಯಿಗಳಿಗೆ ಮತ್ತು ಶಿಕ್ಷಕರಿಗೆ ಮಾರ್ಗದರ್ಶನಗಳು (59)
ನನ್ನನ್ನು ರೂಪಿಸುವುದು ಯಾವುದು (61)
ಬದುಕಿನಲ್ಲಿ ಗುರಿ - ಬದುಕಿನ ಅರ್ಥ (61)
ವ್ಯಕ್ತಿತ್ವದ ಬೆಳವಣಿಗೆ (62)
ಮನೋಭಾವಗಳು (66)
ಹೋರಾಟಗಳು (69)
ತರುಣ ಮತ್ತು ಧರ್ಮ (71)
ಜಾತ್ಯತೀತತೆ (74)
ಅಧ್ಯಾಯ-6 ಸಮಾಜದಲ್ಲಿ ತರುಣ
ವಿದ್ಯಾರ್ಥಿ ಮತ್ತು ನಾಗರೀಕತನ (84)
ನಾಯಕತ್ವ (85)
ನೈತಿಕ ಶಿಕ್ಷಣ (87)
ವೃತ್ತಿ ಸಂಬಂಧ ಮಾರ್ಗದರ್ಶನ (88)
ಪ್ರವೃತ್ತಿ ಪರೀಕ್ಷಣೆ (89)
ನಡತೆ ಆಯ್ಕೆಯ ಕಾರ್ಯರೀತಿ (91)
ಅಧ್ಯಾಯ-7 ಸಾಮಾಜಿಕೀಕರಣ
ಸಾಮಾಜಿಕೀಕರಣ ಕಾರ್ಯವಿಧಾನ (100)
ಗೆಳೆತನಗಳು (103)
ಮೋಹ (113)
ಸಮಾನಗುಣಗಳ ತಂಡಗಳು (105)
ಪ್ರೇಮ (110)
ಅಧ್ಯಾಯ-8 ಮನುಷ್ಯನ ಲೈಂಗಿಕ ಪ್ರವೃತ್ತಿ
ಲೈಂಗಿಕ ಅನನ್ಯತೆಯ ವಿಕಾಸ (112)
ಲೈಂಗಿಕ ಅನನ್ಯತ್ವದ ನಿರ್ಧಾರಕಗಳು (112)
ಮಾತಾಪಿತೃಗಳ ಹೊಣೆಗಾರಿಕೆ (117)
ಲೈಂಗಿಕ ಶಿಕ್ಷಣ (118)
ಕೌಟುಂಬಿಕ ಜೀವನ ಶಿಕ್ಷಣ ಶಾಲೆಯಲ್ಲಿ - ಕಾಲೇಜಿನಲ್ಲಿ (119)
ಸ್ತ್ರೀತ್ವ (123)

ಹೆಣ್ಣಿನ ಸಂತಾನೋತ್ಪತ್ತೀಯ ವ್ಯವಸ್ಥೆ ( 128)
ಅಧ್ಯಾಯ-9 ಲೈಂಗಿಕ ಪ್ರವೃತ್ತಿಯ ತಿರುವು
ವ್ಯಾಖ್ಯಾನ ( 132)
ಮುಷ್ಠಿ ಮೈಥುನ ( 133)
ಸಲಿಂಗ ಕಾಮ ( 135)
ಲೈಂಗಿಕವಾಗಿ ವರ್ಗಾಯಿಸಲ್ಪಡುವ ರೋಗಗಳು ( 139)
ಏಡ್ಸ್ ( 142)
ವಿವಾಹ ಪೂರ್ವ ಲೈಂಗಿಕ ವಿಚಾರದ ಬಗ್ಗೆ ಯುವಕರಿಗೆ ಬುದ್ದಿವಾದ
ಸಮಸ್ಯೆಗಳು ( 147)
ಅಧ್ಯಾಯ-10 ಧೂಮಪಾನ, ಮದ್ಯಸಾರ ಮತ್ತು ಔಷಧಗಳು
ವ್ಯಾಖ್ಯಾನ - ( 153)
ಧೂಮಪಾನ-ಧೂಮಪಾನ ಬಿಟ್ಟು ಬಿಡಿ ( 153)
ಮಧ್ಯಸಾರ ರೋಗ-ಪಾನೀಯಗಳ ದುರುಪಯೋಗ ( 156)
ಚಿಕಿತ್ಸೆ - ಪರಿಹಾರಕ ( 159)
ಅಧ್ಯಾಯ-11 ಹೆಂಗಸರು ಮತ್ತು ಗಂಡಸರು
ಭಾರತದಲ್ಲಿ ಹೆಂಗಸರ ಸ್ಥಾನ ( 175)
ಲೈಂಗಿಕ ವಿವೇಚನೆ ( 175)
ಹೆಂಗಸರ ಪ್ರಚಲಿತ ತಿಳವು ( 177)
ಸ್ತ್ರೀ ಶಿಕ್ಷಣ ( 180)
ಉದ್ಯೋಗಸ್ಥ ಮಹಿಳೆ ಮತ್ತು ಮನೆಯಲ್ಲಿ ಹೆಂಗಸು ( 181)
ಸ್ತ್ರೀ ವಿಮೋಚನೆ ( 183)
ಪುರುಷ-ಗಂಡನಾಗಿ ಮತ್ತು ತಂದೆಯಾಗಿ ( 184)
ವರದಕ್ಷಿಣೆ ( 187)
ವಿವಾಹ ವಿಚ್ಛೇದ ( 188)
ಅಧ್ಯಾಯ-12 ವಿವಾಹ ಸನ್ನಾಹ ಮತ್ತು ಮದುವೆ
ತರುಣ ತರುಣಿಯರನ್ನು ವಿವಾಹಕ್ಕೆ ಸಜ್ಜುಗೊಳಿಸುವುದು
ಭಾರತೀಯ ಸಂಸ್ಕೃತಿ ( 190)
ವಿವಾಹಕ್ಕೆ ತಯಾರಿಸುವ ಹಂತಗಳು
ವಿವಾಹ ಪೂರ್ವದ ಮೂಢನಂಬಿಕೆಗಳು ( 200)
ಪಾಲುಗಾರ ರಿಯನ್ನು ಆಯುವುದು ( 201)
ನಿಶ್ಚಿತಾರ್ಥದಿಂದ ವಿವಾಹದವರೆಗೆ ( 203)
ವಿವಾಹದಲ್ಲಿ ಗೆಳೆತನ ( 203)

ಗೃಹದ ದೇವಾಲಯ (205)
ಹಿಂದೂ ವಿವಾಹ ಇಸ್ಲಾಂ ಮತ್ತು ವೈವಾಹಿಕ ಪಾಲುದಾರರಿ (208)
**ಅಧ್ಯಾಯ - 13** ಬದುಕಿಗೆ ಗೌರವ
ಅನುವಂಶೀಯತೆ, ವರ್ಣತಂತುಗಳು (216)
ಉತ್ಪತ್ತಿೀಯ ಉಪದೇಶ (217)
ಇನ್‌ವಿಟ್ರೋ ಗರ್ಭಾದಾನ (219)
ಜೀವ ಆರಂಭವಾಗುವುದು ಯಾವಾಗ? (221)
ಸಾಮಾನ್ಯ ಪ್ರಶ್ನೆಗಳು ಮತ್ತು ಉತ್ತರಗಳು (228)
ಗರ್ಭಪಾತ (231)
**ಅಧ್ಯಾಯ- 14** ಶಿಶು ಪೋಷಣೆ ಮತ್ತು ಹೊಣೆಯರಿತ ಪೋಷಕತ್ವ
ಮಕ್ಕಳ ಬೆಳವಣಿಗೆಯ ಹಂತಗಳು (236)
ಶಿಶುಜನನ (238)
ಪೋಷಕತ್ವ (239)
ಮೊಲೆಯಾಡಿಸುವುದು (242)
ಪೋಷಕತ್ವ ಜವಾಬ್ದಾರಿ (246)
ಸಹಜ ಕುಟುಂಬ ಯೋಜನೆ (246)
ಉದ್ಯೋಗಸ್ಥ ಮಹಿಳೆ ಮತ್ತು ತಾಯಿ (248)
ಉದ್ಯೋಗಿ ಹೆಂಡತಿ ಮತ್ತು ತಾಯಿ (249)
ಆರೋಗ್ಯ - ಪಥ್ಯ ಮತ್ತು ಆರೋಗ್ಯ ಶಾಸ್ತ್ರ (248)
ತರುಣ ಆರೋಗ್ಯ (249)
**ಅಧ್ಯಾಯ- 15** ಜನಸಂಖ್ಯಾ ಶಿಕ್ಷಣ ಮತ್ತು ಕುಟುಂಬ ಯೋಜನೆ
ಅಂಕಿಅಂಶಗಳು (253)
ಹುಟ್ಟಿನ ಅಧಿಕ ಪ್ರಮಾಣಕ್ಕೆ ಕಾರಣಗಳು (254)
ಜನಸಂಖ್ಯಾ ನಿಯಂತ್ರಣ (254)
ಕುಟುಂಬ ಯೋಜನೆ (255)
ಕುಟುಂಬ ಯೋಜನೆಯ ಮಾರ್ಗಗಳ ವರ್ಗೀಕರಣ (255)
ನಡತೆಯ ಮಾರ್ಗಗಳು (256)
ರಾಸಾಯನಿಕ ಮಾರ್ಗಗಳು (257)
ಯಾಂತ್ರಿಕ ಅಥವಾ ಅಡತಡೆಯ ಮಾರ್ಗಗಳು (258)
ಚೋದಕ ಸ್ರಾವದ ಮಾರ್ಗಗಳು (262)
ನಿರ್ವೀರ್ಯೀಕರಣ ( )
ಅನುಕೂಲಗಳು - ಅನಾನುಕೂಲಗಳು (265)

ಅಧ್ಯಾಯ- 16 ಮಾನಸಿಕ ಆರೋಗ್ಯ
ಮಾನಸಿಕ ಆರೋಗ್ಯ ಮತ್ತು ಮಾನಸಿಕ ಆರೋಗ್ಯ
ಶಾಸ್ತ್ರ ಆತ್ಮ (267)
ಮಾನಸಿಕ ಆರೋಗ್ಯ ಕಾರ್ಯಕ್ರಮ ಆತಂಕ ಒತ್ತಡ (268)
ಒತ್ತಡ (ಯೂಸ್ಟ್ರೆಸ್) ಮತ್ತು ಇಕ್ಕಟ್ಟು (271)
ಭಾವ ವಿಕಾರಮೂಲದ ಸಾಮಾನ್ಯ ಸಂಕೇತಗಳು (274)
ದುಷ್ಟ ವೃತ್ತ (274)
ವ್ಯಕ್ತಿಯ ಆಂತರಿಕ ಸಂಬಂಧ (275)
ಒಂದು ಪ್ರಕರಣದ ಅಧ್ಯಯನ ಆತ್ಮವಿಶ್ವಾಸ (275)
ಅಧ್ಯಾಯ- 17 ಬುದ್ಧಿಮಾತು
ವ್ಯಾಖ್ಯಾನ (282)
ಸಲಹೆ ನೀಡುವುದರ ಗುರಿಗಳು (283)
ಸಮಸ್ಯೆ ಪರಿಹಾರ ವಿಧಾನ-ತತ್ವಗಳು (284)
ಯಶಸ್ವಿಯಾಗಿ ಸಲಹೆ ನೀಡುವುದು (286)
ಆರಂಭದಲ್ಲಿ ಸಲಹೆ ನೀಡುವು ಕ್ರಮ (287)
ಉಪದೇಶ ನೀಡುವುದು ಜವಾಬ್ದಾರಿಯನ್ನು ಪ್ರೋತ್ಸಾಹಿ
ಉಪದೇಶ ನೀಡುವುದರ ಅಧ್ಯಾತ್ಮಾಕ (290)
ಪ್ರಕರಣ ವ್ಯಾಸಂಗ (293)
ಕೇಳುವುದಕ್ಕೆ ಮಾರ್ಗದರ್ಶಿಗಳು ಮತ್ತು ಪ್ರತಿಕ್ರಿಯಿಸುವುದು (294)

ಅಧ್ಯಾಯ-೧

# ಕೌಟುಂಬಿಕ ಜೀವನ ಶಿಕ್ಷಣ

## ವ್ಯಾಖ್ಯಾನ :

ಕೌಟುಂಬಿಕ ಜೀವನ ಶಿಕ್ಷಣವೆಂದರೆ ಮೌಲ್ಯಗಳಲ್ಲಿ ಬಂಧುತ್ವಗಳಲ್ಲಿ ಶಿಕ್ಷಣ.

ಕೌಟುಂಬಿಕ ಜೀವನ ಶಿಕ್ಷಣವನ್ನು ಹಾಗೆ ಕರೆಯುವುದಕ್ಕೆ ಕಾರಣ ಪ್ರತಿಯೊಬ್ಬ ವ್ಯಕ್ತಿಯೂ ಒಂದು ಕುಟುಂಬದಿಂದ ಬರುತ್ತಾನೆ; ಬದುಕು ಅಂತರ ಬಂದುತ್ವಗಳ ಸರಣಿಯಿಂದ ಕೂಡಿರುವುದರಿಂದ ಪ್ರತಿಯೊಬ್ಬ ವ್ಯಕ್ತಿಯೂ ಕುಟುಂಬದಲ್ಲಿ ಅಥವಾ ಸಮಾಜದಲ್ಲಿ ಬದುಕುತ್ತಾನೆ.

ಆದ್ದರಿಂದ ಅದು ತರುಣ ಜನಾಂಗವನ್ನು 'ಒಂದು ಪೂರ್ಣ ಮತ್ತು ಸಾಮರಸ್ಯದಿಂದ ಬದುಕಲು ತಯಾರಿಸುವುದು ಅಥವಾ ಅದಕ್ಕೆ ಶಿಕ್ಷಣ ಕೊಡುವುದು ಮತ್ತು ಹಾಗೆ ಜೀವಿಸುವುದಕ್ಕೆ ತೃಪ್ತಿಕರ ಮತ್ತು ದೃಢ ಬಂಧುತ್ವಗಳನ್ನು ಮತ್ತು ಮೌಲ್ಯಗಳ ಸದೃಢ ಪದ್ಧತಿಯನ್ನು ಬೆಳೆಸಲು ವಿದ್ಯೆಯನ್ನು ಮತ್ತು ನೈಪುಣ್ಯಗಳನ್ನು ನೀಡುವುದು.

ಆದ್ದರಿಂದ ಕೌಟುಂಬಿಕ ಜೀವನ ಶಿಕ್ಷಣ ತನ್ನ ಪ್ರಮುಖ ಧೋರಣೆಗಳನ್ನು ಹೀಗೆ ಹೊಂದಿದೆ.

## ಎರಡು ಗಮ್ಯಗಳು :

1) ಸರಿಯಾದ ಆದ್ಯತೆಗಳೊಂದಿಗೆ ಮೌಲ್ಯಗಳ ಸದೃಢ ಪದ್ಧತಿಯನ್ನು ಬೇರೂರಿಸುವುದು.

2) ಬೆಳೆಯುವ ಕಾರ್ಯ ಸ್ವರೂಪದಲ್ಲಿ ತೃಪ್ತಿಕರವಾದ ಮತ್ತು ಸಿದ್ಧರಾದ ಬಂಧುತ್ವಗಳನ್ನು ಅಭಿವೃದ್ಧಿ ಪಡಿಸಲು ಮತ್ತು ನಿರ್ವಹಿಸಲು ಅವಶ್ಯವಾದ

ನಿಪುಣತೆಗಳನ್ನು ಆರ್ಜಿಸಲು ತರುಣರಿಗೆ ನೆರವು ನೀಡುವುದು.

## ಧ್ಯೇಯೊದ್ದೇಶಗಳು :

ಈ ಗಮ್ಯಗಳನ್ನು ತಲುಪುವ ಕಾರ್ಯವಿಧಾನದಲ್ಲಿ ಈ ಕೆಳಕಂಡ ಉಪ ಉದ್ದೇಶಗಳನ್ನು ಕೂಡ ಹುಡುಕಬೇಕು.

## ಕೌಟುಂಬಿಕ ಜೀವನ ಶಿಕ್ಷಣದ ಧ್ಯೇಯಗಳು :

1) ಕುಟುಂಬವು ವಿಶೇಷವಾಗಿ ಮನೆಯಲ್ಲಿ ತಾಯಿತಂದೆಗಳು ಕೊಡುವ ಶಿಕ್ಷಣವನ್ನು ಪೂರಕಗೊಳಿಸುವುದು.

2) ಬೆಳೆಯುತ್ತಿರುವ ಕೌಮಾರ್ಯದಲ್ಲಿ ಒಳ್ಳೆಯ ನಡೆತೆಯನ್ನು ಅಥವಾ ವ್ಯಕ್ತಿತ್ವವನ್ನು ಬೆಳೆಸುವ ಗುರಿಯನ್ನು ಹೊಂದಿರುತ್ತದೆ. ಮತ್ತು ಆರೋಗ್ಯಕರ ಬದುಕಿಗೆ ಒಳ್ಳೆಯ ನೀತಿಯನ್ನು ಮತ್ತು ಆಧ್ಯಾತ್ಮಿಕ ಸಂಹಿತೆಯನ್ನು ಯುವಕನಿಗೆ ಒದಗಿಸುತ್ತದೆ.

3) ಅನೇಕ ಅಥವಾ ವಿವಿಧ ಕಾರಣಗಳಿಂದ ತಾಯಿತಂದೆಗಳು ತಮ್ಮ ಜವಾಬ್ದಾರಿಯನ್ನು ತೊರೆದುಬಿಟ್ಟ ಸಂದರ್ಭಗಳಲ್ಲೆಲ್ಲ ಕೌಟುಂಬಿಕ ಜೀವನ ಶಿಕ್ಷಣವು ಈ ತೆರವನ್ನು ತುಂಬಿಕೊಡಲು ಶಾಲೆಯ ಅಥವಾ ಕಾಲೇಜಿನ ದಾರಿ ಹುಡುಕುತ್ತದೆ.

4) ಅಗತ್ಯತೆ ಬಿದ್ದೆಡೆಗಳಲ್ಲಿ ಮತ್ತು ಕಾರ್ಯ ಸಾಧ್ಯತೆ ಇರುವೆಡೆಗಳಲ್ಲಿ ಸಲಹೆ ಮತ್ತು ಇತರ ಮಾರ್ಗಗಳಿಂದ ಪೋಷಕ ಶಿಕ್ಷಣವನ್ನು ಪ್ರಯತ್ನಿಸಬಹುದು.

5) ವಿವಿಧ ರೀತಿ ದೃಶ್ಯ-ಶ್ರವಣಸಾಧನಗಳ ಅಭ್ಯಾಸ ಇತ್ಯಾದಿಗಳ ಮೂಲಕ ಈ ಧ್ಯೇಯ ಮತ್ತು ಗುರಿಸಾಧನೆ ನೆರವು ನೀಡಬಹುದು.

6) ವ್ಯಕ್ತಿತ್ವದಲ್ಲಿ ಲೈಂಗಿಕತ್ವದಲ್ಲಿ ಸಾಮರ್ಥ್ಯವನ್ನು ಸಂಪಾದಿಸುವುದು ಮತ್ತು ಸಾಮಾನ್ಯ ಬೆಳವಣಿಗೆ ಮತ್ತು ಅಭಿವೃದ್ಧಿಯನ್ನು ರೂಢಿಸಿಕೊಳ್ಳುವುದು. ಸಾಧಾರಣ ಸ್ವಭಾವದಿಂದ ವೈವಿಧ್ಯಗಳನ್ನು ಕಂಡುಕೊಳ್ಳುವುದು ಹಾಗೂ ಅವುಗಳಿಗೆ ಹೊಂದಿಕೊಂಡಂತೆ ಪರಿಣಾಮಕಾರಿಯಾಗಿ ವ್ಯವಹರಿಸುವುದನ್ನು ಕಲಿತುಕೊಳ್ಳುವುದು.

7) 'ಸಮಸ್ಯಾತ್ಮಕ' ವಿದ್ಯಾರ್ಥಿಯು ಮನೆಯ ಮತ್ತು ಕಾಲೇಜಿನ ಸನ್ನಿವೇಶಗಳಿಗೆ

ಹೊಂದಿಕೊಳ್ಳುವುದಕ್ಕೆ ಸಹಾಯ ಮಾಡುವುದು.

8) ಕೌಟುಂಬಿಕ ಜೀವನ ಶಿಕ್ಷಣ, ವಿವಾಹ ಹಾಗೂ ವೃತ್ತಿ ಮತ್ತು ಪಿತೃತ್ವದ ಹೊಣೆಗಾರಿಕೆಗಳಲ್ಲಿ ಅರ್ಥಪೂರ್ಣ ವ್ಯಾಸಂಗ ಮಾರ್ಗವನ್ನು ಪಠ್ಯಕ್ರಮದ ಭಾಗವಾಗಿ ಸ್ಥಾಪನೆ ಮಾಡುವುದು.

9) ಆರೋಗ್ಯಕ್ಕೆ, ವ್ಯಾಸಂಗಕ್ಕೆ ಮತ್ತು ವೈಯಕ್ತಿಕ ಸಮಸ್ಯೆಗಳಿಗೆ ಒಂದು ಉಲ್ಲೇಖನೀಯ ವ್ಯವಸ್ಥೆಯನ್ನು ಏರ್ಪಡಿಸುವುದು.

10) ವಿದ್ಯಾರ್ಥಿಗಳೊಡನೆ, ಸಿಬ್ಬಂದಿ ವರ್ಗದೊಡನೆ ಮತ್ತು ಆಡಳಿತದೊಡನೆ ಅರ್ಥಪೂರ್ಣವಾದ ಸಾಮರಸ್ಯವನ್ನು ಸ್ಥಾಪಿಸುವುದು. ಆಗ ಕಾಲೇಜು ಒಂದು ಸಮುದಾಯ ಅಥವಾ ಸಮಾಜ ಎಂಬ ಪದದ ಪೂರ್ಣ ಭಾವವನ್ನು ಅರ್ಥೈಸುತ್ತದೆ.

## ಮೌಲಿಕ ಶಿಕ್ಷಣ

### 1. ಮೌಲ್ಯಗಳ ವ್ಯಾಖ್ಯಾನ :

ಮಾನವತೆಯನ್ನು ಕುರಿತು ತೀವ್ರತರ ಅರ್ಥವನ್ನು ಅಭಿವ್ಯಕ್ತಿಗೊಳಿಸುವ ಬದುಕು, ಪ್ರೀತಿ ಮತ್ತು ಕೆಲಸ ಎಂಬಂಥ ಕೆಲವೇ ಪದಗಳಲ್ಲಿ 'ಮೌಲ್ಯ' ಎಂಮ ಪದ ಒಂದು ಪ್ರಮುಖವಾದ ಸ್ಥಾನವನ್ನು ಪಡೆಯುತ್ತದೆ. ಮೌಲ್ಯ ಎಂಬುದು ಒಂದು ಘಟನೆಯನ್ನು ಒಂದು ನಂಬಿಕೆಯನ್ನು ಆಧರಿಸಿದ ಚಮತ್ಕಾರದ ಪರವಾದ ಅಥವಾ ವಿರುದ್ಧವಾದ ಒಂದು ಮನೋವೃತ್ತಿ. ಆ ನಂಬಿಕೆ ಯಾವನೋ ಒಬ್ಬ ವ್ಯಕ್ತಿಯನ್ನು ಒಂದು ಗುಂಪನ್ನು ಅಥವಾ ಒಂದು ಸಂಸ್ಥೆಯನ್ನು ಪ್ರಯೋಜನಗೊಳಿಸಬಹುದು ಅಥವಾ ಖಂಡಿಸಬಹುದು ಅಥವಾ ಇನ್ನೂ ಸರಳವಾಗಿ ಹೇಳಬೇಕಾದರೆ ಮೌಲ್ಯವನ್ನು ಹೀಗೆ ವ್ಯಾಖ್ಯಾನಿಸಬಹುದು. 'ಮೌಲ್ಯ ಒಂದು ನಂಬಿಕೆ. ಅದನ್ನು ಅವಲಂಬಿಸಿ ಮಾನವ ಆದ್ಯತೆಯ ಮೂಲಕ ವರ್ತಿಸುತ್ತಾನೆ.

''ನಾವು ನಮ್ಮ ಆಯ್ಕೆಗಳ ಮೂಲಕ ನಮ್ಮನ್ನು ನಾವೇ ರೂಪಿಸಿಕೊಳ್ಳುತ್ತೇವೆ; ನಮ್ಮ ಅಸ್ತಿತ್ವಕ್ಕೆ, ನಮ್ಮ ವ್ಯಕ್ತಿತ್ವಕ್ಕೆ ಒಂದು ರೂಪವನ್ನು ಮತ್ತು ಒಂದು ನೇರ್ಪವನ್ನು ತಂದುಕೊಳ್ಳುತ್ತೇವೆ' - ನಾಯ್ಬಾಲ್

ಸ್ವಾತಂತ್ರ್ಯ ಇರುವ ಸ್ಥಳಗಳಲ್ಲೆಲ್ಲಾ ಮನುಷ್ಯ ಆಯ್ಕೆಯಿಂದ ವರ್ತಿಸುತ್ತಾನೆ. ಆಗ

ಅದು ಮೌಲ್ಯಗಳ ಗೋಳದೊಳಗೆ ಅವನನ್ನು ಸಿಕ್ಕಿಸಿಕೊಳ್ಳುತ್ತದೆ. ನಮ್ಮ ನಿಜವಾದ ತನ್ನತನಗಳು ನಾವು ಹೋರಾಡುವ ವಸ್ತುಗಳ ಹಿಂಬದಿಯಲ್ಲಿಯೇ ನೆಲಸಿರುತ್ತವೆ ಮತ್ತು ಅವುಗಳಿಗೆ ಸಂಬಂಧಿಸಿದ ಕಾರಣಗಳಿಗೆ ನಾವು ಸಹನಾತ್ಮಕ ಬದ್ಧತೆಯನ್ನು ಹೊಂದಿರುತ್ತೇವೆ. ನಾವು ಬದುಕುತ್ತಿರುವ ನಿಜವಾದ ಮೌಲ್ಯಗಳು ಅವೇ.

ನಮ್ಮ ಸ್ವಭಾವಗಳಿಗೆ ಮಾರ್ಗದರ್ಶನ ನೀಡುವಂಥವೇ ಮತ್ತು ನಮ್ಮ ಅಸ್ತಿತ್ವಕ್ಕೆ ಅರ್ಥ ಕೊಡುವಂಥವೇ ಮೌಲ್ಯಗಳು. ನಾವು ಪಾಲಿಸುತ್ತಿರುವ ಮೌಲ್ಯಗಳು ಕ್ರಿಯಾತ್ಮಕವಾಗಿ ನಮ್ಮ ಜೀವನಗಳನ್ನು ರೂಪಿಸುವುದಕ್ಕೆ ಖಚಿತವಾಗಿ ಬದ್ಧವಾಗಿರುತ್ತವೆ. ನಮ್ಮ ಕ್ರಿಯೆಗಳು ಯಾವುದಕ್ಕೆ ಅಂಟಿಕೊಂಡಿವೆಯೋ ಅವುಗಳೇ ಮೌಲ್ಯಗಳು. ಅವು ನಮ್ಮ ಆಕಾಂಕ್ಷೆಗಳನ್ನು ಹಾಗೂ ಆಶಯಗಳನ್ನು ನಾವೇ ಸಂಘಟಿಸುವ ನಮ್ಮ ಬದುಕಿನ ಸುಡಿಗಟ್ಟುಗಳಿಗೆ ಆಕಾರ ಕೊಡುವ ಕೇಂದ್ರ ಆಧಾರಸ್ತಂಭಗಳನ್ನಾಗಿ ಮಾಡುತ್ತವೆ. ಒಬ್ಬ ಮನುಷ್ಯನನ್ನು ಅವನು ಆಧರಿಸಿರುವ ಮೌಲ್ಯಗಳಿಂದ ಅವನನ್ನು ತಿಳಿಯಬೇಕು ಅಥವಾ ಅವನು ಹಾಗೆ ತಿಳಿಯುವಂತಿರಬೇಕು.

ಅವುಗಳನ್ನು ಯಾರು ಎತ್ತಿ ಹಿಡಿಯುತ್ತಾರೋ ಅಥವಾ ಅವುಗಳಲ್ಲಿ ನಂಬಿಕೆಯಿಡುತ್ತಾರೋ ಅವರಿಗಾಗಿ ಅವು ಇವೆ ಎಂಬ ಭಾವನೆಯಲ್ಲಿ ಮೌಲ್ಯಗಳು ವಸ್ತುನಿಷ್ಠ ಮಾತ್ರವಲ್ಲ ಅವು ಅಭಿಪ್ರಾಯಗಳ ವಿಷಯಕ್ಕಿಂತ ಹೆಚ್ಚಿನವು. ಸತ್ಯದ ವಿನ್ಯಾಸದಲ್ಲಿಯೇ ಮೌಲ್ಯಗಳು ನಿಹಿತವಾಗಿವೆ. ಅವಕ್ಕೆ ಅವುಗಳದೇ ಸ್ವಂತ ಸಮರ್ಥನೆಯಿದೆ. ಮೌಲ್ಯಗಳು ನಿಜಾಂಶಗಳನ್ನು ಆತಿಶಯಿಸುತ್ತವೆ. ಒಬ್ಬ ಒಂದು ಕಲ್ಲನ್ನು ತನ್ನ ಕೈಗೆ ತೆಗೆದುಕೊಂಡಾಗ ಅದು ವಾಸ್ತಾವಾಂಶ ಮಾತ್ರ. ಅದನ್ನು ಮತ್ತೊಂದರ ಅಥವಾ ಮತ್ತೊಬ್ಬನ ವಿರುದ್ಧವಾಗಿ ಎಸೆದರೆ ಮೌಲ್ಯ ಆ ಅಂಶಗಳನ್ನು ವಿಸ್ತರಿಸುತ್ತದೆ. ಕಲ್ಲನ್ನು ಎಸೆಯುವುದು ಅದರ ಉದ್ದೇಶಕ್ಕೆ ಸಂಬಂಧಿಸಿದಂತೆ ಒಳ್ಳೆಯದಾಗುತ್ತದೆ ಅಥವಾ ಕೆಟ್ಟದಾಗುತ್ತದೆ.

## 2. ದೇಹಾತ್ಮವಾದ :

ಭೌತಿಕ ವಿಷಯಗಳು ಅವುಗಳ ಮೌಲ್ಯಕ್ಕೆ ತಕ್ಕಂತೆ ಒಂದು ಮಟ್ಟದ್ದವಾಗಿವೆ. ಆಹಾರದ, ಹಣದ, ದೈಹಿಕ ಶಕ್ತಿಯ ಹಾಗೂ ಇತರ ವಿವಿಧ ಸ್ಪಷ್ಟ ಕಾಣಿಕೆಗಳ ಮೌಲ್ಯ ಮೇಲುಸ್ತರದಲ್ಲೇ ಎಲ್ಲರಿಗೂ ಕಾಣಸುವುದಕ್ಕಾಗಿ ಅಸ್ತಿತ್ವದಲ್ಲಿರುತ್ತದೆ. ನಾವು ಅವುಗಳನ್ನು

ಬಳಸುವ ದಾರಿಗಳನ್ನು ಯೋಚಿಸಿದ ಕೂಡಲೇ ಮೇಲ್ಮಟ್ಟದ ಮೌಲ್ಯಗಳ ಭಾವನೆಗಳು ಅವುಗಳನ್ನು ಪ್ರವೇಶಿಸುತ್ತವೆ. ಮನುಷ್ಯ ಆಹಾರವಿಲ್ಲದೆ ಜೀವಿಸಲಾರ. ಆದ್ದರಿಂದ ಬ್ರೆಡ್ಡನ್ನು ಅಥವಾ ಅನ್ನವನ್ನು ಒದಗಿಸಿ ಕೊಳ್ಳುವುದು ಒಂದು ಮೌಲ್ಯ. ಆದರೆ ಅದಕ್ಕಿಂತ ಹೆಚ್ಚಿನ ಮೌಲ್ಯ ತನ್ನ ತುತ್ತನ್ನು ಅಗತ್ಯವಿರುವ ಇತರರೊಡನೆ ಹಂಚಿಕೊಳ್ಳುವುದರಲ್ಲಿ ಒಳಗೊಂಡಿರುತ್ತದೆ. ಹಾಗೆಯೇ ಸುಖವು ಒಂದು ಮೌಲ್ಯ. ಆದರೆ ಎಲ್ಲ ಮೌಲ್ಯಗಳು ಆನಂದದಾಯಕ ಎಂಬುದರೊಡನೆ ತದ್ರೂಪವಾಗಿರುವುದಿಲ್ಲ.

## 3. ಮೌಲ್ಯ ಮತ್ತು ಆಯ್ಕೆ :

ತೀರ್ಮಾನಗಳನ್ನು ಅಪೇಕ್ಷಿಸಿದಾಗಲ್ಲೆಲ್ಲ ಮೌಲ್ಯಗಳನ್ನು ಅವುಗಳ ಪೂರ್ಣ ಸ್ವರೂಪದಲ್ಲಿ ಕಾಣಬಹುದು. ಜೀವನ ತೀರ್ಮಾನಗಳಿಂದಲೇ ರೂಪಿತವಾದುದಲ್ಲ. ಅವು ಚಿಕ್ಕದಾಗಿರಬಹುದು ದೊಡ್ಡದಾಗಿರಬಹುದು. ಮೌಲ್ಯಗಳನ್ನು ಒಳಗೊಂಡ ತೀರ್ಮಾನಗಳು ಮತ್ತು ಆಯ್ಕೆಗಳು ಸ್ಪಷ್ಟವಾಗಿ ಮಾನವೀಯವಾದವು. ಒಬ್ಬ ತರುಣ ಉಪಾಧ್ಯಾಯ ಉಪಧ್ಯಾಯರಿಗಾಗಿ ಇರುವ ಹೊಸ ದೃಷ್ಟಿಯ ವ್ಯಾಸಂಗವನ್ನು ಕೈಗೊಳ್ಳಲು ತೀರ್ಮಾನಿಸಿದಾಗ ಅವನು ಮೌಲಿಕ ತೀರ್ಮಾನವನ್ನು ಕೈಕೊಳ್ಳುತ್ತಾನೆ. ತಾನೊಬ್ಬ ಉತ್ತಮ ಉಪಧ್ಯಾಯನಾಗುವ ಪ್ರಯತ್ನ ನಿಜವಾಗಯೂ ಒಂದು ಯೋಗ್ಯಕಾರ್ಯ ಎಂದು ಅವನು ತೀರ್ಮಾನಿಸಿರುತ್ತಾನೆ. ಖಂಡಿತವಾಗಿ ಆಗ ಆ ತೀರ್ಮಾನದಲ್ಲಿ ಮೌಲ್ಯಗಳ ಭಾವನೆ ತುಂಬಿರುತ್ತದೆ.

## 4. ಮೌಲ್ಯಗಳಿಗೆ ಬದ್ಧತೆ :

ಒಂದು ಮುಕ್ತ ಸಮುದಾಯದ ಆರೋಗ್ಯಕ್ಕೆ ಮತ್ತು ಕಲ್ಯಾಣಕ್ಕೆ ಮೌಲ್ಯಗಳನ್ನು ಕುರಿತು ವೈಯಕ್ತಿಕ ಬದ್ಧತೆ ಮೂಲಾಧಾರ. ಅಂತಿಮವಾಗಿ ಮಾನವಸಮಾಜದ ಅಭಿವೃದ್ಧಿ ಸರಿಯಾದ ಮಾನವನ ವೈಯಕ್ತಿಕ ಮೌಲ್ಯಗಳಿಂದ ರಚಿತವಾಗುತ್ತದೆ ಮತ್ತು ಸ್ಥಿರವಾದ ಆಸರೆ ಪಡೆಯುತ್ತದೆ. ವ್ಯಕ್ತಿಗಳು ತಮ್ಮ ಖಾಸಗಿ ಬದುಕಿನಲ್ಲಿ ಮತ್ತು ವ್ಯವಹಾರದಲ್ಲಿ ಅಪ್ರಮಾಣಿಕತೆಯನ್ನು ಆಚರಿಸುತ್ತಾರೋ ಅವರು ಸಾರ್ವಜನಿಕ ಜೀವನದಲ್ಲಿ ನೀತಿ ಭ್ರಷ್ಟತೆಯಿಂದ ದೂರವಿರುವುದು ಸಾಧ್ಯವಿಲ್ಲ. ಅಲ್ಲದೆ ನಾವು ಮೌಲ್ಯಗಳನ್ನು ಹೊಂದಿರಲೇಬೇಕು. ಏಕೆಂದರೆ ನಾವು ಪ್ರತಿಯೊಬ್ಬರೂ ತಮಗೆ ಗೌರವತಂದು ಕೊಡುವ

ಅವರವರ ಪರಂಪರಾಗತ ಗಾಂಭೀರ್ಯ ಮತ್ತು ಹಕ್ಕುಗಳನ್ನು ವ್ಯಕ್ತಿಗಳಿಂದ ಕೂಡಿದ ಸಮಾಜದಲ್ಲಿ ನಾವು ಬದುಕುತ್ತಿರುವುದರಿಂದ.

ಆಧುನಿಕ ನಾಗರೀಕತೆ ತನ್ನ ವೈಜ್ಞಾನಿಕೆ ತಂತ್ರಜ್ಞತೆಯಿಂದ ಇಲ್ಲಿ ಸ್ಥಿರವಾಗಿ ನಿಂತಿರಬೇಕೆಂಬುದನ್ನು ಯಾರೂ ಸ್ಂಶಯಿಸುವಂತಿಲ್ಲ. ಆದರೆ ಅದು ಹೆಚ್ಚಾಗಿ ಸ್ಪಷ್ಟವಾಗುತ್ತಿರುವುದೂ ನಿಜ. ಔದ್ಯೋಗಿಕ ವಿಜ್ಞಾನ ಪ್ರಸ್ತುತ: ನಮ್ಮ ಇರುವಿಕೆಯ ಅಂತಿಮ ಅರ್ಥಕ್ಕೆ ಯಾವುದೇ ಉತ್ತರವಲ್ಲ. ಬಾಹ್ಯದ ಯಾಂತ್ರಿಕ ಮುಂಬರಿವುಗಳು ಮಾನವನ ಬುದ್ಧಿ ಶಕ್ತಿಯ ಮತ್ತು ಸಂಕಲ್ಪದ ಹೊಸದೃಷ್ಟಿಯ ಮೌಲ್ಯದಿಂದ ಸರಿತೂಗಿಸಲ್ಪಡದಿದ್ದ ಹೊರತು ಅವು ತಮ್ಮೊಡನೆ ಬೆಳೆಯುತ್ತಿರುವ ಪೊಳ್ಳಾದ ಭಾವನೆಯನ್ನು ತೆಗೆದುಕೊಂಡು ಹೋಗುತ್ತ ಇರುತ್ತದೆ.

ಡಾ: ರಾಧಾಕೃಷ್ಣನ್ ಅವರು ಹೇಳಿರುವಂತೆ ವಿಜ್ಞಾನಗಳು ನಾಗರೀಕತೆಯ ಉಪಕರಣಗಳನ್ನು ನಮಗೆ ಸರಬರಾಜು ಮಾಡುತ್ತವೆ. ಆದರೆ ಅವುಗಳಿಂದ ಅವುಗಳ ಬಳಕೆಗೆ ಮಾರ್ಗದರ್ಶನ ಬರುತ್ತಿಲ್ಲ.

## 5. ಮೌಲ್ಯಗಳ ಮೌಲಗಳು ಮತ್ತು ವರ್ಗಗಳು :

ಮೌಲ್ಯಗಳ ಮೂಲಗಳು ಎಲ್ಲಿವೆ ? ಒಂದು ದೃಷ್ಟಿಯಲ್ಲಿ ಮೌಲ್ಯಗಳ ಮೂಲ ಸ್ಥಳ ನಮ್ಮ ಒಳಗಡೆಯೇ ಇದೆ. ನಮ್ಮ ಪ್ರಜ್ಞೆಯಲ್ಲಿಯೇ ಒಪ್ಪು ಅಥವಾ ತಪ್ಪುಗಳ ಪ್ರಾಥಮಿಕ ಮೂಲಗಳು ಯಾವುದು ಎಂಬುದರ ಬಗ್ಗೆ ಭಿನ್ನತೆಗಳಿದ್ದರೂ ಒಪ್ಪುತಪ್ಪುಗಳ ಬಗ್ಗೆ ಸಾಮಾನ್ಯ ಮಾನವನ ಭಾವನೆಯಲ್ಲಿಯೇ ಇದೆ. ಕೆಲವು ವಿಷಯಗಳನ್ನು ನಾವು ಮಾಡಲೇಬೇಕು ಎಂಬ ಭಾವನೆ ಮೌಲ್ಯಗಳ ಅಂತರ್ಯದ ಶಕ್ತಿಯುತ ಕುರುಹು. ಮೌಲ್ಯದ ಎಚ್ಚರಿಕೆಯ ಮೊದಲ ಮೂಲವೇ ಮಾನವನ ಮನೋಪ್ರವೃತ್ತಿ. ಅದನ್ನು ದೇವರ ಸ್ತಬ್ದ ಸಣ್ಣ ಧ್ವನಿಗೆ ಸಂಬಂಧಿಸಲು ಅಸಮರ್ಥರಾದ ಕೆಲವರು ಕೂಡ ತಮ್ಮ ಮಾನವತ್ವದ ಉಸಿರು ಕಟ್ಟಿಸುವ ಸಂಕಟಸಮಯದಲ್ಲಿ ಮಾತ್ರ ತಮ್ಮ ಅಂತಃಪ್ರವೃತ್ತೀಯ ಧ್ವನಿಯನ್ನು ಎಂದರೆ ಅಂತರಾತ್ಮವನ್ನು ಸಂಕಟದಲ್ಲಿ ತೊಡಗಿಸಬಹುದು.

''ಮೌಲ್ಯಗಳನ್ನು ಅಭಿವೃದ್ಧಿ ಪಡಿಸುವುದಕ್ಕೆ ಹಾಗೂ ಪುನರ್ ರೂಪಿಸುವುದಕ್ಕೆ ಮಾನವನ ಚರಿತ್ರೆಯಲ್ಲಿ ಅತ್ಯಂತ ಬಲಿಷ್ಠವಾದ ನಿಯೋಗಗಳಾಗಿರುವುವು ಧರ್ಮ ಮತ್ತು

ಶಿಕ್ಷಣ'' ಎಚ್.ಜಿ.ವೆಲ್ಸ್ ತನ್ನ ಚರಿತ್ರೆಯ ವಿನ್ಯಾಸದ ಕೊನೆಯಲ್ಲಿ ತನ್ನ ಸಾಮಾನ್ಯ ನಿರ್ಧಾರಗಳಲ್ಲಿ ಒಂದಾಗಿ ಧರ್ಮ ಮತ್ತು ಶಿಕ್ಷಣಗಳೇ ಮಾನವ ಇತಿಹಾಸದಲ್ಲಿ ಸಂಯೋಜಿತವಾದ ಪ್ರಮುಖ ಶಕ್ತಿಗಳೆಂದು ದಾಖಲಿಸುತ್ತಾನೆ. ಇಂಥ ಶಿಕ್ಷಣವನ್ನು ಸತ್ಯವಾಗಿ ಸಮುಚ್ಚಯ ಭಾವದಲ್ಲಿ ಅರ್ಥಮಾಡಿಕೊಳ್ಳಬೇಕು. ಸಾಮಾಜಿಕ ಮತ್ತು ರಾಷ್ಟ್ರೀಯ ಸಂಪ್ರದಾಯಗಳು ಮತ್ತು ರಚನೆಗಳು ಕೂಡ ಕೆಲವು ಮೌಲ್ಯಗಳ ಮೂಲಗಳೂ ಆಧಾರ ಸ್ತಂಭಗಳೂ ಆಗಿರಬಹುದು.

ಬದುಕಿನ ಸುಖ ದುಃಖಗಳಿಗೆ ಸ್ಪಂದಿಸುವ ಒಂದು ಸಾಮಾನ್ಯ ಭಾವನಾ ಸಂವೇದಿಯು ಮತ್ತು ಅದಕ್ಕಿಂತ ವಿಶೇಷವಾಗಿ ದರ್ಶನದ ಮತ್ತು ಆಶಯದ ಪ್ರಜ್ಞೆ, ಒಂದಲ್ಲ ಒಂದು ರೀತಿಯಲ್ಲಿ ಮೌಲ್ಯಗಳ ಶುದ್ಧ ವಿವೇಕದ ಬೆಳವಣಿಗೆಗೆ ಅನುಕೂಲಕರವಾಗಿರುತ್ತದೆ.

## 6. ಒಪ್ಪಿಕೊಳ್ಳುವ ಕಾರ್ಯರೂಪಕ್ಕೆ ತರುವ ಮೌಲ್ಯಗಳು :

ಮೌಲ್ಯಗಳನ್ನು ವಿವಿಧ ಮಟ್ಟಗಳಲ್ಲಿ ವರ್ಗೀಕರಿಸಬಹುದು. ನಾವು ಸಾರ್ವಜನಿಕವಾಗಿ ಬಹಿರಂಗವಾಗಿ ತಾಳಿರುವ ಮೌಲ್ಯಗಳೆಲ್ಲ (ಕ್ರೈಸ್ತರ ಮತ ಅಥವಾ ನಮಗೆಲ್ಲರಿಗೆ ಇರುವ ಭಾರತೀಯ ಸಂವಿಧಾನ) ನಾವು ಒಪ್ಪಿಕೊಳ್ಳುವ ಮೌಲ್ಯಗಳು. ಇವು ನಮ್ಮ ಕಾರ್ಯ ಸಾಧನೆಯ ಮೌಲ್ಯಗಳಿಗೆ ಸಮಾನವಾದವುಗಳಲ್ಲದಿರಬಹುದು. ಏಕೆಂದರೆ ಅವು ನಾವು ವಾಸ್ತವವಾಗಿ ಆಚರಣೆಯಲ್ಲಿ ತಂದಿರುವುದರ ತಳಪಾಯಗಳಾಗಿವೆ. ಒಪ್ಪಿಕೊಳ್ಳುವ ಮತ್ತು ಕಾರ್ಯರೂಪಕ್ಕೆ ತರುವ ಮೌಲ್ಯಗಳ ಅಂತರ ವಿಶ್ವಾಸವನ್ನು ಸಮೆಸುವುದಲ್ಲದೆ, ಕಾಪಟ್ಯವನ್ನು ಉತ್ತೇಜಿಸುತ್ತದೆ. ಭಾನುವಾರದ ಮತಕ್ಕೂ ಸೋಮವಾರದ ಕಾರ್ಯಕ್ಕೂ ಮಧ್ಯೆ ಇರುವ ದ್ವಿವಿಭಜನೆ ನಿರಂತರವಾದದ್ದು. ಒಬ್ಬನ್ನು ಎತ್ತಿ ಹಿಡಿಯುವ ಮೌಲ್ಯಗಳ ಸ್ವಭಾವ ನಿರ್ದಿಷ್ಟ ಘಟನೆಗಳಿಗೆ ತೋರುವ ಪ್ರತಿಕ್ರಿಯೆಯಲ್ಲಿ ಅವಶ್ಯವಾಗಿ ಪ್ರತಿಬಿಂಬಿಸುತ್ತದೆ. ಉದಾಹರಣೆಗೆ ಸಮಾಜದ ನಿರ್ಬಲವರ್ಗಗಳೊಡನೆ ತಮ್ಮನ್ನು ತಾವು ಗುರುತಿಸಿಕೊಳ್ಳುವುದು ಸ್ವಂತವಾಗಿ ಘೋಷಿಸಿಕೊಂಡ ಮಾನವನ ಸಮಾನತೆಯ ಬಗೆಗಿನ ನಂಬಿಕೆಗಿಂತ ಮೌಲ್ಯಗಳ ಉತ್ತಮ ಒರೆಗಲ್ಲು. ನಮ್ಮ ಅನುಭವಗಳಿಂದ ಮತ್ತು ಇತಿಹಾಸದಿಂದ ಕಲಿತುಕೊಂಡು ನಾವು ಮೌಲ್ಯಗಳನ್ನು ಅಳವಡಿಸಿಕೊಳ್ಳಬಹುದು ಮತ್ತು ಅವುಗಳನ್ನು ನವೀಕರಿಸಬಹುದು. ಇದು ಮೌಲ್ಯಗಳ ಕಡೆಗೆ ನಮ್ಮ ದೃಷ್ಟಿಕೋನವನ್ನು

ಕ್ರಿಯಾಶಕ್ತಿಯುತಗೊಳಿಸುತ್ತದೆ. ಮೌಲ್ಯಗಳು ಅರ್ಥಪೂರ್ಣವಾಗಿರುವುದು ಸಾಧ್ಯವಾಗಬೇಕಾದರೆ ಅವು ಕಾರ್ಯಸಕ್ತವೂ ಚಲನಶೀಲವೂ ಆಗಿರಬೇಕು. ಯುವಕರ ಶಿಕ್ಷಕರು ತಮ್ಮ ಸ್ವಂತ ಮೌಲ್ಯಗಳನ್ನು ಕಾರ್ಯಾಸಕ್ತವನ್ನಾಗಿ ಮತ್ತು ಕ್ರಿಯಾಶಕ್ತಿಯುತವಾಗಿ ಮಾಡಿಕೊಳ್ಳಲು ಸೋತರೆ ತರುಣರೊಡನೆ ಅವರ ವಿಶ್ವಸನೀಯತೆ ನರಳುತ್ತದೆ.

## 7. ವೈಯಕ್ತಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳು

ಮೌಲ್ಯಗಳನ್ನು ವೈಯಕ್ತಿಕ, ಸಾಮಾಜಿಕ ಮತ್ತು ಆಧ್ಯಾತ್ಮಕಗಳೆಂದು ಆದೆಷ್ಟು ಅಭೇದ್ಯವಾದ ಭಾಗಗಳಲ್ಲವಾಗದಿದ್ದರೂ ವರ್ಗೀಕರಿಸಬಹುದು. ವೈಯಕ್ತಿಕ ಮೌಲ್ಯಗಳು ಪೂರ್ಣ ಸತ್ಯತೆ, ಸ್ವಚ್ಛತೆ, ತೊಡಗಿಸಿಕೊಳ್ಳುವಿಕೆ ಮತ್ತು ಅಂಥ ಇತರ ಗುಣಗಳು ಉತ್ತಮ ಪುರುಷ ಏಕವಚನಕ್ಕೆ ಎಂದರೆ 'ನನಗೆ' ಮೊದಲ ಸಂಬಂಧದೊಡನೆ ಒಳಗೊಂಡಿರುತ್ತವೆ. ಸಹಕಾರ, ಪೌರ ಪ್ರಜ್ಞೆ, ನ್ಯಾಯ ಸಂಬಂಧ ಭಾವನೆ, ಹೊಣೆಗಾರಿಕೆ ಇತ್ಯಾದಿಗಳಂದ ಸಾಮಾಜಿಕ ಮೌಲ್ಯಗಳು ನಮ್ಮ ಮಾನವೀಯ ಏಕತೆಯ ಮೇಲೆ ನೇರ ಹೊರೆಯನ್ನು ಹೊತ್ತಿರುತ್ತದೆ.

ದೈವಭಕ್ತಿ ಮತ್ತು ಮಾನವ ಪ್ರೇಮ, ಪ್ರಾರ್ಥನೆ, ದಾನ ಮತ್ತು ನೀತಿ ನಡುವಳಿಕೆಗಳಂಥ ಆಧ್ಯಾತ್ಮಿಕ ಮೌಲ್ಯಗಳು ಸಾಮಾಜಿಕ ಹಾಗೂ ವೈಯಕ್ತಿಕ ಮೌಲ್ಯಗಳಿಗೆ ಪೂರ್ಣವಾಗಿ ಹೊಸ ಪರಿಮಾಣವನ್ನು ಕೂಡಿಸಬಹುದು.

## ಸಮಾಜದ ಬೆಳವಣಿಗೆ ಮತ್ತು ಮೌಲ್ಯಗಳು :

ಒಂದು ದೇಶದ (ಉದಾಹರಣೆಗೆ ಭಾರತ) ಇತಿಹಾಸವನ್ನು ಅತಿ ಹತ್ತಿರದಿಂದ ನೋಡಿದರೆ ಅದು ಸಂಪ್ರದಾಯದ ಮೌಲ್ಯಗಳಿಗೂ ಸಮಾಜದ ಬೆಳವಣಿಗೆಗೂ ಇರುವ ಒಂದು ಪ್ರಧಾನ ಸಹಬಂಧವನ್ನು ತೋರಿಸುತ್ತದೆ. ವಿಸ್ತಾರವಾಗಿ ಹಂಚಿಕೊಂಡ ಮೌಲ್ಯಗಳು, ಮಾನವ ಪ್ರಾಣಗಳು ತಮ್ಮ ಪರಿಸರಕ್ಕೆ ಪ್ರತಿಕ್ರಿಯೆಸುತ್ತವೆ ಎಂಬುದನ್ನು ನಿರ್ಧರಿಸುತ್ತವೆ. ಜನಾಂಗದ ಅಭಿವೃದ್ಧಿ ಅದು ಹಿಡಿದಿಟ್ಟುಕೊಂಡ ಮೌಲ್ಯಗಳು, ಹವಾಮಾನ ಮತ್ತು ಆಹಾರ ಅಭ್ಯಾಸಗಳು ಅವರ ಆರೋಗ್ಯ ಮತ್ತು ಜೀವನ ಶೈಲಿಯನ್ನು ಹೇಗೆ ರೂಪಿಸುತ್ತವೆಯೋ ಹಾಗೆ ಜನಾಂಗದ ಬೆಳವಣಿಗೆಯ ಕಾರ್ಯ ವಿಧಾನ ಸತತವಾಗಿ ತಡೆಯನ್ನು ಉಂಟು ಮಾಡುತ್ತದೆ.

ಮಾನವೀಯ ಮೌಲ್ಯಗಳು, ರಾಷ್ಟ್ರೀಯ ಅಭಿವೃದ್ಧಿಯಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ಹೊಂದಿವೆ. ಅನಭಿವೃದ್ಧಿ ದೇಶದ ಪರಿವರ್ತನೆ, ನೈತಿಕ ಕಾರ್ಯದಲ್ಲಿ ಹಾಗೂ ಸಾಮಾಜಿಕ ಸಂಪರ್ಕದಲ್ಲಿನಂಥ ಅಭಿವೃದ್ಧಿಗೆ ಸಹಾಯಕವಾಗುವ ಮೌಲ್ಯಗಳ ಬದಲಾವಣೆಯನ್ನು ಸಂಭವನೀಯಗೊಳಿಸುತ್ತದೆ. ಭಾರತದಲ್ಲಿರುವ ನಾವು, ಒಂದು ಕಡೆ ನಮ್ಮ ಘನತೆಯನ್ನು ಎಚ್ಚರಕೆಯಿಂದ ಕಾಣುವುದರ ಜೊತೆಗೆ ನಮ್ಮ ಪಿತ್ರಾರ್ಜಿತ ವೈಭವಕ್ಕೆ ಹೆಮ್ಮೆಪಟ್ಟುಕೊಳ್ಳುವುದಾದರೆ ನಾವು ನಮ್ಮ ನಾಗರೀಕತೆಯ ಕೊರತೆಗಳಿಗೆ ಮತ್ತೆ ಶತಶತಮಾನಗಳಿಂದ ನಡೆದಿರುವ ಅವುಗಳ ಪ್ರಭಾವಕ್ಕೆ ಎಂದಿಗೂ ಕುರುಡರಾಗಬಾರದು.

## ಮೌಲ್ಯಗಳ ಪರಿವರ್ತನೆ :

ಭಾರತೀಯ ಬದುಕಿನ ಕೆಲವು ಕ್ಷೇತ್ರಗಳಲ್ಲಿ ಪರಿವರ್ತನೆ ಪರಮ ಪ್ರಧಾನವಾದುದು. ಈ ಕಾರ್ಯವಿಧಾನದಲ್ಲಿ ಶಿಕ್ಷಣವೇ ಪ್ರಮುಖ ಮಾರ್ಗವಾಗಿರಬೇಕೆಂಬುದು ಸ್ವತಸಿದ್ಧವಾದುದು. ಸ್ವೀಕರಿಸಿದ ಮೌಲ್ಯಗಳ ವರ್ಗಾವಣೆಗೆ ನಮ್ಮ ಭಾರತದಲ್ಲಿ ಅಸಂಖ್ಯಾತ ಸಂಪ್ರದಾಯದ ರೂಪಗಳು ಮತ್ತು ಪದ್ಧತಿಗಳು ಜಾರಿಯಲ್ಲಿವೆ. ಆದರೆ ಬಹುಶಃ ಮೌಲ್ಯಗಳ ಯಾವುದೇ ರೂಪ ಪರಿವರ್ತನೆಯನ್ನು ಅಥವಾ ಸ್ಥಿರೀಕರಣವನ್ನು ತರುವುದಕ್ಕೆ ಕೌಟುಂಬಿಕ ಶಿಕ್ಷಣವು ನಮ್ಮ ಇನ್ನೊಂದು ಪರಿಣಾಮಕಾರಿ ಉಪಕರಣ. ಇತಿಹಾಸದ ಅಗೋಚರ ಶಕ್ತಿಗಳನ್ನು ಅದರಷ್ಟಕ್ಕೆ ಬಿಟ್ಟುಬಿಟ್ಟರೆ ಮೌಲ್ಯಗಳು ನಿಧಾನವಾಗಿ, ವಿಶೇವಾಗಿ ಭಾರತದಂಥ ದೇಶಗಳಲ್ಲಿ ಪರಿವರ್ತನೆಗೊಳ್ಳುತ್ತವೆ. ಆದ್ದರಿಂದ ಈ ಕ್ಷೇತ್ರದಲ್ಲಿ ಶಿಕ್ಷಣದ ಪಾತ್ರ ಉದ್ದೇಶ ಪೂರ್ವಕವಾಗಿ ಮತ್ತು ಧನಾತ್ಮಕವಾಗಿ ಇದ್ದೇ ತೀರಬೇಕು.

## ಮೌಲ್ಯ ಸುಧಾರಿತ ಶಿಕ್ಷಣ :

## ವ್ಯಾಖ್ಯಾನ

ಶಿಕ್ಷಣ (Education) ಎಂಬುದು ಲ್ಯಾಟನ್ 'ಎಡ್ಯುಕೇಷನ್' ಎಂಬ ಪದದಿಂದ ಬಂದಿದೆ. ಅದರ ಅರ್ಥ 'ಶೀಲ'ದ ಅಭಿವೃದ್ಧಿ. ರಾಧಾಕೃಷ್ಣನ್ ನಿಯೋಗದವರ ದೃಷ್ಟಿಯಲ್ಲಿ ವೈಜ್ಞಾನಿಕವಾಗಿ ಮತ್ತು ಪಾಂಡಿತ್ಯಪೂರ್ಣ ಅನ್ವೇಷಣೆಗಳ ಮೂಲಕ ಸತ್ಯವನ್ನು ಹುಡುಕುವುದರ ಜೊತೆಗೆ ಶಿಕ್ಷಣದ ಒಂದು ಮುಖ್ಯ ಕಾರ್ಯವೆಂದರೆ ಮೌಲ್ಯಗಳನ್ನು

ಸಹಬಂಧಿಸುವುದು. ಕೋಠಾರಿ ನಿಯೋಗ ರಾಷ್ಟ್ರೀಯ ಅಭಿವೃದ್ಧಿಗೆ ಶಿಕ್ಷಣ ಎಂಬುದರ ಮೇಲೆ ತನ್ನ ಒತ್ತನ್ನು ಹಾಕುವುದರೊಂದಿಗೆ, ಸರಿಯಾದ ಆಸಕ್ತಿಗಳ, ವೃತ್ತಿಗಳ ಮತ್ತು ನೈತಿಕ ಮತ್ತು ಬೌದ್ಧಿಕ ಮೌಲ್ಯಗಳನ್ನು ಪ್ರೌಢ ಶಿಕ್ಷಣದ ಪ್ರಕಾರ್ಯಗಳ ಜೊತೆಗೆ ಸೇರಿಸಿಕೊಳ್ಳುತ್ತದೆ.

ಕಾರ್ನಿಗಿ ನಿಯೋಗವು (ಅಮೇರಿಕ ಸಂಯುಕ್ತ ರಾಜ್ಯಗಳು) ಪ್ರೌಢ ಶಿಕ್ಷಣದ ಕುರಿತು ಹೀಗೆ ವಿಚಾರ ಮಾಡುತ್ತದೆ.

ಬೌದ್ಧಿಕ ಹಾಗೂ ನಿಪುಣತೆಯ ಅಭಿವೃದ್ಧಿಗೆ ಸಹಾಯ ನೀಡುವುದೇ ಜನರು ಶಿಕ್ಷಣದ ಪ್ರಾಥಮಿಕ ಜವಾಬ್ದಾರಿ ಎಂದು ಪರಿಗಣಿಸುತ್ತದೆ. ಆದರೆ, ಅದು ಸೌಂದರ್ಯ ಪ್ರಜ್ಞೆ ಮತ್ತು ನೈತಿಕ ಬೆಳವಣಿಗಗಳನ್ನು ಒತ್ತಾಯಿಸುತ್ತದೆ. ಶಿಕ್ಷಣದ ಮತ್ತು ಮೌಲ್ಯಗಳ ನಡುವಿನ ಅವಿಭಾಜ್ಯ ಕೊಂಡಿ ಅದು ಎಂಬುದು ಶಿಕ್ಷಣದ ಸ್ವಭಾವ ಮತ್ತು ಗುರಿಯಲ್ಲಿ ಪತ್ಯಕ್ಷವಾಗಿರುವುದು ಸಹಜ, ಶಿಕ್ಷಣದ ಮೊದಲ ಕೆಲಸ ವಿದ್ಯೆಯ ಸೃಜನಾತ್ಮಕ ವಿಸ್ತರಣೆ. ಆದರೆ ಇದೇ ಅದರ ಸಮುರ್ಗ ಕರ್ತವ್ಯವಲ್ಲ. ಶಿಕ್ಷಕನ ಕೆಲಸ ಪೂರ್ಣಾತ್ಮಕ ಕೆಲಸ; ತಾನು ವಿದ್ಯಾರ್ಥಿಗಳ ಮನಸ್ಸನ್ನು ಕ್ಷೇಮವನ್ನು ಮಾತ್ರ ನೋಡಿ ಕೊಳ್ಳುತ್ತೇನೆ. ವಿಶ್ವವಿದ್ಯಾನಿಲಯದ ತರುಣ ಜನಾಂಗಕ್ಕೆ ನೈತಿಕ ಹಾಗ ಆಧ್ಯಾತ್ಮಿಕ ಮೌಲ್ಯಗಳನ್ನು ಅವರ ಮಿಕ್ಕ ವಿದ್ಯಾಭ್ಯಾಸದ ಮಟ್ಟದಲ್ಲಿ ಅರ್ಥೈಸುವುದಕ್ಕೆ ಆತನು ತಿಳಿವಳಿಕೆ ಕೊಡಬೇಕು. ಆದರೆ ಅದು ಬುದ್ಧಿವಂತಿಕೆಯ ಧರ್ಮ ಮತ್ತು ಅಬುದ್ಧಿವಂತಿಕೆ ಧರ್ಮಗಳು ಪರಸ್ಪರ ಹೋರಾಟದ ಪ್ರಕರಣವಾಗಬಾರದಷ್ಟೆ! ಭೌತಿಕ ಅವಶ್ಯಕತೆಗಳಿಗಾಗಿ ಮತ್ತು ಅಗತ್ಯ ಭೋಗವಿಲಾಸಗಳಿಗಾಗಿ ಹಣ ಸಂಪಾದಿಸುವ ಸಾಧಾರಣಕ್ಕಿಂತ ಹೆಚ್ಚಿನ ಅರ್ಥ ಬದುಕಿಗೆ ಇದ್ದರೆ, ಆಗ ಆ ಅರ್ಥಗಳ ತಿಳವಳಿಕೆ ಮಾನವನ ಪೂರ್ಣ ಬದುಕಿಗೆ ಅವಶ್ಯಕವಾದ ಉಪಕರಣವಾಗುತ್ತದೆ. ಶಿಕ್ಷಣದ ವ್ಯವಹಾರವೇ ಬದುಕಿನ ಸಮಗ್ರ ದೃಷ್ಟಿಯನ್ನು ನೀಡುವುದು.

ಆದ್ದರಿಂದ, ಬದುಕಿನ ಅರ್ಥವನ್ನು ಸ್ಪಷ್ಟಪಡಿಸುವುದೇ ಶಿಕ್ಷಣದ ವ್ಯವಹಾರವಾದರೆ ಆಗ ವಿದ್ಯಾಭ್ಯಾಸದ ಸೂಕ್ತ ಸುಧಾರಿತ ಮೌಲ್ಯವು ಅನಿವಾರ್ಯವಾಗುತ್ತದೆ.

ಮೌಲಿಕ ಶಿಕ್ಷಣದಲ್ಲಿ ಬೋಧಕನ ವ್ಯಕ್ತಿತ್ವ ಗಣನೆಗೆ ಬರುತ್ತದೆ. ಏಕೆಂದರೆ ಪ್ರತಿಯೊಬ್ಬನೂ ಒಂದು ಜೀವನ ತತ್ವವನ್ನು ತನ್ನೊಂದಿಗೆ ಹೊಂದಿಸಿಕೊಂಡಿರುತ್ತಾನೆ. ಅವನು ಅದನ್ನು ತನ್ನಲ್ಲಿ ತಾನು ವ್ಯಾಖ್ಯಾನಿಸಿಕೊಂಡಿರುತ್ತಾನೋ ಇಲ್ಲವೋ ಅದು ಬೇರೆ ವಿಚಾರ.

ನಮ್ಮ ಭೋದನೆಯಲ್ಲಿ ನಮ್ಮ ವೇದಾಂತ ತತ್ವವು ನಮ್ಮಿಂದ ಹೊರಹೊಮ್ಮಿ ಪ್ರಕಾಶಿಸುತ್ತದೆ.

## ಯಾವನೇ ಶಿಕ್ಷಕನು ಅತ್ಯನ್ನತ ವಿಷಯಗಳ ಬಗ್ಗೆ ನಿಷ್ಪಕ್ಷಪಾತಿ ಯಾಗಿರಲು ಸಾಧ್ಯವಿಲ್ಲ :

ಅವನು ವಿವಿಧ ದೃಷ್ಟಿಗಳ ಅಂಶಗಳನ್ನು ಸಮಾಧಾನಕರವಾಗಿಯೇ ಹೇಳಲು ಪ್ರಯತ್ನಿಸಬಹುದು. ಆದರೆ ಅವುಗಳನ್ನು ವಿವರಿಸಿದ ಅನಂತರ ಅವನ ಸ್ವಂತ ಮನೋನಿಶ್ಚಯಗಳು ಹೊರಕ್ಕೆ ಬಿದ್ದೇ ಬೀಳುತ್ತವೆ. ಒಂದು ಹೊಳೆ ತನ್ನ ಮೂಲಸ್ಥಾನದಿಂದ ಮೇಲಕ್ಕೆ ಹತ್ತಲಾರದು, ತರುಣ ಮತ್ತು ಗ್ರಹಣಶಕ್ತಿಯುಳ್ಳ ಬುದ್ಧಿಗಳು ಅಪಮೌಲ್ಯಗಳ ದಾರುಪತ್ತೇದಾರರನ್ನು ತಮ್ಮ ಅಧಿಮಾರ್ಗ ದರ್ಶನಗಳನ್ನಾಗಿ ಹೊಂದಿದ್ದರೆ ದುಃಖಕರವಾದ ಸಂಗತಿಯಷ್ಟೆ.

ಶಿಕ್ಷಕ ಸಮುದಾಯವು ಶಿಕ್ಷಣದ ಕಾರ್ಯನಿರತ ಕಾರ್ಯಭಾರಿಯಾಗಿ ಪರಿವರ್ತನೆಯ ಮೌಲ್ಯದಲ್ಲಿ ಒಂದು ನಿರ್ದಿಷ್ಟ ಪಾತ್ರವನ್ನು ಹೊಂದಿರುತ್ತದೆ.

ಆದರ್ಶವಾಗಿ ಶಿಕ್ಷಕರು ಬರಿಯ ಅನುವರ್ತಕರಾಗಿರಬಾರದು. ಏಕೆಂದರೆ, ಅವರು ಸಂಸ್ಕೃತಿಯನ್ನು ಸಾಗಿಸುವವರಾಗಿರದೆ ಸಂಸ್ಕೃತಿಯ ಹೊಸ ಮೌಲ್ಯವನ್ನು ರೂಪಿಸುವದರಲ್ಲಿ ಸಹಾಯವನ್ನು ನೀಡುವವರೂ ಆಗಿರುತ್ತಾರೆ. ಒಂದು ದೃಷ್ಟಿಯಿಂದ ಭಾವಿಸಿದರೆ, ಶಿಕ್ಷಕ ಬೋಧಿಸುವುದು ತನ್ನನ್ನೇ, ತನ್ನ ಸ್ವಂತವನ್ನೇ. ಬದುಕಿನಲ್ಲಿ ಅರ್ಥಪರ್ಣ ವಿಷಯಗಳೊಡನೆ ಅಂಟಿಕೊಂಡಿರುವ ಉಪಾಧ್ಯಾಯರುಗಳೆಂದರೆ, 'ಒತ್ತಡದಿಂದ ನಯವನ್ನು, ಸೊಬಗನ್ನು, ಪ್ರದರ್ಶಿಸುವವರು, ತಮ್ಮ ವಿಷಯಗಳಲ್ಲಿ 'ಪ್ರಾಮಾಣಿಕ ಆವೇಶ' ವನ್ನು ಹೊಂದಿರುವವರು. ಇವು ಅವರ ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಅಳಿಸಲಾಗದಂಥ ಪ್ರಭಾವವನ್ನು ಉಳಿಸುತ್ತವೆ. ಶಿಕ್ಷಣವು ಸುಧಾರಿತ ಮೌಲ್ಯೀಕರಣವಾಗಬೇಕಾದರೆ, ಮೌಲ್ಯಗಳಿಗೆ ಸಂಬಂಧಿಸಿದಂತೆ ಶಿಕ್ಷಕನ ವೈಯಕ್ತಿಕ ಕಟ್ಟುಬದ್ಧತೆ ಅತಿಮುಖ್ಯ.

'ಕಲಿಸುವುದು' ಅದು ಏನು ?

ಕಲಿಸುವುದು ಎಂದರೆ ತೀರ್ಮಾನಗಳನ್ನು ರೂಪಿಸುವುದು. ಮತ್ತು ಯುವ ಜನಾಂಗದ ಚಾರಿತ್ರ್ಯವನ್ನು ಬೆಳೆಸುವುದು. ಅದು ಬುದ್ಧಿಗೆ ಸದಭಿರುಚಿಯನ್ನು ಕೊಡುವುದು. ಅದನ್ನು

ಇಷ್ಟಡುವಂತೆ ಬೋಧಿಸುವುದು. ತಪ್ಪು ಪರ್ಯಾಲೋಚನೆಗಳನ್ನು ಗುರುತಿಸುವಂತೆ ಬುದ್ಧಿಗೆ ಸಾಣೆ ಹಿಡಿಯುವುದು, ಯಾವುದೇ ಅರ್ಥವಿಲ್ಲದ ವ್ಯರ್ಥಾಲಾಪದ ಪ್ರದರ್ಶನದ ಝಳದಿಂದ ಕಣ್ಣು ಕೋರೈಸುವಂತೆ ಮಾಡುವುದಲ್ಲ ಅಥವಾ ಬರಿಯ ಶುಷ್ಕ ಪದಗಳವಾಗ್ಝರಿಯಿಂದ ಪಡೆಯುವುದಲ್ಲ ಅಥವಾ ಸಂದಿಗ್ಧ ಸೂತ್ರಗಳ ಉಲ್ಲೇಖನಗಳಿಂದ ಸಂತುಷ್ಟಿ ಪಟ್ಟುಕೊಳ್ಳುವುದೂ ಅಲ್ಲ. ಅದು ಎಲ್ಲ ವಿಷಯಗಳ ಅಂಥಃ ಸತ್ಯವನ್ನು ಕಂಡುಹಿಡಿಯುವುದು ಮತ್ತು ವಿಶೇಷವಾಗಿ, ಎಲ್ಲಿ ಸತ್ಯವು ಅತ್ಯವಶ್ಯಕವೋ ಅಂಥವುಗಳ ಅರ್ಥವನ್ನು ಶೋಧಿಸುವುದು.

ಆದ್ದರಿಂದ ಶಿಕ್ಷಣದ ಉದ್ದೇಶ ವಿದ್ಯಾರ್ಥಿಗಳನ್ನು ಅನಾಸಕ್ತರನ್ನಾಗಿ ಮತ್ತು ವಿಧೇಯರನ್ನಾಗಿ ಮಾಡುವುದಲ್ಲ. ಮತ್ತು ಬದುಕಿಗೆ ಅವರು ನಮ್ಮನ್ನು ಅವಲಂಬಿಸಿರುವಂತೆ ಮಾಡುವುದೂ ಅಲ್ಲ.

ಮಗು ನಾಳೆಯ ಪ್ರಪಂಚದಲ್ಲಿ ಪ್ರಾಪ್ತ ವಯಸ್ಕನಾಗುತ್ತಾನೆ ನಿನ್ನೆಯ ಪ್ರಪಂಚದಲ್ಲಿಲ್ಲ ಎಂಬುದನ್ನು ಸದಾಕಾಲವೂ ನೆನಪಿನಲ್ಲಿಟ್ಟುಕೊಂಡು ಶಿಕ್ಷಣವು ಮಗುವನ್ನು ಅಥವಾ ತರುಣನನ್ನು ಪ್ರಾಪ್ತ ವಯಸ್ಕತನದ ಕಡೆಗೆ ಅಡಿಯಿಡಲು ನೆರವು ನೀಡಬೇಕು.

ನಾಳೆಯ ಪ್ರಪಂಚ ಹೇಗಿರುತ್ತದೆಂಬುದನ್ನು ನಾವು ಮುಂಗಾಣುವುದು ಸಾಧ್ಯವಿಲ್ಲದಿದ್ದರೂ, ನಮ್ಮ ತರುಣ ಜನಾಂಗವನ್ನು ಪಕ್ವವಾದ ಪ್ರಾಪ್ತವಯಸ್ಕವಾಗಲು ನಾವು ಸಿದ್ಧಪಡಿಸಬಹುದು.

## ಹೊಣೆಗಾರಿಕೆಯನ್ನು ನಿರ್ಮಾಣ ಮಾಡುವಲ್ಲಿ ಶಿಕ್ಷಕರ ಪಾತ್ರ :

ಕಾಲೇಜಿನಲ್ಲಿ ಉಪನ್ಯಾಸಕರು ತಮ್ಮ ಪಾಲಿತರ ಸಾಮರ್ಥ್ಯವನ್ನು ಮತ್ತು ಪ್ರತಿಭೆಗಳನ್ನು ಕಂಡು ಹಿಡಿಯಲು ಮತ್ತೆ ಮತ್ತೆ ಅವಕಾಶಗಳನ್ನು ಪಡೆಯುತ್ತಾರೆ. ದಿನದ ಬಹುಭಾಗ ಹಾಗೂ ಕೆಲವು ವರ್ಷಗಳವರೆಗೆ ಒಬ್ಬ ವಿದ್ಯಾರ್ಥಿಯನ್ನು ಕ್ರಮೇಣ ಅವರವರ ವಯಸ್ಸಿಗೆ ತಕ್ಕಂತೆ ಗರಿಷ್ಠ ಜವಾಬ್ದಾರಿಯನ್ನು ಸ್ವೀಕರಿಸುವಂತೆ ತರಬೇತು ಮಾಡಬಹುದು. ಆದರಿಂದ ಅವರು ಕಷ್ಟಕರ ಪರಿಸ್ಥಿತಿಗಳಲ್ಲಿ ತೊಡಕಿಸಿಕೊಂಡಾಗ, ತಮ್ಮನ್ನು ಕುರಿತು ತಾವು ವಿಮರ್ಶಾತ್ಮಕವಾಗಿರಬೇಕು ಮತ್ತು ಅಪಕೃತ್ಯಗಳನ್ನು ಮಾಡುವುದರ ಒತ್ತಡವನ್ನು

ಎದುರಿಸಬೇಕು ಎಂಬುದರ ಬಗ್ಗೆ ಯೋಚನೆ ಮಾಡುವುದನ್ನು ಅ ವೇಳೆಗಾಗಲೇ ಕಲಿಸಿರುತ್ತಾರೆ.

ತಮ್ಮ ಉತ್ಸಾಹ, ಶಕ್ತಿ ಸಾಮರ್ಥ್ಯಗಳಿಂದ ಹಾಗೂ ಅನೇಕ ಕಾತರಗಳಿಂದಲೂ ಕೂಡ, ತಮ್ಮ ಹೊಸ 'ಪ್ರಾಪ್ತವಯಸ್ಕ'ತೆಯ ವ್ಯಕ್ತತ್ವದ ಕಡೆಗೆ ದೃಷ್ಟಿಯಿಟ್ಟಿರುವ ತರುಣರೊಡನೆ ಕಾಲೇಜು ಉಪನ್ಯಾಸಕರು ವ್ಯವಹರಿಸಬೇಕಾಗಿದೆ. ವಿಶ್ವ ತನ್ನ ಹೊಸ ಪ್ರಂಚವನ್ನು ಎಂದರೆ ಪ್ರತಿಯೊಬ್ಬನೂ ತಾನು ರಚಿಸಬೇಕೆಂದಿರುವ ಹೊಸ ಪ್ರಪಂಚವನ್ನು ಕಂಡು ಹಿಡಿಯುವ ಮಾರ್ಗವನ್ನು ತಾನು ತಿಳಿಯುವುದಿರಲಿ, ಆ ವಿಶ್ವ ತಾನೇ ತಿಳಿದುಕೊಂಡಂತೆಯೂ ಕಾಣುವುದಿಲ್ಲ.

'ಸವಾಲು' ಎನೆಂದರೆ ವಿಭಜಿಸುವುದಿಲ್ಲ. ತರುಣರನ್ನು ಅವರವರೊಂದಿಗೆ ಒಗ್ಗೂಡಿಸುವುದು, ತರುಣರನ್ನು ಹಿರಿಯರೊಂದಿಗೆ, ಅದರಲ್ಲೂ ವಿಶೇಷವಾಗಿ ಉಪಾಧ್ಯಾಯರೊಡನೆ ಹೊಂದಾಣಿಸುವುದು. ಮತ್ತು ತರುಣರನ್ನು ಅವರ ಸುತ್ತ ಮುತ್ತಲಿನ ಪ್ರಂಚದೊಡನೆ ಜೊತೆಗೂಡಿಸುವುದು.

ಇದಕ್ಕೆ ಅಗತ್ಯತೆಗಳೆಂದರೆ, ಪ್ರೀತಿಯ ಒಂದು ಅಭಿವ್ಯಕ್ತತೆ ಮಾತ್ರವಾಗಿರುವ ಉದ್ಯಮ ಶೀಲತೆಯ ಭಾವನೆ, ಸಮಷ್ಟಿಯುಕ್ತ ವ್ಯಕ್ತಿತ್ವ, ನಿಜದಲ್ಲಿ ವೈಯಕ್ತಿಕ ಸಂಸ್ಕೃತಿ ಹಾಗೂ ಒಬ್ಬನ ಮಿತಿಗಳ ಭಾವನೆ ಮತ್ತು ಬೆಳವಣಿಗೆಯ ಅಗತ್ಯತೆ.

## ಶಿಕ್ಷಕರೇ ಸುಧಾರಕರು :

ಮೊದಲ ಕರ್ತವ್ಯವೆಂದರೆ ವ್ಯಕ್ತಿಗಳಿಗೆ ಕಲಿಸುವುದು. (ವಿಷಯಗಳನ್ನು ಬೋಧಿಸುವುದಲ್ಲ). ಬೀಸುತ್ತಿರುವ ಗಾಳಿಯ ಕಡೆಗೆ ಬದಲಾವಣೆಗಾಗಿ ನೀಲಿ ನಕ್ಷೆಗಳನ್ನು ಒದಗಿಸುವುದರ ಮೂಲಕ ವ್ಯಕ್ತಿಗಳನ್ನು ವಿಶೇಷವಾಗಿ ವಿಶ್ವವಿದ್ಯಾಲಯದ ಪ್ರಪಂಚವನ್ನು ರೂಪಿಸುವುದರಿಂದ ಮೂಲಕ ಅಪರೋಕ್ಷವಾಗಿ ಸಮಾಜವನ್ನು ಸುಧಾರಿಸುವುದೇ ಆಗಿದೆ.

ವಿಶ್ವದ ಮಾಧ್ಯಮದ ಮೂಲಕ ಜನ ಪರಸ್ಪರ ಕಲಿತುಕೊಳ್ಳುತ್ತಾರೆ. ವಿವೇಕಾನಂದ ಹೇಳಿದ್ದಾರೆ. ''ನಿಜವಾದ ಶಿಕ್ಷಣವೆಂದರೆ ಮನುಷ್ಯನಲ್ಲಿ ಈಗಾಗಲೇ ಇರುವ ಪರಿಪೂರ್ಣತೆಯ ಅಭಿವ್ಯಕ್ತತೆ'' ಎಂದು. ಭೌತಿಕ ಲಾಭವನ್ನು ಶೋಧಿಸುವಲ್ಲಿ ಮತ್ತು

ಮಾನವೀಯತೆಗೆ ಕೊಟ್ಟಿರುವ ಪ್ರಾಮುಖ್ಯದಿಂದ ಮನುಷ್ಯ ತನ್ನ ಪೂರ್ಣತೆಯ ಸ್ವಭಾವನ್ನು, ಅದರಲ್ಲೂ ವಿಶೇಷವಾಗಿ ಆಧ್ಯಾತ್ಮಿಕ ಮತ್ತು ಆವೇಶಗಳ ಅಂಶಗಳನ್ನು ಹಾನಿಗೊಳಪಡಿಸಿದ್ದಾನೆ.

## ಕ್ಲಿಷ್ಟ ಕಾರ್ಯ :

ಸಧ್ಯದ ಪರಿಸ್ಥಿತಿ ಆಶಾವಾದವನ್ನು ಅಪೇಕ್ಷಿಸುವಂತೆ ಕಾಣಿಸುವುದಿಲ್ಲ. ಆದರೂ, ಶಿಕ್ಷಣದ ಸ್ಥಾಪನೆಯಲ್ಲಿ ಹೊಸ ಮೌಲ್ಯಗಳನ್ನು ತಿಳಿಸುವುದಕ್ಕೆ ತಾಳ್ಮೆಯಿಂದ ಯೋಚಿಸುವುದಕ್ಕೆ ಮತ್ತು ಸೃಜನಕ್ರಿಯೆಗೆ ನಮ್ಮ ಹತಾಶೆಗಳನ್ನು ಅಡಿಪಾಯವಾಗಿ ಬಳಸಿಕೊವಂಡು-ಕಡೆಯ ಪಕ್ಷ ಹೆಜ್ಜೆ ಹೆಜ್ಜೆಯಾಗಿ ನಾವು ಭಾರತದ ಅಗತ್ಯಗಳನ್ನು ಉತ್ತಮವಾಗಿ ಉತ್ತರಿಸಬಹುದು, ಎಂದರೆ, ಪೂರೈಸಬಹುದು.

## ಹೊಣೆಗಾರಿಕೆಯ ತ್ಯಾಗ :

ಇಂದು ಅನೇಕ ತಂದೆ ತಾಯಿಯರು ಶಿಕ್ಷಣದ ಕಾರ್ಯವಿಧಾನದಲ್ಲಿ ಬದಲಾವಣೆಗಳ ಕಾರಣದಿಂದ ಕರ್ತವ್ಯವನ್ನು ಶಿಕ್ಷಕರಾಗಿ ಆ ಪದದ ಔಪಚಾರಿಕ ಅರ್ಥದಲ್ಲಿ ತ್ಯಾಗ ಮಾಡುತ್ತಾರೆ. ಹೀಗೆ ತಮ್ಮ ಪವಿತ್ರ ಹೊಣೆಗಾರಿಕೆಯನ್ನು ತ್ಯಜಿಸುತ್ತಾರೆ. ಈ ತಂದೆ ತಾಯಿಗಳು ಮಗುವಿನ ಬುದ್ಧಿಯ ಬೆಳವಣಿಗೆಯನ್ನು ಒಮ್ಮೇಯೇ ಮತ್ತು ಆಗಾಗ ಅದರ ನೈತಿಕ ಹಾಗೂ ಧಾರ್ಮಿಕ ತರಬೇತಿಯನ್ನು ಬಾಹ್ಯ ಅಧಿಕಾರವನ್ನು ಬಿಟ್ಟುಬಿಡುತ್ತಾರೆ. ಅನೇಕ ಸಂದರ್ಭಗಳಲ್ಲಿ ಅಂಥ ಅಧಿಕಾರಗಳೊಡನೆ ಅವರಿಗೆ ಯಾವುದೇ ಸಂಪರ್ಕ ಇರುವುದಿಲ್ಲ. ಶಿಕ್ಷಕರ ಬೋಧನೆಗಳು ಭಾವನೆಗಳ ಅನ್ವಯವಾಗಿರಬೇಕು ಮತ್ತು ಅವು ಮನೋವೃತ್ತಿಗಳನ್ನು ರೂಪಿಸಬೇಕು ಹಾಗೂ ಮನೆಯಲ್ಲಿ ಪೋಷಿತವಾಗಬೇಕು.

ಹೆಣ್ಣು ಮಗು ಅಥವಾ ಗಂಡು ಮಗು ದೇವರು ವಿಧಿಸಿರುವಂತೆ ಎಲ್ಲ ರೀತಿಯಲ್ಲಿ ಬೆಳೆಯುವಂತಾಗಲು ತಾಯಿತಂದೆಗಳು ಸಹಾಯ ಮಾಡುವಾಗ ಅವರು ಯುವಕರಿಗೆ ಒಂದು ಸಮಗ್ರ ಚಿತ್ರವನ್ನು ಅಸ್ತಿತ್ವಕ್ಕೆ ಮತ್ತು ಒಂದು ವಾಸ್ತವಿಕ ಕಾರ್ಯಕ್ಕೆ ತಂದು ಮಾನವನು ತೋರಿಸಿಕೊಡುತ್ತಾರೆ. ಹೀಗೆ ತಂದೆ ತಾಯಿಗಳು ಮತ್ತು ಶಿಕ್ಷಕರು ತಮ್ಮ ತಮ್ಮ ಪ್ರಯತ್ನಗಳನ್ನು ಪರಸ್ಪರ ಬಲಪಡಿಸುತ್ತಾರೆ.

ಕಲಹಗಳು, ಭಿನ್ನಭಾವನೆಗಳು, ಉಲ್ಲಂಘನೆಗಳು ಮತ್ತು ಬಿಗಡಾಯಿಸಿಕೊಂಡು ನೆಂಟಸ್ಥನಗಳು ಒಂದು ಕುಟುಂಬದಲ್ಲಿ ಮನೆ ಮಾಡಿಕೊಂಡಿರುವಂಥ ಯಾವುದೇ ನಿಕಟ ಅಥವಾ ಗಾಢಸ್ನೇಹಗಳಂಥ ಅವಶ್ಯಕ ಭಾಗಗಳೇ ಆಗಿವೆ. ಆದರೆ ಕುಟುಂಬದ ತಂತಿ ಗಟ್ಟಿಯಾಗಿರುವ ಕಡೆ ಅದು ಕತ್ತರಿಸಿ ಹೋಗುವ ಸಂಭವವಿಲ್ಲ. ಸುಸ್ಥಿರವಾದ ಕುಟುಂಬ ಪರೀಕ್ಷಣೆಗಳನ್ನು ತನ್ನ ಪಕ್ವತೆಯಿಂದ ಗೆದು ನಿಲ್ಲುತ್ತದೆ. ಅದು ನಮ್ಮ ಮೆಚ್ಚುಗೆಯನ್ನು ಬಯಸುತ್ತದೆ.

## ವರ್ಗ ಚಟುವಟಿಕೆ

### 1) ಚರ್ಚಿಸಿ / ವಾದಿಸಿ :

ಸಹನೆ, ಅನುಕಂಪ ಮತ್ತು ವಿವೇಕಗಳಿಂದ ರಹಿತವಾದ ಭೌತಿಕ ಸಂಪತ್ತುಗಳು ಧೂಳಾಗಿ ಬೂದಿಯಾಗಿ ಪರಿವರ್ತನೆಗೊಳ್ಳಬಹುದು.

### 2) ಪ್ರಶ್ನಾವಳಿಗಳು :

1) ಮೌಲಿಕ ಸರ್ವೇಕ್ಷಣೆ

2) ನೀವು ಪ್ರಾಮಾಣಿಕರೆ ?

ತಂತ್ರ = 1 : ಮೌಲಿಕ ಸರ್ವೇಕ್ಷಣೆ

ನಿರ್ದೇಶನಗಳು :- ವಿದ್ಯಾರ್ಥಿಗಳಿಗೆ ಒಂದು ಪಟ್ಟಿಯನ್ನು ಕೊಡಿ ಮತ್ತು ಕೆಳಗೆ ಪಟ್ಟಿ ಮಾಡಿದ ಬಾಬುಗಳಿಗೆ ಅವರು ನೀಡುವ ಮೌಲ್ಯಕ್ಕನುಸಾರವಾಗಿ ಅವುಗಳ ಎದುರಿಗೆ ಅಂಕಿಗಳನ್ನು ಕೊಡುವಂತೆ ಹೇಳಿ, ಅತ್ಯಂತ ಮುಖ್ಯವಾದುದರ ಎದುರಿಗೆ ಒಂದು, ಅದಕ್ಕೆ ಮುಂದಿನದು ಎರಡು ಇತ್ಯಾದಿ ಅನಂತರ ಚರ್ಚೆ ನಡೆಯಲ್ಲಿ. ನಿಮ್ಮ ಮೊದಲ ಆಯ್ಕೆಯನ್ನು ಅಷ್ಟೇಕೆ ವಿಶೇಷವಾಗಿ ಮೌಲ್ಯದುಳ್ಳದ್ದೆಂದು ಪರಿಗಣಿಸುತ್ತೀರಿ ! ಎಂದು ಇತರರನ್ನು ಅದೇ ರೀತಿ ಅಂತಿಮ ಮೌಲ್ಯಗಳ ಬಗ್ಗೆ ವಿಚಾರಿಸಲು ಸೇರಿಸಿಕೊಳ್ಳಿ, ಅವರೊಡನೆಯೂ ಈ ಮೌಲ್ಯದ ಪ್ರಾಧಾನ್ಯದ ಬಗ್ಗೆ ಚರ್ಚೆ ಮಾಡಿ ನೀವು ಹೆಸರಿಸಿದ ತುತ್ತತುದಿಯ ಮೌಲ್ಯಗಳನ್ನು ಕುರಿತು ಜೊತೆ ಜೊತೆಯಾಗಿ ಮಾತನಾಡಿ. ಇತರ ಅನೇಕ ಚಟುವಟಿಕೆಗಳನ್ನು ಈ ಬಗೆಯ

ಆಧಾರದ ಮೇಲೆ ನಡೆಸಬಹುದು. ನಮ್ಮ ಆಲೋಚನೆಗೆ ಅನುಸಾರವಾಗಿ ನಿಮಗೆ ಮುಖ್ಯವಾದದನ್ನು ಪ್ರಥಮ ಸ್ಥಾನದಲ್ಲಿಟ್ಟು ಆರಂಭಿಸಿ ಸಂಖ್ಯೆಯನ್ನು ಕೊಡಿ.

| | ಮೌಲ್ಯ ಪಟ್ಟಿ | ಸ್ಥೂಲಗುಣಗಳು |
|---|---|---|
| 1) | ............ | ಹಿತವಾದ ಬಾಳು (ಸಂಪನ್ನ ಬದುಕು) |
| 2) | ............ | ಸಮಾನತೆ (ಸೋದರತ್ವ, ಎಲ್ಲರಿಗೆ ಸಮಾನ ಅವಕಾಶ) |
| 3) | ............ | ಉದ್ರಿಕ್ತ ಜೀವನ ಪ್ರೇರಕ ಸಕ್ರೀಯ ಬದುಕು) |
| 4) | ............ | ಕೌಟುಂಬಿಕ ಭದ್ರತೆ (ಪ್ರೀತಿಸುವವರ ಪೋಷಣೆ) |
| 5) | ............ | ಸ್ವಾತಂತ್ರ್ಯ (ಸ್ವತಂತ್ರತೆ ಮುಕ್ತ ಆಯ್ಕೆ) |
| 6) | ............ | ಸುಖ (ನಮಗಿರುವಷ್ಟರಲ್ಲಿ ತೃಪ್ತಿ) |
| 7) | ............ | ಆಂತರಿಕ ಸಾಮರಸ್ಯ (ಒಳ ಹೋರಾಟದಿಂದ ಬಿಡುಗಡೆ) |
| 8) | ............ | ಪಕ್ವವಾದ ಪ್ರೀತಿ (ಲೈಂಗಿಕ ಮತ್ತು ಆಧ್ಯಾತ್ಮಿಕ ಗಾಢಸ್ನೇಹ) |
| 9) | ............ | ರಾಷ್ಟ್ರೀಯ ಭದ್ರತೆ (ದಾಳಿಯಿಂದ ರಕ್ಷಣೆ) |
| 10) | ............ | ಭೋಗ (ಸುಖಾನುಭವದ, ವಿರಾಮ ಜೀವನ) |
| 11) | ............ | ಮುಕ್ತಿ (ಪಾಪದಿಂದ ವಿಮುಕ್ತಿ, ಶಾಶ್ವತ ಜೀವನ) |
| 12) | ............ | ಆತ್ಮ ಗೌರವ (ತನ್ನ ಘನತೆ) |
| 13) | ............ | ಸಾಧನೆಯ ಭಾವ (ಶಾಶ್ವತ ಕೊಡುಗೆಯನ್ನು ನೀಡುವುದು) |
| 14) | ............ | ಸಾಮಾಜಿಕ ಮಾನ್ಯತೆ (ಗೌರವ, ಮೆಚ್ಚುಗೆ) |
| 15) | ............ | ನಿಜವಾದ ಸ್ನೇಹ (ನಿಕಟ ಗೆಳೆತನ) |

16) ............ ವಿವೇಕ (ಬದುಕಿನ ಬಗ್ಗೆ ಪಕ್ವವಾದ ತಿಳುವಳಿಕೆ)

17) ............ ಶಾಂತಿಯ ವಿಶ್ವ (ಯುದ್ಧ ಮತ್ತು ಹೋರಾಟದಿಂದ ಸ್ವಾತಂತ್ರ)

18) ............ ಸೌಂದರ್ಯದ ಪ್ರಪಂಚ (ನಿಸರ್ಗ ಮತ್ತು ಕಲೆಗಳ ಸೌಂದರ್ಯ)

ಮೌಲ್ಯಗಳ ಮತ್ತೊಂದು ಪಟ್ಟಿ ವೈಯಕ್ತಿಕ ಗುಣಗಳು

1) ............ ಮಹತ್ವಾಕಾಂಕ್ಷೆಯ (ಶ್ರಮದ ದುಡಿಮೆ ಉತ್ಕಾಂಕ್ಷಿಸುವುದು).

2) ............ ವಿಶಾಲ ಮನಸ್ಸಿನ (ತೆರೆದ ಮನಸ್ಸಿನ)

3) ............ ಶಕ್ತ (ಸಕ್ಷಮ, ಪರಿಣಾಮಕಾರಿ)

4) ............ ಸಂತುಷ್ಟ (ಹಗುರ ಹೃದಯದ, ಸಂತೋಷದ)

5) ............ ಸ್ವಚ್ಛ (ಚೊಕ್ಕಟ, ಅಚ್ಚುಕಟ್ಟಾದ)

6) ............ ಧೈರ್ಯಸ್ಥ (ನಂಬಿಕೆಗಳಿಗಾಗಿ ನಿಲ್ಲುವವನು)

7) ............ ಕ್ಷಮಿಸುವುದು (ಇತರರನ್ನು ಕ್ಷಮಿಸುವುದು)

8) ............ ಸಹಾಯಕ (ಇತರರ ಕರ್ಮಕ್ಕೆ ದುಡಿಯುವುದು)

9) ............ ಪ್ರಾಮಾಣಿಕ (ನಿಷ್ಠೆ, ಸತ್ಯವಂತನಾಗಿರುವುದು)

10) ............ ಕಾಲ್ಪನಿಕ (ಸಾಹಸದ, ಸೃಷ್ಟಿಸುವ)

11) ............ ಸ್ವತಂತ್ರದ (ಆತ್ಮನಂಬಿಕೆಯ ಸ್ವಂತಕ್ಕೆ ಸಾಕಷ್ಟು)

12) ............ ಬೌದ್ಧಿಕ (ಬುದ್ಧಿಯುಳ್ಳ, ವಿಚಾರ ಶೀಲ)

13) ............ ತರ್ಕಶಾಸ್ತ್ರದ (ಸ್ಥಿರವಾದ, ತರ್ಕಬುದ್ಧಿಯುಳ್ಳ)

14) ............ ಪ್ರೀತಿಸುವ (ವಾತ್ಸಲ್ಯದ, ಮೃದುವಾದ)

15) ............ ವಿಧೇಯ (ಕರ್ತವ್ಯ ತತ್ಪರ, ಗೌರವಾನ್ವಿತ)

16) ............ ವಿನಯಶೀಲ (ವಿನಯವುಳ್ಳ, ಸನ್ನಡತೆಯ)

17) ............ ಹೊಣೆಯಾದ (ಅವಲಂಬಿಸಬಹುದಾದ, ನಂಬತಕ್ಕ)

18) ............ ಆತ್ಮಸಂಯಮ (ಆಂಕೆಯಲ್ಲಿಟ್ಟುಕೊಂಡ, ಆತ್ಮ ಶಿಸ್ತಿನ)

## 2) ನೀವು ಪ್ರಾಮಾಣಿಕರೆ ?

ನೀವು ನಿಮ್ಮ ಸತ್ಯನಿಷ್ಠೆ ಕೋಪದಿಂದ ಸಿಡಿದು ಬೀಳುವುದಕ್ಕೆ ಮುಂಚೆ ಈ ಮುಂದಿನ ಪ್ರಶ್ನೆಗಳನ್ನು ಸತ್ಯವಾಗಿ ಉತ್ತರಿಸಲು ಪ್ರಯತ್ನಿಸಿ, ಆಗ ನೀವು ನಿಮ್ಮ ಬಹಿರಂಗ ಚಿತ್ರಣವನ್ನು ಕಾಣಬಹುದು. ನಿಮ್ಮ ಆಯ್ಕೆಗೆ ತಕ್ಕಥೆ 'ಎ' ಅಥವಾ 'ಬಿ' ಎಂದು ಗುರುತು ಹಾಕಿ ಕಡೆಗೆ ನಿಮ್ಮ ಸ್ಕೋರನ್ನು ತಾಳೆ ನೋಡಿ.

1) (ಎ) ದಾರಿಯಲ್ಲಿ ರೂಪಾಯಿ ನೋಟುಗಳ ಒಂದು ಕಟ್ಟನ್ನು ಕಂಡು ಸಂದರ್ಭದಲ್ಲಿ ನೀವು ಕೂಡಲೇ ಅದನ್ನು ಹತ್ತಿರದ ಪೊಲೀಸ ಠಾಣೆಗೆ ತಲುಪಿಸುತ್ತೀರಾ ?

(ಬಿ) ಅಥವಾ ''ಹಣವನ್ನು ಹಾಗೆ ಬಿಸಾಡುವವರು ಯಾರೇ ಆಗಲಿ ಅದನ್ನು ಕಳೆದುಕೊಳ್ಳಲು ನಿಜವಾಗಿ ಸಮರ್ಥರಿರುತ್ತಾರೆ'' ಎಂದು ನಿಮಗೆ ನೀವೇ ಹೇಳಿಕೊಂಡು, ಆ ಹಣವನ್ನು ನೀವೇ ಇಟ್ಟುಕೊಳ್ಳುತ್ತೀರಾ ?

2) (ಎ) ಒಬ್ಬ ಅಂಗಡಿ ಮಾಲಿಕ ಚಿಲ್ಲರೆ ಕೊಡುವಾಗ ಹೆಚ್ಚು ಹಣ ಕೊಟ್ಟಾಗ ಅದನ್ನು ಅವರೆಲ್ಲ ಕಳ್ಳರು, ಅವರು ಹಾಗೆ ಹಿಡಿದಿದ್ದೇ ಸರಿ ಎಂದು ತರ್ಕೈಸಿ ನೀವೇ ಇಟ್ಟುಕೊಳ್ಳುತ್ತೀರಾ.

(ಬಿ) ಅಥವಾ ತಪ್ಪುಗಳನ್ನು ತೋರಿಸಿಕೊಡುತ್ತೀರಾ ?

3) (ಎ) ನೀವು ಒಂದು ಮಗುವಿನೊಂದಿಗೆ ಒಂದು ಅಂಗಡಿಯ ಒಳಗೆ ಹೋಗುತ್ತಿರುತ್ತೀರಿ ಎಂದು ಭಾವಿಸಿಕೊಳ್ಳಿ. ಅಂಗಡಿಯವನು

ಬಂದಾನೆಂದು ಬಂದು ಗಲ್ಲದಿಂದ (ಕೌಂಟರ್) ಏನನ್ನಾದರೂ ತನಗೆ ತಾನೆ ಮಗು ಸಹಾಯ ಮಾಡಿಕೊಂಡರೆ, ಅದನ್ನು ಅವನು ಬಿಟ್ಟು ಕೊಡಲಾರನೆಂದು ನಿಮಗೆ ತಿಳಿದು ಬಂದರೆ ಸಂಬಂಧಿಸಿದ ವಸ್ತುವನ್ನು ಹಿಂದಿರುಗಿಸುತ್ತೀರಾ ? ಅಥವಾ ಅದರ ಬೆಲೆ ಪಾವತಿ ಮಾಡುತ್ತೀರಾ ?

(ಬಿ) ಅಥವಾ ಸುಮ್ಮನೆ ಮುಂದಕ್ಕೆ ನಡೆಯುತ್ತೀರಾ ?

4) (ಎ) ನೀವು ನಿಮ್ಮ ಜೀವವಿಮೆಯ ಹಕ್ಕನ್ನು ಕೋರುವಾಗ ನೀವು ಕೊರುತ್ತಿರುವ ಬಾಬಿನ ಮೌಲ್ಯವನ್ನು ಮೇಲೆತ್ತಿ ಹಿಡಿಯಲು ಯೋಚಿಸುತ್ತೀರಾ ?

(ಬಿ) ಅಥವಾ ಅದರ ಯಥಾವತ್ತಾದ ಮೌಲ್ಯವನ್ನು ಹೇಳುತ್ತೀರಾ ?

5) (ಎ) ಯಾವುದಾರೂ ಆಧಾಯದ ಮೌಲವನ್ನು ನೀವು ಆಕಸ್ಮಿಕವಾಗಿ ಗುರುತಿಸಿರಿ ಎಂದು ಕೊಳ್ಳಿ. ಅದನ್ನು ಆದಾಯ ತೆರಿಗೆ ಅಧಿಕಾರಿಗಳು ಕಂಡುಹಿಡಿಯಲಾಗದವರಾದರೆ ಅದನ್ನು ನಿಮ್ಮ ತೆರಿಗೆ ಸಲ್ಲಿಕೆಗಳಲ್ಲಿ ಸೇರಿಸುತ್ತೀರಾ ?

(ಬಿ) ಅಥವಾ 'ನನ್ನಲ್ಲಿ ಇರುವ ಪೂರಕ ಮಟ್ಟಿಗೇನೇ ಅವರು ಸಾಕಷ್ಟು ಹಣ ಮಾಡುತ್ತಾರೆ' ಎಂದು ಹೇಳಿಕೊಂಡು ಅದನ್ನು ಬಿಟ್ಟುಬಿಡುತ್ತೀರಾ :

6) (ಎ) ನೀವು ಬಸ್ಸಿನಲ್ಲೊ ರೈಲಿನಲ್ಲೊ ಇರುವಾಗ ಅದರ ನಿರ್ವಾಹಕ, ನಿಮ್ಮನ್ನು ನಿಮ್ಮ ಪ್ರಯಾಣದ ಟಿಕೆಟ್ಟಿನ ತೆರವನ್ನು ಅವರು ತೆಗೆದು ಕೊಳ್ಳುವಂತೆ ಮಾಡುತ್ತೀರಾ ?

7) (ಎ) ಒಂದು ಉಪಾಹಾರಗೃಹದಲ್ಲಿ ಒಂದು ತಟ್ಟೆಯ ಕೆಳಗೆ ಸರ್ವರನಿಗೆ ಬಿದ್ದ ಬಕ್ಷೀಸನ್ನು ನೋಡುತ್ತೀರಿ ಎಂದುಕೊಳ್ಳಿ, ನೀವು ಆ ಬಗ್ಗೆ ಸರ್ವರನ ಗಮನ ಸೆಳೆಯುತ್ತೀರಾ ?

(ಬಿ) ನೀವು ತಿಂಡಿ ತಿಂದು ಆಗುವವರೆಗೆ ಸುಮ್ಮನಿದ್ದು ಬಿಟ್ಟು ಅನಂತರ ಅಲ್ಲೆ ಬಿಟ್ಟು ಬಿಟ್ಟೆ ಎಂದು ನಟಿಸುತ್ತೀರಾ ?

8) (ಎ) ನೀವು ಒಂದು ಅಂಚೆ ಪತ್ರವನ್ನು ಸ್ವೀಕರಿಸುತ್ತೀರಿ ಎನ್ನಿ. ಅದರ ಮೇಲಿನ ಅಂಚೆ ಚೀಟಿಗೆ ಮುದ್ರಾಂಕ ಬಿದ್ದಿರುವುದಿಲ್ಲ. ನಿಮ್ಮ ಪ್ರಲೋಭನೆಯನ್ನು ಒತ್ತೆಗಿಟ್ಟು ಅದನ್ನು ಕಸದ ಬುಟ್ಟಿಗೆ ತಳ್ಳಿಬಿಡುತ್ತೀರಾ ?

(ಬಿ) ಅಥವಾ ಅದನ್ನು ಎಚ್ಚರಿಕೆಯಿಂದ ತೆಗೆದು ಮತ್ತೆ ಬಳಸುತ್ತೀರಾ ?

9) (ಎ) ನಿಮ್ಮ ಒಬ್ಬ ಶ್ರೀಮಂತ ಬಂಧು, ನಿಮಗೆ ಅತಿ ಹೆಚ್ಚಿನ ಹಣವನ್ನು 'ನೀವು ಕುಡಿಯಬಾರದು, ಧೂಮಪಾನ ಮಾಡಬಾರದು' ಎಂಬ ಷರತ್ತಿನ ಮೇಲೆ, ಬಿಟ್ಟು ಹೋದರೆ ಹಣವನ್ನು ತೆಗೆದುಕೊಂಡು ಕುಡಿಯುವುದು ಇತ್ಯಾದಿ ಅಭ್ಯಾಸವನ್ನು ಮುಂದುವರಿಸುತ್ತೀರಾ ಮತ್ತು ಆ ಬಂಧು ಒಬ್ಬ ಹುಚ್ಚ ಎಂದು ನೀವೇ ಪ್ರಶ್ನೆ ಹಾಕಿಕೊಂಡು ನಿಮ್ಮ ಚರ್ಯೆಗಳನ್ನು ಯಾವುದಾದರೂ ನೆಪಗಳಿಂದ ಸಾಧಿಸಿ ಕೊಳ್ಳುತ್ತೀರಾ ?

(ಬಿ) ಅಥವಾ ಒಪ್ಪಂದಕ್ಕೆ ಕಟ್ಟುಬಿದ್ದು ಅದರಂತೆ ಬದುಕುತ್ತೀರಾ ?

10) (ಎ) ಒಬ್ಬ ಸಂಶಯಾಸ್ಪದ ಗ್ರಾಹಕ ಕೆಲವು 'ಉದ್ರೇಕ' ಗೊಳಿಸುವ ಸರಕುಗಳನ್ನು ಹೆಚ್ಚು ಕಡಿಮೆ 'ಪುಕಸಟ್ಟೆ'ಯಾಗಿ ನೀಡುತ್ತಾನೆ ಮತ್ತು ಅದನ್ನು ಪತ್ತೆ ಹಚ್ಚುವ ಯಾವುದೇ ಅಪಾಯ ಇರುವುದಿಲ್ಲ ಎಂದು ಕಂಡು ಬಂದರೆ ನೀವು ಕೂಡಲೇ ಪೋಲಿಸರಿಗೆ ತಿಳಿಸುತ್ತೀರಾ ?

(ಬಿ) ಅಥವಾ ಅವನೊಡನೆ ವ್ಯವಹಾರ ಮಾಡುತ್ತೀರಾ ?

## ಉತ್ತರಗಳು

ಪ್ರತಿಯೊಂದು ಉತ್ತರಕ್ಕೂ ೫ ಅಂಕಗಳನ್ನು ಪಡೆಯಿರಿ :

| | | |
|---|---|---|
| ಪ್ರಶ್ನೆ | 1 | ಎ |
| " | 2 | ಎ |
| " | 3 | ಎ |
| " | [illegible] | ಎ |

| | | |
|---|---|---|
| " | 5 | ಎ |
| " | 6 | ಎ |
| " | 7 | ಎ |
| " | 8 | ಎ |
| " | 9 | ಎ |
| " | 10 | ಎ |

ಗರಿಷ್ಠ ಅಂಕ 50

ನೀವು ಪ್ರಾಮಾಣಿಕವಾಗಿ 40-50 ಅಂಕಗಳನ್ನು ಗಳಿಸಿದ್ದರೆ ನೀವು ಸದ್ಗುಣದ ಆದರ್ಶ ಮೂರ್ತಿ, ಹಾಗೂ ಉಳಿದ ಪ್ರಪಂಚಕ್ಕೆ ಪ್ರಾಮಾಣಿಕತೆಯನ್ನು ಪ್ರಕಾಶಿಸುವ ಮಾದರಿ ವ್ಯಕ್ತಿ.

25-30 ಅಂಕಗಳು; ನೀವು ತಕ್ಕಮಟ್ಟಿನ ಮಾನವ

ಮತ್ತು ಪರಿಪೂರ್ಣತೆಯಿಂದ ದೂರ- ಎಂದರೆ ನೀವು ಅಷ್ಟು ಮಾತ್ರ ಸಾಧಾರಣ.

20 ಅಂಕಗಳು ಮತ್ತು ಅದಕ್ಕೆ ಕಡಿಮೆ ಗಳಿಸಿದರೆ ನೀವು ತೊಂದರೆಯ ಕಡೆಗೆ ತಲೆಯಿಟ್ಟಿದ್ದೀರಿ ಎಂದು ತೋರಿಸುತ್ತದೆ.



ಅಧ್ಯಾಯ-೨

# ಕುಟುಂಬ

'ಮಾನವತೆಯ ಭವಿಷ್ಯ ಕುಟುಂಬದ ಮಾರ್ಗದಿಂದ ನಡೆಯುತ್ತದೆ'

ಜಾನಪಾಲ್ - *II*

1. ಕುಟುಂಬ ಎಂದರೇನು ?

ವ್ಯಾಖ್ಯಾನ :

ಒಂದು ಪರಿಸರದಲ್ಲಿ ಒಟ್ಟಾಗಿ ಬದುಕುವ ಜನದ ಒಂದು ಸಮುದಾಯವೇ ಕುಟುಂಬ. ಆ ಪರಿಸರ ಉಪಶಮನದ ಕೇಂದ್ರ. ಒಬ್ಬರು ಬದುಕಬಹುದಾದ ಸ್ಥಳ.

ಮತ್ತೊಬ್ಬರ ಹತಾಶೆಗಳನ್ನು, ಮೂರ್ಖತನಗಳನ್ನು ಪ್ರತೀಕಾರದ ಪ್ರವೃತ್ತಿಯಿಲ್ಲದೆ ಇತರ ಜನ ಒಪ್ಪಿಕೊಳ್ಳುವ ಸ್ಥಳ; ಯಾವುದೇ ನಟನೆಯ ವೇಷವಿಲ್ಲದೆ ತನ್ನಷ್ಟಕ್ಕೆ ತಾನೇ ಇರಬಹುದಾದ ಸ್ಥಳ.

ಕುಟುಂಬವನ್ನು ಮತ್ತೊಂದು ರೀತಿಯಲ್ಲೂ ವ್ಯಾಖ್ಯಾನಿಸುತ್ತಾರೆ. ಒಂದು ಕುಟುಂಬದ ಒಳಗೆ ಬಂಧುಗಳಾದ ವ್ಯಕ್ತಿಗಳು ಒಟ್ಟಾಗಿ ವಾಸಿಸುತ್ತಾರೆ, ಆ ಕುಟುಂಬದವರು ಒಟ್ಟಿಗೆ ಸಮಾನವಾದ ಆಹಾರವನ್ನು ಸೇವಿಸುತ್ತಾರೆ ಅಥವಾ ಒಂದೇ ಅಡುಗೆ ಮನೆಯನ್ನು ಹೊಂದಿರುತ್ತಾರೆ. ಮಕ್ಕಳು ಭದ್ರತೆಯ ಮತ್ತು ವಾತ್ಸಲ್ಯದ ವಾತಾವರಣದಲ್ಲಿ ಉತ್ತಮವಾಗಿ ಬೆಳೆಯುತ್ತವೆ ಎಂಬುದನ್ನು ಅನುಭವದಿಂದ ಕಂಡುಕೊಳ್ಳಲಾಗಿದೆ ಹಾಗೂ ಅದನ್ನು ಸಿದ್ಧಪಡಿಸಲಾಗಿದೆ. ಭೌತಿಕ ಉಪಾಧಿಗಳನ್ನು ನಿಜವಾದ ಪ್ರೀತಿಗೆ ಬದಲಾಯಿಸುವುದು ಎಂದಿಗೂ ಸಾಧ್ಯವಿಲ್ಲ.

ಪ್ರೀತಿ ಪೋಷಿಸುತ್ತದೆ, ಪಾಲು ಮಾಡಿಕೊಳ್ಳುತ್ತದೆ, ಅಗತ್ಯಗಳನ್ನು ಬಯಸುತ್ತದೆ ಮತ್ತು ನೀಡುತ್ತದೆ ಮತ್ತು ಇವುಗಳೆಲ್ಲವನ್ನು ಕೌಟುಂಬಿಕ ಜೀವನ ಸಮೃದ್ಧವಾಗಿ ಒದಗಿಸುವ ಹಲವಾರು ಬಂದುತ್ವಗಳ ಅನುಭವಗಳ ಅಂತರ್ಯದಲ್ಲಿಯೇ ಇರುತ್ತವೆ. ಮಗು ಹಾಗೂ ಅದರ ತಂದೆ ತಾಯಿಗಳು ಭಿನ್ನಭಿನ್ನರಾಗಿ ಮತ್ತು ಒಟ್ಟಾಗಿ ಪಕ್ವವಾದ ವ್ಯಕ್ತಿಗಳಾಗಿ ಬೆಳೆಯುತ್ತಾರೆ.

ಮನೆ : ಇದೇ ನಿಖರವಾಗಿ ಹೇಳುವ 'ಮನೆ'- ಇದು ನಾವು ವಾಸ ಮಾಡುವ ಒಂದು ಸಾಮಾನ್ಯ ಸ್ಥಳವಲ್ಲ. ಅದು ನಮ್ಮನ್ನು ಅರ್ಥ ಮಾಡಿಕೊಳ್ಳಲು ಇರುವ ಜನದ ಸ್ಥಳ.

ನಾವು ಇಂದು ಅನುಭವಿಸುತ್ತಿರುವ ಸಂತೋಷಗಳು ನಿನ್ನೆಯ ಬಸಿರಿನಲ್ಲಿ ಹುಟ್ಟಿದ್ದವು.

ನಾವು ಇಂದು ಅನುಭವಿಸುತ್ತಿರುವ ದುರಂತಗಳು ನಿನ್ನೆಯ ಎಚ್ಚರಿಕೆಯ ಕುರುಹುಗಳಲ್ಲಿ ದೃಗ್ಗೋಚರವಾಗಿದ್ದವು. ಆದ್ದರಿಂದ ನಮ್ಮ ಯುವ ಜನಾಂಗದ ಎಲ್ಲ 'ನಾಳೆ' ಗಳಿಗೆ 'ಇಂದು' ನಾವು ನಮ್ಮನ್ನೇ ಸಿದ್ಧಗೊಳಿಸಿಕೊಳ್ಳಬೇಕು. ಕೌಟುಂಬಿಕ ಜೀವನದ ವಿಷಯಕ್ಕೂ ಇದು ವಿಶೇಷವಾಗಿ ಸತ್ಯ.

ಬೇರೆ ಬೇರೆ ಕುಟುಂಬಗಳು : ಕೆಲವು ಕುಟುಂಬಗಳು ಪಾಲನಾ ಸ್ಥಳಗಳು : ಅಲ್ಲಿ ಜನ ತಮ್ಮ ಸಾಮರ್ಥ್ಯಗಳ ಬಗ್ಗ ಪ್ರಯೋಗಗಳನ್ನು ಕೊಡುವ ಬಗ್ಗೆ ಮತ್ತು ಪ್ರೀತಿಯನ್ನು ಪಡೆಯುವ ಬಗ್ಗೆ ಕಲಿತುಕೊಳ್ಳುತ್ತಾರೆ ಮತ್ತು ತಾವು ಏನಾಗಬೇಕೆಂಬುದನ್ನು ಕುರಿತು ಧೈರ್ಯದಿಂದ ಕನಸು ಕಾಣುತ್ತಾರೆ.

ಕೆಲವು ಕುಟುಂಬಗಳು 'ಸೆರೆಮನೆ' ಗಳು. ಅಲ್ಲಿ ಜನ ಅವರಿಗೆ ಹೇಳಿದ್ದನ್ನು ಮಾಡಬೇಕು. ಆ ಬಗ್ಗೆ ಒಂದು ಮೆಚ್ಚಿಗೆ ಮಾತು ಕೇಳಬೇಕಾದರೆ ದೀರ್ಘ ವರ್ಷಗಳನ್ನೇ ಕಾಯಬೇಕು ಅಥವಾ ತಪ್ಪಿಸಿಕೊಳ್ಳಲು ಅವಕಾಶ ಪಡೆಯುವುದಕ್ಕೆ ಚಳುವಳಿ ನಡೆಸಬೇಕು.

'ವ್ಯತ್ಯಾಸ' ವನ್ನು ಮಾಡುವುದು ಯಾವುದು ?

ಒಂದು ಕುಟುಂಬ ತಿಳಿಸುವ ದಾರಿ ಯಾವುದು? ಒಂದು ಶಬ್ದ ಅಥವಾ ಒಂದು ನೋಟ ತಮ್ಮದೇ ಸ್ವಂತ ಪ್ರಪಂಚದಲ್ಲಿ ಒಂದು ಬೀಗವನ್ನು ಹಾಕುವಂತೆ ಯಾರನ್ನಾದರೂ ಬಂಧಿಸಿಡಬಹುದು ಹಾಗೂ ನಮ್ಮ ವಿಶಾಲ ವಿಶ್ವದ ಸಾಧ್ಯತೆಗಳನ್ನು ತೆರೆಯುವ ಬೀಗದ ಕೈ

ಒಂದು ನೋಟವೇ ಅಥವಾ ಒಂದು ಶಬ್ದವೇ ಆಗಬಹುದು. ವ್ಯತ್ಯಾಸ - ಪರಿಣಾಮಕಾರಿ ಸಂಪರ್ಕ.

## ಭಾರತೀಯ ಕುಟುಂಬ :

ಶತ ಶತಮಾನಗಳಿಂದ ಆಗಿರುವ ಅತಿ ದೊಡ್ಡ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬದಲಾವಣೆಗಳ ಮಧ್ಯೆ ಭಾರತ ಭದ್ರ ಕೌಟುಂಬಿಕ ಜೀವನ ಮತ್ತು ಅದರ ರಚನೆಯ ದೀರ್ಘ ಪರಪಂಪರೆಯನ್ನು ಹೊಂದಿದೆ. ಕೌಟುಂಬಿಕ ಒಕ್ಕೂಟದ ಮನೋಭಾವ ಒಂದು ಆಧಾರಶಕ್ತಿಯಾಗಿ ಉಳಿದುಕೊಂಡು ಬಂದಿದೆ. ಅದು ನಮ್ಮ ಭಾರತೀಯ ಜನಾಂಗದ ದಿನನಿತ್ಯದ ಬದುಕಿಗೆ ಅರ್ಥವನ್ನು ಕೊಟ್ಟಿದೆ. ಭಾರತೀಯ ಕುಟುಂಬಗಳು ಧರ್ಮ, ಸಂಸ್ಕೃತಿ, ಮನೋಧರ್ಮ ಮತ್ತು ಜೀವನ ಮಾರ್ಗ ಇವುಗಳಿಗೆ ಸಂಬಂಧಿಸಿದಂತೆ ಪರಸ್ಪರ ವಿಸ್ತಾರವಾದ ಭಿನ್ನತೆಯನ್ನು ಹೊಂದಿರುವ ಕುಟುಂಬಗಳನ್ನು ಒಳಗೊಳ್ಳುತ್ತವೆ. ಅವರೇ ಬಹುಸಂಖ್ಯಾತರಾಗಿರುವ ಹಿಂದುಗಳಿದ್ದಾರೆ. ಅವರು ೨೦೦೦ ಕ್ಕೂ ಹೆಚ್ಚು ವರ್ಷಗಳಿಂದ ಈ ದೇಶದಲ್ಲಿ ಬದುಕುತ್ತಿದ್ದಾರೆ. ಬಹುಕಾಲದ ನಂತರ ಬಂದವರು ಮಹಮ್ಮದೀಯರು. ಕ್ರೈಸ್ತರು, ಸಿಕ್ಕರು, ಬೌದ್ಧರು, ಪಾರ್ಸಿಗಳು, ಮತ್ತು ಜೈನರು ಎಲ್ಲರೂ ಇದ್ದಾರೆ.

ಸ್ವೀಕೃತ 'ಕೌಟುಂಬಿಕ ಪರಂಪರೆಗಳಿಂದ' ಮತ್ತು 'ಕೌಟುಂಬಿಕ ನಿಯಂತ್ರಣ' ಗಳಿಂದ ತಪ್ಪಿಸಿಕೊಂಡು ಸ್ವಂತ ಭಾವನೆಗಳ ಅಭಿವ್ಯಕ್ತಿಗಾಗಿ ತಮ್ಮ ಮನೆಗಳಿಂದ ದೂರದತ್ತ ದೃಷ್ಟಿಯಿಟ್ಟಿರುವ ವಿದ್ಯಾವಂತ ಸ್ತ್ರೀಯರಿಂದ ಭಾರತೀಯ ಕುಟುಂಬದಲ್ಲಿ ಒಂದು ಮಾನ ಸಾಮಾಜಿಕ ಪರಿವರ್ತನೆ ಜಾರಿಗೆ ಬರುತ್ತಿದೆ.

ಪ್ರತಿಯೊಂದು ಸಂದರ್ಭದಲ್ಲೂ ಕುಟುಂಬದ ಒಂದೊಂದು ಮಾದರಿಯೂ ಭಿನ್ನವಾಗಿರುತ್ತದೆ. ಇದರ ಮೇಲಿಟ್ಟಂತೆ ಇರುವುದು ಭಾರತೀಯ ಕುಟುಂಬದಲ್ಲಿ ನಡೆಯುತ್ತಿರುವ ಮೌನ ಸಾಮಾಜಿಕ ಪರಿವರ್ತನೆ. ಇದಕ್ಕೆ ಕಾರಣ ಮುಖ್ಯವಾಗಿ ಸ್ವೀಕೃತ ಕೌಟುಂಬಿಕ ಪರಂಪರೆಯಿಂದ ಮತ್ತು ಕೌಟುಂಬಿಕ ನಿಯಂತ್ರಣ ಸಾಮಾಜಿಕ ಚಲನೆಗೆ ದೊರಕುತ್ತಿರುವ ಹೆಚ್ಚಿನ ಅವಕಾಶಗಳು.

ನೈತಿಕ ಮತ್ತು ಧಾಮಿರ್ಕ ಮೌಲ್ಯಗಳಿಂದ ಕೇಂದ್ರೀಕರಿಸಲ್ಪಟ್ಟ ಪವಿತ್ರ ಕುಟುಂಬದಿಂದ

ಕುಟುಂಬದ ಸದಸ್ಯರು ತಮಗಾಗಿ ಮತ್ತು ಸಮುದಾಯಕ್ಕಾಗಿ ಹೊಸ ಗುರಿಗಳನ್ನು ಅಂಗೀಕರಿಸಲು ಕುಟುಂಬದ ಸದಸ್ಯರನ್ನು ಎಳೆಯುತ್ತಿರುವ ಹೆಚ್ಚು ವಿಚಾರಾತ್ಮಕ ಮತ್ತು ಸ್ವಾಭಿಪ್ರಾಯ ವೇದಾಂತದೊಡನೆ ಕೂಡಿರುವ ಜಾತ್ಯತೀತ ಕುಟುಂಬಕ್ಕೆ ಬದಲಾಯಿಸುವ ಸ್ಥಿತಿ ಕಂಡುಬರುತ್ತದೆ.

## 2) ಕೌಟುಂಬಿಕ ಮಾದರಿಗಳ ಪ್ರಕಾರಗಳು :

ಭಾರತದ ಬದುಕಿನ ಪರಂಪರಾಗತ ಮಾದರಿ ಎಂದರೆ ಅವಿಭಕ್ತ ಕುಟುಂಬ. ಅದರ ಸದಸ್ಯರು ಸಮಾನ ವಂಶಪರಂಪರೆಯ ಮತ್ತು ಮಾನ ಆಸ್ತಿಯ ಗಂಟುಗಳಿಂದ ಒಟ್ಟಾಗಿ ಬಂಧಿತರಾಗಿದ್ದಾರೆ.

ಈಗ ಭಾರತದಲ್ಲಿ ನಾವು ಕುಟುಂಬ ರಚನೆಯ ಮೂರು ಮಾದರಿಗಳನ್ನು ಕಾಣುತ್ತೇವೆ.

1. ವ್ಯಾಪಕ ಅವಿಭಕ್ತ ಕುಟುಂಬ
2. ನಾಭಿ ಸ್ವರೂಪದ ಕುಟುಂಬ
3. ಕಾಂಡ ಅಥವಾ ವಿಸ್ತೃತ ಕುಟುಂಬ

## 1) ವ್ಯಾಪಕ ಅವಿಭಕ್ತ ಕುಟುಂಬ :

ರಚನೆಯಲ್ಲಿ ಅದು ವಿವಾಹಿತ ಗಂಡಸು, ಅವನ ತಂದೆ, ಅವನ ತಾತ ಮತ್ತು ಮೂರು ತಲೆಮಾರಿನ ಅವನ ಸ್ವಗೋತ್ರ ಸಂಬಂಧಿಗಳು ಇವರುಗಳನ್ನು ಒಳಗೊಂಡಿರುತ್ತದೆ. ಬೇರೆ ಬೇರೆ ರಕ್ತ ಸಂಬಂಧಿಗಳು ತಮ್ಮ ತಮ್ಮ ಗಂಡ:ಹೆಂಡತಿಯರೊಡನೆ ಮತ್ತು ಮಕ್ಕಳ ಜೊತೆ ಒಂದೇ ವಾಸಗೃಹವನ್ನು ಅನುಭೋಗಿಸುತ್ತಾರೆ. ಒಟ್ಟಿಗೆ ಊಟ ಮಾಡುತ್ತಾರೆ ಮತ್ತು ಒಟ್ಟಾಗಿ ಪೂಜಿಸುತ್ತಾರೆ ಮತ್ತು ಆಸ್ತಿಯನ್ನು ಸಮನಾಗಿ ಅನುಭವಿಸುತ್ತಾರೆ. ಆರ್ಥಿಕ ಚಟುವಟಿಕೆಯಲ್ಲಿ ಪರಸ್ಪರ ಸಹಕರಿಸುತ್ತಾರೆ ಮತ್ತು ಸದಸ್ಯರು ಭಿನ್ನ ಭಿನ್ನವಾಗಿ ಉದ್ಯೋಗ ಹೊಂದಿದ್ದರೂ ತಮ್ಮ ಸಂಪಾದನೆಗಳನ್ನು ಒಟ್ಟಾಗಿ ಒಂದು ಕಡೆ ಕೂಡಿಸುತ್ತಾರೆ.

ಅವಿಭಕ್ತ ಕುಟುಂಬವು ಕಾಯಿಲೆಯವರಿಗೆ ಮತ್ತು ನೊಂದವರಿಗೆ ಶೂಶ್ರುಷೆಯ ಪೋಷಣೆಯನ್ನು, ನಿರುದ್ಯೋಗಿಗಳಿಗೆ ಸಾಮಾಜಿಕ ಭದ್ರತೆಯನ್ನು, ಮುದುಕರಿಗೆ ಬೆಂಬಲದ

ಆಶ್ರಯವನ್ನು ಒದಗಿಸುತ್ತದೆ. ಅಶ್ರಿತರ ಪೋಷಣೆ ಹಾಗೂ ನಿರ್ವಹಣೆ ಒಂದು ನೈತಿಕ ಋಣ. ಈ ಘಟಕದ ಸದಸ್ಯರು ನಿಕಟವಾಗಿ ಒಂದಾಗಿ ಹೆಣೆದುಕೊಂಡಿರುತ್ತಾರೆ. ಅವರು ವಿವಿಧ ವಾಡಿಕೆಗಳನ್ನು, ಸಮಸ್ಯೆಗಳನ್ನು ಮತ್ತು ಸಾಮಾಜಿಕ ಬದುಕಿನ ಆನಂದಗಳನ್ನು ಹಂಚಿಕೊಳ್ಳುತ್ತಾರೆ. ಸಂದಿಗ್ಧ ಸ್ಥಿತಿಗಳಲ್ಲಿ ಪರಸ್ಪರ ಋಣಭಾರದ ತೀವ್ರ ಭಾವನೆಗಳನ್ನು ಹೊಂದುತ್ತಾರೆ ಮತ್ತು ಕುಟುಂಬ_ಕಲ್ಯಾಣದೊಡನೆ ಏಕಮುಖವಾಗಿರುವಂತೆ ಸ್ವಹಿತಾಸಕ್ತಿಯನ್ನು ಗೌರವಿಸುತ್ತಾರೆ.

ಆರ್ಥಿಕ ನಷ್ಟ, ಗಂಡ:ಹೆಂಡಿಯ ಕಾಯಿಲೆ, ಸಾಮಾಜಿಕ ಭದ್ರತೆ ಮತ್ತು ಔಪಚಾರಿಕ ವಿವೇಕಪೂರ್ಣ ಸಲಹೆಗಳನ್ನು ತುಂಬಿಕೊಡುವ ಬೆಂಬಲದ 'ಸತ್ತಿಗೆ' ಯನ್ನು ಒದಗಿಸುತ್ತದೆ ಅವಿಭಕ್ತ ಕುಟುಂಬ.

ಅವಿಭಕ್ತ ಕುಟುಂಬ ಅಲ್ಲಲ್ಲಿ ಕಂಡುಬರುವುದು ಇತರ ಸಮುದಾಯಗಳಿಗಿಂತ ವಿಶೇಷವಾಗಿ ಹಿಂದುಗಳಲ್ಲಿ, ವ್ಯಾಪ್ಯಾರ ವರ್ಗದಲ್ಲಿ, ಗುಮಾಸ್ತ ಕೆಲಸಗಾರ ಮತ್ತು ಉದ್ಯೋಗಸ್ಥ ಕೆಲಸಗಾರರಲ್ಲಿರುವುದಕ್ಕಿಂತ ಬೇರೆಯಾಗಿ ವ್ಯವಸಾಯಗಾರರ ವರ್ಗದಲ್ಲಿ ಮತ್ತು ಹೆಚ್ಚಾಗಿ ಮತ್ತೆ ಮತ್ತೆ ಕಂಡು ಬರುವುದು ಅತ್ಯಂತ ಕಡಿಮೆ ಆದಾಯದ ವರ್ಗಗಳಲ್ಲಿ ಅಥವಾ ತುಂಬ ವಿರಳವಾಗಿ ಅಥವಾ ಮೇಲುಗೈಯಾಗಿ ಅತ್ಯನ್ನತ ಆದಾಯ ವರ್ಗಗಳಲ್ಲಿ ಆರ್ಥಿಕ ಮಟ್ಟವನ್ನು ಸ್ವಂತವಾಗಿ ಹೊಂದಿರುವ ಜಮೀನಿನ ಎಕರೆಗಳ ಸಂಖ್ಯೆಗಳೊಡನೆ ಅಳತೆ ಮಾಡಿ ನೋಡಿದಾಗ, ಅವಿಭಕ್ತ ಕುಟುಂಬವು ಮಧ್ಯಮ ವರ್ಗದ ಜನಾಂದಲ್ಲೂ ಹೆಚ್ಚು ಹೆಚ್ಚಾಗಿ ಕಂಡುಬರುತ್ತದೆ.

## ಅವಿಭಕ್ತ ಕುಟುಂಬದ ಅನುಕೂಲಗಳು :

ಪರಂಪರಾಗತವಾದ ಅವಿಭಕ್ತ ಕುಟುಂಬ ಕೆಲವು ಅನುಕೂಲಗಳನ್ನು ಹೊಂದಿದೆ. ಇದರಲ್ಲಿ ವಯಸ್ಸಾದವರಿಗೆ, ಅಸಕ್ತರಿಗೆ ಆಶ್ರಯ, ಪಾಲನೆ ಮತ್ತು ರಕ್ಷಣೆ ದೃಢಪಟ್ಟದ್ದು. ಎಲ್ಲಕ್ಕಿಂತ ಹೆಚ್ಚಾಗಿ ಅವರಿಗೆ ಗೌರವ ಸಲ್ಲುತ್ತದೆ. ಅವರು ಬೇಕಾಗಿದ್ದಾರೆ, ಉಪಯುಕ್ತರಾಗಿದ್ದಾರೆ ಎಂಬ ಬಗ್ಗೆ ಭರವಸೆ ಕೊಡಲಾಗುತ್ತದೆ. ಮಕ್ಕಳ ವಿಷಯದಲ್ಲಾದರೆ 'ವ್ಯಕ್ತಿ' ಬೆಳವಣಿಗೆ ಮತ್ತು ಅಭಿವೃದ್ಧಿಗೆ ಅಗತ್ಯವಾದ ಭದ್ರತೆ ಮತ್ತು ವಾತ್ಸಲ್ಯಗಳ ವಾತಾವರಣದಲ್ಲಿ ಅವರು ಬೆಳೆಯುತ್ತಾರೆ. ಅಲ್ಲಿ ಒಂಟಿ ಅಥವಾ ಅನಾದಾರಿತ ಮಗುವಿನ

ಸಮಸ್ಯೆಯೇ ಏಳುವುದಿಲ್ಲ. ಮಗ ತಂದೆಯ ಉದ್ಯೋಗಕ್ಕೆ ತನ್ನ ಪುರುಷ ಬಂಧುಗಳೊಡನೆ ಹೆಚ್ಚು ಕಡಿಮೆ ಜೀವನದ ದೀರ್ಘ ಸಹವಾಸದ ಮೂಲಕ ಕುಟುಂಬ ವ್ಯವಹಾರದಲ್ಲಿ ನಂಬಿಕೆಯನ್ನು ನೈಪುಣ್ಯವನ್ನು ಗಳಿಸಿಕೊಂಡು ಮೇಲೇರುತ್ತಾನೆ.

ಕುಟುಂಬದ ಹಿರಿಯ ಹೆಂಗಸರು ಅಡಿಗೆ, ಬಟ್ಟೆ ಇತ್ಯಾದಿಗಳ ಹೊಣೆಯನ್ನು ಸಾಮಾನ್ಯವಾಗಿ ವಹಿಸಿಕೊಳ್ಳುತ್ತಾರೆ. ಅವರ ವಿವೇಕ ಮತ್ತು ಅನುಭವದ ಅಡಿಯಲ್ಲಿ ತರುಣಿ, ಪತ್ನಿ ಮತ್ತು ತಾಯಿಯರು ಹೆಚ್ಚಿನದನ್ನು ಕಲಿತುಬಿಡುತ್ತಾರೆ. ಆದ್ದರಿಂದ ಅದರ ಪರಿಣಾಮವಾಗಿ ತನ್ನ ಮಗುವಿನ ಸಂಬಂಧದಲ್ಲಿ ಅವಳು ಹೆಚ್ಚಿನ ಪ್ರಯೋಗ ಮಾಡುವ ಅವಕಾಶವೇ ಇರುವುದಿಲ್ಲ.

ಈಗ ನಾವು ತಿಳಿದಿರುವಂತೆ ಮೈ ನೆರೆಯುವುದು, ಹೆರಿಗೆ, ಮದುವೆ ಮತ್ತು ಮನೆಯಲ್ಲೇ ಸಂಭವಿಸುವ ಸಾವು, ಗಂಡು ಹೆಣ್ಣಿಗೆ ಸಂಬಂಧಿಸಿದ ಘಟನೆಗಳು ಮೊದಲಾದವುಗಳನ್ನು ತೆರೆದಿಡುವುದರ ಮೂಲಕ ಲೈಂಗಿಕ ಶಿಕ್ಷಣವನ್ನು ಈ ಹಿಂದೆಯೇ ಒದಗಿಸಲಾಗಿತ್ತು. ಅವಿಭಕ್ತ ಕುಟುಂಬವು ತನ್ನದೇ ಆದ ರೀತಿಗಳನ್ನು ಮೌಲ್ಯಗಳನ್ನು ಮತ್ತು ಆಂತರಿಕ ವಿನಿಮಯಗಳನ್ನು ಹೊಂದಿತ್ತು. ನಿರ್ದಿಷ್ಟಪಡಿಸಿದ ಒಂದು ನೀತಿಸಂಹಿತೆ ಇದ್ದುದರಿಂದ ಹುಡುಗ-ಹುಡುಗಿಯರ ಸಂಬಂಧದಲ್ಲಿ ಯಾವುದೇ ತೊಡಕು ಇದ್ದಂತೆ ಕಂಡುಬಂದಿಲ್ಲ.

ವಿವಾಹಗಳನ್ನು ತಂದೆ ತಾಯಿಗಳೇ ಏರ್ಪಡಿಸುತ್ತಿದ್ದರು. ಒಂಟಿ ಹೆಣ್ಣಿನ ಸಮಸ್ಯೆಯೇ ಇರುತ್ತಿರಲಿಲ್ಲ. ವಿವಾಹಿತ ಮಹಿಳೆಯರು ಬಡವರಾದ ಕಾರ್ಮಿಕ ವರ್ಗದ ಹೆಂಗಸರನ್ನು ಹೊರತುಪಡಿಸಿ ತಮ್ಮ ಮನೆಯಿಂದ ಹೊರಗಡೆ ಕೆಲ ಮಾಡುವುದನ್ನು ನಿರೀಕ್ಷಿಸಿಯೇ ಇರಲಿಲ್ಲ. ಇಂದು ನಾವು ಭಾರತದ ನಗರಗಳಲ್ಲಿ ಎದುರಿಸಬೇಕಾಗಿರುವ, ದುಡಿಯುವ ಹೆಂಡಂದಿರ, ತಾಯಂದಿರ ಸಮಸ್ಯೆಗಳೇ ಏಳುತ್ತಿರಲಿಲ್ಲ.

## ಅವಿಭಕ್ತ ಕುಟುಂಬದ ಅನಾನುಕೂಲಗಳು :

ಅಂದರೆ ಅವಿಭಕ್ತ ಕುಟುಂಬ ತನ್ನ ಹಿಂಜರಿತಗಳನ್ನು ಹೊಂದಿಯೇ ಇರಲಿಲ್ಲವೆಂದಲ್ಲ. ಪರಂಪರೆಗೆ ಬದ್ಧವಾಗಿದ್ದುದರಿಂದ ಕುಟುಂಬದ ಶಿಷ್ಟಚಾರವು ಪ್ರತಿಭಾವಂತ ವ್ಯಕ್ತಿಗೆ ಯಾವುದೇ ನಾಯಕತ್ವವನ್ನು ವಹಿಸಿಕೊಡಲು ಅವಕಾಶವನ್ನೇ ಬಿಟ್ಟುಕೊಡುತ್ತಿರಲಿಲ್ಲ.

ವೈಯಕ್ತಿಕ ಪ್ರಯತ್ನ ಯಾವುದೇ ರೀತಿಯ ವೈಯಕ್ತಿಕ ಲಾಭವನ್ನು ತಂದುಕೊಡುತ್ತಿದಿದ್ದಲ್ಲವಾದ್ದರಿಂದ ಶ್ರಮಯುಕ್ತ ಕೆಲಸಕ್ಕೆ ಸಾಕಷ್ಟು ಉತ್ತೇಜವಿರುತ್ತಿರಲಿಲ್ಲ. ಒಟ್ಟಿನಲ್ಲಿ ಅವಿಭಕ್ತ ಕುಟುಂಬವು ಸಾಹಸ ಯತ್ನಕ್ಕೆ, ಪ್ರಯೋಗ ಪರೀಕ್ಷೆಗೆ ಮತ್ತು ಪ್ರಯತ್ನಾರಂಭಕ್ಕೆ ಕೊಂಚವೂ ಅವಕಾಶನ್ನು ಉಳಿಸಿರಲಿಲ್ಲ. ಅಲ್ಲದೆ ಸಂಪ್ರದಾಯಗಳ ಬಿಗಿ ಬದಲಾವಣೆಯನ್ನು ಪ್ರತಿರೋಧಿಸುವುಧಕ್ಕೆ ಹೆಚ್ಚು ಕಾಳಜಿ ವಹಿಸುತಿತ್ತು.

ಇಂದು ಕೌಟುಂಬಿಕ ಜೀವನದ ಮಾದರಿಯ ಮೇಲೆ ಪರಿಣಾಮವನ್ನುಂಟು ಮಾಡುತ್ತಿರುವ ಪೌರ, ಸಾಮಾಜಿಕ,ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕಿನ ವೃತ್ತಗಳಲ್ಲಿ ಆಮೂಲಾಗ್ರ ಬದಲಾವಣಗಳು ನಡೆಯುತ್ತಿವೆ. ಕೆಲವು ಸಾಮಾಜಿಕ ಮತ್ತು ಆರ್ಥಿಕ ಅಂಶಗಳು, ಉತ್ತಮ ಶಿಕ್ಷಣ ಸೌಲಭ್ಯಗಳು ಹೆಚ್ಚು ಹೆಚ್ಚು ಮಂಜೂರಿ ಸಂಪಾದಿಸುವ ಅವಕಾಶಗಳು ಮನೆಯ, ಸಾಮಾಜಿಕ ರಚನೆಯ ಮೇಲೆ ಪರಿಣಾಮವನ್ನುಂಟು ಮಾಡಿವೆ.

ಡಾ: ಎ.ಆರ್.ದೇಸಾಯಿ ಅವರ ಮಾತಿನಲ್ಲಿ ಹೇಳುವುದಾದರೆ ಪರಂಪರಾಗತ ಅವಿಭಕ್ತ ಕುಟುಂಬ ಮತ್ತು ಕುಟುಂಬ ರೀತಿಯ ಗ್ರಾಮೀಣ ಚೌಕಟ್ಟು ಗುಣಾತ್ಮಕವಾಗಿ ರೂಪಾಂತರವನ್ನು ಹೊಂದುತ್ತಿವೆ. ಗ್ರಾಮೀಣ ಕುಟುಂಬ ಬಂಧುತ್ವಗಳ ಆಧಾರ, ಬಲಿಷ್ಠ ಅವಿಭಕ್ತ ಕುಟುಂಬ ತನ್ನ ಸ್ಥಿರವಾದ ಕೇಂದ್ರದಿಂದ ಸತತವಾಗಿ ಜರುಗಿಸುತ್ತಿರುವ ಮಾದರಿಯಿಂದ ರೂಪು ತಳೆದ ತನ್ನ ಸದಸ್ಯರಿಂದ ಕೂಡಿದ ಭ್ರೂಣ ಸ್ವರೂಪದ ಕುಟುಂಬದ ಕಡೆಗೆ ಸ್ಥಳಾಂತರಿಸುತ್ತಿದೆ.

ನಿವೃತ್ತ ಶಿಕ್ಷಣದ ವ್ಯಾಪನೆ, ಸಮಾನತೆ ಮತ್ತು ಆತ್ಮಗೌರವದ ಬಗೆಗಿನ ಹೊಸ ಭಾವನೆಗಳು, ವೈಯಕ್ತಿಕ ವ್ಯಕ್ತಿತ್ವದ ಅಭಿವೃದ್ಧಿಗೆ ಮೌಲ್ಯ ಹಾಗೂ ಆರ್ಥಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯದ ಆಕಾಂಕ್ಷೆ ಇವು ಕೆಲವು ಮುಖ್ಯಾಂಶಗಳು. ಇವುಗಳು ವಿವಾಹದ ಕುಟುಂಬಿಕ ಜೀವನದ ಮಾದರಿಗಳನ್ನು ಬಾಧಿಸುತ್ತಿವೆ. ಅಲ್ಲದೆ ಹೆಂಗಸರನ್ನು ಅವರ ಇದುವರೆಗಿನ ಪ್ರಧಾನವಾದ ಹೊಣೆಗಾರಿಕೆಯ ಕ್ಷೇತ್ರದಿಂದ ದೂರಕ್ಕೆ ಎಳೆಯುತ್ತಿದೆ. ಎಂದರೆ ಗೃಹದ ಯಾಜಮಾನ್ಸಿ ಕರ್ತವ್ಯದಿಂದ.

ಮನೆಯ ಹೊರಗೆ ಮಾಡುವ ಕೆಲಸ ಮಹಿಳೆಯರಿಗೆ ತಮ್ಮ ದೃಷ್ಟಿಯನ್ನು ವಿಶಾಲಗೊಳಿಸುವ, ತಮ್ಮ ಸಾಮಾಜಿಕ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವ ಅವಕಾಶಗಳನ್ನು

ತಂದುಕೊಟ್ಟಿದೆ. ಸಾಮಾಜಿಕ ಪ್ರಗತಿಯ ದೃಷ್ಟಿಕೋನದಿಂದ ಮುಕ್ತವಾಗಿ, ಕುಟುಂಬದ ಹೊರಗಿನ ಕೆಲಸದಲ್ಲಿ ಮಹಿಳೆಯರ ಭಾಗವಹಿಸುವಿಕೆ, ಅವರ ಅವ್ಯಕ್ತ ಸಾಮಾಜಿಕ ಮತ್ತು ಸೃಜನಾತ್ಮಕ ಶಕ್ತಿಗಳಿಗೆ ಅಥವಾ ವಿಶಿಷ್ಟವಾಗಿ ಅವರ ಮಕ್ಕಳಿಗೆ ಘಾತಕವಾಗಬಾರದೆಂಬುದು ಇದರ ಆಶಯ. ಇದು ಮಹಿಳೆಯರಿಗೆ ಪೂರ್ಣ ಅವಕಾಶವನ್ನು ಕೊಡುತ್ತದೆ.

ಭಾರತೀಯ ಅವಿಭಕ್ತ ಕುಟುಂಬವನ್ನು ಒತ್ತಡಕ್ಕೆ ಒಳಪಡಿಸಲಾಗಿದೆ ಮತ್ತು ಶತಮಾನಗಳಿಂದ ಬಂದಿರುವುದರ ಬದಲಾವಣೆಗೆ ವಿರೋಧವಿದ್ದರೂ ಅದು ಸಾವಧಾನವಾಗಿ ಸ್ವಲ್ಪ ಮಹತ್ವವುಳ್ಳ ಬದಲಾವಣೆಯ ಕಾರ್ಯರೂಪಕ್ಕೆ ಒಳಗಾಗುತ್ತಿದೆ.

ಡಾ: ಎಂ. ಎಸ್. ಗೋರೆ ಅವರು 'ನಗರೀಕರಣ ಮತ್ತು ಕೌಟುಂಬಿಕ ಬದಲಾವಣೆ' ಎಂಬ ಪುಸ್ತಕದಲ್ಲಿ ಹೀಗೆ ಅಭಿಪ್ರಾಯಪಡುತ್ತಾರೆ. ಬದುಕನ್ನು ಲೌಕಿಕವಾಗಿ ಮಾಡುವುದು ಮತ್ತು ವೈಯಕ್ತಿಕತನದ ಸಿದ್ಧಾಂತದ ಬೆಳವಣಿಗೆಗಳು ಅವಿಭಕ್ತ ಕೌಟುಂಬಿಕ ಬದುಕುಗಳೊಡನೆ ಅಸಂಬದ್ಧವಾದವು. ಏಕೆಂದರೆ ಮಿತವಾದತನದ ಮಾನಕವನ್ನು ಒತ್ತಾಯಿಸುವುದು, ವೈಯಕ್ತಿಕ ವ್ಯಕ್ತಿತ್ವದ ಹಕ್ಕು ಇವು ಕೌಟುಂಬಿಕ ಪರಿಗೆ ಹೊಂದಾಣಿಕೆ ಮಾಡುತ್ತವೆ ಮತ್ತು ಕೌಟುಂಬಿಕ ನಿಯಂತ್ರಣಗಳ ಸ್ವೀಕರಣೆ ಒಬ್ಬೊಬ್ಬ ಸದಸ್ಯರಿಗೂ ತೊಂದರೆಯನ್ನಾಡುತ್ತದೆ.

ಪರಂಪರಾಗತವಾದ ಅಥವಾ 'ಪವಿತ್ರ ಕುಟುಂಬ'ದಲ್ಲಿ ಏಕವ್ಯಕ್ತಿಯನ್ನು ಸಮುದಾದಲ್ಲಿ ಅಭ್ಯಸಿಸಿದ ಬಹುಸಂಖ್ಯಾದರಿಂದ ಬಂಧಿಸಲಾಗುತ್ತದೆ. ಅವನ ಸ್ವಭಾವದ ಮಾದರಿ, ಸಮುದಾಯದ ಮನೋವೃತ್ತಿಯಿಂದ ವಿಸ್ತೃತವಾಗಿ ನಿಯಂತ್ರಿಸಲ್ಪಡುತ್ತದೆ.

ಒಂದು ಸಣ್ಣ ಅವಿಭಕ್ತ ಕುಟುಂಬದಲ್ಲಿ ವಿವಾಹಿತ ಸಹೋದರರಿಬ್ಬರು ತಮ್ಮ ತಮ್ಮ ಕುಟುಂಬಗಳೊಡನೆ ಜೊತೆ ಜೊತೆಯಾಗಿ ಬಾಳುತ್ತಾರೆ.

## 2. ನಾಭಿ ಸ್ವರೂಪದ ಸರಳ ಕುಟುಂಬ :

ನಗರದ ಪಾಶ್ಚಿಮಾತ್ಯ ಮಾದರಿ ಭಾರತದ ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ಇಂಥ ಕುಟುಂಬದಲ್ಲಿ ಕಂಡುಬರುತ್ತದೆ. ಇಲ್ಲಿ ತಂದೆತಾಯಿಗಳು ತಮ್ಮ ಅವಿವಾಹಿತ ಮಕ್ಕಳೊಡನೆ ವಾಸಿಸುತ್ತಾರೆ.

ವಿವಾಹಿತ ಸಂತಾನವು ಹೊಸ ಸಂಸಾರವನ್ನು ಕಂಡುಕೊಳ್ಳುದೆ. ಅವನು ತಂದೆ

ತಾಯಿಗಳಿಂದ ಸೋದರ ಸೋದರಿಯರಿಂದ ಪ್ರತ್ಯೇಕವಾಗಿ ದೂರವಾಗಿ ಬದುಕುತ್ತಾನೆ.

### 3. ಕಾಂಡ ಅಥವಾ ವಿಸ್ತೃತ ಕುಟುಂಬ :

ನಾಭಿ ರೂಪದ ಕುಟುಂಬ ಒಬ್ಬರು ಅಥವಾ ಇಬ್ಬರು, ತಾತ ಅಜ್ಜಿಯರು ಅಥವಾ ಚಿಕ್ಕಮ್ಮ ಚಿಕ್ಕಪ್ಪಂದಿರು ಇವರೊಡನೆ ಬದುಕುವಲ್ಲಿ ಕಂಡುಬರುತ್ತದೆ. ಈ ವ್ಯವಸ್ಥೆ ದುಡಿಯುವ ಅಥವಾ ತಾಯಿ ಅವರಿಗೆ ಮತ್ತು ಸಾಂಸಾರಿಕ ಸಹಾಯ ವಿರಳವಾಗಿರುವ ಕಡೆಗಳಲ್ಲಿ ಸೂಕ್ತವಾಗಿರುತ್ತದೆ.

ಅವಿಭಕ್ತ ಕುಟುಂಬದ ಮನೋವೃತ್ತಿ, ನಗರ ಪ್ರದೇಶಗಳಲ್ಲೂ ಕೂಡ, ಕುಟುಂಬ ಪ್ರತ್ಯೇಕವಾಗಿರುವಲ್ಲಿ, ಸಂಪರ್ಕ ಮತ್ತು ಕೌಟುಂಬಿಕ ನಂಟುಗಳು ಆಶ್ಚರ್ಯಕರವಾದ ವ್ಯಾಪ್ತಿಯಲ್ಲೂ ಉಳಿದುಕೊಂಡು ಬಂದಿರುವುದನ್ನು ನಾವು ಕಾಣುತ್ತೇವೆ. ಭಾರತದಲ್ಲಿ ಎರಡು ರೀತಿಯ ಕೌಟುಂಬಿಕ ಪದ್ಧತಿಗಳಿವೆ. ಒಂದು ಮಾತೃ ಪ್ರಧಾನ, ಮಾದರಿಯದು. ಅದನ್ನು ಮಾತೃ ಪ್ರಧಾನ ಪದ್ಧತಿ ಎಂದು ಕರೆಯುತ್ತೇವೆ. ಅಲ್ಲಿ ವಂಶಾನುಕ್ರಮವನ್ನು ತಾಯಿಯ ಕಡೆಯಿಂದ ಗುರುತಿಸುತ್ತೇವೆ. ಅಲ್ಲಿ ಮಕ್ಕಳನ್ನು ಹೆಂಡತಿಯ ಮತ್ತು ಮಕ್ಕಳ ಮನೆಯಲ್ಲಿ, ಅವರ ಬಳಗಗಳ ಮನೆಯಲ್ಲಿ ಬೆಳೆಸುತ್ತಾರೆ. ಅಲ್ಲಿ ಹೆಂಡತಿಯ ಗಂಡನಿಗೆ ಎರಡನೆಯ ಸ್ಥಾನ. ಕುಟುಂಬದ ಗುಂಪಿನೊಳಗೆ ಇರುವ ಅಧಿಕಾರ ಗಂಡನಿಗೆ ಸೇರುವುದಿಲ್ಲ, ಆದರೆ ಹೆಂಡತಿಯ ಯಾವುದೋ ಬಂಧು ವರ್ಗದ ಪ್ರತಿನಿಧಿಗೆ ಸೇರಿರುತ್ತದೆ. ಈ ಮಾದರಿ ಅಸಾಮಾನ್ಯ. ಆದರೆ ಮಲಬಾರಿನ ನಾಯರುಗಳಲ್ಲಿ ಮತ್ತು ಅಸ್ಸಾಮಿನ ಖಾಸಿಗಳಲ್ಲಿ ಈಗಲೂ ಅಸ್ತಿತ್ವದಲ್ಲಿದೆ.

ಪಿತೃ ಪ್ರಧಾನ ಪದ್ಧತಿ : ಅದರ ಉಚ್ಚತರ ರೂಪದಲ್ಲಿ ಎಲ್ಲ ಅಧಿಕಾರಿಗಳು ಮನೆಯು ಎಂದರೆ ಸಂಸಾರದ ಮುಖ್ಯಸ್ಥಾನದಲ್ಲಿ ಎಂದರೆ ತಂದೆಯಲ್ಲಿ ನಿಹಿತವಾಗಿರುತ್ತವೆ. ದ್ವಿಪಕ್ಷೀಯ ಪದ್ಧತಿಯಲ್ಲಿ ಒತ್ತು ತಂದೆ ಮತ್ತು ತಾಯಿ ಇಬ್ಬರ ಮೇಲೂ ಸಮಾನವಾಗಿ ನಿಂತಿರುತ್ತದೆ.

ಪರಂಪರಾಗತವಾದ ಅವಿಭಕ್ತ ಕುಟುಂಬವು ಒಂದು ರೀತಿಯ ಬಣವಾಗಿ ಕಾರ್ಯ ನಿರ್ವಹಿಸಿತು. ಈ ಕುಟುಂಬದ ಸಂಸ್ಕೃತಿಯ ಒಂದು ವಿಶಿಷ್ಟ ಲಕ್ಷಣ ಎಂದರೆ ನಿಶ್ಚಿತತೆ. ಅದರಿಂದ ಯಾವುದೇ ಕೌಟುಂಬಿಕ ಸದಸ್ಯನು ಏಕಮಾತ್ರತೆಯನ್ನು ಅಥವಾ ಯಾವುದೇ

ಪ್ರಸಂಗದಲ್ಲಿ ಅಥವಾ ಅಗತ್ಯತೆಯಲ್ಲಿ ಬೆಂಬಲವನ್ನು ಗುಣಿಸಬಹುದು. ಒಂದು ನಿರ್ದಿಷ್ಟ ಕುಟುಂಬಕ್ಕೆ ಸೇರಿದ್ದಾನೆ ಎಂಬ ಅಂಶ ಮಾರ್ಗಗಳನ್ನು ತೆರೆದಿಡುವ ಸಂಬಂಧವುಂಟು. ವ್ಯಾಪಾರವನ್ನು ಸುಲಭಗೊಳಿಸಬಹುದು; ತಕ್ಕಷ್ಟು ಸಾಮಾಜಿಕ ವೃತ್ತದ ಒಳಗೆ ತನ್ನಷ್ಟಕ್ಕೆ ತಾನೇ ಮಾನ್ಯತೆಯನ್ನು ತಂದುಕೊಡಬಹುದು. ''ನಿಕಟ ಬಂಧು ಬಳಗಗಳ ಪಂಗಡಗಳು'' ವಿಶಿಷ್ಟವಾಗಿ ಹೇಳುವುದಾದರೆ ವ್ಯಕ್ತಿಗಳನ್ನು ರಕ್ಷಣೆಯ ಎರಡನೆ ಸಾಲಾಗಿ ಪ್ರತಿನಿಧಿಸುತ್ತದೆ. ಯಾವ ಒಬ್ಬ ವ್ಯಕ್ತಿ ಕುಟುಂಬದ ಅತ್ಯಂತ ನಿಕಟ ಸದಸ್ಯರಿಂದ ಸಹಾಯವನ್ನು ಪಡೆಯಲೂ ಸಾಧ್ಯವಿಲ್ಲದಿದ್ದಾಗ ಅವನು ಅನೇಕ ಸಮಾಜಗಳಲ್ಲಿ ತನ್ನ ಇತರ ಬಂಧುಗಳ ಕಡೆಗೆ ತಿರುಗಿ ತನಗೆ ಬೇಕಾದ ಅಗತ್ಯತೆಗಳನ್ನು ನಡೆಯಬಹುದು.

## 3. ಕುಟುಂಬದ ಸಾಮಾಜಿಕ ಪ್ರಕಾರ್ಯಗಳು :

ಮೂರ್ತವಾಗಿ, ಆಧುನಿಕ ಕುಟುಂಬವು ನೆರವೇರಿಸಿದ ಸಾಮಾಜಿಕ ಪ್ರಕಾರ್ಯಗಳೆಂದರೆ:

1) ಬದುಕನ್ನು ಪೋಷಿಸಲು ಅವಶ್ಯವಾದ ಆಹಾರ, ನೆಲೆ ಮತ್ತು ಇತರ ಭೌತಿಕ ಅಗತ್ಯತೆಗಳ ಒದಗಣೆ ಮತ್ತು ಬಾಹ್ಯ ಅಪಾಯದಿಂದ ರಕ್ಷಣೆ ಒದಗಿಸುವುದು. ಈ ಪ್ರಕಾರ್ಯವನ್ನು ಸಾಮಾಜಿಕ ಒಗ್ಗಟ್ಟು ಮತ್ತು ಸಹಕಾರ ಪರಿಸ್ಥಿತಿಗಳಡಿಯಲ್ಲಿ ಉತ್ತಮ ನೆರವೇರಿಸಲಾಗುತ್ತದೆ.

2) ಕುಟುಂಬ ಬಂಧುತ್ವಗಳ ವಾತ್ಸಲ್ಯದ ಬಂಧನಗಳಿಗೆ ಮಾತೃಕೆಯೇ ಸಾಮಾಜಿಕ ಒಕ್ಕೂಟದ ಪೂರ್ವಸಿದ್ಧತೆ.

3) ಕುಟುಂಬದ ಅನನ್ಯತೆಗೆ ಕಟ್ಟು ಹಾಕಿದ ವೈಯಕ್ತಿಕ ಅನನ್ಯತೆಯನ್ನು ಬೆಳೆಸುವ ಅವಕಾಶ. ಈ ಅನನ್ಯತೆಯು ಬಂಧನ ಮಾನಸಿಕ ಬೆಸುಗೆಯನ್ನು ಒದಗಿಸುತ್ತದೆ ಮತ್ತು ಹೊಸ ಅನುಭವವನ್ನು ಎದುರಿಸಲು ಶಕ್ತಿಯನ್ನು ನೀಡುತ್ತದೆ.

4) ಲೈಂಗಿಕ ಪಕ್ವತೆಗೆ ಮತ್ತು ಪರಿಪೂರ್ಣತೆಗೆ ಮಾರ್ಗವನ್ನು ಸಿದ್ಧಪಡಿಸುವ ಲೈಂಗಿಕ ಪಾತ್ರವನ್ನು ಮಾದರಿಯದನ್ನಾಗಿ ಮಾಡುವುದು.

5) ಸಾಮಾಜಿಕ ಪಾತ್ರಗಳೊಡನೆ ಸಂಯೋಜಿಸುವುದರ ಮತ್ತು ಸಾಮಾಜಿಕ

ಹೊರೆಯನ್ನು ಸ್ವೀಕರಿಸುವುದರ ಕಡೆಗೆ ನೀಡುವ ತರಬೇತಿ.

6) ಕಲಿಯುವ ಕೃಷಿಗಾರಿಕೆ ಮತ್ತು ವೈಯಕ್ತಿಕ ಸೃಜನಶೀಲತೆಗೆ ಮತ್ತು ಆರಂಭಶೀಲತ್ವಕ್ಕೆ ಬೆಂಬಲ.

ಕುಟುಂಬದ ವಿನ್ಯಾಸ ಸ್ಪಷ್ಟವಾಗಿ, ಗಂಡ ಮತ್ತು ಹೆಂಡತಿ, ತಂದೆ ಮತ್ತು ತಾಯಿ, ಮಕ್ಕಳು ಇವರ ಪಾತ್ರಗಳಿಗೆ ಬೇಕಾದ ಸ್ವಭಾವಗಳನ್ನು ನಿರ್ಧರಿಸುತ್ತದೆ. ತಾಯಿಯ ಪಾತ್ರ ಮತ್ತು ತಂದೆಯ ಪಾತ್ರ ಮತ್ತು ಮಕ್ಕಳ ಪಾತ್ರಗಳು ವ್ಯಾಖ್ಯಾನಿಸಿದ ಕೌಟುಂಬಿಕ ರಚನೆಯಲ್ಲಿ ಒಂದು ವಿಶಿಷ್ಟ ಅರ್ಥವನ್ನು ಪಡೆಯುತ್ತದೆ. ಹೀಗೆ ಕುಟುಂಬ ತನಗೆ ಬೇಕಾದ ಬಗೆ ಬಗೆಯ ಜನಗಳನ್ನು, ತನ್ನ ಪ್ರಕಾರ್ಯಗಳನ್ನು ನೆರವೇರಿಸಿಕೊಳ್ಳುವುದಕ್ಕಾಗಿ ರೂಪಿಸಿಕೊಳ್ಳುತ್ತದೆ ಮತ್ತು ಆ ಕಾರ್ಯ ವಿಧಾನದಲ್ಲಿ ಪ್ರತಿಯೊಬ್ಬ ಸದಸ್ಯನೂ ತನ್ನ ಹಿಂದಿನ ಸ್ವಭಾವದ ತಿದ್ದುವಿಕೆಯನ್ನು ಇಂದಿನ ಪಾತ್ರದ ಆಶಯಗಳೊಡನೆ ಹೊಂದಿಕೆ ಮಾಡಿಕೊಳ್ಳುತ್ತಾನೆ. ನಿಜವಾಗಿ ಕಾಲದ ಅವಧಿಯಲ್ಲಿ ಆದ ಕೌಟುಂಬಿಕ ಬದಲಾವಣೆಗಳ ಮಾನಸಿಕ ಹೊಂದಾಣಿಕೆಗೆ ಈ ಕಾರ್ಯವಿಧಾನ ಒಂದು ನಿರಂತರ ವಿಧಾನವೇ ಆಗಿದೆ. ಈ ವಿಧಾನದ ರಚನೆಯ ಚೌಕಟ್ಟಿನ ಒಳಗೆ ಪ್ರತಿಯೊಬ್ಬ ಸದಸ್ಯನೂ ಒಮ್ಮೊಮ್ಮೆ ಸರಿಹೊಂದಿಕೊಳ್ಳುತ್ತಾನೆ ಮತ್ತು ಬೇರೆ ಸಮಯಗಳಲ್ಲಿ ಹಾಗೂ ಮಿತಿಗಳ ಒಳಗೆ ಈ ಪಾತ್ರಕ್ಕೆ ನಿರೀಕ್ಷೆಗಳು ಸಕ್ರೀಯವಾಗಿ ಬದಲಾಗುತ್ತವೆ.

## ಆದರ್ಶ ಕೌಟುಂಬಿಕ ಜೀವನ :

ಮನೆಯ ವಾತಾವರಣ ಹೇಗಿರಬೇಕೆಂದರೆ ಮಕ್ಕಳು ತಮ್ಮ ತಮ್ಮ ತಾಯಿ ತಂದೆಗಳ ಪ್ರೀತಿ ಪಾಲನೆಗಳನ್ನು ಪೂರ್ಣವಾಗಿ ಭದ್ರಪಡಿಸಿಕೊಂಡು ಅಲ್ಲಿ ಸುಖವಾಗಿ ಬೆಳೆಯುವಂತಿರಬೇಕು.

ಒಂದು ನಿಷ್ಕಪಟ ಕುಟುಂಬ ತನ್ನ ಸಂಸಾರದಲ್ಲಿ ಮನೋರಂಜನೆಯನ್ನು ಮತ್ತು ಹೊರಗಿನ ದುಃಖ ಮತ್ತು ಕೆಲಸಗಳಿಂದ ದೂರವಾದ ಅಮೂಲ್ಯ ವಿಶ್ರಾಂತಿಯನ್ನು ಕಂಡುಕೊಳ್ಳುತ್ತದೆ. ಅದೊಂದು ರಂಗಮಂದಿರ. ಅಲ್ಲಿ ಸಣ್ಣಪುಟ್ಟ ಮಕ್ಕಳು ಅಗೋಚರವಾಗಿ ನಕ್ಷತ್ರದಂಥ ಆಟಗಾರರು ಅಲ್ಲಿ ನಿಜವಾದ ಹಾಸ್ಯ (ಕಳಪೆ ಮತ್ತು ವ್ಯಂಗ್ಯಕ್ಕೆ ದಾರಿ

ಮಾಡಿಕೊಡದ) ತತಕ್ಷಣದ ನಗೆಯನ್ನು ಹಾಗೂ ಹೃದಯ ತುಂಬಿದ ನಗೆಯನ್ನು ಚಿಮ್ಮಿಸುತ್ತದೆ.

ದೈವಕೇಂದ್ರೀಕೃತ ಸಂಸಾರದ ಗೃಹ ಮೊದಲ ಮತ್ತು ಅತ್ಯುತ್ತಮ ಶಾಲೆ. 'ಮಕ್ಕಳ ಸ್ಕೂಲು ಮನೇಲಲ್ವೆ' ಎಂಬುದೇ ಇಲ್ಲಿನ ಸೂತ್ರ. ಇಲ್ಲಿ ಶಿಕ್ಷಣವನ್ನು ತಾಯಿತಂದೆಗಳು, ಅಣ್ಣತಮ್ಮಂದಿರುವ, ಅಕ್ಕತಂಗಿಯರು ಶಾಲೆಯ ಮುಂಚಿನ ವರ್ಷಗಳಲ್ಲಿ ಎಲ್ಲರೂ ಭಾಗಿಗಳಾಗಿ ಸಹಕಾರದ ಕರ್ತವ್ಯದಂತೆ ವರ್ತಿಸುತ್ತಾರೆ. ಅಲ್ಲದೆ ಇದಕ್ಕೆ ಸಹಾಯಕವಾಗಿ ಶಾಲಾ ವರ್ಷಗಳಲ್ಲಿ ವೃತ್ತಿಪರ ಶಿಕ್ಷಕರು ನೀಡುವ ನೆರವು ಮತ್ತು ಅಭಿವೃದ್ಧಿಗಳು ಸಹಕರಿಸುತ್ತವೆ.

ಹೀಗೆ ಕುಟುಂಬ ಸ್ವಯಂ ಅನೋನ್ಯತೆಯನ್ನು, ಸ್ವಾತ್ಮಗೌರವವನ್ನು ಮತ್ತು ಸ್ವಯಂ ಮೌಲ್ಯವನ್ನು ಗಳಿಸಿಕೊಳ್ಳುತ್ತದೆ.

## 4. ಸಮಾಜದ ಒಂದು ಘಟಕವಾಗಿ ಕುಟುಂಬ :

ವ್ಯಾಖ್ಯಾನ : ಕುಟುಂಬ ಸಮಾಜದ ಮೂಲ ಘಟಕ. ಅದು ಬದುಕಿನ ಪರಿಪೂರ್ಣತೆಯ ಸಾಧನೆಯ ಕಡೆಗೆ ತಮ್ಮ ತಮ್ಮ ಪೂರೈಕೆಗಳನ್ನು ಕಂಡುಕೊಳ್ಳುವ ಸದಸ್ಯರಿಂದ ಕೂಡಿದ್ದು.

## ಸಮಾಜದಲ್ಲಿ ಕುಟುಂಬದ ಪಾತ್ರ :

ಕುಟುಂಬ ಸಮಾಜದ ಮೂಲ ಘಟಕ ಎಂಬುದನ್ನು ಮತ್ತೆ ಮತ್ತೆ ಹೇಳುತ್ತಲೇ ಬಂದಿದೆ. ರಾಷ್ಟ್ರ ಕೂಡ ಕುಟುಂಬ ತುಳಿದ ಹಾದಿಯಲ್ಲೇ ಮುನ್ನಡೆಯುತ್ತದೆ. ಕುಟುಂಬ ಸಮಾಜದ ಅಂಟು ಎಂಬುದನ್ನು ಪ್ರದರ್ಶಿಸುವಂತೆ ಮಾಡಿರುವ ಅಂಶವನ್ನು ಕುಟುಂಬ ದೊಡ್ಡ ಸಮಾಜದ ಸಂವಿಧಾನಾತ್ಮಕ ಘಟನಾಂಶವಾಗಿ ಕಾರ್ಯ ಮಾಡುವುದನ್ನು ಬಿಟ್ಟು ಮತ್ತೆ ಬೇರೆ ಯಾವುದೇ ಪ್ರಕಾರ್ಯವನ್ನು ಹೊಂದಿರುವುದಿಲ್ಲ.

ದೊಡ್ಡ ನಿಕಾಯಕ್ಕೆ ಯಾವುದೇ ಉದ್ದೇಶವನ್ನು ನಿರೂಪಿಸುವುದಕ್ಕೆ ಮುಂಚೆ ಕುಟುಂಬವು ತನ್ನ ಸದಸ್ಯರಿಗೆ ಕುಟುಂಬದ ಘನೋದ್ದೇಶವನ್ನು ಕುರಿತು ನೋಡಿಕೊಳ್ಳಬೇಕಾದುದು ಅಗತ್ಯ. ತನ್ನ ಸದಸ್ಯರಿಗೆ ಕುಟುಂಬ ಮಾಡಬೇಕಾದ ಕರ್ತವ್ಯ ವಿದ್ಯಾರ್ಥಿಗಳಿಗೆ ಶಾಲೆಯ ಉದ್ದೇಶಗಳೊಡನೆ ಕೊಂಡಿಯಾಗಿ ಸೇರಿದೆ. ಶೈಕ್ಷಣಿಕ ಸಂಸ್ಥೆಗಳಲ್ಲಿ

ಹೇಳಿಕೊಡುವ ವಿಷಯಗಳಿಗಿಂದ ಹೆಚ್ಚಾಗಿ ವಿದ್ಯಾರ್ಥಿಗಳನ್ನು ರೂಢಿಸುವ ವಾತಾವರಣ ಅತಿ ಮುಖ್ಯವಾದದ್ದು, ಅದು ವಿದ್ಯಾರ್ಥಿಗಳ ವಿದ್ಯಾ ಸಂಬಂಧಿ ಗುಣಗಳನ್ನು ವ್ಯಾಖ್ಯಾನಿಸುತ್ತದೆ. ಹಾಗೆಯೇ ಕುಟುಂಬವೂ ತನ್ನ ಸದಸ್ಯರಿಗೆ ಸಂಬಂಧಿಸಿದಂತೆ ವರ್ತಿಸುತ್ತದೆ, ಪ್ರೀತಿಯ ಮತ್ತು ಔದಾರ್ಯದ, ಪ್ರಾಮಾಣೀಕತೆಯ ಮತ್ತು ನಿಷ್ಠೆಯ ಹವೆಯೇ ತನ್ನ ಸದಸ್ಯರ ಬದುಕುಗಳನ್ನು ಪರಿಪಕ್ವತೆಯ ಕಡೆಗೆ ಮತ್ತು ಪ್ರತಿಯೊಬ್ಬ ವ್ಯಕ್ತಿಗಳ ಕಡೆಗೆ ಪರಿವರ್ತಿಸುತ್ತದೆ.

## 4. ಸಮಾಜದ ಏಕಘಟಕವಾಗಿ ಕುಟುಂಬ :

### ವ್ಯಾಖ್ಯಾನ :

ಕುಟುಂಬ ಸಮಾಜದ ಏಕಘಟಕ, ಪ್ರತಿಯೊಂದು ಘಟಕದ ಎಲ್ಲಾ ಸದಸ್ಯರು ಅದರ ಪರಿಪಕ್ವತೆಯ ಕಡೆಗೆ ಪರಸ್ಪರ ಹೊಂದಾಣಿಕೆಯಿಂದ ಅನುಸರಿಸಿ ನಡೆಯುತ್ತಾರೆ.

### ಸಮಾಜದಲ್ಲಿ ಕುಟುಂಬದ ಪಾತ್ರ :

ಕುಟುಂಬ ಸಮಾಜದ ಮೂಲಕ ಏಕಾಂಶ ಘಟಕವೆಂದು ಪುನಃ ಪುನಃ ಹೇಳುತ್ತಲೆ ಬಂದಿದೆ. ದೇಶ ಕುಟುಂಬ ನಡೆದ ಮಾರ್ಗದಲ್ಲೆ ಮುನ್ನಡೆಯುತ್ತದೆ. ಕುಟುಂಬ ಮತ್ತು ಸಮಾಜದ ಇವುಗಳನ್ನು ಬಿಗಿ ಹಿಡಿಯುವ ಕೊಂಡಿ, ವಿಶಾಲ ಸಮಾಜದ ರಚನಾತ್ಮಕ ಮೂಲಧಾತುವಾಗಿ ವರ್ತಿಸುವುದರ ಹೊರತು ಕುಟುಂಬಕ್ಕೆ ಬೇರೆಯಾವ ಪ್ರಕಾರ್ಯವು ಇಲ್ಲವೆಂಬುದನ್ನು ತೋರಿಸುತ್ತದೆ.

ಸಮಾಜ ಒಂದು ಬೃಹನ್ನಿಕಾಯ, ಈ ನಿಕಾಯಕ್ಕೆ ಯಾವುದೇ ಧ್ಯೇಯವನ್ನು ವಿವರಿಸುವುದಕ್ಕೆ ಮುಂಚೆ ಕುಟುಂಬದ ಧ್ಯೇಯ ಏನೆಂಬುದನ್ನು ಅದರ ಸದಸ್ಯರಿಗೆ ಮೊದಲು ತಿಳಿಸುವುದನ್ನು ಗಮನಿಸಬೇಕು. ಕುಟುಂಬದ ಕರ್ತವ್ಯ ತನ್ನ ಸದಸ್ಯರ ಬಗ್ಗೆ ಯಾವುದೋ ಅದನ್ನು ವಿದ್ಯಾರ್ಥಿಗಳಿಗೆ ಶಾಲೆಯು ಹೇಳುವ ದ್ಯೇಯದೊಡನೆ ಕೊಂಡಿಯಾಗಿ ಜೋಡಿಸಬೇಕು. ಒಂದು ಶೈಕ್ಷಣಿಕ ಸಂಸ್ಥೆಯಲ್ಲಿ ಹೇಳಿಕೊಡುವ ಪಾಠಕ್ಕಿಂತ ವಿಶೇಷವಾಗಿ ಅಲ್ಲಿನ ವಿದ್ಯಾರ್ಥಿಗಳಿಗಾಗಿ ಸೃಷ್ಟಿಸುವ ವಾತಾವರಣ ಅತ್ಯಂತ ಮಹತ್ವದ್ದು. ಅದೇ ವಿದ್ಯಾರ್ಥಿಗಳ ಶೈಕ್ಷಣಿಕ ಗುಣಮಟ್ಟವನ್ನು ವ್ಯಾಖ್ಯಾನಿಸುತ್ತದೆ. ಹಾಗೆಯೇ ಕುಟುಂಬವು ಅದೇ

ರೀತಿಯಲ್ಲಿ ತನ್ನ ಸದಸ್ಯರುಗಳ ಬಗ್ಗೆ ನಡೆದುಕೊಳ್ಳುತ್ತದೆ. ಪ್ರೀತಿಯ ಮತ್ತು ಔದಾರ್ಯದ, ಪ್ರಾಮಾಣಿಕತೆ ಮತ್ತು ನಿಷ್ಠೆಯ ವಾತಾವರಣ ತನ್ನ ಸದಸ್ಯರ ಬದುಕನ್ನು ಪರಿಪಕ್ವತೆಯ ಕಡೆಗೆ, ಒಬ್ಬೊಬ್ಬರ ಪೋಷಣೆಯ ಕಡೆಗೆ ಪರಿವರ್ತಿಸುತ್ತದೆ.

## ಕುಟುಂಬ ಸಮಾಜವನ್ನು ನಿರ್ಮಿಸುತ್ತದೆ :

ಸರ್ವಸೃಷ್ಟಿಕರ್ತನು ಎಂದು ವೈವಾಹಿಕ ಸಹಭಾಗಿತ್ವವನ್ನು ಮಾನವ ಸಮಾಜದ ಆರಂಭ ಮತ್ತು ಮೂಲಾಧರವೆಂದು ಸ್ಥಾಪಿಸಿದನೋ ಅಂದಿನಿಂದಲೇ ಕುಟುಂಬವು ಪ್ರಥಮ ಮತ್ತು ಮಹತ್ವದ ಜೀವಕೋಶವೂ ಆಯಿತು.

ಕಟುಂಬ ಸಮಾಜದೊಡನೆ ದೈವಿಕ ಮತ್ತು ಇತರ ಅತಿ ಮುಖ್ಯ ಸಂಪರ್ಕಗಳನ್ನು ಹೊಂದಿದೆ. ಏಕೆಂದರೆ ಅದು ಅದರ ತಳಪಾಯ; ಅಷ್ಟೇ ಅಲ್ಲ ಅದನ್ನು ನಿರಂತರವಾಗಿ ಪೋಷಿಸುತ್ತದೆ, ಬದುಕಿಗೆ ತಾನು ನೀಡುವ ಸೇವಾ ಪಾತ್ರದ ಮೂಲಕ ಪೌರರು ಹುಟ್ಟಬರುವುದು ಕುಟುಂಬದ ಮೂಲದಿಂದಲೇ ಕುಟುಂಬದ ಆಂತರ್ಯದಲ್ಲಿಯೇ ಅವರು ಸಮಾಜದ ನೇರ ಇರುವಿಕೆಗೆ ಮತ್ತು ಬೆಳವಣಿಗೆಗೆ ಚೇತನ ಕೊಡುವ ತತ್ವವನ್ನು ತಿಳಿಸುವ ಸಾಮಾಜಿಕ ಗುಣಗಳಿಂದ ತುಂಬಿದ ಪ್ರಾಥಮಿಕ ಶಾಲೆಯನ್ನು ಕಾಣುತ್ತಾರೆ.

ಹೀಗೆ ಕುಟುಂಬ ತನ್ನನ್ನು ತಾನು, ತನ್ನಲ್ಲಿಯೇ ಮುಚ್ಚಿಟ್ಟುಕೊಂಡು ಬಿಡದೆ ಸ್ವಾಭಾವಿಕವಾಗಿ ಮತ್ತು ವೃತ್ತಿ ಪರವಾಗಿ ಇತರ ಕುಟುಂಬಗಳಿಗೂ ವಿಶಾಲ ಸಮಾಜಕ್ಕೂ ತೆರೆದಿಟ್ಟುಕೊಳ್ಳುತ್ತದೆ ಮತ್ತು ತನ್ನ ಸಾಮಾಜಿಕ ಪಾತ್ರವನ್ನು ನೆರವೇರಿಸುತ್ತದೆ.

## 5. ಭಾವೈಕ್ಯತೆ ಮತ್ತು ಪಾಲುಗಾರಿಕೆ ಇವುಗಳ ಅನುಭವಸ್ಥರೂಪದ್ದಾಗಿ ಕೌಟುಂಬಿಕ ಜೀವನ

ಕುಟುಂಬದ ಸದಸ್ಯರ ಮತ್ತು ಸಮುದಾಯದ ಸಂಬಂಧಗಳು 'ಮುಕ್ತದಾನ'ದ ಕಾನೂನಿನಿಂದ ಸ್ಫೂರ್ತಿಪಡೆಯುತ್ತದೆ, ಮಾರ್ಗದರ್ಶನೀಯವಾಗುತ್ತದೆ. ಮೌಲ್ಯಕ್ಕೆ ಒಂದೇ ಆಧಾರವಾದಂತೆ ವೈಯಕ್ತಿಕ ಘನತೆಯನ್ನು ಗೌರವಿಸುವುದರಿಂದ ಹಾಗೂ ಪೋಷಿಸುವುದರ ಮೂಲಕ ಈ 'ಮುಕ್ತದಾನ' ಹೃದಯ ಸ್ಪರ್ಶಿ ಸ್ವೀಕೃತಿಯ, ಸೆಣಸಾಟ ಮತ್ತು ಸಂವಾದದ, ಅನಾಸಕ್ತ ಲಭ್ಯತೆ, ಉದಾರ ಸೇವೆ ಮತ್ತು ಆಳವಾದ ಭದ್ರತೆಗಳ ರೂಪವನ್ನು ತಾಳುತ್ತದೆ.

ಹೀಗೆ ಕುಟುಂಬವು ಕೆಳಸ್ತರದ ಸದಸ್ಯರಲ್ಲಿ ಪರಸ್ಪರ ಆಧಾರ ಪೂರ್ಣ ಮತ್ತು ಪೂರ್ಣತಾ ಭಾವೈಕ್ಯತೆಯನ್ನು ಪೋಷಿಸುವಲ್ಲಿ ಅದು ಮತ್ತೊಂದರಿಂದ ಅಕ್ರಮಿಸಿಕೊಳ್ಳಲಾಗದ ಸಾಮಾಜಿಕ ಜೀವನದ ಪ್ರಥಮ ಶಾಲೆಯಾಗುತ್ತದೆ. ಮರ್ಯಾದೆ, ನ್ಯಾಯ, ಸಂವಾದ ಮತ್ತು ಪ್ರೀತಿ ಇವುಗಳಿಂದ ಗುರುತಿಸಲ್ಪಟ್ಟ ಸವಿಸ್ತೃತವಾದ ಸಮುದಾಯದ ಸಂಬಂಧಗಳನ್ನು ಉದ್ದೀಪನಗೊಳಿಸುತ್ತದೆ ಮತ್ತು ಮಾದರಿಯದೂ ಆಗುತ್ತದೆ.

ಕುಟುಂಬ ಹೀಗೆ ಮೂಲದ ಕೇಂದ್ರ ಸ್ಥಳವಾಗುತ್ತದೆ. ಅಲ್ಲದೆ ಸಮಾಜವನ್ನು ಮಾನವತಾ ಯುಕ್ತವನ್ನಾಗಿ ಮತ್ತು ವೈಯಕ್ತಿಕ ಸಂಪನ್ನವಾಗಿ ರೂಪಿಸುವ ಅತ್ಯಂತ ಪರಿಣಾಮಕಾರಿ ಮಾಧ್ಯಮವಾಗುತ್ತದೆ. ಅದು ಪ್ರಪಂಚವನ್ನು ನಿರ್ಮಿಸುವಲ್ಲಿ ಮೂಲ ಮತ್ತು ಭದ್ರ ಕೊಡುಗೆಯನ್ನು ನೀಡುತ್ತದೆ. ಗುಣಗಳನ್ನು ಮತ್ತು ಮೌಲ್ಯಗಳನ್ನು ರಕ್ಷಿಸುವ ಮತ್ತು ವರ್ಗಾಯಿಸುವ ಎಂದರೆ ವಿಶಿಷ್ಟವಾಗಿ, ಸರಿಯಾಗಿ ಹೇಳುವುದಾದರೆ ಬದುಕನ್ನು ಸ್ವರೂಪವಾಗಿ ಕೊಡುವುದರಿಂದ ಕುಟುಂಬದಲ್ಲಿ ಭಿನ್ನ ಭಿನ್ನ ಪೀಳಿಗೆಗಳನ್ನು ಒಂದು ಕಡೆಗೆ ಒಂದು ಒಟ್ಟಾಗಿ ಸೇರುತ್ತವೆ. ವಿವೇಕಯುತವಾಗಿ ಬೆಳೆಯಲು ಪರಸ್ಪರ ಸಹಕರಿಸುತ್ತದೆ. ಹಾಗೂ ಸಮಾಜದ ಬದುಕಿನ ಇತರ ಅಗತ್ಯಗಳೊಡನೆ ವೈಯಕ್ತಿಕ ಹಕ್ಕುಗಳಲ್ಲಿ ಸಾಮರಸ್ಯವನ್ನುಂಟು ಮಾಡುತ್ತದೆ. ತತ್ಪರಿಣಾಮವಾಗಿ, ಹೆಚ್ಚು ಹೆಚ್ಚು ಅವೈಯಕ್ತಿಕವಾಗಿ ಬೆಳೆಯುತ್ತಿರುವ ಮತ್ತು (ಅಮಾನವೀಯ ಮತ್ತು ಮಾನವೀಯತೆಯಿಂದ ಭಿನ್ನವಾಗಿರುವ) ಮಧ್ಯಪಾನರೋಗಾವಸ್ಥೆ, ಮತ್ತಿನ ಔಷಧಿಗಳು ಮತ್ತು ಉಗ್ರವಾದಿತ್ವಗಳು ಇವುಗಳಂಥ ವಿವಿಧ ರೂಪದ ಪಲಾಯನತ್ವದ ವಿರುದ್ಧ ಫಲಗಳೊಡನೆ ಸಮಾಜವನ್ನು ಎದುರಿಸುವ ಕುಟುಂಬವು ಭಯಂಕರವಾದ ಶಕ್ತಿಗಳನ್ನು ಸಂಪಾದಿಸುತ್ತಾ ಇದ್ದು ಅವುಗಳಿಂದ ದುಷ್ಟಶಕ್ತಿಗಳನ್ನು ಎದುರಿಸುತ್ತಲೇ ಇದೆ.

ಮನುಷ್ಯನನ್ನು ಅವನ ಅನಾಮಿಕತ್ವದಿಂದ ಹೊರೆತೆಗೆಯುವ, ಅವನು ತನ್ನ ವೈಯಕ್ತಿಕ ಘನತೆಯನ್ನು ತನ್ನ ಮನಸ್ಸಿನಲ್ಲಿ ಸ್ಥಿರಗೊಳಿಸಿಟ್ಟುಕೊಳ್ಳುವಂತೆ, ಗಾಢವಾದ ಮಾನವೀಯತೆಯೊಡನೆ ಅವನನ್ನು ಶ್ರೀಮಂತನನ್ನಾಗಿ ಮಾಡುವಂತೆ, ಮತ್ತು ಸಮಾಜದ ಚೌಕಟ್ಟಿನೊಳಗೆ ಅವನ ಅಪರ್ವತೆಯಲ್ಲಿ ಮತ್ತು ಅಪುನರಾವೃತ್ತಿತನದಲ್ಲಿ ಸಕ್ರೀಯವಾಗಿ ನಿಲ್ಲುವಂತೆ ಮಾಡುವ ಸಾಮರ್ಥ್ಯವುಳ್ಳದ್ದೇ ಕುಟುಂಬ.

## 6. ಒಬ್ಬ ರಕ್ಷಕನಾಗಿ ಮತ್ತು ಮೌಲ್ಯಗಳವಾಹಕವಾಗಿ ಕುಟುಂಬ

ಮಾನವ ನಾಗರಿಕತೆಯ ಭವಿಷ್ಯದ ಬಗ್ಗೆ ಆಸಕ್ತಿಯುಳ್ಳವರ ಭಾವನೆಗಳಲ್ಲಿ ಕುಟುಂಬ ಮತ್ತೆ ಪುನಃ ಹೆಚ್ಚು ಹೆಚ್ಚಾಗಿ ಪ್ರಮುಖ ಸ್ಥಾನವನ್ನು ಆಕ್ರಮಿಸಲು ಮುಂದೆ ಬರುತ್ತಿದೆ.

### ಪ್ರಶಂಸೆಯ ಮೌಲ್ಯ

ಕುಟುಂಬ ಸದಸ್ಯರಲ್ಲಿ ಶುದ್ಧ ಪ್ರೀತಿಯಲ್ಲಿ ಮನಸ್ಸುಗಳ ಮತ್ತು ಹೃದಯಗಳ ಆಳವಾದ ಸಂಘಟನೆಯೇ ಪರಸ್ಪರವಾಗಿ ದಿನ ದಿನದ ಸ್ವೀಕೃತಿಯೂ ಪ್ರಶಂಸೆಯೂ ಮುಖ್ಯವಾಗಿರಬೇಕಾದ್ದು ಅಗತ್ಯ. ಅವರು ಪರಸ್ಪರ ಪರ್ಯಾಲೋಚಿಸಬೇಕು. ಅವರು ತಮ್ಮ ತಮ್ಮ ದೃಷ್ಟಿಕೋನಗಳನ್ನು, ಸಂತೋಷವನ್ನು, ಆನಂದಗಳನ್ನು ತೆರೆದ ಮನಸ್ಸಿನಿಂದ, ಹೊರಗೆಡಹಿ, ಸ್ವತಂತ್ರವಾಗಿ ಮತ್ತು ತಿಳುವಳಿಕೆಯಿಂದ ಒಬ್ಬರೊಬ್ಬರು ಪಾಲುಗೊಳ್ಳಬೇಕು. ಅವರು ಬರಿಯ ತಂದೆ, ತಾಯಿಗಳು ಮತ್ತು ಮಕ್ಕಳು ಮಾತ್ರವಲ್ಲ ಪ್ರತಿಯೊಬ್ಬರೂ ಮನುಷ್ಯ ವ್ಯಕ್ತಿಗಳು ಎಂದು ಯೋಚಿಸಬೇಕು.

### ತಂಡಕಾರ್ಯದ ಮೌಲ್ಯ :

ತಂಡ ಕಾರ್ಯದ ಮೌಲ್ಯ ಸಮಾನ ಗುರಿಯಲ್ಲಿ ಪಾಲುಗೊಳ್ಳುವುದರ ಮೂಲಕ ಬರುತ್ತದೆ. ಅದಕ್ಕೆ ನಿಸ್ವಾರ್ಥತೆ, ಭಾರಗಳನ್ನು ಲಘುತರಗೊಳಿಸುವ ತಿಳುವಳಿಕೆ ಅಗತ್ಯ. ಅದು ತಿಳುವಳಿಕೆ ಮತ್ತು ಸಹಕಾರವನ್ನು ಅಪೇಕ್ಷಿಸುತ್ತದೆ. ಡಾ: ಎಸ್. ರಾಧಾಕೃಷ್ಣನ್ ಹೇಳುತ್ತಾರೆ. ''ನೈತಿಕ ಗುಣಗಳು ಬೌದ್ಧಿಕ ಸಾಧನೆಗಳಿಗಿಂತ ಹೆಚ್ಚು ಮೌಲ್ಯವುಳ್ಳದ್ದು'' ಎಂದು. ತಂದೆ, ತಾಯಿಗಳು ತಮ್ಮ ಮಕ್ಕಳಿಗೆ ಪಾಠ ಹೇಳಿಕೊಡುತ್ತಾರೆ, ಕುಟುಂಬದ ಪ್ರತಿಯೊಬ್ಬ ಸದಸ್ಯರೂ ಪರಸ್ಪರವಾಗಿ ಕೊಟ್ಟು ತೆಗೆದುಕೊಳ್ಳುವುದು ಅತ್ಯಗತ್ಯ ಮತ್ತು ಪ್ರತಿಯೊಬ್ಬರ ಆರೋಗ್ಯಕ್ಕೆ ಒಳ್ಳೆಯದಕ್ಕೆ ಮೌಲಿಕವಾದುದು ಎಂದು.

### ಪ್ರೋತ್ಸಾಹ :

ರಚನಾತ್ಮಕ, ಸಹಾನುಭೂತಿಪರ ಮತ್ತು ಸಮಾನ ಮಾರ್ಗ ಮತ್ತು ಮರುಭರವಸೆ ಉತ್ತಮ ಗುಣಗಳನ್ನು ಹೊರತರಲು ಮತ್ತು ತಪ್ಪುಗಳನ್ನು ಪರಿಹರಿಸಿಕೊಳ್ಳಲು ಹೆಚ್ಚು ಮೂಲಕ ಮತ್ತು ಪರಿಣಾಮಕಾರಕ (ವಿಪರೀತವಾಗಿ ಕಾಡುವ ಪ್ರಮಾಣಕ್ಕಿಂತವಾದುವು.)

## ನೈತಿಕ ಮೌಲ್ಯ

ಕೌಟುಂಬಿಕ ತಜ್ಞ ಡಾ: ಡಿ.ಗುಡುಮನ್ ಅವರ ಪ್ರಕಾರ "ನಾವು ವೆಚ್ಚದ ಲೆಕ್ಕವನ್ನು ಆರೋಗ್ಯ ಪಡಿಸಿದಾಗ, ತೆರಿಗೆ ತಃಖ್ತೆಯನ್ನು ತೊಡಕುಗೊಳಿಸಿದಾಗ, ಪ್ರಭಾವಕ್ಕೆ ಹಣತೆತ್ತಾಗ ಪ್ರವಾಸದ ಟಿಕೆಟನ್ನು ನಿಶ್ಚಯಿಸಿದಾಗ, ನಮಗಿರುವ ಹಕ್ಕಿಗಿಂತ ಅತಿ ಹೆಚ್ಚಿನ ಬದಲಾದ ಸೌಕರ್ಯವನ್ನು ಹಲ್ಲುಗಿಂಜಿ ಸ್ವೀಕರಿಸಿದಾಗ ಒಬ್ಬ ಕಾರ್ಮಿಕನನ್ನು ನಿಂದಿಸಿದಾಗ ನೆರೆಯವನೊಬ್ಬನನ್ನು ಹೀಯಾಳಿಸಿದಾಗ ನಮ್ಮ ಶತ್ರುವಿನ ಪತನಕ್ಕೆ ಪಿತೂರಿನಡೆಸಿದಾಗ ಇವೆಲ್ಲ ನಮ್ಮ ಮಕ್ಕಳ ಮೇಲೆ ಪರಿಣಾಮವನ್ನುಂಟುಮಾಡುತ್ತವೆ. ಮತ್ತು ನೈತಿಕ ಮೌಲ್ಯಗಳಲ್ಲಿ ನಂಬಿಕೆಗಳನ್ನು ಕುಂಠಿತಗೊಳಿಸುತ್ತವೆ. ನೈತಿಕ ಮೌಲ್ಯಗಳಿಗೆ ಮತ್ತು ಆತ್ಮ ಪ್ರಜ್ಞೆಗೆ ಅನುಸಾರವಾಗಿ ಬದುಕುವುದು ಪ್ರತಿಯೊಂದು ಕುಟುಂಬದ ಸದಸ್ಯರಿಂದ ಅದನ್ನೇ ದೇವರು ಸ್ವತಃ ಅಪೇಕ್ಷಿಸುತ್ತಾನೆ.

## ಹೊಂದಾಣಿಕೆಯ ಮತ್ತು ಸ್ಪೈರಣೀಯ ಮೌಲ್ಯ

ಎಲ್ಲಾ ಜನರನ್ನು ಗೌರವದಿಂದ ಕಾಣುವುದು, ಒಳ್ಳೆಯ ಭಾವನೆಗಳನ್ನು ಮತ್ತು ಕಾರ್ಯಗಳನ್ನು ಪ್ರೋತ್ಸಾಹಿಸುವುದು, ಇತರರ ನಿಷ್ಕಾಮಯುಕ್ತ ಪ್ರಯತ್ನಗಳನ್ನು ಹೊಗಳುವುದು, ಆರೋಗ್ಯಕರ ಸ್ಪರ್ಧೆಗಳಲ್ಲಿ ಭಾಗವಹಿಸುವುದು ಮತ್ತು ಹೊಸ ಹೊಸ ಭಾವನೆಗಳನ್ನು ಮಂಡಿಸುವುದು ಇವೆಲ್ಲ ಹಿಂದಿನ ಗೌರವಾನ್ವಿತ ಸಂಪ್ರದಾಯಗಳು.

ಈ ಎಲ್ಲಾ ಮೌಲಿಕ ಸಂಸ್ಕೃತಿಗಳು, ಕುಟುಂಬವನ್ನು ಸಂಕೀರ್ಯತೆಯೊಡನೆ ಹಿಡಿತದಲ್ಲಿಟ್ಟುಕೊಳ್ಳಲು ಸಹಾಯ ಮಾಡುತ್ತವೆ. ಜೊತೆಗೆಪ್ರಪಂಚದೊಡನೆ ಸವಾಲು ಒಡ್ಡುತ್ತವೆ. ಬದಲಾಯಿಸುತ್ತಿರುವ ಪ್ರಪಂಚದೊಡನೆ ಹೊಂದಿಕೊಂಡು ಹೋಗಲು ಮತ್ತು ಅವುಗಳನ್ನು ಉತ್ತಮಿಕೆಯ ಕಡೆಗೆ ಪರಿವರ್ತಿಸಲು ನೆರವು ನೀಡುತ್ತವೆ.

ಇತರ ನಂಬಿಕೆಗಳ, ಮತಗಳ ಮತ್ತು ಸಂಸ್ಕೃತಿಗಳ ಜನಾಂಗದೊಡನೆ ಹೊಂದಿಕೊಳ್ಳುವ ಮತ್ತು ಅವರನ್ನು ಅಂಗೀಕರಿಸುವ ಮೌಲ್ಯ ಅತ್ಯಂತ ಮುಖ್ಯವಾದದ್ದು.

## ದೃಢತೆ ಮತ್ತು ಪ್ರಯತ್ನಗಳ ಮೌಲ್ಯ :

ಸಾಧನೆಗೆ, ಸೋಲುಗಳು, ದೀರ್ಘಕಾಲ, ಏಕಾಕಿತನ, ಹತಾಶೆಗಳು, ಹೊರಾಟಗಳು,

ಜೆವರು ಮತ್ತು ತ್ಯಾಗಗಳು ಅಗತ್ಯವಾದುವು. ಇದನ್ನು ಕುಟುಂಬಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡ ಸದಸ್ಯರಿಗಿಂತ ಬೇರೆಯವರು ವಿಶೇಷವಾಗಿ ತಿಳಿದಿಲ್ಲ. ಆದರೆ ಹರ್ಷದ, ಯಶಸ್ವಿನ ಮತ್ತು ಶಾಂತಿಯ ಈ ಅಮೂಲ್ಯ ಸಾಧನೆ ಎಲ್ಲ ಹತಾಶೆಗಳು, ಹೋರಾಟಗಳು ಮತ್ತು ಪ್ರಯತ್ನಗಳು ಇವುಗಳಿಗಿಂತ ಬೆಲೆಯುಳ್ಳದ್ದು. ಇದು ಕುಟುಂಬಕ್ಕೆ ಬದುಕಿನ ಮತ್ತು ಅದರ ಹರ್ಷಾತಿಶಯಗಳು ಮತ್ತು ವಿರೋಧಗಳ ನಡುವೆ ಬದುಕಲು ಮೌಲ್ಯವನ್ನು ತಂದು ಕೊಡುತ್ತದೆ.

ಸಾವಿರ ಮೈಲಿಗಳ ಪ್ರಯಾಣ ಮೊದಲಿಟ್ಟ ಹೆಜ್ಜೆಯಿಂದ ಆರಂಭವಾಗುತ್ತದೆ ಎಂಬುದನ್ನು ನೆನಪಿಡಿ.

## ಒಳ್ಳೆಯ ಶಿಸ್ತಿನ ಮೌಲ್ಯ

ನ್ಯಾಯಾಚರಣೆಗೆ ಬದ್ದವಾಗದ ಪುಂಡಾಟದ ಈ ಯುಗದಲ್ಲಿ ಶಿಸ್ತನ್ನು ಜಾರಿಗೆ ತರುವಷ್ಟರ ಮಟ್ಟಿಗೆ ಮಾತ್ರ ಪರಿಗಣಿಸದೆ ಅದನ್ನು ಹೆಚ್ಚು ಶಕ್ತಿಯುಕ್ತವಾಗಿ ಒತ್ತಾಯಿಸಬೇಕು. ಶಿಸ್ತು ವ್ಯಕ್ತಿತ್ವವನ್ನು ಪ್ರತಿಬಂಧಿಸಬಾರದು. ಆದರೆ ನಿಜವಾಗಿ ಕುಟುಂಬದ ಎಲ್ಲಾ ಸದಸ್ಯರಲ್ಲಿರುವ ಅತ್ಯಮೂಲ್ಯ ಸದ್ಗುಣಗಳನ್ನು ಹೊರಕ್ಕೆ ತರಬೇಕು. ಒಬ್ಬನು ತನ್ನನ್ನು ತಾನೇ ಗೆದ್ದುಕೊಳ್ಳದಿದ್ದರೆ ಎಲ್ಲದರ ಗೆಲ್ಲುವಿಕೆಯೂ ವ್ಯರ್ಥವಾಗುತ್ತದೆ. ಅಂಥ ಶಿಸ್ತು ನಿಷ್ಕಪಟ ಸಹಕಾರ, ಕರುಣೆ ಮತ್ತು ಪ್ರೀತಿಯಲ್ಲಿ. ತಿಳುವಳಿಕೆಯನ್ನು, ಮೆಚ್ಚುಗೆಯನ್ನು ಕುಟುಂಬದ ಸದಸ್ಯರಲ್ಲಿ ತಮ್ಮ ತಮ್ಮಲ್ಲಿಯೇ ಸಂವಾದವನ್ನು ಸ್ವೀಕರಿಸುವಲ್ಲಿ ಆಶಯವನ್ನು ಹೊಂದಿರುತ್ತದೆ.

## ಸೇವಾ ಮೌಲ್ಯ

ಐನ್‌ಸ್ಟೀನ್ ಹೇಳುತ್ತಾನೆ :-'ಇತರರಿಗಾಗಿ ಬದುಕಿದ ಬದುಕು ಚೆನ್ನಾಗಿ ಬದುಕಿದ ಬದುಕು' ಎಂದು. ಇತರರಿಗೆ ಮಾಡುವ ಸೇವೆ ಮತ್ತು ಕೊಡುವ ಒಳ್ಳೆಯ ದೃಷ್ಟಾಂತಗಳು ಕುಟುಂಬ ಜೀವನದ ಅಮೂಲ್ಯ ಆಸ್ತಿಗಳು. ಸೇವೆ ಮತ್ತು ಒಳ್ಳೆಯ ದೃಷ್ಟಾಂತಗಳನ್ನು ಕುಟುಂಬದೊಳಗಿನ ಸದಸ್ಯರಿಗೂ ತೋರಿಸಿಕೊಡಬೇಕು. ಹಾಗೂ ಸಾವಧಾನವಾಗಿ, ಸತತವಾಗಿ, ಬೆಳೆಯುತ್ತಿರುವ ಮಾನವನ ವಿಸ್ತಾರವಾದ ವೃತ್ತಕ್ಕೂ ತೋರಿಸಿ ಕೊಡಬೇಕು. ಒಳ್ಳೆಯ ಕಾರ್ಯಗಳ ಮತ್ತು ಒಳ್ಳೆಯ ದೃಷ್ಟಾಂತಗಳ ಮೌಲ್ಯಗಳು ಕುಟುಂಬದ ಸದಸ್ಯರಲ್ಲಿ

ಸದೃಢ, ಮತ್ತು ಬಲಿಷ್ಠ ಚಾರಿತ್ರ್ಯಗಳನ್ನು ನಿರ್ಮಿಸಲು ನೆರವು ನೀಡುತ್ತದೆ.

ಆದಾಗ್ಯೂ, ಅನೇಕ ಭಿನ್ನ ಭಿನ್ನ ಕಾರಣಗಳಿಂದ ಅನೇಕ ಪ್ರಕರಣಗಳಲ್ಲಿ ಇಂದು, ಕುಟುಂಬ ಕಡಿಮೆ ಪ್ರಮಾಣದಲ್ಲಿ, ಮೌಲ್ಯಗಳ ರಕ್ಷಕ ಮತ್ತು ವಾಹಕವಾಗಿರಲು ಸಾಧ್ಯವಾಗಿದೆ.

ಕುಟುಂಬ ವಿಶೇಷವಾಗಿ ಪೋಷಕರು ತಂದೆ,ತಾಯಿಗಳು ಈ ಮುಖ್ಯ ಮತ್ತು ಪವಿತ್ರ ಕಾರ್ಯಗಳಲ್ಲಿ ಮಟ್ಟದಲ್ಲಿ ಬದುಕಲು ಬೆಂಬಲವನ್ನು ಮತ್ತು ಅಗತ್ಯವಾಗಿ ಅಪೇಕ್ಷಿಸುತ್ತದೆ.

ಸಮಾಜದಲ್ಲಿ ಬಳಕೆಗೆ ಬರುತ್ತಿರುವ ಹಿಂದಿನ ದ್ವಿಮುಖ ಪ್ರಮಾಣಗಳಿಂದ ಯುವಕರು ಆಗಾಗ ದಿಕ್ಕುತಪ್ಪಿಹೋಗುತ್ತಾರೆ. ಭ್ರಮಿಷ್ಟರಾಗುತ್ತಾರೆ. ಅವರ ಮೌಲ್ಯ ವ್ಯವಸ್ಥೆಯನ್ನು ಬೆಳೆಸಿಕೊಳ್ಳಲು, ಬಲಪಡಿಸಿಕೊಳ್ಳಲು ಮತ್ತು ಮತ್ತೆ ಜಾರಿಗೆ ತರಲು ಅವರಿಗೆ ಹೆಚ್ಚಿನ ಸಹಾಯ ಮತ್ತು ಮಾರ್ಗದರ್ಶನವನ್ನು ಅಗತ್ಯವಾಗಿ ಕೊಡಬೇಕಾಗುತ್ತದೆ.

ಇಂದಿನ ತರುಣರು ಅವರ ತಂದೆ,ತಾಯಿಗಳಿಗೆ, ಅಜ್ಜ ತಾತಂದರಿಗೆ ಹೋಲಿಸಿದರೆ ಹೊಸ ಭಾವನೆಗಳಿಗೆ ತಮ್ಮನ್ನು ತೆತ್ತ ಹೊಸ ತಲೆಮಾರಿನವರು ಆಗುತ್ತಾರೆ. ಅವರು ಪರ್ಯಾಯಗಳನ್ನು ಸಂಶೋಧಿಸಲು ಆಸಕ್ತಿ ಉಳ್ಳವರು ಮತ್ತು ಹೊಸ ಮಾರ್ಗಗಳನ್ನು ಕಾಣಲು ಪ್ರಯತ್ನಿಸುವರು. ಅವರು ವಿಶೇಷವಾಗಿ ತಿಳಿದವರು. ನೈಸರ್ಗಿಕ ಮತ್ತು ಸಾಮಾಜಿಕ ವಿಜ್ಞಾನಗಳಲ್ಲಿ ಹೆಚ್ಚಿನ ಶಿಕ್ಷಣ ಪಡೆದವರು. ಅಲ್ಲದೆ ತತ್ವಕ್ಕೆ ಮತ್ತು ವೈಜ್ಞಾನಿಕ ಮತ್ತು ವೈಜ್ಞಾನಿಕೆ ಆಲೋಚನೆಗೆ ತೆರೆದ ಮನಸ್ಸುಳ್ಳವರು. ಅವರ ಮೌಲಿಕ ವ್ಯವಸ್ಥೆ ಇನ್ನೂ ಸಾಕಷ್ಟು ದ್ರವರೂಪದಲ್ಲೇ ಇದೆ. ರೂಪುಗೊಳ್ಳಬೇಕಾಗಿದೆ. ಅವರು ತಮ್ಮ ಸ್ವಂತ ವ್ಯಕ್ತಿತ್ವ ರೂಪಣೆಗೆ ಶೋಧಿಸುತ್ತಿದ್ದಾರೆ. ವಯಸ್ಕರ ಬದುಕಿಗೆ ಬಂಧುತ್ವಗಳನ್ನು ಹುಡುಕುತ್ತಿದ್ದಾರೆ. ಅವರು ತಮ್ಮ ಪರಿಸರಕ್ಕೆ ಹೆಚುಚ ಸೂಕ್ಷ್ಮಭಾವನೆಯನ್ನು ತೆಳೆದವರಾಗಿದ್ದಾರೆ. ಬದುಕನ್ನು ಅದರ ಪೂರ್ಣತೆಗಾಗಿ ಅನುಭವಿಸಲು ಮತ್ತು ತಮ್ಮ ಭವಿಷ್ಯತ್ತಿಗೆ ಮತ್ತು ಪೀಳಿಗೆಗೆ ಮಹತ್ವವಾದದ್ದೆಂದು ನಂಬಿರುವ, ಕಾರಣಗಳನ್ನು ಸ್ವೀಕರಿಸುವ ಈ ಎರಡಕ್ಕೂ ಸಿದ್ಧವಾಗಿದ್ದಾರೆ.

## 7. ಸಮಾಜವನ್ನು ಎದುರಿಸುತ್ತಿರುವ ಸವಾಲುಗಳು ಮತ್ತು ಬದಲಾವಣೆಗಳು :

ಇಂದು ಭಾರತದಲ್ಲಿ ಸಾಮಾನ್ಯ ಕುಟುಂಬವು ಅನೇಕ ಮೂಲಭೂತ ಸಾಮಾಜಿಕ ಬದಲಾವಣೆಗಳ ಪ್ರಭಾವವನ್ನು ಅನುಭವಿಸುತ್ತಿದೆ.

ಗ್ರಾಮೀಣ ಸಮಾಜದಿಂದ ನಾಗರಿಕ ಸಮಾಜಕ್ಕೆ ಆಗುತ್ತಿರುವಬದಲಾವಣೆ ಮತ್ತು ಸತತವಾಗಿ ಹೆಚ್ಚುತ್ತಿರುವ ಕೈಗಾರಿಕಾಕರಣ ಮತ್ತು ರೂಢಮೂಲವಾದ ಪರಿಸ್ಥಿತಿಯಿಂದ ಕುಟುಂಬಗಳ ಬೇರನ್ನು ಕಿತ್ತುಹಾಕುತ್ತಿರುವ ತತ್ಪರಿಣಾಮಕಾರಿ ಮತ್ತು ನಾಗರಿಕ ಅಭದ್ರತೆಗೆ ಹೋಲಿಸಲ್ಪಡಬಹುದಾದ ಪರಂಪರಾಗ ಹಿನ್ನೆಲೆಯನ್ನು ಭದ್ರಗೊಳಿಸುವುದು.

ಕೆಲವು ಕುಟುಂಬಗಳಿಗೆ ಅಧಿಕ ಶ್ರೀಮಂತಿಕೆಯನ್ನು ಮತ್ತೆ ಕೆಲವಕ್ಕೆ ಅಭದ್ರತೆಯನ್ನು ಮತ್ತು ಉಳಿದ ಬಹು ವಿಸ್ತಾರವಾದ ಕುಟುಂಬಗಳಿಗೆ ಸಮಾಜದ ಅಂಚಿನ ಬದುಕನ್ನು ತನ್ನಡಗೆ ತರುತ್ತಿರುವ ಅಭಿವೃದ್ಧಿ ಕಾರ್ಯವಿಧಾನ.

ಸಾಮಾಜಿಕ ಆರ್ಥಿಕ ಮತ್ತು ನೈತಿಕ ಮತೀಯ ಸ್ವಭಾವದ ಸಮಸ್ಯೆಗಳ ನೇರವನ್ನು ಸೃಷ್ಟಿಸುತ್ತಿರುವ ಜನಸಂಖ್ಯೆಯ ತೀವ್ರ ಬೆಳವಣಗೆ.

ಸಮಾಜದ ಪ್ರಮುಖ ಅಂಶಗಳನ್ನು, ತಪ್ಪಿಸುತ್ತಿರುವ, ಮತ್ತು ಅದರ ಪ್ರಭಾವೀ ಕ್ಷೇತ್ರಗಳನ್ನು ಕಿತ್ತುಕೊಳ್ಳುತ್ತಿರುವ, ಆದರೆ ಅಗತ್ಯ ಮೌಲ್ಯಗಳನ್ನು ಹಾಗೂ ಮೂಲ ಘಟಕವನ್ನು ಒಟ್ಟಾಗಿಡಲು ಬಿಡುವ ಸಮಾಜೀಕರಣ ಕಾರ್ಯವಿಧಾನದ ಮೌಲ್ಯಗಳನ್ನು ಹಾಗೂ ಸ್ಥಿತಿಗಳು. ಅತಿ ಹೆಚ್ಚಿನ ಮತ್ತು ಅತಿ ಉದಾರ ಶಿಕ್ಷಣ ಸೌಲಭ್ಯಗಳು. ಆದ್ದರಿಂದ ಕೆಲವೊಮ್ಮೆ ಯಾವುದೇ ಮಾರ್ಗದರ್ಶನವಿಲ್ಲದೆ ಹೊಸ ಮತ್ತು ಅಗಾಗ ಸಂಭವಿಸಬಹುದಾದ ಸಂಘರ್ಷಿತ ಆದರ್ಶಗಳನ್ನು ಬಹಿರಂಗಗೊಳಿಸುವುದು.

ತರುಣರ ಮೇಲ್ವಿಚಾರಣೆಯ ಭಾವನೆಯನ್ನು ಕುಂಠಿತಗೊಳಿಸುವ ದುಡಿಯುವ ಹೆಂಡತಿಯ ಮತ್ತು ತಾಯಿಯ, ಸಿದ್ಧವಾದ ಅಂಶ.

ವಿಶ್ವದ ಅನುಮಿತವಾದ ಸಮಾಜಗಳಿಂದ, ನಮ್ಮ ಯುವಕರಿಗೆ ಅಭಿಪ್ರಾಯಗಳನ್ನು ಮತ್ತು ದೃಷ್ಟಿದರ್ಶನಗಳನ್ನು ತರುತ್ತಿರುವ ಸಮುದಾಯ ತಿಳುವಳಿಕೆ.

ಪಾಶ್ಚಾತ್ಯೀಕರಣವೇ ಆಧುನೀಕರಣ ಎಂಬ ಭಾವನೆಯ ಬಗೆಗೆ ಅಕ್ಷರಸ್ಥರ ಹಾಗೂ ಅನಕ್ಷರಸ್ಥರ ಮನಸ್ಸಿನಲ್ಲಿ ಮೂಡುತ್ತಿರುವ ಗೊಂದಲ.

ವಯಸ್ಕರು ಮತ್ತು ತರುಣರು ಇಬ್ಬರಲ್ಲೂ ಹೆಚ್ಚುತ್ತಿರುವ ದೇಹಾತ್ಮಾವಾದ, ಈ ವಾದ ಅನೇಕರ ಅಭಿಪ್ರಾಯಾನುಸಾರ ಇಂದಿನ ಸಂಘರ್ಷಣೆಗೆ ಪ್ರಧಾನಕಾರಣ. ತರುಣ ಜನಾಂಗ ಹಿರಿಯರನ್ನು ಕುರಿತು ವಾದಿಸುವ ಕಾಪಟ್ಯದ ಬಹುಭಾಗವನ್ನು ಮತ್ತು ದ್ವಿಮುಖ ಪ್ರಮಾಣಕಗಳನ್ನು ಅದಕ್ಕೆ ನಾವು ಕೊಡುಗೆಯಾಗಿ ಕೊಡಬಹುದು. ನಮ್ಮ ಕಾರ್ಯನೀತಿಗಳಿಗೆ, ಶಿಕ್ಷಣಕ್ಕೆ ಕುಟುಂಬ ಜೀವನಕ್ಕೆ ವೃತ್ತಿಕಾರ್ಯಕ್ಕೆ ಕೂಡ ಬಣ್ಣ ಹಚ್ಚಿರುವ ಆಲೋಚನೆಗಳು ಕೂಡ ಆಧ್ಯಾರೋಪಿಸಬಹುದು.

ಹೀಗೆ ಕುಟುಂಬ, ಸಾಮಾಜಿಕ ವಿಸ್ತೃತ ಬದಲಾವಣೆಗಳು ತನ್ನ ಪ್ರಕಾರ್ಯಗಳ ಮೌಲ್ಯಮಾಪನವನ್ನು ಬಲಾತ್ಕರಿಸುತ್ತಿರುವ ತನ್ನ ಸಂಬಂಧಗಳನ್ನು ಪುನರ್ರೂಪಿಸುತ್ತಿರುವ ಮತ್ತು ತನ್ನ ಮಾನಕಗಳನ್ನು ಹೊಸದಾಗಿ ವಾಖ್ಯಾನಿಸುತ್ತಿರುವ ಕಾರ್ಯಸ್ಥಿತಿಯಲ್ಲಿ ಸಿಲುಕಿಕೊಂಡಿದೆ. ಈ ಬೇಡಿಕೆಗಳನ್ನು ಗಣನೀಯವಾದ ಒತ್ತಡದ ಪ್ರಯಾಸಗಳಲ್ಲಿ ಮೂರ್ತಿಗೊಂಡಿವೆ. ಆದ್ದರಿಂದ ಒತ್ತಡಗಳನ್ನು, ಅವ್ಯವಸ್ಥೆಯನ್ನಷ್ಟೆ ಅಲ್ಲದೆ ಅನಾನುಕೂಲವನ್ನು ಕೂಡ ತೀವ್ರಗೊಳ್ಳುವುದಕ್ಕೆ ಮುಂಚೆ ಕುಟುಂಬಗಳು ಹೊಂದಿಕೊಳ್ಳುವವರಿಗೆ ಅವುಗಳಿಗೆ ಸಹಾಯ ಅಗತ್ಯ.

## 8. ಅಂಶಕಾಲಿಕ ತಾಯಿ, ತಂದೆಗಳು : ಒಳಗೆ ಬಿಟ್ಟು ಹೊರಬಾಗಿಲು ಬೀಗ (ಕೂಡು) ಹಾಕಿದ ಮಕ್ಕಳು

ಭಾರತದಲ್ಲಿ ಕುಟುಂಬದ ಮಾದರಿಗಳು ಗೊಂದಲಮಯವಾದ ಪ್ರಮಾಣದಲ್ಲಿ ಬದಲಾವಣೆಯಾಗುತ್ತಿವೆ. ಭಾರತದಲ್ಲಿ ಕುಟುಂಬ ಜೀವನವನ್ನು ಬಾಧೆಗೊಳಪಡಿಸಿದ ಮುಖ್ಯ ಬದಲಾವಣೆ ಎಂದರೆ ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಒಡೆದು ಹಾಕಿದ್ದು. ಕುಟುಂಬದ ಹೊಸ ಮಾದರಿಯಲ್ಲಿ ತಾಯಿ ತಂದೆಗಳಿಬ್ಬರೂ ದುಡಿಯುತ್ತಾರೆ ಮತ್ತು ತಮ್ಮ ದಾರಿಯಲ್ಲಿ ತಾವು ನಡೆಯುತ್ತಾರೆ. ಹಾಗೆಯೇ ಮಕ್ಕಳು ತಮ್ಮ ದಾರಿಯಲ್ಲಿ ತಾವುಹೋಗುತ್ತವೆ. ದುಡಿಯುವ ತಂದೆ ತಾಯಿಗಳಿಗೆ ಕುಟುಂಬವಾಗಿ ಕಾಲಕಳೆಯಲು ಎಷ್ಟೋ ವೇಳೆ ಸಮಯವೇ ಸಿಗುವುದಿಲ್ಲ. ತರುಣರು ಹೊಸ ಶಕ್ತಿಗೆ ಮಿಡಿಯುತ್ತ ಹೊಸ

ಅನುಭವಗಳನ್ನು, ಪ್ರಶ್ನೆಗಳನ್ನು ತುಂಬಿಕೊಂಡು ತಮ್ಮ ಅಂಶಕಾಲಿಕ ತಂದೆ ತಾಯಿಗಳಿಂದ ವಿಮುಖಗೊಳ್ಳುತ್ತಿದ್ದಾರೆ.

ತರುಣರು ಈ ಹಿಂದೆ ಅವಳಾಗಲಿ ಅವನಾಗಲಿ ಅವಿಭಕ್ತ ಕುಟುಂಬದ ಸ್ಥಿತಿಯಲ್ಲಿ ತಮ್ಮ ತಾತಂದಿರಿಂದ ಮತ್ತು ಪೂರ್ಣಕಾಲದ ತಾಯಿಂದರಿಂದ, ಚಿಕ್ಕಮ್ಮಂದಿರಿಂದ ಗ್ರಹಿಸುತ್ತಿದ್ದ ಸಾಂಸ್ಕೃತಿಕ ಮತ್ತು ಪರಂಪರಾಗತ ಮೌಲ್ಯಗಳನ್ನು ತಪ್ಪಿಸಿಕೊಳ್ಳುತ್ತಿದ್ದಾರೆ.

## 9. ಬದಲಾಗುತ್ತಿರುವ ಆದರ್ಶ ತತ್ವಶಾಸ್ತ್ರ:

ಭಾರತೀಯ ಕುಟುಂಬಗಳು ಕೂಡ ವಿವಾಹ ಪದ್ಧತಿಯಲ್ಲಿ, ಮಾದರಿಗಳಲ್ಲಿ, ಅಭ್ಯಾಸಗಳಲ್ಲಿ ಆಗುತ್ತಿರುವ ಬದಲಾವಣೆಗಳಿಂದ ನೇರವಾಗಿ ಪ್ರಭಾವ ಬೀರುತ್ತಿರುವ ಭಾವನೆಗಳಿಗೆ ನಿರಂತರವಾಗಿ ಗುರಿಯಾಗಿವೆ. ಕೆಲವು ಭಾವನೆಗಳ ನೇರವಾಗಿ ಶಿಕ್ಷಣದ ನಿಮಿತ್ತವಾಗಿ ಅಥವಾ ಹೆಚ್ಚು ದೂರದ ಪ್ರಭಾವಗಳಿಗಾಗಿ ಇವೆ. ಅವುಗಳಲ್ಲಿ ಕೆಲವು;

1) ಪ್ರತಿಯೊಬ್ಬ ಪ್ರತ್ಯೇಕ ವ್ಯಕ್ತಿಯ ಗರಿಷ್ಠ ಅಭಿವೃದ್ಧಿಗೆ ಹೊಸ ಗೌರವನ್ನು ಕೊಡುವುದು.

2) ಪ್ರೇಮ ವಿವಾಹಕ್ಕೆ ಒಡಂಬಡದ ಸಂಪ್ರದಾಯದ ವಿವಾಹ ಮಾದರಿಗಳ ಮತ್ತು ಕುಟುಂಬ ಪ್ರಕಾರಗಳ ಕೆಲವು ಅಂಶಗಳು.

ಆದಾಗ್ಯೂ ನಾವು ಕೆಲವೊಮ್ಮೆ ಕಾಣಬಹುದಾದ ಪ್ರಸಂಗಗಳೂ ಇವೆ. 'ವ್ಯವಸ್ಥಿತ ಪ್ರೇಮ ವಿವಾಹಗಳು' ಎಂದು ದೃಷ್ಟಾಂತಿಸುವ ಸಂದರ್ಭಗಳಲ್ಲಿ ಅನುಭವೈಕ ಗಂಡು ಮತ್ತು ಹೆಣ್ಣು (ವಿವಾಹ ಮತ್ತು ಕುಟುಂಬ ಜೀವನ ಎಂಥ ಪರಿಣಾಮಕ್ಕೆ ಈಡುಮಾಡುತ್ತದೆ ಎಂಬುದನ್ನು ಪೂರ್ಣವಾಗಿ ತಿಳಿದಿರುವವರು) ಸಂದರ್ಶಿಸಿ ಪರಸ್ಪರ ಪ್ರೀತಿಸಿ ಅನಂತರ ತಾಯಿ ತಂದೆಗಳು ಸಂಪ್ರದಾಯದ ಪದ್ಧತಿಗನುಸಾರ ವಿವಾಹವನ್ನು ಏರ್ಪಡಿಸುವ ಪ್ರಕಾರಗಳುಂಟು. ಅಂಥ ದಂಪತಿಗಳು ಸಾಮಾನ್ಯವಾಗಿ ಒಂದೇ ರೀತಿಯ ಹಿನ್ನೆಲೆಯಿಂದ ಬಂದವರಾಗಿದ್ದು ಕೆಲವು ಮಹತ್ವದ ಸಮಾನ ಮೌಲ್ಯಗಳನ್ನು ಹೊಂದಿರುತ್ತಾರೆ. ಈ ದಿನಗಳಲ್ಲಿ ಹುಡುಗರು ಮತ್ತು ಹುಡುಗಿಯರು ಶಾಲೆಯಲ್ಲಿ, ಕಾಲೇಜಿನಲ್ಲಿ ಅಥವಾ ಕಾರ್ಯಸೇವೆಗಳಲ್ಲಿ ಭೇಟಿಯಾಗುತ್ತಾರೆ. ಅವರಿಗೆ ದೊರಕಿರುವ ಅತಿ ಹೆಚ್ಚಿನ ಸಾಮಾಜಿಕ ಸ್ವಾತಂತ್ರ್ಯದಿಂದ

ಮದುವೆಯ ಪಾಲುಗಾರನನ್ನಾಗಿ ತಮ್ಮದೇ ಸ್ವಂತ ಆಯ್ಕೆಯನ್ನು ಮಾಡಿಕೊಳ್ಳುತ್ತಾರೆ. ಆದಾಗ್ಯೂ ಕೌಟುಂಬಿಕ ಮತ್ತು ಸಾಮಾಜಿಕ ಮತ್ತು ಧಾರ್ಮಿಕ ಜೀವನದ ಸಮುದಾಯದ ಮಾದರಿಗಳು ಇನ್ನು ಪಟ್ಟು ಹಿಡಿದು ನಿಂತಿರುವುದರಿಂದ ಯುವಕರು ಒಂದೇ ಸಾಮಾಜಿಕ-ಧಾರ್ಮಿಕ ಹಿನ್ನೆಲೆ ಇರುವ ಇತರರನ್ನು ಸಂದರ್ಶಿಸುವ ಸಂಭವವೂ ವಿಶೇಷವಾಗಿ ಉಂಟು.

ಇಂಥ 'ವ್ಯವಸ್ಥಿತ ಪ್ರೇಮ ವಿವಾಹಗಳು' ಹೆಚ್ಚು ಹೆಚ್ಚು ಬೆಳೆಯುತ್ತಿರುವುದು ಸಾಮಾನ್ಯವಾಗಿ ಕಂಡು ಬರುತ್ತಿದೆ. ಅವುಗಳನ್ನು ಪ್ರೋತ್ಸಾಹಿಸಬೇಕಾಗಿದೆ. ಏಕೆಂದರೆ ಅವು ಸಂಪ್ರದಾಯ ಮತ್ತು ಆಧುನಿಕ ಇವೆರಡರ ಆರೋಗ್ಯದಾಯಕ ಒಪ್ಪಂದವಾಗುತ್ತದೆ ಮತ್ತು ಸುಖಮಯ ವಿವಾಹಕ್ಕೆ ನೀಡುವ ಉತ್ತಮ ಗುಣಗಳನ್ನು ರಕ್ಷಿಸಿಡುವ ಪ್ರವೃತ್ತಿಯನ್ನು ಹೊಂದಿವೆ.

3) ತಾಕಿಕೀಕರಣವು ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಪರಂಪರೆಯನ್ನು ಧಾರ್ಮಿಕ ಮತ್ತು ಶಾಸ್ತ್ರೀಯ ಸಂಸ್ಕೃತಿಯನ್ನು ಅಭಿವ್ಯಕ್ತಿಗೊಳಿಸುವ ಭಾವಗಳ ವರ್ಗವನ್ನು ತ್ಯಜಿಸುತ್ತದೆ. ಮತ್ತು ಪ್ರಾಪಂಚಿಕ ಮೂಲ ದೃಷ್ಟಿಯನ್ನು ಅಭಿವ್ಯಕ್ತಿಸುವ ಮತ್ತೊಂದು ರೀತಿಯ ಭಾವಗಳವರ್ಗವನ್ನು ಕೈಗೊಳ್ಳುತ್ತದೆ. ಆದಾಗ್ಯೂ ಲೌಕಿಕವಾಗಿದೆ ಎಂಬ ನೆಪದಲ್ಲಿ ಕೆಲವೊಮ್ಮೆ ತಪ್ಪಾಗಿ, ಆಧ್ಯಾತ್ಮಿಕ ಮತ್ತ ನೈತಿಕ ಮೌಲ್ಯಗಳ ಭಾವನೆ ಕೈ ತಪ್ಪಿ ಹೋಗುತ್ತದೆ.

4) ಭಾರತೀಯ ಸಮಾಜದ ಮತೀಯ ರಚನೆ ಕೂಡ ನಿಧಾನವಾಗಿ ಬದಲಾಗುತ್ತಿದೆ. ಇದು ಅಂತರ ಜಾತೀಯ ವಿವಾಹಗಳ ಮತ್ತು ಸ್ಥಳಗಳ ಹೆಚ್ಚುತ್ತಿರುವ ಸಂಖ್ಯೆಯಲ್ಲಿ ಪ್ರತಿಬಿಂಬಿತವಾಗುತ್ತಿದೆ.

ಈ ವಿವಾಹಗಳು ಎಷ್ಟೋ ಸಲ ಶ್ರಮ ಮತ್ತು ಒತ್ತಡಕ್ಕೆ ಒಳಪಟ್ಟಿರುವುದನ್ನು ಕಾಣಬಹುದು. ಮತ್ತೊಂದು ರೀತಿಯಲ್ಲಿ ಹೊಸದಾಗಿ ಮದುವೆಯಾದವರಲ್ಲಿನ ಹೊಂದಾಣಿಕೆಯಲ್ಲಿ, ಬೇರೆ ರೀತಿಯಾಗಿ ಕಂಡು ಬರುವ ಅತಿ ಮುಖ್ಯ ಅಂಶವೆಂದರೆ, ಇಬ್ಬರೂ ಭಾಗ್ಯಸ್ಥರು ಒಂದೇ ಮತದಿಂದ ಬಂದವರಾಗಿರುವ ಮತ್ತು ಒಂದೇ ರೀತಿಯ ಸಾಮಾಜಿಕ ಪದ್ಧತಿಗಳನ್ನು ಮತ್ತು ಅಭ್ಯಾಸಗಳನ್ನು ಪಡೆದಿರುವ ಅಂಶಗಳು ಸುಸಂಗತಿಯಾಗಿರುವುದು. ಅಂಥ ವಿವಾಹಗಳಿಗೆ ಅವರ ಕುಟುಂಬಗಳಿಂದ ಮತ್ತು ಸಾಮಾಜಿಕ ಪ್ರತಿನಿಗಳಿಂದ ಸಹಾಯ ಅಗತ್ಯವಾಗಿದೆ. ಇದು ಎಷ್ಟೋ ವೇಲೆ ಅವರಿಗೆ ನಿರಾಕೃತವಾಗಿದೆ.

## 10. ಕುಟುಂಬದಲ್ಲಿ ಘರ್ಷಣೆ :

ಸಮುದಾಯ ಪ್ರಕಾರದ ಸಾಮಾಜಕ್ಕು ಸಂಘ ಪ್ರಕಾರದ ಸಮಾಜಕ್ಕು ಮಧ್ಯೆ ಇರುವ ಸಂಘರ್ಷಣದ ಸ್ಥಿತಿ. ಮೊದಲನೆಯದು ಸಂಪ್ರದಾಯ ಶರಣವಾದದ್ದು ಮತ್ತು ಅಧಿಕಾರ ಶ್ರೇಣಿಯದು. ಅಲ್ಲಿ ಮನುಷ್ಯನಿಗೆ ನೆಂಟರಿರುತ್ತಾರೆ. ನೆರೆಹೊರೆಯವರು ಇರುತ್ತಾರೆ. ಅಲ್ಲದೆ ಅವನಿಗೆ ಒಂದು ದೃಢತೆಯ ಭರವಸೆಯಿರುತ್ತದೆ. ಹಾಗೂ ಅವನು ಭ್ರಾತೃಭಾವದ ಸುಖದ ಅಪ್ಯಾಯತೆಯಿಂದ ರಕ್ಷಣೆ ಪಡೆಯುತ್ತಾನೆ.

ಈಗ ಸಮುದಾಯ ಮಾದರಿಯ ಸಮಾಜದಿಂದ ಸಂಘ ಮಾದರಿಯ ಸಮಾಜಕ್ಕೆ ಇರುವ ಸಮಾಜದ ಬದಲಾವಣೆಯ ಪ್ರಮಾಣ ಎಷ್ಟೆಂದರೆ ಒಬ್ಬ ತಾನು ಮುಂಚೆ ಬೆಳೆದ ಪ್ರಪಂಚದಿಂದ ಭಿನ್ನವಾದ ಪ್ರಪಂಚದಲ್ಲಿ ಮುದುಕನಾಗಿ ಬೆಳೆದುಬಿಡುತ್ತಾನೆ. ಆದರೆ ಅದು ಎಷ್ಟು ತೀವ್ರತರ ಅಂದರೆ ಸಾಮಾಜಿಕ ಬದಲಾವಣೆಯ ಪ್ರಮಾಣ. ಬದಲಾವಣೆಯನ್ನು ಬಯಸುವ ಹೊಂದಾಣಿಕೆಯನ್ನು ಸಕಾಲದಲ್ಲಿ ಒದಗಿಸುವಷ್ಟು ವೇಗವಾಗಿ ಅಲ್ಲಿ ಮನುಷ್ಯನ ಕಾಲುಗಳು ಬೆಟ್ಟದಿಂದ ಕೆಳಕ್ಕೆ ಸ್ಪರ್ಧೆಯಿಂದ ಓಡುವ ಗುರುತ್ವಾಕರ್ಷದೊಡನೆ ಸರಿಸಮವಾಗಿ ಹೆಜ್ಜೆ ಇಡಲು ಸಾಧ್ಯವಾಗದಿರುವಂತೆ ಅವನು ಇದ್ದಾನೆ. ವಿವಾಹಗಳಲ್ಲಿ ಮತ್ತು ಕೌಟುಂಬಿಕ ಜೀವನಗಳಲ್ಲಿ ಇರುವ ಅಂತಹ ಬಂದುತ್ವಗಳು ಪೂರ್ಣವಾಗಿಲ್ಲ; ಮಾತ್ರವಲ್ಲ ಆದರೆ ಸತತವಾಗಿ ವ್ಯಕ್ತಿಗಳು ಪಕ್ವವಾದಂತೆಲ್ಲ ಮತ್ತು ಅಭಿವೃದ್ಧಿಯಾದಂತೆಲ್ಲ ಬದಲಾಗುತ್ತಿವೆ. ಹಾಗೂ ಬೆಳೆಯುತ್ತಿದೆ. ಪ್ರತಿಭಟಿಸುವ ತರುಣನಾಗಿ ಬೆಳೆಯುತ್ತಿರುವ ತದನಂತರ ಸ್ವತಂತ್ರ ವಯಸ್ಕನಾಗಿ ಏರುತ್ತಿರುವ ನಿಸ್ಸಹಾಯಕ ಮಗು ಒಂದು ತಿಳುವಳಿಕೆಯನ್ನು ಒತ್ತಾಯದಿಂದ ಬೇಡುತ್ತದೆ, ಆದರೆ ಅದರ ತಂದೆ ತಾಯಿಗಳು ಅದಕ್ಕೆ ಉತ್ತರಿಸಲು ಎಷ್ಟೋ ವೇಳೆ ಸಿದ್ಧವಾಗಿರುವುದಿಲ್ಲ.

## 11. ಅನುದಾನ ಮತ್ತು ಅವಶ್ಯ ಸಂಧಾನ :

ಭಾರತ ತೀವ್ರಗತಿಯಲ್ಲಿ ಪರಿವರ್ತನೆಯಾಗುತ್ತಿದೆ. ವಿಜ್ಞಾನ ಮತ್ತು ಶಿಕ್ಷಣಗಳ ಅಭಿವೃದ್ಧಿಗಳಿಂದ ನಾವು ನಗರಪ್ರದೇಶಗಳಲ್ಲಿ ಕೈಗಾರಿಕಾ ಮತ್ತು ತಾಂತ್ರಿಕ ಮುನ್ನಡೆಗಳನ್ನು ಎದುರಿಸುತ್ತಿದ್ದೇವೆ. ಅದೇ ಕಾಲದಲ್ಲಿ ಉತ್ತಮ ಪ್ರಾಮಾಣಿಕ ಬದುಕಿನ ಮಟ್ಟವನ್ನು ಹುಡುಗಲು ಉತ್ಸಾಹದಿಂದ ತುಂಬಿದ ಅಂಕಾಂಕ್ಷೆಯೂ ನಮ್ಮಲ್ಲಿ ಬೆಳೆಯುತ್ತಿದೆ. ಅದು ಕೆಲವು

ಅದೃಷ್ಟವಂತರಿಗೆ ಅನ್ವಯಿಸುವಂತೆ ಮಾತ್ರವಲ್ಲ ಭಾರತದ ಎಲ್ಲಾ ಕುಟುಂಬಗಳಿಗೂ ಕೂಡ ಅನ್ವಯಿಸುತ್ತಿದೆ. ಆದರೆ ನಾವು ವೈಜ್ಞಾನಿಕ ಕೈಗಾರಿಕೆ ಮತ್ತು ತಾಂತ್ರಿಕ ಅಭಿವೃದ್ಧಿಗಳ ಪ್ರಯೋಜನಗಳನ್ನು ನಮ್ಮ ಸಾಮಾಜಿಕ ರಚನೆಗಳನ್ನು ಬದುಕಿನ ಕೌಟುಂಬಿಕ ಮಾದರಿಗಳನ್ನು ಹೊಸ ಅಭಿವೃದ್ಧಿಯಿಂದ ಮೂಡಿಬಂದ ಹೊಸ ಬದಲಾವಣೆಗಳಿಗೆ ಮತ್ತು ಸವಾಲುಗಳಿಗೆ ಹೊಂದಾಣಿಕೆ ಮಾಡಿಕೊಂಡ ಹೊರತು ಅನುಭವಿಸುವಂತಿಲ್ಲ.

ಅಭಿವೃದ್ಧಿಯು ಕುಟುಂಬದ ಸದಸ್ಯರಿಗೆ-ಗಂಡ ಮತ್ತು ಹೆಂಡತಿ, ತಂದೆ, ತಾಯಿ, ಮಕ್ಕಳು- ಹೊಸ ಅವಕಾಶಗಳನ್ನು ಮತ್ತು ನೂತನ ಮಾರ್ಗಗಗಳನ್ನು ತೆರೆದಿಟ್ಟದೆ., ಆದರೆ ಅದು ಹೊಸ ಸಮಸ್ಯೆಗಳನ್ನು ತಂದಿದೆ ಮತ್ತು ಕೆಲವು ಪರಂಪರಾಗತ ಕೌಟುಂಬಿಕ ಹೆಚ್ಚಳಗಳನ್ನು ಮತ್ತು ಮೌಲ್ಯಗಳನ್ನು ತಲೆಕೆಳಗು ಮಾಡಿದೆ. ಕೌಟುಂಬಿಕ ಸಂಸ್ಥೆ ಭಾರತ ಸಮಾಜದ ತಿರುಳಾಗಿಯೇ ಇನ್ನು ಉಳಿದಿದೆ. ಮತ್ತು ಸಾಮಾನ್ಯ ಸಮೀರಣದ ಒಡೆಯುವಿಕೆಯನ್ನು ಅನುಭವಕ್ಕೆ ತಂದಿಲ್ಲ. ಅದಾಗ್ಯೂ ಈ ಅಂಶ, ವಿಶೇಷವಾಗಿ ಕೈಗಾರಿಕಾ ನಗರ ಪ್ರದೇಶಗಳಲ್ಲಿನ ಸಾಕಷ್ಟು ಸಂಖ್ಯೆಯ, ಬಿಡಿ ಬಿಡಿ ಕೌಟುಂಬಿಕ ಸೋಲುಗಳನ್ನು ಕುರಿತ ಮತ್ತೊಂದು ಅಂಶವನ್ನು ಅಸ್ಫೋಟಗೊಳಿಸಬಾರದು.

ಭಾರತೀಯ ಗೃಹವನ್ನು ಮಾನವನ ಸಂಬಂಧದ ಶ್ರಮ ಸ್ವರೂಪದ ದೃಷ್ಟಿಯಿಂದ ಇನ್ನು ಹೆಚ್ಚಾಗಿ ಬಿರುಕುಬಿಟ್ಟು ಒಡೆಯುವುದನ್ನು ತಡೆಹಿಡಿಯುವದಕ್ಕೆ, ನಾವು ಹೊಸ ಅವಕಾಶಗಳನ್ನು ಮತ್ತು ಕರ್ತವ್ಯಗಳನ್ನು ಹಾಗೂ ಹೊಸ ಅವಶ್ಯಕತೆಗಳನ್ನು, ಜೊತೆಗೆ ಕುಟುಂಬಗಳನ್ನು ಎದುರಿಸುತ್ತಿರುವ ಸಮಸ್ಯೆಗಳನ್ನು ಅಭ್ಯಾಸ ಮಾಡುವುದು ತೀರ ಅನಿವಾರ್ಯ. 1900ರ ಬದಲಾವಣೆಗಳನ್ನು ಮತ್ತು ಸವಾಲುಗಳನ್ನು ಎದುರಿಸಲು ಹೇಗೆ ಕುಟುಂಬದ ಮತ್ತು ಸಮಾಜದ ಮಾದರಿಗಳನ್ನು ನವೀಕರಸಿಬೇಕು, ಎಂಬುದನ್ನು ಕಂಡುಹಿಡಿಯಲೇ ಬೇಕಾಗಿದೆ. ಹಾಗೆ ನಾವು ನಮ್ಮ ಭಾರತದಲ್ಲಿ ಕುಟುಂಬದ ಮತ್ತು ಸಮಾಜದ ಬದುಕಿನ ಗುಣಮಟ್ಟವನ್ನು ಸುಧಾರಿಸಬಹುದು.

ಕುಟುಂಬಗಳು ಜೀವಂತ ಸನ್ನಿವೇಶಗಳನ್ನು ಎದುರಿಸುವುದನ್ನು ಕಲಿತುಕೊಳ್ಳಲು ಮತ್ತು ತಮ್ಮ ಸ್ವಂತ ಸಂಪನ್ಮೂಲಗಳನ್ನು ವೃದ್ಧಿಪಡಿಸಿಕೊಳ್ಳಲು ಅವುಗಳ ಬೆಳವಣಿಗೆಗೆ ಮತ್ತು ಪೂರ್ಣಸಾಧನೆಗೆ ಬೇಕಾದ ಅವಕಾಶಗಳು ಸಾಕಷ್ಟಿವೆ. ಕೌಟುಂಬಿಕ ಜೀವನ ಶಿಕ್ಷಣದ

ಸಮೀಕೃತ ಕಾರ್ಯ ಕ್ರಮದ ಮೂಲಕ ಮತ್ತು ಕೌಟುಂಬಿಕ ಕಲ್ಯಾಣ ಸೇವೆಗಳ ಮೂಲಕ ಕುಟುಂಬಗಳು ತಮ್ಮ ತಮ್ಮ ಕಾಲಮೇಲೆ ತಾವು ನಿಂತಿಕೊಳ್ಳುವುದನ್ನು ಕಲಿತು ಕೊಳ್ಳಬಹುದು ಮತ್ತು ಬದಲಾಗುತ್ತಿರುವ ಕಾಲಗಳಲ್ಲಿ ತಮ್ಮ ಅಗತ್ಯಗಳನ್ನು ಪೂರೈಸುವ ಶಕ್ತಿಯನ್ನು ರೂಢಿಸಿಕೊಳ್ಳಬಹುದು. ಕ್ರಮವಾಗಿ ಕುಟುಂಬ ಸಮಾಜದ ಪರಿವರ್ತನೆಗೆ ಹೊಣೆಗಾರಿಕೆಯನ್ನು ವಹಿಸಿಕೊಳ್ಳುತ್ತದೆ. ಕುಟುಂಬವನ್ನು ಒಂದು ಬಲಿಷ್ಠವೂ ಪೂರ್ಣವೂ ಮತ್ತು ಸಮಾಜಕ್ಕೆ ಅಂಶದಾನ ಮಾಡುವ ಘಟಕವಾಗಿ ಇಟ್ಟುಕೊಳ್ಳಬೇಕಾದರೆ ಸಮುದಾಯಗಳ ಪ್ರಯತ್ನಗಳ ಗುರಿ ಸ್ವಶಕ್ತ ಕುಟುಂಬವೇ ಹೊರತು ಬೇರೆ ಅಲ್ಲ.

## ಕುಟುಂಬದ ಸೇವೆಯಲ್ಲಿ ಸಮಾಜ

ಕುಟುಂಬದ ಮತ್ತು ಸಮಾಜದ ನಡುವೆ ನಿಕಟ ಸಂಪರ್ಕ ಇರುವಂತೆ ಕುಟುಂಬವು ಸಮಾಜದಲ್ಲಿ ಮತ್ತು ಅದರ ಬೆಳವಣಿಗೆಯಲ್ಲಿ ಭಾಗವಹಿಸಬೇಕು ಮತ್ತು ಅದಕ್ಕೆ ತೆರೆದಿಟ್ಟುಕೊಂಡಿರಬೇಕು ಎಂಬುದನ್ನು ಬೇಡುತ್ತದೆ. ಹಾಗೆಯೇ ಅದು ಕುಟುಂಬವನ್ನು ಗೌರವಿಸುವ ಮತ್ತು ಪೋಷಿಸುವ ತನ್ನ ಮೂಲಭೂತ ಕರ್ತವ್ಯದಲ್ಲಿ ಎಂದೂ ತಪ್ಪಬಾರದು ಎಂಬುದನ್ನು ಬಯಸುತ್ತದೆ.

ಹೀಗೆ ಕುಟುಂಬವು ಸಾಮಾಜಿಕ ರಚನೆಯಲ್ಲಿ ಪ್ರಪ್ರಥಮ ಕೋಶ ಪ್ರಪ್ರಥಮ ಸಾಮಾಜಿಕ ಘಟಕ; ಅದು ಅನಿವಾರ್ಯ ಅದಿಲ್ಲದೆ, ಮಕ್ಕಳೂ ಇಲ್ಲ, ಹೆಂಗಸರೂ ಇಲ್ಲ, ಮಾನವ ಸಮಾಜವೂ ಇಲ್ಲ.

ವಿವಾಹ ಮತ್ತು ಕುಟುಂಬಗಳು ಒಂದು ಒಕ್ಕೂಟ. ಅದಕ್ಕೆ ಬೇರೆ ಯಾವ ಬದಲಿಯೂ ಇಲ್ಲ. ಆ ಸ್ಥಳವನ್ನು ಮತ್ತಾವುದೂ ಅಕ್ರಮಿಸುವಂತಿಲ್ಲ. ನೀವು ಹೀಗೂ ಹೇಳಬಹುದು. ''ಕುಟುಂಬಗಳು ಇರುವ ಹಾಗೆಯೇ ಮನುಷ್ಯ ಜಾತಿ ಕೂಡ'' ಎಂದು.

## ವರ್ಗ ಚಟುವಟಿಕೆ

ವಿವಾದ : ಚರ್ಚೆ

1) ಈ ಕೆಳಗಿನವುಗಳಿಗೆ ಕುಟುಂಬ ಮಾದರಿಯ ಉತ್ತಮ ಪ್ರಕಾರಗಳು ಯಾವುವು ?

ಎ) ನಗರ ಪ್ರದೇಶಗಳು.

ಬಿ) ಗ್ರಾಮೀಣ ಪ್ರದೇಶಗಳು ಮತ್ತು 'ಏತಕ್ಕೆ.'

2) ಕುಟುಂಬದಲ್ಲಿ ಒಳ್ಳೆಯ ಮತ್ತು ಕೆಟ್ಟ ಪರಂಪರಾಗತ ಮೌಲ್ಯಗಳು ಯಾವುವು ?

3) ನನ್ನ ಕುಟುಂಬ ನನಗೇನು ಅರ್ಥಕೊಡುತ್ತದೆ.

4) ಇಂದು ಕುಟುಂಬ ಒಳಪಟ್ಟಿರುವ ಒತ್ತಡಗಳು ಯಾವುವು.



ಅಧ್ಯಾಯ-೩

# ವಿದ್ಯಾರ್ಥಿ ಮತ್ತು ಅವನ/ಅವಳ ಕುಟುಂಬ

ವಿದ್ಯಾರ್ಥಿಬಿರುಗಾಳಿ ಭೂಮಿಯ ಎಲ್ಲಾ ಮೂಲೆಗಳಲ್ಲೂ ಬಿರುಸಾಗಿದೆ. ಅದರ ಸಮಾಧಾನದ ಸೂಚನೆಗಳಂತೂ ಕಂಡು ಬರುತ್ತಲೇ ಇಲ್ಲ. ಯಾವುದೇ ಒಂದು ಗುಂಪು ಇಂದಿನ '30ರ ಒಳಗಿನ' ವರನ್ನು ಇಷ್ಟು ತೀವ್ರವಾಗಿ ವಿಮರ್ಶಿಸಿಲ್ಲ ಅಥವಾ ವಿಶ್ಲೇಷಿಸಿಸಿಲ್ಲ.

ವಿದ್ಯಾರ್ಥಿಗಳ ಈ ಸ್ಪಷ್ಟ ಅಶಾಂತಿಯ ಕೆಳಗೆ ಒಂದು ಮಾರ್ಗದರ್ಶನಕ್ಕೆ ಶುದ್ಧ ಮನವಿಯೊಂದು ಅಡಗಿಯೇ ಇದೆ. ಅದು ಅಭಿವ್ಯಕ್ತವಾದಿದ್ದರೂ ಅದರ ಸಂವೇದನೆಯನ್ನು ಅನುಭವಿಸಲಾಗುತ್ತಿದೆ. ಅದಕ್ಕೆ ಕಾರಣ ಅದನ್ನು ತಪ್ಪಾಗಿ ತಿಳಿದುಕೊಳ್ಳುವ ಭಯ. ಮನೆಯಲ್ಲಿನ ಮತ್ತು ಮನೆಯ ಹೊರಗಡೆಯ ಬಿಕ್ಕಟ್ಟು ಅನೇಕ ತರುಣರನ್ನು ಅವರಿಗಿಂತ ವಯಸ್ಸಾದವರೊಡನೆ ಹೋಲಿಸಿದರೆ ಭ್ರಮನಿರಸನದ ಕಡೆಗೆ ಎಳೆದೊಯ್ಯುತ್ತಿದೆ. ಈ ಭ್ರಮೆ ವಯಸ್ಕರ ಪ್ರಪಂಚದ ಜೊತೆಗೆ ಸೇರಿದ ಈ ಭ್ರಮನಿರಸನದ ಬಹುಭಾಗ ವಯಸ್ಕರ ಅನೇಕ ವೇಳೆ ನ್ಯಾಯವಾದದ್ದೆಂದು ನಾವು ಒಪ್ಪಿಕೊಳ್ಳಲೇ ಬೇಕಾಗುತ್ತದೆ.

## 1. ನ್ಯಾಯದತ್ತ ಶಿಕ್ಷಣ

ಅವುಗಳಿಗೆ ಅವುಗಳ ಜೀವನದ ಮೊದಲ ವರ್ಷದಿಂದಲೇ ಅವರವರ ಮನೆಗಳಲ್ಲಿ ನ್ಯಾಯದ ಸ್ಫೂರ್ತಿಯನ್ನು ವಿಶೇಷವಾಗಿ ಹುಡುಗಿಯರಲ್ಲಿ ಮತ್ತು ಅವರಿಗಿಂತ ನತದೃಷ್ಟರಾದ ವರಲ್ಲಿ ಒಳಹೋಗುವಂತೆ ತುಂಬಬೇಕು.

ದುರದೃಷ್ಟವಶಾತ್ ಹಲವಾರು ಮಧ್ಯಮ ತರಗತಿಯ ಮತ್ತು ಶ್ರೀಮಂತವರ್ಗದ ಕುಟುಂಬಗಳಲ್ಲಿ, ಕುಟುಂಬದ ಮಕ್ಕಳು ಯಾವುದೇ ಮನೆಗೆಲಸವನ್ನು ಮಾಡಬಾರದು ಎಂಬ ಭಾವನೆ ಎಂದಿಗೂ ಸಲುವಳಿಯಲ್ಲಿದೆ. ಏಕೆಂದರೆ ಈ ಉದ್ದೇಶಕ್ಕಾಗಿ ಮನೆಗೆಲಸದವಳನ್ನು ಕೆಲಸಕ್ಕೆ ಸೇರಿಸಿಕೊಳ್ಳಲಾಗುತ್ತದೆ ಎಂಬ ಕಾರಣದಿಂದ ಇದರಿಂದ ಆಗುವ ಪರಿಣಾಮವೆಂದರೆ,

ಮಕ್ಕಳಿಗೆ ಒತ್ತಡ, ಶ್ರಮಗಳ ಅನುಭವ ತಪ್ಪಿಹೋಗುತ್ತದೆ. ಅಷ್ಟೇ ಅಲ್ಲ ಅವರ ಬದುಕಿನ ಆರಂಭದಿಂದಲೇ, ಅವರ ಮನೆಯಲ್ಲೇ ಮಾನವ ಕರ್ಮದ ಗೌರವ ಮತ್ತು ಮೌಲ್ಯದ ಅನುಭವವೂ ಅವರಿಗೆ ಕಣ್ಮರೆಯಾಗಿ ಬಿಡುತ್ತದೆ.

''ಕೆಲಸಕ್ಕೆ ಸಂಬಂಧಸಿದಂತೆ ಗಂಡು ಮಕ್ಕಳನ್ನು ಮತ್ತು ಹೆಣ್ಣುಮಕ್ಕಳನ್ನು ಸಮಪಾಳಿಯಲ್ಲಿ ನೋಡಿಕೊಳ್ಳಬೇಕು. ಇದು ಒಂದು ರೀತಿಯ ದುಡಿಮೆಯ ಸಮಾನತೆಯ ಭಾವವನ್ನು ತಂದುಕೊಡುವುದಲ್ಲದೆ ಲೈಂಗಿಕ ಭೇದಭಾವವನ್ನು ಕಡಿಮೆ ಮಾಡುತ್ತದೆ''. ಕುಟುಂಬದ ಮಕ್ಕಳು ಮನೆಗೆಲಸದಲ್ಲಿ ಭಾಗವಹಿಸಿದಾಗ ಮನೆ ಆಳುಗಳು ಅವರವರೇ ಸಾಮಾನ್ಯ ಕೌಟುಂಬಿಕ ಜೀವನವನ್ನು ನಡೆಸಲು ಅವರಿಗೆ ಸಾಧ್ಯವಾಗುವಂತೆ ಮಾಡಬಹುದು. ಅಲ್ಲದೇ ವಿರಾಮವನ್ನು, ಮನೋರಂಜನೆಯನ್ನು ಆನಂದಿಸುವಂತೆ ಸಹಾಯ ಮಾಡಬಲ್ಲರು. ಮಕ್ಕಳನ್ನು ಕೆಲಸಕ್ಕೆ ಸೇರಿಸಿಕೊಳ್ಳಲೇಬಾರದು.

ಆದರೆ ಎಲ್ಲಾ ರೀತಿಯಲ್ಲಿ, ತಮ್ಮ ಕೈಯಲ್ಲಿ ಸಾಧ್ಯವಾಗುವಷ್ಟರಮಟ್ಟಿಗೆ, ಕಾಲೇಜು ವಿದ್ಯಾರ್ಥಿಗಳು ಶುದ್ಧ ಮತ್ತು ವಾಸ್ತವಿಕ ಸಮಾಜಿಕ ಸಂಬಂಧವನ್ನು ಬೆಳೆಸಿಕೊಳ್ಳಲು ಅವರಿಗೆ ಸಹಾಯ ಮಾಡಲೇಬೇಕು. ಇದರಿಂದ ಅವರು ಕ್ರಮೇಣ ಸಂಪತ್ತು ಮತ್ತು ಇತರ ಭೌತಿಕ ಸಂಪನ್ಮೂಲಗಳು ತಮ್ಮ ಆಜನ್ಮ ಹಕ್ಕುಗಳಲ್ಲ, ದೇವರ ಉಡುಗೊರೆಯಿಂದ ಬರುವಂಥವು ಎಂಬ ಅಂಶವನ್ನು ತಿಳಿದುಕೊಳ್ಳುವಂತೆ ಮಾಡುತ್ತದೆ. ಆಗ ಅದು ಇತರರ ಹೆಗಲ ಮೇಲೆ ಹೆಚ್ಚಿನ ಹೊಣೆಗಾರಿಕೆಯನ್ನು ಹೊರಿಸುತ್ತದೆ.

ಶಿಕ್ಷಣವನ್ನು ಪಡೆಯುವುದು ಒಂದು ಹಕ್ಕನ್ನು ಪಡೆದಂತೆ ಎಂಬುದನ್ನು ಅವರು ಅರಿಯಬೇಕು. ವಿವೇಕಾನಂದರು ಹೇಳಿದಂತೆ ಭಾರತದಲ್ಲಿ ವಿದ್ಯೆ ಕಲಿತವರು ತಮಗೆ ವಿದ್ಯೆ ಕಲಿಸಲು ಸಹಾಯ ಮಾಡಿದ ಕೋಟಿಗಟ್ಟಲೆ ಅವಿದ್ಯಾವಂತರು ತಮ್ಮ ಶ್ರಮದಿಂದ ಸಹಾಯ ಮಾಡಿದ್ದಾರೆ ಎಂಬುದನ್ನು ಅರ್ಥ ಮಾಡಿಕೊಂಡು ಅವರಿಗೆ ಕೃತಜ್ಞರಾಗಿರಬೇಕೆಂಬುದನ್ನು ಮರೆಯಬಾರದು. (ಜಿ.ಎನ್.ಪಿ.ಗ್ರಾಮೀಣ ಪ್ರದೇಶ ಶೇಕಡ 70ರಷ್ಟು ಆರೋಗ್ಯ ಶಿಕ್ಷಣದ ಕಲ್ಯಾಣಸೇವೆ ಪಡೆದರೆ ನಗರ ಪ್ರದೇಶದವರು ಶೇಕಡಾ 70ರಷ್ಟು ಸೌಲಭ್ಯಗಳನ್ನು ಪಡೆಯುತ್ತಾರೆ).

ತಾಯಿ ತಂದೆಗಳು ತಮ್ಮ ಮಕ್ಕಳು ಇತರರ ಮಟ್ಟಕ್ಕೆ ತಲುಪಿಸಲು ಮತ್ತು ಎಲ್ಲೇ

ಅನ್ಯಾಯ ನೆಲೆ ನಿಂತಿರುತ್ತದೋ ಅಂಥ ಸನ್ನಿವೇಶಗಳಲ್ಲಿ ಸತ್ಯ ಪೂರ್ಣ ಸಂಬಂಧಗಳು ಎದುರಿಸಲು ಸಿದ್ಧವಾಗುವಂತೆ ಅವರಿಗೆ ಪ್ರೋತ್ಸಾಹ ನೀಡಿದಾಗ ಇದನ್ನು ಸಾಧಿಸಬಹುದು.

ಈ ಸಂದೇಶವನ್ನು, ಕಾಲೇಜಿನಲ್ಲಿ ಸಿಬ್ಬಂದಿ, ವ್ಯವಸ್ಥಾಪನೆ, ಮತ್ತು ಸೇವಕರು ಇವರ ಸಂಬಂಧಗಳ ಮತ್ತು ಸೇವೆಗಳ ಉದಾಹರಣೆಯಿಂದ ಬಲಪಡಿಸಬಹುದು. ನೆನಪಿಡಿ ''ಕರುಣೆ ಒಂದು ಭಾಷೆ ಅದನ್ನು ಕಿವುಡನೂ ಕೇಳಬಲ್ಲನು, ಕುರುಡನೂ ಕಾಣಬಲ್ಲನು, ಬಡವನು ಅನುಭವಿಸಬಲ್ಲನು''.

## 2. ತಂದೆ ತಾಯಿಗಳ ಆರೋಗ್ಯದಾಯಕ ಮನೋವೃತ್ತಿಗಳಿಗೆ ವಿದ್ಯಾರ್ಥಿಗಳ ಹಕ್ಕು :

ಆರೋಗ್ಯಕರ ಆವೇಶದ ಬದುಕಿಗೆ ಅಗತ್ಯವಾದ ಬೇಡಿಕೆಗಳು ಒತ್ತಟ್ಟಿಗಿರಲಿ, ವಿದ್ಯಾರ್ಥಿಗೆ ಅವನು ಅಥವಾ ಅವಳು ವಯಸ್ಕರ ಬದುಕಿನ ಗಂಭೀರಕಾರ್ಯಕ್ಕೆ ಸೂಕ್ತವಾಗಿ ಸಜ್ಜಾಗಬೇಕಾದರೆ, ತಂದೆ ತಾಯಿಗಳ ಆರೋಗ್ಯಕರ ಮನೋವೃತ್ತಿಗಳಿಗೆ, ಹಕ್ಕು ಇರುತ್ತದೆ. ತಾಯಿ ತಂದೆಗಳು ಮೂಲ ಶಿಕ್ಷಕರು ಮತ್ತು ಬದುಕಿನ ಕಲೆಯ ಶಿಕ್ಷಣವು ಹುಟ್ಟಿನಿಂದಲೇ ಆರಂಭವಾಗುತ್ತದೆ ಎಂಬುದನ್ನು ಈ ಸಂದರ್ಭದಲ್ಲಿ ಒತ್ತಿ ಹೇಳಲೇಬೇಕು.

ಒಬ್ಬ ವಿದ್ಯಾರ್ಥಿ ಶಾಲೆಗೆ ಹೋಗುವ ಹಂತದಲ್ಲಿರುವಾಗ ಅವನ/ ಅವಳ ವ್ಯಕ್ತಿತ್ವ ಆ ವೇಳೆಗಾಗಲೇ ನಿರ್ಧಾರವಾಗಿ ಬಿಟ್ಟಿರುತ್ತದೆ ಎಂದು ತಿಳಿದು ಆ ಅಂಶಗಳನ್ನು ಸ್ವೀಕರಿಸಲು ಇಷ್ಟ ಪಟ್ಟಾಗ ಮಾತ್ರ ಈ ವಿಷಯದ ಪ್ರಾಮುಖ್ಯವನ್ನು ಆವಾಗ ಮೆಚ್ಚಬಹುದು.

ನೆನಪಿಡಿ :

ಮಗು ವಿಮರ್ಶೆಯೊಡನೆ ಬದುಕಿದರೆ
ಅವನು ದೂಷಿಸುವುದನ್ನು ಕಲಿಯುತ್ತಾನೆ.

ಮಗು ವಿರೋಧಗಳೊಡನೆ ಬದುಕಿದರೆ
ಅವನು ಹೋರಾಡಲು ಕಲಿಯುತ್ತಾನೆ.

ಮಗು ಪರಿಹಾಸ್ಯಗಳೊಡನೆ ಬದುಕಿದರೆ







ಅವನು ಲಜ್ಜೆಪಡಲು ಕಲಿಯುತ್ತಾನೆ.

ಮಗು ಅವಮಾನದೊಡನೆ ಬದುಕಿದರೆ

ಅವನು ಅಪರಾಧ ಪ್ರಜ್ಞೆಯನ್ನು ಕಲಿಯುತ್ತಾನೆ.

ಮಗು ಪ್ರೋತ್ಸಾಹದೊಡನೆ ಬದುಕಿದರೆ

ಅವನು ಭರವಸೆಯಿಂದಿರಲು ಕಲಿಯುತ್ತಾನೆ.

ಮಗು ಹೊಗಳಿಕೆಯಿಂದ ಬದುಕಿದರೆ

ಅವನು ಶ್ಲಾಘಿಸುವುದನ್ನು ಕಲಿಯುತ್ತಾನೆ.

ಮಗು ನಿಷ್ಪಕ್ಷಪಾತತ್ವದೊಡನೆ ಬದುಕಿದರೆ

ಅವನು ನ್ಯಾಯವನ್ನು ಕಲಿಯುತ್ತಾನೆ.

ಮಗು ಭದ್ರತೆಯೊಡನೆ ಬದುಕಿದರೆ

ಅವನು ನಂಬಿಕೆಯಿಡುವುದನ್ನು ಕಲಿಯುತ್ತಾನೆ.

ಮಗು ಅನುಮೋದನೆಯೊಡನೆ ಬದುಕಿದರೆ

ಅವನು ತನ್ನನ್ನು ತಾನೇ ಇಷ್ಟಪಡುವುದನ್ನು ಕಲಿಯುತ್ತಾನೆ.

ಮಗು ಸ್ವೀಕರಣೆ ಮತ್ತು ಮತ್ತು ಸ್ನೇಹತನದೊಡನೆ ಬದುಕಿದರೆ

ಅವನು ವಿಶ್ವದಲ್ಲಿ ಪ್ರೀತಿಯನ್ನು ಕಾಣಲು ಕಲಿಯುತ್ತಾನೆ.

## 3. ತಲೆಮಾರು ಅಂತರ

''ಸೇತುವೆಗಳನ್ನು ಕಟ್ಟಿ ಗೋಡೆಗಳನಲ್ಲ''

ಕೌಟುಂಬಿಕ ಪರಿಸ್ಥಿತಿಗಳು ಅನೇಕವಾಗಿವೆ. ಅವುಗಳಲ್ಲಿ ವಿದ್ಯಾರ್ಥಿಯನ್ನು ಜನ ಕೆಲವೊಮ್ಮೆ ಪಕ್ವವಾದ ವಯಸ್ಕನಂತೆ ವ್ಯವಹರಿಸುತ್ತಾರೆ ಮತ್ತು ಕೆಲವು ಸಲ ಮಗುವಿನಂತೆ ಕಾಣುತ್ತಾರೆ. ಅವನು ಅಥವಾ ಅವಳು ಪ್ರೌಢ ವಿಜ್ಞಾನವನ್ನು ಮತ್ತು ಗಣಿತವನ್ನು ತೆಗೆದು

ಕೊಂಡಿರಬಹುದು. ಅವನು ಅಥವಾ ಅವಳು ಬ್ಯಾಂಕಿನಲ್ಲಿ ಖಾತೆ ತೆರೆದಿರಬಹುದು. ಅವನು ಅಥವಾ ಅವಳು ಕುಟುಂಬದ ಕಾರನ್ನು ಉಪಯೋಗಿಸಲು ಅಥವಾ ಅವರಿಗೆ ಒಂದು ಸ್ಕೂಟರನ್ನು ಉಪಯೋಗಿಸಲು ಅನುಮತಿ ಕೊಡಬಹುದು.

ಆದರೆ, ಅದೇ ಹುಡುಗ ಅಥವಾ ಹುಡುಗಿ ಮತ ಚಲಾಯಿಸುವಂತಿಲ್ಲ, ಉದ್ಯೋಗ ಪಡೆಯುವಂತಿಲ್ಲ. ಅವರಿಗೆ 21(18) ವರ್ಷ ತುಂಬುವವರೆಗೆ ಅವರು ಅವರ ತಂದೆ ತಾಯಿಗಳ ಕಾನೂನಿನ ನಿಯಂತ್ರಣದಲ್ಲಿರುತ್ತಾರೆ. ಅಷ್ಟೇ ಅಲ್ಲದೆ. ಇನ್ನೂ ಆಚೆಗೆ ತಮ್ಮ ತಂದೆ ತಾಯಿಗಳನ್ನು ಅವಲಂಬಿಸಿಯೇ ಇರಬೇಕಾಗುತ್ತದೆ. ಏಕೆಂದರೆ ಅವರ ಪ್ರೌಢ ವಿದ್ಯಾಭ್ಯಾಸವನ್ನು ಕುರಿತು ಅಗತ್ಯತೆಗಾಗಿ.

ಹಳೆಯ ಮತ್ತು ತರುಣ ತಲೆಮಾರುಗಳ ನಡುವೆ ಅತಿ ವಿಶಾಲವಾದ ಭಿನ್ನತೆಗಳಿರುವುದು ಸತ್ಯ. ನಮ್ಮ ಸಮಾಜ ಹಳೆಯದಾಗುತ್ತಾ ಅದು ವಯಸ್ಸಿಗೆ ಮತ್ತು ಪ್ರಕೃತಿಗೆ ಸಂಬಂಧಪಟ್ಟಂತೆ ಸಾಂಪ್ರದಾಯಕ ಅಭಿರುಚಿಗಳನ್ನು ಬೆಳೆಸಿಕೊಳ್ಳುತ್ತಾ ಹೋಗುತ್ತದೆ. ಅದು ಕಲೆಯ ಮತ್ತು ಬೌದ್ಧಿಕತೆಯ ಬದುಕಿನ ಕಡೆಗೆ ಹೆಚ್ಚು ಗಮನ ಹರಿಸುತ್ತದೆ. ಆದರೆ ಅದು ಯುವ ಜನ ಸಮಾಜಕ್ಕೆ ಸೇರಿದಂತೆ ಅಲ್ಲಿನ ಸಂದರ್ಭವೇ ಬೇರೆಯಾಗಿರುವುದರಿಂದ ಈ ಜನಾಂಗ ಪ್ರಥಮತ: ದೇಹ ಸೌಂದರ್ಯ, ಶಕ್ತಿ ಮತ್ತು ಹುರುಪಗಳಲ್ಲಿ ಬಹುಶಃ ಹೆಚ್ಚಿನ ಆಸಕ್ತಿಯನ್ನು ಹೊಂದಿರುವುದು ಸಾಮಾನ್ಯ.

ತರುಣ ವಿದ್ಯಾರ್ಥಿಗಳು ತಮ್ಮ ಮತ್ತು ಆ ಹಿರಿಯ ಬಹು ಸಂಖ್ಯೆಯ ಜನದ ಅಭಿರುಚಿಗಳ ವ್ಯತ್ಯಾಸಗಳನ್ನು ಗುರುತಿಸುತ್ತಾರೆ. ಅದರ ಪರಿಣಾಮವಾಗಿ ಅವರು ತಮ್ಮ ಕುಟುಂಬದಿಂದ ಪರಭಾರೆ ಮಾಡಲ್ಪಟ್ಟವರಂತೆ ಭಾವಿಸುತ್ತಾರೆ. ಕುಟುಂಬದಲ್ಲಿನ ವಿದ್ಯಾರ್ಥಿಯ ಸ್ಥಿತಿ ತೀಕ್ಷ್ಣವಾಗಿ ಬದಲಾವಣೆ ಹೊಂದಿದೆ.

ನಿಧಾನವಾಗಿ ಬದಲಾಗುತ್ತಿರುವ ಸಮಾಜದಲ್ಲಿ ಕುಟುಂಬದ ಹಿರಿಯ ಸದಸ್ಯರು ತರುಣ ಸದಸ್ಯರನ್ನು ಅರ್ಥ ಮಾಡಿಕೊಳ್ಳಬಲ್ಲರು, ತಮ್ಮ ಕುಟುಂಬದಲ್ಲಿ ನಡೆದ ತಮ್ಮ ವಿದ್ಯಾರ್ಥಿಸ್ಥಿತಿಯನ್ನು ಅನುಭವಗಳನ್ನು ಮೆಲುಕು ಹಾಕುವುದರ ಮೂಲಕ. ಆದರೆ ಇಂದಿನ ವಿದ್ಯಾರ್ಥಿ 'ಸ್ಕಿಜೊ ಫ್ರೆನಿಕ್' ಬದುಕನ್ನು ಬದುಕುತ್ತಾನೆ. ಸಂಪ್ರದಾಯಗಳನ್ನು, ಅಷ್ಟೆ ಅಲಲ್ಲ: ಧಾರ್ಮಿಕ ಆಚರಣೆಗಳನ್ನು ತಿರಸ್ಕರಿಸಲು ಸಿದ್ಧನಾಗಿ ಆ ಸ್ಥಳದಲ್ಲಿ ಸಹನೆ ತಾಳುವ ಅಥವಾ

ಬದಲಾಯಿಸಲು ಯುಕ್ತವಾದ ಯಾವುದೇ ವಸ್ತು ಅಥವಾ ಭಾವನೆ ಇರುವುದನ್ನು ಅವನು ಕಾಣುವುದಿಲ್ಲ. ಅದು ಶೂನ್ಯದಲ್ಲಿ ನಿಂತು ಹೋಗುತ್ತದೆ. ಆದರೆ ಅವನ ತಂದೆ ತಾಯಿಗಳು ಅವನ ಶಿಕ್ಷಕರು ಆಗ ನಿಸ್ಸಹಾಯಕರಾಗಿ ಕಣ್ಣು ಕಣ್ಣು ಬಿಡುತ್ತಿರುತ್ತಾರೆ. ಅವನ ಮನೆಯಲ್ಲಿ ಅವರ ಬದುಕು ಅಧಿಕಾರ ಬದಲಾವಣೆಗೆ ಮತ್ತು ಸಂಪ್ರದಾಯಕ್ಕೆ ಸರಿಹೊಂದಿಕೊಳ್ಳುತ್ತದೆ. ಮನೆಯ ಹೊರಗೆ ಅವರು ದಂಗೆ ಏಳುತ್ತಾರೆ. ಆದ್ದರಿಂದ ಸುಖಕರವಾದ ಮನೋವೃತ್ತಿಯ ಮತ್ತು ಸ್ವಭಾವದ ಮಾಧ್ಯಮವನ್ನು ಕಂಡುಹಿಡಿಯಲೇಬೇಕಾಗಿದೆ.

ಆದ್ದರಿಂದಲೇ ವೃತ್ತಿಪರ ಮಾರ್ಗದರ್ಶನದ ಮತ್ತು ಸಾಮಾನ್ಯ ಭೋಧನೆಯ ಹೆಚ್ಚಿನ ಅಗತ್ಯ.

## 4. ಸ್ವಾತಂತ್ರ್ಯ ಹೊಣೆಗಾರಿಕೆ ಮತ್ತು ಪಕ್ವತೆ

ನಿಮ್ಮನ್ನು ಯಾವುದಕ್ಕಾಗಿ ಸೃಷ್ಟಿಸಲ್ಪಡಲಾಗಿದೆಯೋ ಅದನ್ನು ಸ್ವಾತಂತ್ರ್ಯ ಸಮರ್ಥವಾಗಿ ಕೈಗೂಡಿಸಬೇಕು – ಠಾಕೂರ್

### ಸ್ವಾತಂತ್ರ್ಯಕ್ಕೆ ಶೋಧನೆ :

ತರುಣರು ಸ್ವತಂತ್ರವಾಗಿರುವುದನ್ನು ಬಯಸುವುದು ಹೆಚ್ಚು ಸಹಜ. ಅವರ ಆಕ್ರಮಗಳೆಲ್ಲ ಈ ಆಕಾಂಕ್ಷೆಯ ಸುತ್ತ ಕೇಂದ್ರೀಕರಿಸುತ್ತವೆ. ಸ್ವಲ್ಪ ಮಟ್ಟಿಗೆ ಅವಲಂಬನೆ ಮತ್ತು ಸ್ವಾತಂತ್ರ್ಯ ಇವುಗಳ ನಡುವೆ ಹೆಚ್ಚಿನ ಸ್ಥಿತಿಯ ಅನಿಶ್ಚಿತತೆಯಲ್ಲಿ ಹದಗೆಟ್ಟ ಕೌಟುಂಬಿಕ ಸಂಬಂಧಗಳಲ್ಲಿ ಅದು ಕೆರಳುತ್ತದೆ.

### ಅತಿ ರಕ್ಷಣೆ :

ಅವರು ರಕ್ಷಿತರಾಗಿದ್ದಾರೆ ಅಥವಾ ಅತಿಯಾಗಿ ರಕ್ಷಿಸಲ್ಪಟ್ಟಿದ್ದರೆ ಅವರು ಸ್ವಾತಂತ್ರವನ್ನು ಸಂಪಾದಿಸಿಕೊಳ್ಳುವುದು, ವಾಸ್ತವಿಕವಾಗಿ ತುಂಬಕಷ್ಟವಾದದ್ದು, ಹಾಗೂ ಚಿಕ್ಕವರಾಗಿದ್ದಾಗ ಏನೂ ನಿಯಂತ್ರಣವನ್ನು ಅನುಭವಿಸದಿದ್ದರೆ ಮತ್ತು ಅತಿ ಹೆಚ್ಚಿ ಸ್ವಾತಂತ್ರ್ಯದಿಂದ ಪೋಷಿಸಲ್ಪಟ್ಟದ್ದರೆ, ಅವರಿಗೆ ವಯಸ್ಸಾದಾಗ ಸ್ವಾತಂತ್ರ್ಯದ ಹೊಣೆಗಾರಿಕೆಗಳನ್ನು ಕಲಿತುಕೊಳ್ಳುವುದು ಅವರಿಗೆ ತುಂಬ ಕಷ್ಟ. ಅದಾಗ್ಯೂ ತಾಯಿಯಿಂದ ತಪ್ಪಿಸಿಕೊಂಡು ಹೋಗದ ಯುವಕನು ಒಂದು ಕ್ಲಿಷ್ಟ ಸಮಸ್ಯೆಯನ್ನು ಒಡ್ಡುತ್ತಾನೆ. ಅವನ್ನು ಅಥವಾ ಅವಳು

ಮನೆಯನ್ನು ತೊರೆಯಲು ಇಷ್ಟಪಡುವುದಿಲ್ಲ. ಆದರ ಫಲವಾಗಿ ಅವನು ಅಥವಾ ಅವಳು ತನಗೆ ಯುಕ್ತವಾದ ಜೀವನ ನಡತೆಯನ್ನು ಕೈಗೊಳ್ಳುವುದಿಲ್ಲ. ಅಥವಾ ಅವರು ಭಾಗಶಃ ಅಥವಾ ಪೂರ್ಣವಾಗಿ ಸ್ವಾತಂತ್ರ್ಯವಾಗಿರಬೇಕೆಂದುಕೊಂಡಾಗ ಪರೀಕ್ಷೆಗಳಲ್ಲಿ ಅಥವಾ ಸಂದರ್ಶನಗಳಲ್ಲಿ 'ಫೇಲಾಗುವುದರಿಂದ ಕೂಡ, ಆ ಗುರಿಯನ್ನು ವಿಳಂಬಮಾಡಬಹುದು.

## ಸ್ವಾರ್ಥ ತ್ಯಾಗಮಾಡುವ ತಂದೆ ತಾಯಿಗಳು :

ಸ್ವಾರ್ಥ ತ್ಯಾಗಮಾಡುವ ತಂದೆ ತಾಯಿಗಳನ್ನು ನಾವು ಸಾಮಾನ್ಯವಾಗಿ ಮೆಚ್ಚಿಕೊಳ್ಳುತ್ತೇವೆ. ಆದರೆ ಯುವಕರಿಗಾಗಿ ಅತಿರೇಕದ ಸ್ವಾರ್ಥ ತ್ಯಾಗದ ಮಾದರಿಯೂ ಇರಬಹುದು. ಆದರೆ ಅದನ್ನು ತುಂಬ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

ತಮ್ಮ ಮಕ್ಕಳಿಗೆ, ತಮ್ಮ ಬದುಕಿನ ಸಮಸ್ತವನ್ನು ವಾಸ್ತಾವವಾಗಿ ಬಿಟ್ಟು ಕೊಡುವ ತಾಯಿ ತಂದೆಗಳು ತಮ್ಮ ಮಕ್ಕಳನ್ನು ಆವೇಶದಿಂದ ಅವಲಂಬಿಸಿಬಿಡುತ್ತಾರೆ. ಆ ಮೂಲಕ ತಮ್ಮ ಸ್ವಾತಂತ್ರ್ಯವನ್ನು ಕೆಡಕಿಗೆ ಸಿಕ್ಕಿಸುತ್ತಾರೆ.

ಕುಮಾರರು ಒಂದು ಜೀವನ ಚರಿತೆಯನ್ನು, ವಿವಾಹವನ್ನು ಅಥವಾ ಸಾಮಾನ್ಯವಾಗಿ ತಮ್ಮ ಭವಿಷ್ಯವನ್ನು ಕುರಿತು ಚಿಂತಿಸತೊಡಗಿದಾಗ ಅವರು ತಾವು ಬಲೆಯಲ್ಲಿ ಸಿಕ್ಕಿಬಿದ್ದಿರುವುದನ್ನು ಕಂಡುಕೊಳ್ಳುತ್ತಾರೆ.

ಅತಿಕರುಣಾ ಪೂರ್ಣ ತಂದೆ ತಾಯಿಗಳಿಂದ ಜೀವನಪೂರ್ತಿ ಮುದ್ದಿನಿಂದ ಸಾಕಲ್ಪಟ್ಟ ಮಕ್ಕಳು, ಅತಿ ಹೆಚ್ಚಿನ ಪ್ರಯತ್ನವಿಲ್ಲದೆ ತಮ್ಮ ಕುಟುಂಬವನ್ನು 'ನೋಯಿಸುವ' ಏನನ್ನು ಮಾಡಲು ಅಸಮರ್ಥರಾಗಿರುವುದನ್ನು ಅವರು ಈ ಸ್ಥಿತಿಯಲ್ಲಿ ಅನುಭವಿಸುತ್ತಾರೆ. ಚಿಗಿದಿರುವ ದಾರವನ್ನು ಕತ್ತರಿಸುವ ಪ್ರಯತ್ನದಲ್ಲಿ ಕೈಗೊಳ್ಳುವ ಯಾವುದೇ ಸಾಹಸ ಅವರ ಕುಟುಂಬವನ್ನು ನೋಯಿಸುವುದು ಖಂಡಿತ, ಯಾರೊಬ್ಬರು ಅವನ ಅಥವಾ ಅವಳ ವ್ಯಕ್ತಿತ್ವನ್ನು ಇನ್ನೊಬ್ಬರ ಸುತ್ತ ಗಟ್ಟಿಯಾಗಿ ನಿರ್ಮಿಸಿಕೊಂಡಿರುವುದನ್ನು ಆ ಬೇರೆಯ ಇನ್ನೊಬ್ಬನ ಅಥವಾ ಇನ್ನೊಬ್ಬಳ, ಶಕ್ತಿಗಳು, ವಾತ್ಸಲ್ಯಗಳು ಮತ್ತು ಭಕ್ತಿನಿಷ್ಠೆ ಮೂರನೆಯ ವ್ಯಕ್ತಿಗೆ ಬಿಟ್ಟುಕೊಡುವುದನ್ನು ನೋಡಲಾರ.

ಆದರೆ, ಯಾವ ಒಬ್ಬ ಅಥವಾ ಅವಳ ಸ್ಥಾನವನ್ನು ಬದುಕಿನಲ್ಲಿ ಪಕ್ವವಾದ

ವಯಸ್ಕನನ್ನಾಗಿ ಉಳಿಸಿಕೊಳ್ಳಬೇಕಾದರೆ ಸ್ವಾತಂತ್ರ್ಯ ಅವಶ್ಯಕ. ಯಾವ ತಂದೆ ತಾಯಿಗಳು ನಿಜದಲ್ಲಿ ಮುರಿಯಲಾರದ ಉದ್ವೇಗಯುಕ್ತ ಕಟ್ಟುಗಳಿಂದ ತಮ್ಮ ಮಕ್ಕಳೊಡನೆ ಅಂಟಿಕೊಳ್ಳುತ್ತಾರೆಯೋ ಅವರು ತಂದೆ ಮಕ್ಕಳ ಆರೋಗ್ಯಕರ ಸಂಬಂಧವನ್ನು ವಕ್ರಗೊಳಿಸಿ ಬಿಡುತ್ತಾರೆ ಮತ್ತು ಅವರಿಗಾಗಿ ಇರುವ ದೇವರ ಯೋಜನೆಗೆ ಅವರನ್ನು ಸಾಕಷ್ಟು ಸಿದ್ಧಪಡಿಸಲು ತಮ್ಮ ಕರ್ತವ್ಯದಿಂದ ಚ್ಯುತರಾಗುತ್ತಾರೆ.

ಒಟ್ಟಿನಲ್ಲಿ ಆರೋಗ್ಯಕರ ತಂದೆ ಮಕ್ಕಳ ಬಂಧುತ್ವ ಮಗುವು ಹುಟ್ಟುವುದಕ್ಕೆ ಮುಂಚಿತವಾಗಿಯೇ ಆರಂಭವಾಗಬೇಕು, ಜೀವನದುದ್ದಕ್ಕೂ ನಿರಂತರವಾಗಿ ಸಾಗಬೇಕು.

ತಂದೆ ತಾಯಿಗಳು ಮತ್ತು ಶಿಕ್ಷಕರು ನೆನಪಿಡಬೇಕು, 'ನಿಮ್ಮ ಹೃದಯ ಕೊಡುವ ಯಾವುದೇ ಒಂದು ಎಂದೆಂದಿಗೂ ನಷ್ಟವಾಗುವುದು ಇಲ್ಲವೇ ಇಲ್ಲ' ಏಕೆಂದರೆ ಅದು ಇತರರ ಹೃದಯಗಳಲ್ಲಿ ಜೀವಂತವಾಗಿಯೇ ಇರುತ್ತದೆ. ಮತ್ತು ಈ ನಿಮ್ಮ ಮಕ್ಕಳು ಇತರರ ಮಕ್ಕಳೇ ಆಗಿರುತ್ತಾರೆ.

## ನಿರ್ದೇಶಿತ ಸ್ವಾತಂತ್ರ್ಯ :

''ಎಲ್ಲವನ್ನು ನೋಡಿ ಅನೇಕವುಗಳ ಬಗ್ಗೆ ಕಣ್ಣು ಮುಚ್ಚಿಕೊಳ್ಳಿ, ಸ್ವಲ್ಪ ಮಾತ್ರ ತಿದ್ದುಕೊಳ್ಳಿ'' ಜಾನ್ *XXIII*.

ತರುಣರನ್ನು ಪಕ್ವತೆಗೆ ಏರಲು ಸಹಾಯ ಮಾಡುವುದು ಕಷ್ಟಕರವಾದ ಕೆಲಸ. ಪರಿಣಾಮದ ಶೋಧನೆ ಇನ್ನೊಂದು ಅತಿರೇಕಕ್ಕೆ ಎಳೆದುಕೊಂಡು ಹೋಗಿರುವುದನ್ನು ಗುರುತಿಸಿದ್ದಾರೆ. ಮತ್ತು ತಂದೆ ತಾಯಿಗಳು ಹೆಚ್ಚು ಅನಿರ್ಬಂಧಿತವಾಗಿ ಬಿಡುತ್ತಾರೆ.

## ಮನಶಾಸ್ತ್ರಜ್ಞರು ಮತ್ತು ತಾಯಿ ತಂದೆಗಳು ಕೂಡ ಅತಿ ಹೆಚ್ಚಿನ ಅನಿರ್ಬಂಧತೆ ಅತಿಕಠೋರತೆಯಷ್ಟೇ ಅಪಾಯಕರವಾಗಬಲ್ಲದು ಎಂಬುದನ್ನು ಕಂಡುಕೊಳ್ಳುತ್ತಿದ್ದಾರೆ :

ಗರಿಷ್ಠ ಲೋಲುಪತೆಯನ್ನು ಮತ್ತು ಸ್ವಾತಂತ್ರ್ಯವನ್ನು ನೀಡಿರುವ ತಂದೆ ತಾಯಿಗಳು ಆಶ್ಚರ್ಯಪಡುವಂಥದೆಂದರೆ ಅವರ ಮಕ್ಕಳು ಆವೇಶದಿಂದ ಕ್ಷೋಭೆಗೆ ಒಳಗಾಗುತ್ತಿರುವುದು ಮತ್ತು ಅನೇಕ ವೇಳೆ ಗಟ್ಟಿ ಶಿಸ್ತಿಗೆ ಗುರಿಪಡಿಸಿದ್ದುದರಂತ ಹೆಚ್ಚು ಜಗಳಗಂಟಿಗಳಾಗಿರುವುದನ್ನು

ಕಾಣುತ್ತಾರೆ. ತಂದೆ ತಾಯಿಗಳು, ತಾವು ವ್ಯಕ್ತಿಗಳಾಗಿ ತಮ್ಮ ಹಕ್ಕುಗಳನ್ನು ಒತ್ತಾಯ ಪಡಿಸದೆಯೇ ಇದ್ದರೆ, ತಪ್ಪದೆ, ಮಕ್ಕಳ ಆಸೆಗಳಿಗೆ ವಶವಾಗಿಬಿಟ್ಟರೆ, ಮಗು ತಾನು ಸರ್ವತಂತ್ರ ಸ್ವತಂತ್ರ ಮತ್ತು ತನ್ನಲ್ಲಿ ತಲೆದೋರುವ ಪ್ರತಿಯೊಂದು ಖಯಾಲಿಯನ್ನು ತತ್‌ಕ್ಷಣವೇ ನೆರವೇರಿಸಲ್ಪಡಬೇಕು ಎಂದು ನಂಬಲು ಆರಂಭಿಸುತ್ತದೆ. ಇಲ್ಲದಿದ್ದರೆ ತನ್ನ ಎಲ್ಲಾ ಸ್ವದೃಢ ಒತ್ತಾಯಗಳೂ ತಪ್ಪು ಮತ್ತು ತನಗೆ ತಾನು ತೃಪ್ತಿಪಟ್ಟುಕೊಳ್ಳುವುದನ್ನು ಕಾಣುವುದರಲ್ಲಿ ಯಾವುದೇ ನ್ಯಾಯ ಸಲ್ಲಿಕೆಯಿಲ್ಲ ಎಂದು ನಂಬಲು ಆರಂಭಿಸುತ್ತಾನೆ.

ಈ ರೀತಿ ಹಿರಿಯರಿಂದ ಆಗುವ ಅತಿ ಲೋಲುಪತೆ, ತಪ್ಪು ಒಪ್ಪುಗಳ ನಡುವೆ ಇರುವ ವ್ಯತ್ಯಾಸವನ್ನು ಕಾಣುವ ಅರವಿನ ಸಾಮರ್ಥ್ಯವನ್ನು ಸರಿಮಾಡದಂತೆ ನಷ್ಟ ಮಾಡಿಬಿಡುತ್ತದೆ. ಮುಂದಿನ ಬದುಕಿನಲ್ಲಿ ಯಾರ ತಂದೆ ತಾಯಿಗಳು ಈ ರೀತಿಯಲ್ಲಿ ಅವರಿಗೆ ಸರಿದಾರಿಯನ್ನು ತೋರಿಸಲು ತಪ್ಪಿದರೋ ಆ ವ್ಯಕ್ತಿಗಳು ಈ ಎರಡೂ ತುದಿಗಳ ನಡುವೆ ಬದಲಾವಣೆಗಳನ್ನು ಆಗಾಗ ತೋರಿಸುತ್ತಾರೆ. ಅವರು ಇತರರ ಮನುಷ್ಯರ ಮೇಲೆ ಯಾವುದೇ ರೀತಿಯ ಆದೇಶಪೂರ್ಣ ಹಕ್ಕುಗಳನ್ನು ಒತ್ತಾಯಿಸುವುದಿಲ್ಲ ಇಲ್ಲವೇ ಯಾರೊಬ್ಬರೂ ಸಫಲಗೊಳಿಸಲಾರದ ಹೆಚ್ಚಿನ ಬೇಡಿಕೆಗಳನ್ನು ಮಾಡುವುದೇ ಇಲ್ಲ.

## ಅಧಿಕಾರಯುಕ್ತತ್ವ:

## ಸಂವಾದ ಮತ್ತು ಪಾಲುಗಾರಿಕೆ

ಪರಿಪಕ್ವತೆಯ ಕಡೆಗಿನ ಶಿಕ್ಷಣ ತರುಣರಿಗೆ ಕ್ರಮವಾಗಿ ಹೆಚ್ಚಿನ ಸ್ವಾತಂತ್ರ್ಯವನ್ನು ಒಳಗೊಳ್ಳುವ ಅತ್ಯಂತ ಹೆಚ್ಚಿನ ಹೊಣೆಗಾರಿಕೆಯನ್ನು ನೀಡಬೇಕು. ಅದು ಅವರು ತಪ್ಪುಗಳನ್ನು ಮಾಡುವ ಅಪಾಯವನ್ನು ಒಳಗೊಂಡಿರುತ್ತದಲ್ಲದೆ, ಪ್ರತಿಯಾಗಿ ಮತ್ತು ಹೆಚ್ಚಿನ ಸಂಪರ್ಕಗಳನ್ನು ಸಂವಾದಗಳನ್ನು ಮತ್ತು ಮಾರ್ಗದರ್ಶನಗಳನ್ನು ಬೇಡುತ್ತದೆ. ಕೆಲವರ ನಂಬಿಕೆಗಳ ವಿರುದ್ಧವಾಗಿ ತರುಣಜನ ಮಾರ್ಗದರ್ಶನದ ಕಡೆ ದೃಷ್ಟಿ ಹರಿಸುತ್ತಾರೆ, ಅದನ್ನು ಸರಿಯಾದ ದಾರಿಯಲ್ಲಿ ಕೊಟ್ಟಾಗ ಮಾತ್ರ. ಅದನ್ನು ಹದಿಹರೆಯದ ಹುಡುಗಿಯ ಈ ಕಾಗದದಲ್ಲಿ ತೋರಿಸಿರುವಂತೆ ಕಾಣಬಹುದು.

ನಿಮ್ಮ ಮಗ ಅಥವಾ ಮಗಳು ನಿಮ್ಮ ಇಷ್ಟ ವಿರೋಧವಾಗಿ ಏನನ್ನು ಎಂದಿಗೂ

ಮಾಡುವುದಿಲ್ಲವೆಂದು ನೀವು ಯೋಚಿಸಬಹುದು. ನೀವು ಅವರ ಬಗೆ ಅತ್ಯಂತ ಸುಲಭವಾದ ರೀತಿಯಲ್ಲಿ ವರ್ತಿಸಿರಬಹುದು. ಅವರಿಗೆ ಬೇಕಾದುದನ್ನೆಲ್ಲ ಕೊಡುವಾಗ ನೀವು ಎಂದಿಗೂ ಸ್ವಸ್ಥಿತೆಯಿಂದಲ್ಲದಿರಬಹುದು. ಕಾಲೇಜಿನಲ್ಲಿ ಏನು ನಡೆಯುತ್ತಿದೆ ಎಂಬುದರ ಬಗೆಗೆ ಅಸಕ್ತಿಯನ್ನು ಹೊಂದದೇ ಇರಬಹುದು ಅಥವಾ ಅವರು ಹೊರಗಡೆ ಹೋದ ಮೇಲೆ ಏನು ಆಗುತ್ತದೆ ಎಂಬುದನ್ನು ಯೋಚಿಸದಿರಬಹುದು. ಅವರು ಯಾರೊಡನೆ ತುಯ್ದಾಡುತ್ತಾರೆ ಎಂಬುದು ನಿಮಗೇನಾದರೂ ತಿಳಿದಿದೆಯೇ ? (16 ವರ್ಷ ವಯಸ್ಸಾದ ಹುಡುಗಿಯೊಬ್ಬಳು).

ಸ್ವಾತಂತ್ರ್ಯ-ಜವಾಬ್ದಾರಿ-ಮಾರ್ಗದರ್ಶನ ಈ ಮೂರು ಕೈಹಿಡಿದು ಜೊತೆ ಜೊತೆಗೆ ಹೋಗಬೇಕು.

ಅದನ್ನು ಸಾಧ್ಯವಾದಷ್ಟು ಉತ್ತಮ ಮಾರ್ಗದಲ್ಲಿ ಮಾಡಬಹುದು ಎಂಬುದನ್ನು ನೀವೊಬ್ಬರೇ ಕಂಡು ಹಿಡಿಯಬಹುದು.

ತಂದೆ ತಾಯಿ ಇವರು ನಡುವಿನ ಸಂಭಾಷಣೆ. ತಂದೆ ತಾಯಿಗಳು ಮತ್ತು

ತಂದೆ ತಾಯಿಗಳ ನಡುವಿನ ಸಂಭಾಷಣೆ. ತಂದೆ ತಾಯಿಗಳು ಮತ್ತು

ಶಿಕ್ಷಕರ ನಡುವಿನ ಸಂಭಾಷಣೆ.

ಇದನ್ನು ನೆನಪಿಡಿ : ಪತಿಯೇ !, ನೀನು ನನ್ನ ಮಗುವನ್ನು ಪ್ರೀತಿಸಬೇಕಾದರೆ ಅದರ ತಾಯಿಯನ್ನು ಮೊದಲು ಪ್ರೀತಿಸು.

## 5. ಸಮತೋಲನವನ್ನು ನಿರ್ವಹಿಸುವುದು

ಇದರ ಅರ್ಥವೆಂದರೆ ತಂದೆ ತಾಯಿಗಳು ತಮ್ಮ ಮಕ್ಕಳಿಗೆ ನೀಡುವ ಶಿಸ್ತಿನ ಪ್ರಮಾಣಕ್ಕೂ ಸ್ವಾತಂತ್ರ್ಯ ಮಟ್ಟಕ್ಕೂ ನಡುವಿನ ಒಂದು ಸೂಕ್ಷ್ಮ ಸಮತೋಲನವನ್ನು ಕಂಡುಕೊಳ್ಳಬೇಕು. ಈ ಸಮತೋಲನ ಮಕ್ಕಳು ತರುಣರಾಗಿ ಮತ್ತು ಯುವಕರು ವಯಸ್ಕರಾಗಿ ಬೆಳೆದಂತೆಲ್ಲ ಬದಲಾಯಿಸುತ್ತಿರುತ್ತದೆ.

''ಬೆಳೆಯುತ್ತಿರುವ ಸ್ವಾತಂತ್ರ್ಯವನ್ನು ಬೆಳೆಯುತ್ತಿರುವ ಹೊಣೆಗಾರಿಕೆಯ ಮತ್ತು

ಆಂತರಿಕ ಶಿಸ್ತಿನ ಭಾವನೆಯಿಂದ ಜೊತೆಗೂಡಿಸಿಕೊಂಡು ಮುಂದುವರಿಯಬೇಕು. ಡೇನಾಲ್ಡ್ ಬಾರ್ ಹೇಳಿರುವಂತೆ ''ಸ್ವಾತಂತ್ರ್ಯಕ್ಕೆ ಶಿಸ್ತು ಅತ್ಯವಶ್ಯಕ'' ಅದುವಿರುದ್ಧವಾಗಿ ಕಂಡು ಬಂದರೂ ಮತ್ತೊಂದರ ಜೊತೆಯಿಲ್ಲದೆ, ಪ್ರತಿಯೊಂದು ತನ್ನನ್ನು ತಾನೇ ಹಾಳುಮಾಡುತ್ತದೆ. ಚಿತ್ರಕಲೆಯಲ್ಲಿ ಕಲ್ಪನೆಯಿಲ್ಲದೆ ಕುಶಲತೆ ಬರಡಾಗುತ್ತದೆ. ಕುಶಲತೆಯಿಲ್ಲದೆ ಕಲ್ಪನೆ ತನ್ನ ಮೂರ್ತಿಯನ್ನು ಭಗ್ನಗೊಳಿಸುತ್ತದೆ. ಸರ್ಕಾರಗಳಲ್ಲಿ ಅಂಗೀಕಾರವಿಲ್ಲದ ಅಪ್ಪಣೆ ತಟಸ್ಥವಾಗುತ್ತದೆ. ಮತ್ತು ಕಾನೂನಿಲ್ಲದ ದಂಗೆ ಅಶಾಂತಿಯನ್ನುಂಟು ಮಾಡುತ್ತದೆ ಮತ್ತು ಎರಡೂ ನಿರಂಕುಶ ಪ್ರಭುತ್ವಗಳೇ.

ಸಮತೋಲನವನ್ನು ಕಾಪಾಡಿಕೊಂಡು ಬರುವ ಗುರಿಪಕ್ವತೆಯನ್ನು ಸಂಪಾದಿಸುವುದೇ ಆಗಿದೆ.

## ಪರಿಪಕ್ವತೆ- ಹೊಣೆಗಾರಿಕೆಯ ಬುದ್ಧಿ

ಒಂದು ಆಧಾರ ಹೇಳುತ್ತದೆ. ತರುಣನು ಮಗುವಿನಂತಿರಬೇಕು ಎಂಬುದು ಒಂದು ಒಳ್ಳೆಯ ವಿಷಯ ಎಂದು. ಹಾಗಿದ್ದರೂ ಡಾ: ಮೇರಿ ಎಲ್ ನಾರ್ತವೆ, ಟೋರೆಂಟೋ ವಿಶ್ವ ವಿದ್ಯಾಲಯದ ಮಕ್ಕಳ ಅಭ್ಯಾಸದ ಸಂಶೋಧನ ಸಂಸ್ಥೆಯ ನಿರ್ದೇಶಕರು ಮುಂದುವರಿಸುತ್ತಾ.,

''ತರುಣನು, ಜಗಳಗಂಟನಾಗಬಹುದು, ವಿರೋಧಿಯಾಗಬಹುದು, ಮೆದುವಾಗಲೂಬಹುದು. ಆದರೆ ಅವನು 'ಮಕ್ಕಳಂತೆ' ಮಾತ್ರ ಇರಲು ಬಿಟ್ಟುಬಿಡಿ ಮತ್ತು ಅವನು ಇನ್ನು ಅಪಕ್ವ ಎಂದು ಪಟ್ಟ ಹಚ್ಚಿಬಿಡಿ. ಅವನು 'ಅಪಕ್ವ' ಎಂಬ ಪದವನ್ನು ನಾವು ಯಾರೇ ಜಗಳಗಂಟಿಗಳಾಗಿರುತ್ತಾರೆ, ನಮ್ಮನ್ನು ಕೆರಳಿಸುತ್ತಾರೆ, ನಮಗೆ ಅಸಂತೋಷವನ್ನುಂಟು ಮಾಡುತ್ತಾರೆ ಅಂಥವರಿಗೆ ಈ ಮಾತ್ನು ಬಳಸುತ್ತೇವೆ ಅಲ್ಲವೆ ?''

ವಾಸ್ತವವಾಗಿ ಒಮ್ಬ ಹುಡುಗ, ಅವನು ಅಪಕ್ವವಾಗಿಲ್ಲದಿದ್ದರೂ ಮಾನಸಿಕವಾಗಿ ಅಥವಾ ಶಾರೀರಕವಾಗಿ ಕುಚೇಷ್ಟೆಯ ಸ್ವಭಾವದವನಾಗಿರುತ್ತಾನೆ. ಏಕೆಂದರೆ ಮಗು ಮತ್ತು ಹುಡುಗ ಇಬ್ಬರೂ ಮಕ್ಕಳ ಹಾಗೇ ಇರಬೇಕಾದುದು ಸರಿ.

## ಹುಡುಗನ ಬಗೆಗೆ ತಂದೆ ತಾಯಿಗಳ ಹೊಣೆಗಾರಿಕೆ

ಅದೇ ವಿಶ್ವವಿದ್ಯಾನಿಲಯದ ಮಕ್ಕಳ ಅಭ್ಯಾಸದ ಸಂಶೋಧನಾ ಸಂಸ್ಥೆಯಲ್ಲಿರುವ ತಂದೆ ತಾಯಿಗಳ ಶಿಕ್ಷಣದ ಡಾ: ಫ್ರಾನ್ಸ್‌ಸ್ ಎಲ್ ಜಾನ್‌ಸನ್ ಹೊಣೆಗಾರಿಕೆಯ ಬುದ್ಧಿಯನ್ನು ವೃದ್ಧಿಪಡಿಸುವಲ್ಲಿ ಆರು ಹಂತಗಳಿವೆ ಎಂದು ನಂಬುತ್ತಾರೆ.

1. ತಂದೆ ತಾಯಿಗಳು 'ಮಗು ನಗುತ್ತಿರುವಂತೆ ಮಾಡಲು ಹೊಣೆಗಾರಿಕೆಯನ್ನು ವಹಿಸಿಕೊಳ್ಳಬೇಕು.'

2. ಮಗು, ಹೆಣ್ಣಾಗಲಿ, ಗಂಡಾಗಲಿ ತನಗಷ್ಟೇ ಬೇಕಾದದ್ದನ್ನು ಪಡೆಯುವ ಅದರ ಅಪೇಕ್ಷೆಯ ಅನುಕೂಲವನ್ನು ಪಡೆಯಬೇಕು. ಹುಡುಗರು ಸ್ವಂತವಾಗಿ ಆರಂಭಿಸುವುದರತ್ತ ಪ್ರೋತ್ಸಾಹ ನೀಡಿ. ಆದರೆ ಹೊಣೆಗಾರಿಕೆ ಹುಡುಗನಿಗೆ ಹೆಚ್ಚಾಯಿತು ಎಂದು ಕಂಡು ಬಂದ ಸಂಭವವಿದ್ದಲ್ಲಿ ಅದಕ್ಕೆ ಸಿದ್ಧರಾಗಿರಿ ಮತ್ತು ಅವನು ಅಥವಾ ಅವಳು ತಂದೆ ತಾಯಿಗಳನ್ನು ನೀವೇ ಜವಾಬ್ದಾರಿ ಪುನಃ ತೆಗೆದುಕೊಳ್ಳಿ ಎಂದು ಕೇಳಬಹುದು.

3. ಹುಡುಗ ಅಥವಾ ಹುಡುಗಿ ಇತರರಿಗೆ ಮುಖ್ಯವಾದುದ್ನು ಮಾಡುತ್ತಾರೆಯೇ ಎಂಬುದನ್ನು ಗುರುತಿಸಿ ಸಹಾಯ ಮಾಡಿ ಮತ್ತು ಅವನ/ ಅವಳ ಕೆಲಸ ಅಗತ್ಯವಾದದ್ದು ಮತ್ತು ಮೆಚ್ಚತಕ್ಕದ್ದು ಎಂಬುದನ್ನು ಗುರುತಿಸಿ ಸಹಾಯ ಮಾಡಿ, ಕೆಲಸಗಳ ಬದಲಾವಣೆಗಳನ್ನು ಪಡೆಯುವುದು ಒಳ್ಳೆಯದೇ. ಉದಾಹರಣೆಗೆ ತಾಯಿ ಅವರ ದಿಗ್ಭ್ರಮೆಗಳನ್ನು, ಸಮಸ್ಯೆಗಳನ್ನು ಕುರಿತು ಚಿಂತಿಸುತ್ತಿರುವಾಗ ಹುಡುಗರು ಪಾತ್ರೆಗಳನ್ನು ತೊಳೆಯುತ್ತಿರುತ್ತಾರೆ.

4. ಮನೆಯ ಸುತ್ತ ಕೆಲಸಗಳನ್ನು ಹುಡುಕುವ ಕಾರ್ಯದಲ್ಲಿ ಹುಡುಗರಿಗೆ ಸ್ವಲ್ಪ ಭಾಗವನ್ನು ಕೊಡಿ. ಕೆಲಸದ ನ್ಯಾಯವಾದ ಭಾಗವನ್ನು ವೈವಿಧ್ಯವನ್ನು ಮತ್ತು ಆಸಕ್ತಿಯನ್ನು ಒದಗಿಸುವದಕ್ಕಾಗಿ ಕೆಲಸಗಳನ್ನು ಆಗಾಗ ಬೇರೆ ಬೇರೆ ಅವಧಿಗಳಲ್ಲಿ ಸರದಿಗಳನ್ನು ಹಾಕುತ್ತಿರಿ.

5. ಕೆಲಸಗಳನ್ನು ಉತ್ತಮವಾಗಿ ಹೇಗೆ ಮಾಡಬಹುದು ಎಂಬ ವಿಚಾರವನ್ನು ಕುರಿತು ಮುಂದಿನ ಚರ್ಚೆಗೆ ಆಧಾರವಾಗಿರುವಂತೆ ತಮ್ಮ ಗೆಲವು ಸೋಲುಗಳನ್ನು ಬಳಸುತ್ತಾ ತಮ್ಮ ತಮ್ಮ ಚಟುವಟಿಕೆಗಳನ್ನು ಯೋಚಿಸಿಕೊಳ್ಳಲು ಹುಡುಗರನ್ನು ಸ್ವತಂತ್ರವಾಗಿ ಬಿಟ್ಟುಬಿಡಿ.

''ಅವರೇನಾದರೂ ತಪ್ಪು ಮಾಡಿದರೆ ಸುಮ್ಮನಿದ್ದುಬಿಡಿ. ಇದರಿಂದ ಅವರು ತಮ್ಮ ಕ್ರಿಯೆಗೂ

ಅದರಿಂದ ಉಂಟಾದ ತಪ್ಪಿನ ಫಲಕ್ಕೂ ನಡುವೆ ಇರುವ ಸಂಬಂಧವನ್ನು ಗುರುತಿಸುವುದಕ್ಕೆ ಸಹಾಯವಾಗುತ್ತದೆ. ತಂದೆ ತಾಯಿಗಳು ಉಗ್ರವಾಗಿ ಕೋಪಿಸಿಕೊಂಡರೆ ಮಕ್ಕಳು ಮತ್ತು ಹುಡುಗರು ಯಾವುದೇ ಭಾವನೆಯನ್ನು ಅಥವಾ ಒಂದು ಅಸ್ಪಷ್ಟ ಭಾವನೆಯನ್ನು ಈ ಸಂಬಂಧದ ಬಗ್ಗೆ ಹೊಂದಿರುವುದಿಲ್ಲ. ಅವರಿಗೆ ತಿಳಿಯುವುದು ಇಷ್ಟೆ: ಅವರು ಆ ಪಾತ್ರೆ ಮುಂತಾದುವನ್ನು ಒಡೆದಾಗ ತಮ್ಮ ತಂದೆತಾಯಿಗಳು ಅತೀವ ಹುಚ್ಚರಾಗುತ್ತಾರೆ ಎಂದು. ಅವರು ಅಲ್ಲಿಂದ ಹಿಂದಕ್ಕೆ ಸರಿಯುತ್ತಾರೆ. ಅಷ್ಟೆ ಅಲ್ಲ ಮುಂದೆ ಸಹಾಯವನ್ನು ನೀಡಲು ಮುಂಚಿನಷ್ಟು ಸಿದ್ಧರಾಗುವುದಿಲ್ಲ. ಆಗ ಅವರು ಮುರಿದ ಪಾತ್ರೆಗಳಿಗೂ, ಸೋಪು ಹಚ್ಚಿದ ಕೈಗಳಿಗೂ ಅಕಲಕ್ಷ್ಯಕ್ಕೂ ಅಥವಾ ಮನೆಯ ಅನಾಹುತಕ್ಕೆ ಕಾರಣವಾದ ಯಾವುದೇ ವಿಷಯಕ್ಕೆ ಇರುವ ಸಂಬಂಧವನ್ನು ಗಮನಿಸಲು ವಿಫಲಗೊಳ್ಳುತ್ತಾರೆ.

6. ಅಂತಿಮ ಹಂತ ಎಂದರೆ ಹುಡುಗರು ತಮ್ಮ ಚಟುವಟಿಕೆಗಳನ್ನು ಯೋಜಿಸಿಕೊಳ್ಳಬೇಕು ಮತ್ತು ಅವುಗಳ ಪೂರ್ಣ ಜವಾಬ್ದಾರಿಯನ್ನು ಒಪ್ಪಿಕೊಳ್ಳಬೇಕು. ನೀವು ಅವರ ಭರವಸೆಯನ್ನು ಮತ್ತು ನಿಷ್ಠೆಯನ್ನು ಕೊನೆಯವರೆಗೂ ಉಳಿಸಿಕೊಂಡರೆ ಅವರು ನಿಮ್ಮೊಡನೆ ಯಾವತ್ತು ಸಮಾಲೋಚಿಸುವುದನ್ನು ಬಿಡದೆ ಯೋಚಿಸುತ್ತಾರೆ ಎಂಬ ಬಗ್ಗೆ ನೀವು ಹೆದರಬೇಕಾದುದೇ ಇಲ್ಲ. ಈ ಕಾರ್ಯವಿಧಾನದ ಮೂಲಕ ಹೊಣೆಗಾರಿಕೆ ಮತ್ತು ಪಕ್ವತೆಯ ಕಡೆಗೆ ಸಹನೆಯಿಂದ ನಡೆಸಿಕೊಂಡು ಹೋದರೆ ಅವರು ತಮ್ಮ ಯೋಜನೆಗಳನ್ನು ನಿಮ್ಮಲ್ಲಿಗೆ ತರುತ್ತಾರೆ, ಮತ್ತು ಆ ಯೋಜನೆಗಳು ಚೆನ್ನಾಗಿದ್ದರೆ ಅವುಗಳನ್ನು ನೀವು ಒಪ್ಪಬೇಕೆಂದು ಬಯಸುತ್ತಾರೆ. ಅವು ಚೆನ್ನಾಗಿಲ್ಲದಿದ್ದರೆ, ಆಗ ಅವರು ನಿಮ್ಮ ಬುದ್ಧಿವಾದವನ್ನು ಮಾರ್ಗದರ್ಶನವನ್ನು ಖಂಡಿತ ಸ್ವೀಕರಿಸುತ್ತಾರೆ.

''ಡಯಸಿ ಎಂಬ ಜಾತಿಯ ಕಾಡು ಹೂವುಗಳು ಜಾಗಸಿಕ್ಕಡೆ ಅರಳುತ್ತದೆ. ಇದು ಜನದ ಬಗ್ಗೆಯೂ ನಿಜ''.

## ಸ್ವಾತಂತ್ರ್ಯದ ಘೋಷಣೆ :

'ಹುಡುಗ' ವಯಸ್ಸಿನ ಅವಧಿಯಲ್ಲಿ ವ್ಯಕ್ತಿಗಳು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಳ್ಳಲೇಬೇಕು ಇಲ್ಲದಿದ್ದರೆ ವಯಸ್ಕ ಪಕ್ವತೆಯನ್ನು ವೃದ್ಧಿಪಡಿಸಿಕೊಳ್ಳಲು ಅವರು ಎಂದೆಂದಿಗೂ ಕೊರತೆಯಲ್ಲೇ ಇರುತ್ತಾರೆ.

ತಾರುಣ್ಯದ ಅವಸ್ಥೆ, ವಿವಾಹ, ಧಾರ್ಮಿಕ ಬದುಕು ಅಥವಾ ಒಂಟಿ ಜೀವನ ಮೊದಲಾದವುಗಳ ಬಗ್ಗೆ ಅತಿ ಮಹತ್ವದ ತೀರ್ಮಾನಗಳನ್ನು ಕೈಗೊಳ್ಳುವ ಬದುಕಿನ ಅವಧಿ. ಹುಡುಗರು ಈ ತೀರ್ಮಾನಗಳನ್ನು ಸ್ವಂತವಾಗಿ ತಮ್ಮಷ್ಟಕ್ಕೆ ತಾವೇ ಕೈಗೊಳ್ಳಲು ಸ್ವತಂತ್ರರಾಗಿರಬೇಕು. ಕೆಲವು ಜನ ತಂದೆ ತಾಯಿಗಳು ತಮ್ಮ ಇಷ್ಟಗಳನ್ನು ಹುಡಗರ ಮೇಲೆ ಬಲವಂತವಾಗಿ ಹೇರಿ ಒಂದು ರೀತಿಯಲ್ಲಿ ವಿಶೇಷವಾಗಿ ನಿಸ್ಸೇವೆಯನ್ನೇ ಮಾಡುತ್ತಾರೆ. ಅದ ಅವರ ಸ್ವಾರ್ಥಪರತೆ, ಮೂಢನಂಬಿಕೆಗಳುಮತ್ತು ಅತ್ಯಂತ ನಿಷ್ಠೆಯ ಸಾಂಪ್ರದಾಯಕ ಪದ್ಧತಿಗಳು ಇವುಗಳ ಸ್ಪಷ್ಟ ಪ್ರದರ್ಶನವೇ ಆಗಿದೆ. ಅವರು ಅವರ ಮಕ್ಕಳ ವೃತ್ತಿ ಮತ್ತು ಚಾರಿತ್ರ್ಯವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಅವು ಆಗಾಗ ಸಫಲತೆಯನ್ನು ಪಡೆಯದ ಅವರ ಸ್ವಂತ ಗುರಿಗಳನ್ನೇ ಪ್ರತಿನಿಧಿಸುತ್ತವೆ.

## ಬದುಕು ಎಂದರೆ ಏನು ?

| | | |
|---|---|---|
| ಬದುಕು | - | ಒಂದು ಸವಾಲು-ಅದನ್ನು ಎದುರಿಸು |
| ಉಡುಗೊರೆ | - | ಸ್ವೀಕರಿಸು |
| ದುಃಖ | - | ಅದನ್ನು ಜಯಿಸು |
| ಕರ್ತವ್ಯ | - | ಆಚರಿಸು |
| ಕ್ರೀಡೆ | - | ಆಡು |
| ಗೀತ | - | ಹಾಡು |
| ಭಾಷೆ | - | ಪೂರ್ಣಮಾಡು |
| ಒಗಟು | - | ಸಂತೋಷವಾಗಿ ಅನುಭವಿಸು |
| ಸೌಂದರ್ಯ | - | ಅದನ್ನು ಶ್ಲಾಘಿಸು |

## ವರ್ಗ ಚಟುವಟಿಕೆ

ಚರ್ಚಿಸಿ :

1) ತಲೆಮಾರುಗಳ ಅಂತರ ಇವತ್ತು ಅಸ್ತಿತ್ವದಲ್ಲಿದೆಯೇ ? ಹೌದಾದರೆ

ಅ) ತಂದೆ ತಾಯಿಗಳು ಆ) ಯುವಕರು ಇ) ಶಿಕ್ಷಕರು ಇವರು ಈ ಅಂತರವನ್ನು ಕಡಮೆ ಮಾಡಲು ಏನು ಸಹಾಯ ಮಾಡಬಲ್ಲರು.

2) ಪ್ರಶ್ನಾವಳಿ

ಅ) ಕಲ್ಪಕತೆಯ (ನಿರ್ಮಾಣ ಕಾರ್ಯ ಸಮಸ್ಯೆ)

ಆ) ಪ್ರತಿಷ್ಠೆಯ ಚಲನೆ:ನಡೆ.

ಇ) ವೈಯಕ್ತಿಕ ಸ್ವಾತಂತ್ರ್ಯದಲ್ಲಿ ಒಂದು ಅಭ್ಯಾಸ.

3) ಅ) ಕಲ್ಪಕತೆಯ ಸಮಸ್ಯೆ

7. ''ಕೆಲವು ರೀತಿಯ ವೈಯಕ್ತಿಕ ಸಮಸ್ಯೆಗಳು ಎಷ್ಟು ಸಾಮಾನ್ಯವೆಂದರೆ ಯಾವ ವ್ಯಕ್ತಿಯಲ್ಲಿ ಯಾವುದೂ ಇರುವುದಿಲ್ಲವೋ ಅಂಥವನ್ನು ಅತ್ಯಂತ ಅಸಾಮಾನ್ಯ ಎಂದು ಪಟ್ಟಿ ಹಚ್ಚುವುದರಿಂದ ಬಹುಶಃ ನಾವು ನಮ್ಮನ್ನು ಸಮರ್ಥಿಸಿಕೊಳ್ಳಬಹುದು.

ಸೂಚನೆಗಳು :

ವಿದ್ಯಾರ್ಥಿಗಳ ಮನಸ್ಸನ್ನು ಕಲಕುವ ಕೆಲವು ಹೆಚ್ಚಿನ ಸಾಮಾನ್ಯ ಸಮಸ್ಯೆಗಳನ್ನು ಕೆಳಗೆ ಹೇಳಿರುವುದನ್ನು-ನೋಡಬಹುದು. ಪ್ರತಿಯೊಂದು ಬಾಬಿಗೂ ಒಂದು ಸಂಖ್ಯೆಯನ್ನು ಹಿಂದೆ ಜೋಡಿಸಿದೆ. ನಿಮಗೆ ವಿಶಿಷ್ಟವಾದ ಸಮಸ್ಯೆಗಳನ್ನು ಹೊರಗೆಡುಹುವಂಥ ಬಾಬುಗಳ ಸಂಖ್ಯೆಗಳನ್ನು ಮಾತ್ರ ವೃತ್ತ ಹಾಕಿ ಗುರುತಿಸಿ.

ಸಂಖ್ಯೆ 1, 2, 3, ಗಳನ್ನು ಪ್ರತಿಯೊಂದು ಬಾಬಿನ ಅನಂತರ ಕೊಡಲಾಗಿದೆ. ಆ ವಿಶಿಷ್ಟ ಸಮಸ್ಯೆಯ ಬಗ್ಗೆ ನೀವು ಏನೆಂದು ಭಾವಿಸುತ್ತೀರಿ ಎಂಬುದರ ತೀವ್ರತೆಯ ಮಟ್ಟವನ್ನು ಗುರುತಿಸಬೇಕೆಂಬುದು ಅವುಗಳ ಉದ್ದೇಶ.

1) ಅಲ್ಪ ವಿಚಾರಗಳು ಮತ್ತು ಘಟನೆಗಳು ಇವುಗಳ ಬಗ್ಗೆ ನನಗೆ ಹೆಚ್ಚಿನ ಚಿಂತೆ, ನನ್ನ ಚಿಂತೆಗಳನ್ನು ನಿಯಂತ್ರಿಸಿಕೊಳ್ಳಲು ನನಗೆ ಸಾಮರ್ಥ್ಯವಿದೆ ಎಂಬ ಭಾವನೆಯೇ ನನಗೆ ಬರುವುದಿಲ್ಲ 1, 2, 3.

2) ಎಲ್ಲ ವಿಷಯಗಳಲ್ಲಿಯೂ ನನಗೆ ಭಯ. ತರಗತಿಯಲ್ಲಿ ಎದ್ದು ನಿಂತುಕೊಳ್ಳಲು ಮತ್ತು ಪ್ರಶ್ನೆಯನ್ನು ಉತ್ತರಿಸಲು ನನಗೆ ಭಯವಾಗುತ್ತದೆ. ಗುಂಪಿನಲ್ಲಿ ಮಾತನಾಡಲು ಭಯವಾಗುತ್ತದೆ. ನಾನು ಏನು ತಪ್ಪು ಮಾಡಿಬಿಡುತ್ತೇನೆಯೋ ಎಂದು ಭಯಪಡುತ್ತೇನೆ. 1, 2, 3.

3) ನನ್ನಲ್ಲಿ ನನಗೆ ನಂಬಿಕೆಯಿಲ್ಲ, ಇದು ಮುಂದೆ ನನ್ನ ಬದುಕಿನಲ್ಲಿ ಒಂದು ದೊಡ್ಡ ಕೊರತೆ ಆಗಿ ಬಿಡುತ್ತದಲ್ಲಾ ಎಂಬ ಭಾವನೆತುಂಬಿಕೊಂಡಿದೆ 1, 2, 3.

4) ನಾನು ಏನನ್ನು ಮಾಡುತ್ತಿದ್ದೇನೆ ಎಂಬುದನ್ನು ಜನ ಗಮನಿಸುತ್ತಿದ್ದಾರೆ. ಅನಂತರ ಅದನ್ನು ಕುರಿತು ತಮ್ಮ ಟೀಕೆಗಳನ್ನು ಹೇಳಿಬಿಡುತ್ತಾರೆ ಎಂಬ ಭಾವನೆ ಕೆಲವೊಮ್ಮೆ ನನಗೆ ಬರುತ್ತದೆ 1, 2, 3.

5) ನನ್ನ ಮನಸ್ವಾಸ್ಥ್ಯವನ್ನು ಬಹು ಬೇಗನೆ ಕಳೆದುಕೊಳ್ಳುತ್ತೇನೆ ಅನಂತರ ಅದಕ್ಕಾಗಿ ವ್ಯಥೆ ಪಡುತ್ತೇನೆ 1, 2, 3.

6) ಕೆಲವೊಮ್ಮೆ ನಾನು ಪುಕ್ಕಲನಾಗುತ್ತೇನೆ; ತೊದಲುತ್ತೇನೆ. ಈ ಅಡಚಣೆಯನ್ನು ಕಿತ್ತು ಹಾಕಲು ನಾನು ಏನು ಮಾಡಬೇಕು ? 1, 2, 3.

7) ಕೆಲವೊಮ್ಮೆ ನನಗನ್ನಿಸುತ್ತದೆ ನಾನು ಜನದ ಮಧ್ಯದಲ್ಲಿದ್ದೇನೆ, ಅಥವಾ ನಾನು ಬೇಕಾಗಿಲ್ಲದ ಕಡೆ ಇದ್ದೇನೆ ಎಂದು 1, 2, 3.

8) ನನಗೆ ಕೀಳರಿಮೆಯ ಮನೋಪ್ರವೃತ್ತಿ ಇದೆ. ನಾನು ನನ್ನ ವ್ಯಾಸಂಗದಲ್ಲಿ ಬಹಳ ಕೀಳು. ಜನರೊಡನೆ ವ್ಯವಹರಿಸುವಲ್ಲಿ ನಾನು ಅಂಥ ಒಳ್ಳೆಯ ಸಮರ್ಥನಲ್ಲ, ನನ್ನ ಕುಳ್ಳ ಗಾತ್ರದ ಶರೀರದ ಅಥವಾ ಅಲ್ಪ ಬೆಳವಣಿಗೆಯ ಬಗ್ಗೆ ನಾನು ಹೆಚ್ಚಿನ ಆತ್ಮ ಪ್ರಜ್ಞೆಯನ್ನು ಹೊಂದಿದ್ದೇನೆ.

(ಅಥವಾ ಹೆಚ್ಚು ಸ್ಥೂಲ ಅಥವಾ ಕೊಬ್ಬಿದ ದೇಹದ) ಎಷ್ಟೋ ವಿಷಯಗಳಲ್ಲಿ ನಾನು

ಇತರರೊಡನೆ ಸ್ಪರ್ಧಿಸಲಾರೆ, ಈ ಭಯಂಕರ ಭಾವನೆ ಯಾವುದೇ ಆರಂಭಿಕೆಯನ್ನು ತೋರಿಸಲು ತಡೆ ಹಿಡಿಯುತ್ತದೆ. 1, 2, 3.

9) ನನ್ನ ಮನೋಭಾವಗಳನ್ನು ನಾನು ನಿಯಂತ್ರಿಸಿಕೊಳ್ಳಲಾರೆ. ನನ್ನ ವ್ಯಾಸಂಗಗಳಲ್ಲಿ ನಾನು ನನ್ನ ಮನಸ್ಸನ್ನು ಕೇಂದ್ರೀಕರಿಸಲಾರೆ, 1, 2, 3.

10) ನನಗೆ ಸಾಕಷ್ಟು ಪ್ರತಿಭೆಗಳಿದ್ದರೆ ಶಾಲೆಯಲ್ಲಿ ಮುಂದುವರಿಯುತ್ತೇನೆ ಅಥವಾ ಕಾಲೇಜಿಗೆ ಹೋಗುತ್ತೇನೆ ಎಂದು ನಿಶ್ಚಯಿಸುತ್ತೇನೆ. ಬಹುಶಃ ವ್ಯಾಸಂಗವನ್ನು ಬಿಟ್ಟು ಬಿಡಬೇಕು ಮತ್ತು ಕೆಲಸ ಮಾಡಲು ಪ್ರಾರಂಭಿಸಬೇಕು.

11) ನನ್ನ ಬದುಕನ್ನು ಯಶಸ್ವಿಗೊಳಿಸಬೇಕಾದರೆ ಯಾವ ಮಾರ್ಗವನ್ನು ಹಿಡಿಯಬೇಕೆಂಬುದನ್ನು ನಾನು ಕಂಡು ಹಿಡಿಯುವುದು ಹೇಗೆ ? 1, 2, 3.

12) ನನ್ನ ತಂದೆ ತಾಯಿಗಳು ನನ್ನ ಮೇಲೆ ಬಿಗಿ ಹತೋಟಿಯನ್ನು ಇಟ್ಟುಕೊಂಡಿದ್ದಾರೆ, ಎನಿಸುತ್ತದೆ. ನನಗೆ ಇನ್ನೂ ಹೆಚ್ಚಿನ ಸ್ವಾತಂತ್ರವನ್ನು ಅವರು ಕೊಡಬೇಕು ಎನಿಸುತ್ತದೆ. 1, 2, 3.

13) ಇತರರಿಂದ ವಿಮರ್ಶಿಸಲ್ಪಡುವುದನ್ನು ಊಹಿಸಿದರೆ ನನಗೆ ಗಾಬರಿಯಾಗುತ್ತದೆ. 1, 2, 3.

14) ಹಗಲುಗನಸು ಕಾಣುವುದರಲ್ಲಿ ನಾನು ಹೆಚ್ಚು ಕಾಲವನ್ನು ವ್ಯರ್ಥ ಮಾಡುತ್ತೇನೆ. ನನ್ನ ಕಲ್ಪನೆಯನ್ನು ಹತೋಟಿಯಲ್ಲಿಟ್ಟುಕೊಳ್ಳಲು ನನಗೆ ಸಾಮರ್ಥ್ಯವಿದೆ ಎಂದು ನನಗೆ ಅನಿಸುವುದೇ ಇಲ್ಲ. 1, 2, 3.

15) ಸಾವೆಂದರೆ ನನಗೆ ಗಾಬರಿ, ನಾನು ಒಂದು ಅಪಘಾತದಲ್ಲಿ ಸತ್ತರೆ ನನಗೇನಾಗುತ್ತದೆ ? 1, 2, 3.

16) ನನ್ನ ಸಮಸ್ಯೆಯೆಂದರೆ ಲಿಂಗ ವಿಚಾರ ಎ) ಅದರ ಬಗ್ಗೆ ನನ್ನದು ಸಂಪೂರ್ಣ ಅಜ್ಞಾನ, (ಕತ್ತಲೆಯಲ್ಲಿದ್ದೇನೆ) ಬಿ) ನನಗೆ ಸ್ವಲ್ಪ ತಿಳಿದಿದೆ. ಆದರೆ ನಾನು ಭಯಂಕರವಾಗಿ ಗೊಂದಲದಲ್ಲಿ ಬಿದ್ದಿದ್ದೇನೆ. ಸಿ) ನನಗೆ ಎಲ್ಲವೂ ಗೊತ್ತಿದೆ. ಆದರೆ ಲಿಂಗವಿಷಯವೆಲ್ಲ ತಪ್ಪು ಎನ್ನುವುದು ನನ್ನ ಅನಿಸಿಕೆ.

17) ಹುಡುಗಿಯರು ನನ್ನನ್ನು ಚುಗಣ್ಣಿನಿಂದ ನೋಡುತ್ತಲೇ ಇರುತ್ತಾರೆ. ನನ್ನ ಉಡುಪು, ನನ್ನ ದೃಷ್ಟಿ, ನನ್ನ ಬಾಹ್ಯ ಬಡರೂಪವನ್ನು ಕುರಿತು ಟಿಪ್ಪಣಿಗಳನ್ನು ಮಾಡುತ್ತಾರೆ. 1, 2, 3.

18) ಇಂಥ ಟೀಕೆ ಟಿಪ್ಪಣಿಗಳಿಗೆ ನಾನು ಅತಿಭಾವುಕ. ಇನ್ನೊಬ್ಬರು ನನ್ನ ವಿಷಯಕ್ಕೆ ಏನು ಯೋಚಿಸುತ್ತಾರೆ, ಎಂಬ ಬಗ್ಗೆ ನಾನು ತುಂಬ ಚಿಂತಿಸುತ್ತೇನೆ. 1, 2, 3.

19) ನಾನು ಕಡಿದುಕೊಳ್ಳಬೇಕೆಂಬ ಹವ್ಯಾಸಕ್ಕೆ ಬಿದ್ದು ಬಿಟ್ಟಿದ್ದೇನೆ. ಆದರೆ ಎಷ್ಟು ಪ್ರಯತ್ನಿಸಿದರೂ ನಾನು ಅದನ್ನು ಕಡಿದುಕೊಳ್ಳಲಾರೆ ಅಥವಾ ಸ್ವಲ್ಪಕಾಲ ಅದನ್ನು ಗೆಲ್ಲಬಹುದು ಆದರೆ ಬೇಗನೆ. ಅದಕ್ಕೆ ವಶನಾಗುತ್ತೇನೆ. ಆಗ ಪೂರ್ಣವಾಗಿ ಧೈರ್ಯಗೆಟ್ಟಂತೆ ಭಾವಿಸುತ್ತೇನೆ. 1, 2, 3.

20) ನಾನು ಬಹುಕಾಲ ಯಾರೊಬ್ಬರಿಗೆ ನನ್ನನ್ನು ನಾನು ತೆರೆದಿಡಲಿಲ್ಲ ಹಾಗೆ ಮಾಡಬೇಕೆಂಬ ಅಗತ್ಯವನ್ನು ಅನುಭವಿಸುತ್ತೇನೆ. ಆದರೆ ಅಷ್ಟು ಧೈರ್ಯ ಬರುವುದಿಲ್ಲ. ಇಂಥ ಸನ್ನಿವೇಶವನ್ನು ಎದುರಿಸಲು ನನ್ನನ್ನೆ ನಾನು ಹೇಗೆ ಸಿದ್ಧಪಡಿಸಿಕೊಳ್ಳುವುದು ? 1, 2, 3.

21) ನಾನು ತುಂಬ ಚಿಕ್ಕವನಿದ್ದಾಗ ಒಂದು ಭಯಂಕರ ಅನಾಹುತವನ್ನು ನೋಡಿದೆ. ಈಗಲೂ ಅದು ನನ್ನನ್ನು ಬೆನ್ನಹತ್ತುತ್ತಲೇ ಇದೆ. ಈ ಅಡ್ಡಿಮಾಡುವ ಕ್ಷೋಭೆಗೊಳಿಸುತ್ತಿರುವ ನೆನಪನ್ನು ಹೇಗೆ ದೂರ ತಳ್ಳಲಿ ?

22) ಬಹಳ ಬಹಳ ಹಿಂದೆ ನನಗುಂಟಾದ ಯಾವುದೋ ಒಂದು ಘಟನೆಯನ್ನು ಮರೆಯಲು ಬಹುವಾಗಿ ಪ್ರಯತ್ನಿಸುತ್ತಿದ್ದೇನೆ. ಆದರೆ ನನಗೆ ಸಾಧ್ಯವೇ ಆಗಿಲ್ಲ. ನಾನು ಏನು ಮಾಡಬೇಕು.

23) ನನ್ನನ್ನು ಏನು ಆವರಿಸಿಕೊಂಡಿದೆಯೋ ನನಗೆ ಗೊತ್ತಿಲ್ಲ. ಮನೆಯಲ್ಲಿ ಯಾರನ್ನು ಹಿಡಿದಿಡುವಂತಿಲ್ಲ.

ಅ) ನನ್ನ ಮೇಲೆ ನಮ್ಮ ತಂದೆ ಅಧಿಕಾರ ನಡೆಸುವುದನ್ನು ನಾನು ಸಹಿಸಲಾರೆ.

ಆ) ನಾನು ಏನು ಮಾಡಬೇಕು ಎಂಬುದನ್ನು ನಮ್ಮ ತಾಯಿ ಯಾವಾಗಲೂ ಹೇಳುವುದನ್ನು ನಾನು ಸಹಿಸಲಾರೆ.

ಇ) ನನಗೆ ಹುಡುಗಿಯರನ್ನು ಕಂಡರೆ ಇಷ್ಟ. ಆದರೆ ನನ್ನ ಸೋದರಿಯರನ್ನು ಕುರಿತು ನನಗೆ ಅಸಹನೆ ಮೂಡುತ್ತದೆ.

ಈ) ನನ್ನ ಮಿತ್ರರೊಡನೆ, ಸಾಮಾನ್ಯವಾಗಿ ಜನಸಾಮಾನ್ಯರೊಡನೆ, ನಾನು ಯಾವಾಗಲೂ ಚೆನ್ನಾಗಿರುತ್ತೇನೆ, ವಿನಿಯದಿಂದಿರುತ್ತೇನೆ. ಆದರೆ ಮನಗೆ ಬಂದಕೂಡಲೇ ಪ್ರತಿಯೊಬ್ಬರೊಡನೆಯೂ ಒರಟಗಿ ನಡೆದುಕೊಳ್ಳುತ್ತೇನೆ. ಬಹುಬೇಗನೆ, ಸುಲಭದಲ್ಲಿ ಕೆರಳಿಬಿಡುತ್ತೇನೆ. ನನ್ನ ಸ್ವಂತ ಜನರೊಡನೆ ಹಾಗೆ ನಡೆದುಕೊಳ್ಳಲು ನನಗೆ ನಾನೇ ದ್ವೇಷಿಸಿಕೊಳ್ಳುವಂತೆ ಆಗುತ್ತದೆ. ನಾನು ಏನುಮಾಡಲಿ ? 1, 2, 3.

24) ನನ್ನ ಕುಟುಂಬ ಅಂಥ ಸುಖಮಯವಾದದ್ದಲ್ಲ.

ಎ) ನಮ್ಮ ತಂದೆ ಮತ್ತು ತಾಯಿ ಆಗಾಗ ಸಣ್ಣ ವಿಷಯಗಳಲ್ಲಿ ಜಗಳವಾಡುತ್ತಾರೆ.

ಬಿ) ನಮ್ಮ ತಂದೆ ಕುಡಿಯುತ್ತಾರೆ ಮತ್ತು ಸಾಮಾನ್ಯವಾಗಿ ಮನೆಯಲ್ಲಿ ನಾಟಕ ಸೃಷ್ಟಿಸಿಬಿಡುತ್ತಾರೆ.

ಸಿ) ನನ್ನ ಅಣ್ಣ ನಮ್ಮ ತಂದೆಯೊಡನೆ ಜಗಳಕಾದು ಮನೆಯಿಂದ ದೂರ ಹೋಗಿ ದಿನಗಟ್ಟಲೆ ನಿಂತು ಬಿಡುತ್ತಾರೆ. 1, 2, 3.

25) ನಾನು ಇಟ್ಟುಕೊಂಡಿರುವ ನನ್ನ ಮಿತ್ರರ ಬಗ್ಗೆ ನನಗೆ ಸುಖವಿಲ್ಲ. ಆ ತಂಡದಿಂದ ತಪ್ಪಿಸಿಕೊಳ್ಳಬೇಕು, ಕಡಿದುಕೊಳ್ಳಬೇಕು ಎಂಬ ಭಾವನೆ ಬಂದಿದೆ. ಅಥವಾ ಕಡೆಯಪಕ್ಷ ಅವರಲ್ಲಿ ಕೆಲವರಿಂದಾದರೂ. ಆದರೆ ನನಗೆ ಆ ಧೈರ್ಯವಿಲ್ಲ. 1, 2, 3.

26) ನಾನು ಕಾತರದಿಂದ ನರಳುತ್ತೇನೆ. ಅದರ ಕಾರಣ ಏನು ಎಂಬುದು ನನಗೆ ನಿಜವಾಗಿ ತಿಳಿದಿಲ್ಲ. ನನ್ನ ಸಮಸ್ಯೆಯ ಅಂತರಾಳವನ್ನು ನಾನು ಹೇಗೆ ತಾನೆ ಕಂಡು ಹಿಡಿಯಲಿ (ಅದರ ಆಂತರ್ಯವನ್ನು ಹೇಗೆ ಪ್ರವೇಶಿಸಲಿ)

27) ಭವಿಷ್ಯ ನನಗೆ ಮಂಕಾಗಿ ಕಾಣಿಸುತ್ತಿದೆ. ಅದನ್ನು ಕುರಿತು ಚಿಂತಿಸದೆ ಇರಲು ಸಾಧ್ಯವೇ ಇಲ್ಲ. 1, 2, 3.

(ಮೇಲೆ ಪಟ್ಟಿಮಾಡಿದ ಕೆಲವು ಬಾಬುಗಳನ್ನು 'ಹ್ಯಾರಿ ಬಾ 'ಅವರ 'ಬದುಕಿಗೆ ಮನಶಾಸ್ತ್ರ' ಎಂಬ ಪುಸ್ತಕದಿಂದ ಅಳವಡಿಸಿಕೊಳ್ಳಲಾಗಿದೆ).

ಟಿಪ್ಪಣಿ : ಮೇಲೆ ಪಟ್ಟಿ ಮಾಡಿದವು ಸಮಗ್ರವಾದುವಲ್ಲ, ಈ ಕೆಳಗೆ ನಿಮಗಿರುವ ವೈಯಕ್ತಿಕ ಸಮಸ್ಯೆಗಳನ್ನೇ ಹೇಳಬಹುದು.

ಹೆಚ್ಚಿನ ಸಮಸ್ಯೆಗಳು

1) .....................

2) .....................

3) .....................

4) ..................... ಇತ್ಯಾದಿ

## ಬಿ) ಪ್ರತಿಷ್ಠೆಯ ಚಲನೆ/ನಡೆ

ವಿದ್ಯಾರ್ಥಿಯು ಹೊಂದಿರುವ ಮೌಲ್ಯವನ್ನು ಮೆಚ್ಚಿಬಹುಮಾನಿಸಲು ಅಥವಾ ಆದರಿಸಲು ಇದು ಸಹಾಯ ಮಾಡುತ್ತದೆ. ವಿದ್ಯಾರ್ಥಿಯೂ ಏನಾದರೂ ಸ್ವಲ್ಪ ಹೆಮ್ಮೆಪಡಬಹುದಾದಂಥ ಎರಡು ಅಥವಾ ಮೂರು ವಿಷಯಗಳನ್ನು ಹೊತ್ತು ಈ ಬಗ್ಗ ಬಡಾಯಿಕೊಚ್ಚಿಕೊಳ್ಳುತ್ತಿಲ್ಲ. ನಿನಗೆ ಸುಖಕೊಡುವ ಯಾವುದೋ ಒಂದು ಸಾಧನೆಯನ್ನು ಕುರಿತು ಸುಮ್ಮನೆ ಹೇಳುತ್ತಿದ್ದೀಯೆ ''ಎಂದು''. ಎಲ್ಲಾ ವಿಷಯಾಂಶಗಳನ್ನು ಬರೆದ ಮೇಲೆ, ತತ್‌ಕ್ಷಣವೇ ತರಗತಿಗೆ ಪ್ರವೇಶಿಸಿ, ಅಲ್ಲಿನವರನ್ನೆಲ್ಲ ಗಮನಿಸಿ, ಪ್ರತಿಯೊಬ್ಬನು ಅವನವನ ಒಂದೊಂದು ವಿವರಣೆ (ಹೇಳಿಕೆ) ಗಳನ್ನು ಓದುವಂತೆ ಹೇಳಿ, ಎಲ್ಲರದ್ದು ಮುಗಿದ ಮೇಲೆ ಬೇರೆ ಬೇರೆಯವರನ್ನು ಕೇಳುವ ಕೆಲವು ಪ್ರಶ್ನೆಗಳು ಉಳಿಯಬಹುದು ಅಥವಾ ಅಲ್ಲಿ ಇಲ್ಲಿ ಕಂಡುಬಂದ ಕೆಲವು ವಿಷಯಗಳ ಬಗ್ಗೆ ಚರ್ಚೆ ಬೇಕಾಗಬಹುದು. ಆಗ ನಾನು ಇದರ ಬಗೆಗೆ ಒಳ್ಳೆಯದನ್ನು ಭಾವಿಸುತ್ತೇನೆ. ಅಥವಾ ನಾನು..................... ಇದನ್ನು ಆದರಿಸುತ್ತೇನೆ, ಎಂಬ ಪದಗಳಿಂದ ವಾಕ್ಯ ಆರಂಭವಾಗಬಹುದು.

ನಾನು ಹೆಮ್ಮೆ ಪಡುತ್ತೇನೆ ಅಥವಾ ಅದು ನಾನು ಹೆಮ್ಮೆ ಪಡುವ ವಿಷಯ.............

1) ನಾನು ಕೊಟ್ಟ ತೀರ್ಮಾನ ಸಾಕಷ್ಟು ಆಲೋಚಿಸಬೇಕಾದದ್ದು.

2) ಅತ್ಯಂತ ಶ್ರಮಸಾಧ್ಯವಾದ, ಆದರೆ ನಾನು ಕಿತ್ತು ಹಾಕಿದ, ಪಟ್ಟು ಹಿಡಿದ ಕೆಲಸದ ಮುಕ್ತಾಯ,

3) ನಾನು ಎತ್ತಿ ಹಿಡಿದ.............ಯಾವುದೋ ಒಂದು ಕೌಟುಂಬಿಕ ಸಂಪ್ರದಾಯ

4) ನಾನು ಕೈಗೊಳ್ಳಲು ಹಿಂಜರಿದ ಯಾವುದೋ ಒಂದು...............

5) ಒಬ್ಬ ವಯಸ್ಸಾದ ಹಿರಿಯ ವ್ಯಕ್ತಿಗೆ ನಾನುಮಾಡದ ಯಾವುದೇ ಒಂದು.

6) ನಾನು ಮೌನವಾಗಿರಬಹುದಾದದ್ದು ಅಪೇಕ್ಷಿತವಾಗಬಹುದಾಗಿದ್ದಾಗ ನಾನು ಏನನ್ನೋ ಹೇಳಿದ ಸಮಯ.

7) ನಾನು ಇತ್ತೀಚೆಗೆ ನಡೆಸಿದ ಒಂದು ಅಂಗಸಾಧನೆಯ ಸಾಹಸ

8) ನಾನು ಏನಾದರೂ ಹೇಳುವುದು ಸುಲಭವಾಗಿರಬಹುದಾಗಿದ್ದಾಗ ನಾನು ಏನನ್ನೋ ಹೇಳಿಟ್ಟ ಸಮಯ............

9) ನಾನು ನನ್ನ ಕೈಯಿಂದಲೇ ಮಾಡಿದ ಏನಾದರೊಂದು............

10) ಇತ್ತೀಚೆಗೆ ನಾನು ಜಾಣತನದಿಂದ ಮಾಡಿದ ಒಂದು ಖರೀದಿ ಅಥವಾ ಒಳ್ಳೆಯ ವ್ಯಾಪಾರದ ಸಮಯ.

11) ನಾನು ಗೆಲವು ಸಾಧಿಸಲು ಪ್ರಯತ್ನಿಸಿದ ಮತ್ತು ಅದರಲ್ಲಿ ಯಶಸ್ವಿಯಾದ ಒಂದು ಹವ್ಯಾಸ.

12) ಒಂದು ಸನ್ನಿವೇಶಕ್ಕೆ ಸಂಬಂಧಿಸಿದಂತೆ ಪ್ರತಿಕ್ರಿಯೆ ವ್ಯಕ್ತಪಡಿಸಿದ ನನ್ನ ಬಂಡವಾಳವನ್ನು ಹೆಚ್ಚಿಸುವುದರ ಬಗ್ಗೆ ನಾನು ಮಾಡಿದ ಏನಾದರೂ...........

13) ನಾನು ವಿಶಿಷ್ಟವಾಗಿ ಯಾರೊಬ್ಬರಿಗೆ ಪ್ರೀತಿಯನ್ನು ತೋರಿಸುತ್ತಿದ್ದಾಗ, ಆ ಬಗ್ಗೆ ನಾನು ಹೆಮ್ಮೆ ಪಟ್ಟಾಗಲಿನ ಸಂದರ್ಭ.

14) ಹೊಂದಾಣಿಕೆಯನ್ನು ಪ್ರತಿಭಟಿಸಲು ನಾನು ಏನಾದರೂ ಮಾಡಿದ್ದರೆ.

15) ನನ್ನ ಸುತ್ತ ಮುತ್ತಲಿನ ಪ್ರತಿಯೊಬ್ಬರೂ ಹೊಂದಾಣಿಕೆಯನ್ನು ಪ್ರತಿಭಟಿಸುತ್ತಿದ್ದಾಗ

ನಾನು ಹೊಂದಾಣಿಕೆಯನ್ನು ತರಲು ಯತ್ನಿಸುವ ಏನಾದರೂ..........

16) ನಾನು ಪ್ರಯತ್ನಿಸಿದ ಒಂದು ಅಪಾಯದ ವಿಷಯ ಮತ್ತು ಅದರಲ್ಲಿ ಯಶಸ್ವಿಯಾದಾಗ.

17) ಇತ್ತೀಚೆಗೆ ನಡೆದ ಒಂದು ಸಂಭಾಷಣೆ. ಅದರಲ್ಲಿ ಯಾವುದನ್ನು ಮುಚ್ಚಿಡದೆ ನಾನು ಏನನ್ನು ಬಯಸುತ್ತೇನೆ ಎಂಬುದನ್ನು ಯಥಾವತ್ತಾಗಿ ಹೇಳಿಬಿಟ್ಟಾಗ.

18) ನಾನು ಹೆಮ್ಮೆಪಟ್ಟುಕೊಂಡ ಒಂದು ಹೊಸ ಕಲಿಕೆ.

19) ನನ್ನ ಕುಟುಂಬಕ್ಕೆ ನಾನು ಮಾಡಿದ ಸಹಾಯದ ಮಾರ್ಗ.

20) ಜಾತೀಯತೆಯನ್ನು ಅರ್ಥಮಾಡಿಕೊಳ್ಳಲು ನಾನು ನೀಡಿದ ಕೊಡುಗೆಗೆ ಸಂಬಂಧಿಸಿದ ಏನಾದರೂ.

21) ನನ್ನ ಧರ್ಮದಿಂದ ನಾನು ಬದುಕಲು ನಾನು ಮಾಡಿದ ಏನಾದರೂ.

22) ಈ ಪ್ರಪಂಚದಲ್ಲಿನ ಸೌಂದರ್ಯದ ಭಂಡಾರಕ್ಕೆ ಸೇರಿಸಲು ನಾನು ಮಾಡಿದ್ದು ಏನಾದರೂ.

23) ಈ ಪ್ರಪಂಚದಲ್ಲಿನ ಜೀವನದ ಗುಣಕ್ಕೆ ಮತ್ತಷ್ಟು ಸೇರಿಸಲು ನಾನು ಮಾಡಿದ್ದು ಏನಾದರೂ.

24) 'ಪ್ರಜಾಪ್ರಭುತ್ವ' ಎಂಬುದು ಪದ ಮಾತ್ರವಲ್ಲದೆ ಅದರ ಅರ್ಥ ಹೆಚ್ಚಾಗುವಂತೆ ಮಾಡುವ ದಾರಿಯಲ್ಲಿ ನನ್ನ ಸಹಾಯ.

25) ಅಪಹಾಸ್ಯಕ್ಕೆ ಗುರಿಯಾಗಬಹುದಾಗಿದ್ದ ನನ್ನ ಒಬ್ಬ ಬಡ ಸ್ನೇಹಿತನನ್ನು ನಾನು ರಕ್ಷಿಸಿದ ಬಗ್ಗೆ.

26) ಅತ್ಯಂತ ಮೃದುವಾದದ್ದನ್ನು ಯಾರೋ ಒಬ್ಬರಿಗೆ ನಾನು ಮಾಡಿದ ಯಾವುದಾದರೂ..............

27) ನಾನು ಮಾಡಿದ ಒಂದು ತಮಾಷೆ ವಿಷಯ.............

28) ಒಂದು ಚಿಕ್ಕಮಗುವಿಗೆ ನಾನು ಒಂದು ಮುಖ್ಯ ದೃಷ್ಟಾಂತವಾಗುವಂತೆ ಅದಾಗಿನ ಸಮಯ.

29) ವರ್ಷದ ಕೊನೆಯ ತಿಂಗಳ ಒಳಗೆ ನಾನು ಕಲಿತ ಯಾವುದೇ ಹೊಸ ಕೌಶಲ.

30) ಶಾರೀರಿಕ ಶಕ್ತಿಯನ್ನು ಸ್ವೀಕರಿಸದ ನಾನು ಮಾಡಿದ ಯಾವುದೇ ಒಂದು-- ಆದರೆ......

## 2. ಸಿ) ವೈಯಕ್ತಿಕ ಸ್ವಾತಂತ್ರ್ಯದಲ್ಲಿ ಒಂದು ಅಭ್ಯಾಸ : ನಿರಂತರತೆಯ ಮೌಲ್ಯಗಳು

### ಉದ್ದೇಶ :

ಕೆಲವು ಯಾವುದೆ ಒಂದು ವಾದಾಂಶದ ಮೇಲೆ ಸಾಧ್ಯವಾದಷ್ಟು ವಿಕಲ್ಪಗಳ ಸೀಮೆಗಳನ್ನು ತೆರೆದಿಡಲು ಈ ಚಟುವಟಿಕೆ ಸಹಾಯ ಮಾಡುತ್ತದೆ. ಅನೇಕ ವಾದಾಂಶಗಳ ಮೇಲೆ ಬೂದು ಬಣ್ಣದ ಅನೇಕ ಛಾಯೆಗಳಿರುತ್ತವೆಂಬುದನ್ನು ಅರ್ಥಮಾಡಿಕೊಳ್ಳಲು ಆರಂಭಿಸುತ್ತಾರೆ ಮತ್ತು ಯಾವುದು ಆಗಾಗ ಕಾಣಿಸಿಕೊಳ್ಳುತ್ತದೆ ಮತ್ತು ತರಗತಿ ಕೋಣೆಯಲ್ಲಿ ವಿರೋಧವಾದ ವಾದಾಂಶಗಳು ಚರ್ಚಿತವಾಗುತ್ತವೆ ಎಂಬುದನ್ನು ಚಿಂತಿಸುತ್ತಾ ಅವು ಬಿಳುಪು-ಕಪ್ಪು ಒಂದು ಅಥವಾ ಇನ್ನೊಂದು ಇವುಗಳಿಂದ ದೂರ ಸರಿಯುವ ಸಂಭವ ವಿಶೇಷವಾಗಿ ಕಂಡು ಬರುತ್ತಿದೆ. ನಿರಂತರತೆಯು ವಿದ್ಯಾರ್ಥಿಗಳನ್ನು ಅವರು ತಮ್ಮ ಅಭಿಪ್ರಾಯಗಳನ್ನು ನಂಬಿಕೆಗಳನ್ನು ಸಾರ್ವಜನಿಕವಾಗಿ ದೃಢೀಕರಿಸುವುದಕ್ಕೆ ಕೂಡ ಪ್ರೋತ್ಸಾಹಿಸುತ್ತದೆ.

### ಕಾರ್ಯವಿಧಾನ

ಒಂದು ವಾದಾಂಶವನ್ನು ಶಿಕ್ಷಕರಿಂದ ಅಥವಾ ತರಗತಿಯಿಂದ, ಯಾರೊಬ್ಬರಿಂದ ಗುರುತಿಸಲ್ಪಡುತ್ತದೆ, ಈ ವಾದಾಂಶ ತರಗತಿಯಲ್ಲಿ ಚರ್ಚೆಯಾಗುತ್ತಿದ್ದಾಗಲೇ ಹೊರಹೊಮ್ಮಿ ತನ್ನಷ್ಟಕ್ಕೆ ತಾನೇ ಕಂಡು ಬಂದಿರಬಹುದು ಅಥವಾ ಮುಂಚಿತವಾಗಿಯೇ ಶಿಕ್ಷಕನಿಂದ ಅಥವಾ ವಿದ್ಯಾರ್ಥಿಯಿಂದ ಸಿದ್ಧಪಡಿಸಲ್ಪಟ್ಟಿದ್ದರೂ ಇರಬಹುದು.

ಶಿಕ್ಷಕ ಬೋರ್ಡಿನ ಮೇಲೆ ಒಂದು ಉದ್ದಗೆರೆ ಎಳೆಯುತ್ತಾನೆ. ಮತ್ತು ಅವನು ಅಥವಾ ಅವನು ಮತ್ತು ತರಗತಿ ವಾದಾಂಶದ ಎರಡು ಧ್ರುವ ಸ್ಥಾನಗಳನ್ನು ನಿರ್ಧರಿಸುತ್ತಾರೆ. ಉದಾಹರಣೆಗೆ.

## ವೈಯಕ್ತಿಕ ಸ್ವಾತಂತ್ರ್ಯ

| | |
|---|---|
| ಒಂದು ಅಂತಿಮ ಸ್ಥಾನ ಹೀಗಿರಬಹುದು : | ಇನ್ನೊಂದು ಕೊನೆ |
| ಎಲ್ಲ ತೀರ್ಮಾನಗಳು | ಸಂಪೂರ್ಣ ಸ್ವಾತಂತ್ರ್ಯ ನಿನಗೆ |
| ನಿನಗಾಗಿ ಮಾಡಿವೆ. | ನೀನೇ ಆಯ್ದುಕೊಳ್ಳುವುದು. |

ಅನಂತರ ನಿಮ್ಮ ಸ್ಥಾನಗಳಿಗೆ ನಿಮ್ಮ ಕಾರಣಗಳನ್ನು ಭಾಗ ಮಾಡಿಕೊಳ್ಳಬಹುದು. ಶಿಕ್ಷಕನು ಕೊಠಡಿಯ ಸುತ್ತ ಸುತ್ತಾಡುತ್ತಾನೆ ಅಥವಾ ಸ್ವಯಂ ಸೇವಕರನ್ನು ಆಹ್ವಾನಿಸುತ್ತಾನೆ. ವಿದ್ಯಾರ್ಥಿಗಳು ಗೆರೆಯ ಮೇಲೆ ತಮ್ಮ ಹೆಸರುಗಳನ್ನು ಬರೆಯುತ್ತಾರೆ. ಮತ್ತು ಸಂಕ್ಷಿಪ್ತವಾಗಿ ತಮ್ಮ ಸ್ಥಳಯೋಜನೆ ಯಾವುದಕ್ಕಾಗಿ ಇದೆ ಎಂಬುದನ್ನು ತಿಳಿಸುತ್ತಾರೆ. 5 ರಿಂದ 10 ವಿದ್ಯಾರ್ಥಿಗಳು ಪ್ರತಿಕ್ರಿಯಿಸಿದರೆ, ಇದು ಅಭಿಪ್ರಾಯದ ಹರಡುವಿಕೆಗೆ ಸಾಮಾನ್ಯವಾಗಿ ಸಾಕಷ್ಟಾಗುತ್ತದೆ ಮತ್ತು ಪ್ರತಿಯೊಬ್ಬನು ತನ್ನ ಸ್ವಂತ ಸ್ಥಾನವನ್ನು ನಿಶ್ಚಯಿಸಲು ಸಾಕಷ್ಟು ಕಾಲಾವಕಾಶವನ್ನು ಕೊಡುತ್ತದೆ. ಆಗ ಮುಕ್ತ ಚರ್ಚೆ ಸುಲಭವಾಗಿ ಆರಂಭವಾಗುತ್ತದೆ. ವಿದ್ಯಾರ್ಥಿಗಳು ಸಮಾನಸ್ಕಂದರ ಒಟ್ಟು ಗುಂಪಾಗಿ ಸೇರುವ, ಭಿನ್ನವಾಗಿ ಬಿಡುತ್ತೇವೆ ಎಂಬುವ ಭಯದ, ವಾದಾಂಶ ಇತ್ಯಾದಿಗಳನ್ನು ಪರಿಶೀಲಿಸುವಲ್ಲಿ ಸೋಮಾರಿತನದ ಪ್ರವೃತ್ತಿ ತೋರಿಸಿದರೆ, ವಿದ್ಯಾರ್ಥಿಗಳನ್ನು ಕೇಳಿ ತಮ್ಮ ಉತ್ತರಗಳನ್ನು ಒಂದು ಚೂರು ಹಾಳೆಯ ಮೇಲೆ ಬರೆಯುವಂತೆ ಹೇಳಿ ಮತ್ತು ಶಿಕ್ಷಕ ಆ ಪ್ರತಿಕ್ರಿಯೆಗಳನ್ನು ಅಲ್ಲಲ್ಲಿ ಆರಿಸಿಕೊಂಡು ಅವುಗಳ ನಿರಂತರತೆಯ ದೃಷ್ಟಿಯಿಂದ ಅವುಗಳ ಸ್ಥಾನಗಳನ್ನು ನಮೂದಿಸಬಹುದು. ವಿದ್ಯಾರ್ಥಿಗಳು ತಮ್ಮ ಕಾಗದದ ಚೂರುಗಳಲ್ಲಿ. 'ನಾನು ತೇರ್ಗಡೆ ಆಗಿದ್ದೇನೆ' ಎಂದು ಬರೆಯಲು ಅವರಿಗೆ ಅನುಮತಿ ನೀಡಬೇಕು. ಒಂದು ವಾದಾಂಶದ ಖಚಿತವಾದ ಕೇಂದ್ರದ ಬದುಕಿನಲ್ಲಿರುವುದು ಅಪರೂಪದ ಎಂಬುದನ್ನು ಅವರಿಗೆ ವಿವರಿಸಿ. ಶಿಕ್ಷಕ ತನ್ನ ವಿದ್ಯಾರ್ಥಿಗಳ ಆಯ್ಕೆಯಲ್ಲಿ ಯಾವುದೇ ಪ್ರಭಾವವನ್ನು ಬೀರದಂತೆ ಬಹು ಎಚ್ಚರಿಕೆಯಿಂದಿರಬೇಕು. ವಿಸ್ತಾರವಾಗಿ ಮಂಡಿಸಿದ ಅಭಿಪ್ರಾಯ ಸಾಮಾನ್ಯವಾಗಿ ನಿರಂತರತೆಯದ್ದು. ವಾದಾಂಶದ ಬಗೆ ಒಳ್ಳೆಯ

ಚಿಂತನೆಯನ್ನು ಪ್ರೋತ್ಸಾಹಿಸಿದೆ ಎಂಬುದನ್ನು ಅರ್ಥೈಸುತ್ತದೆ.

## ಒಂದು ಉದಾಹರಣೆ :

ಕುಟುಂಬದಿಂದ ನಿಮಗೆ ಎಷ್ಟು ಬೇಕು ? ಕುಟುಂಬದ ಮೇಲೆ ಪೂರ್ಣವಾಗಿ ಅವಲಂಬಿಸಿರುವುದು. ಬಾಹ್ಯಾಸಕ್ತಿಗಳಿಲ್ಲ ಮಿತ್ರರು ಇತ್ಯಾದಿಗಳಿಲ್ಲ. ಕುಟುಂಬದಿಂದ ಪೂರ್ಣವಾಗಿ ಸ್ವತಂತ್ರ ಅಥವಾ ಕುಟುಂಬದಿಂದ ನಿರ್ಲಕ್ಷ್ಯ; ಸಾಧ್ಯವಾದರೆ ಅವುಗಳಿಂದ ತಪ್ಪಿಸಿಕೊಳ್ಳುವುದು ಲೇಸು.

❁❁❁❁❁❁❁❁❁❁

ಅಧ್ಯಾಯ-೪

# ಸಂಬಂಧಗಳು

''ಯಾವ ಮನುಷ್ಯನೂ ಒಂದು ದ್ವೀಪವಲ್ಲ-ಇಡಿಯಾಗಿ ತನಗೆ ತಾನೇ''--- ಪ್ರಪಂಚದಲ್ಲಿ ಮೂರು ಮಾದರಿಯ ಸಂಬಂಧಗಳು ಉಂಟು.

ಪ್ರಾಥಮಿಕ ಸಂಬಂಧ : ಇದೇ ಮೂಲ ಸಂಬಂಧ. ಇದರಿಂದ ಇತರ ಸಂಬಂಧಗಳನ್ನು ಕಂಡು ಹಿಡಿಯಲಾಗಿದೆ. ಈ ಸಂಬಂಧವೇ ತಾಯಿ ಮಕ್ಕಳ ನಡುವಿನ ಸಂಬಂಧ.

ಎರಡನೆಯ ಸಂಬಂಧ : ಇದು ಮತ್ತು ಅದರ ತಂದೆ ಮತ್ತು ರಕ್ತ ಸಂಬಂಧಗಳ ನಡುವಿನ ಸಂಬಂಧ.

ಮೂರನೆಯ ಸಂಬಂಧ : ಇದು ಮಗು, ಸಮಾನಸ್ಕಂದರು ಮತ್ತು ಸಮುದಾಯ ಇವರುಗಳ ನಡುವಿನ ಸಂಬಂಧ. ತಳಪಾಯದ ಅಥವಾ ಪ್ರಾಥಮಿಕ ಸಂಬಂಧ ಬಲವಾಗಿದ್ದರೆ, ಮಗುವು ಧನಾತ್ಮಕ ಶ್ರೇಣಿಯ ತೃಪ್ತಿಕರ ಸಂಬಂಧಗಳ ಕಡೆಗೆ, ಬದುಕು ತೆರೆದಿರುವಂತೆ ಮುನ್ನೋಟವನ್ನು ಕಾಣಬಹುದು.

ಮುಂದುವರೆಯುತ್ತಿರುವ ಮತ್ತು ಸತತವಾಗಿ ಬೆಳೆಯುತ್ತಿರುವ ಸಂವಾದ ಆರೋಗ್ಯಕರ ಸಂಬಂಧವನ್ನು ವಿಶಿಷ್ಟಗೊಳಿಸುತ್ತದೆ. ತಂದೆ ತಾಯಿಗಳು ತಮ್ಮ ಮಾತಾಪಿತೃವಾತ್ಸಲ್ಯದ ಪಾತ್ರದಲ್ಲಿ ಗುಣಮಟ್ಟಕ್ಕೆ ಕಳಪೆ ತಂದುಕೊಂಡರೆ, ಮಕ್ಕಳು, ವಿಶೇಷವಾಗಿ, ಅವರು ತರುಣರಾಗಿದ್ದಾಗ, ಸ್ವಂತ ಪ್ರವೃತ್ತಿಯನ್ನು ಅವಲಂಬಿಸುವುದರ ಮಟ್ಟಗೆ ಮತ್ತು ತಾಯಿತಂದೆಗಳ ಸಾಧಾರಣ ಪೋಷಣ ಶಕ್ತಿಯಿಂದ ಹಿನ್ನಡೆಯುವ ಮಟ್ಟಗೆಪ್ರಮಾಣವನ್ನು ವ್ಯತ್ಯಸ್ಥ ವ್ಯಾಪ್ತಿಗಳಿಂದ ಕಳಚಿಕೊಳ್ಳುತ್ತಾರೆ.

ಕೌಟುಂಬಿಕ ಸಂಬಂಧಗಳ ಈ ದೃಷ್ಟಿಯಿಂದ ಒಂದು ಘಟಕವಾಗಿ ರೂಪಗೊಂಡಿರುವ

ತಂದೆತಾಯಿಗಳು ಮತ್ತು ಮಕ್ಕಳು ಪ್ರಮುಖ ಸ್ಥಾನವನ್ನು ಪಡೆಯುತ್ತಾರೆ. ಅದಕ್ಕೂ ಹೆಚ್ಚಾಗಿ, ಮೂಲ ಅಣು ಕುಟುಂಬದಲ್ಲಿ ತಂದೆತಾಯಿಗಳ ಮತ್ತು ಮಕ್ಕಳ ನಡುವಿನ ಸಂಬಂಧ ಇನ್ನೂ ಹೆಚ್ಚಿನ ಮಹತ್ವವನ್ನು ಪಡೆಯುತ್ತದೆ.

## ಸಾಂಸ್ಥಿಕ ಪರಿಸರ :

ವಯಸ್ಸಾದ ಮಕ್ಕಳು, ಯಾವೊಂದು ಸಾಂಸ್ಥಿಕ ಪರಿಸರದಲ್ಲಿ ತಮ್ಮ ಮೊದಲಿನ ವರ್ಷಗಳನ್ನು ಕಳೆದರೋ ಅವರು ಹೆಚ್ಚು ಸಮಸ್ಯಾತ್ಮಕ ಸ್ವಭಾವವನ್ನು, ತಮ್ಮ ಕಡೆಗೆ ಲಕ್ಷ್ಯ ಕೊಡುವಂಥ ಹೆಚ್ಚು ತಗಾದೆಗಳನ್ನು ಮತ್ತು ಹೆಚ್ಚು ಉಗ್ರತೆಯನ್ನು ಪ್ರದರ್ಶಿಸುತ್ತಾರೆ. ಅವರು ಮಾತಿನಲ್ಲಿ, ಮಾನಸಿಕ ಅಭಿವೃದ್ಧಿಯಲ್ಲಿ ಮತ್ತು ಶೈಕ್ಷಣಿಕ ವರ್ತನೆಗಳಲ್ಲಿ ಕಾಲನಿಕವಾಗಿ ಹಿಂದೆ ಬೀಳುತ್ತಾರೆ. ಸಂಸ್ಥೆಗೆ ಬದಲಾಗಿ ಪೋಷಕ ಗೃಹದಲ್ಲಿ ಅವರ ಮೊದಲ ವರ್ಷಗಳನ್ನು ಕಳೆದ, ಅದೇ ರೀತಿಯ ಹಿನ್ನೆಲೆಯುಳ್ಳ ಮಕ್ಕಳು ಈ ರೀತಿಯ ಹಿಂಜರಿಕೆಯ ರೂಪಗಳನ್ನು ಪ್ರದರ್ಶಿಸುವುದಿಲ್ಲ. ಈ ಸ್ವಭಾವ ಪ್ರಾಥಮಿಕ ಸಂಬಂಧದ ಅಭಾವದ ನೇರ ಫಲವೇ ಆಗಿದೆ.

## ಮಾತಾಪಿತೃ ಮತ್ತು ಮಗುವಿನ ಬಂಧುತ್ವ

## ಮಾತೃ ಪೋಷಣೆ

''ದೇವರು ಸರ್ವತ್ರ ಇರುವುದು ಸಾಧ್ಯವಿಲ್ಲ, ಆದ್ದರಿಂದ ಅವನು ತಾಯಂದಿರನ್ನು ಸೃಷ್ಟಿಸಿದ''

ಇತರ ವ್ಯಕ್ತಿಗಳ ಸ್ವಭಾವಕ್ಕೆ ಮಕ್ಕಳ ಸಲುವಾಗಿ ಮೆಚ್ಚಿಗೆಯ ಬಹುಮಾನವನ್ನು ಸಾಧಿಸುವುದು ಅದರ ಭೌತಿಕ ಅಗತ್ಯತೆಗಳನ್ನು ತೃಪ್ತಿಕರವಾಗಿ ಪುನಃ ಪುನಃ ಅದರ ಸಂಪರ್ಕದಿಂದ ಬೆಳಸುವುದರ ಮೂಲಕವೇ ಸಾಧ್ಯ. ಅಂದರೆ ಅದರ ಪರಿಣಾಮ ಅದು ಇನ್ನೊಬ್ಬ ವ್ಯಕ್ತಿಯ ನಿರಂತರ ಹಾಜರಾತಿಯನ್ನು ಬೆಳೆಸಿಕೊಳ್ಳುತ್ತದೆ. ಏಕೆಂದರೆ ಅವನು ಅದರ ಅಗತ್ಯತೆಗಳನ್ನು ಒದಗಿಸಿಕೊಡುತ್ತಾನೆ. ಅವನು/ಅವಳು ಸಾಮಾನ್ಯವಾಗಿ ತಾಯಿಯೇ. ಅದು/ಮಗುವು ಅವಳ ಗಮನವನ್ನು, ನೆರವನ್ನು ಮತ್ತು ಪ್ರೀತಿಯನ್ನು ಗಳಿಸಿಕೊಳ್ಳಲು ಹಾತೊರೆಯು ಕ್ರಮೇಣ ಅವಳು ಒಪ್ಪಿದಂತೆ ನಡೆಯಲು ನಟಿಸಿದರೆ, ಅಥವಾ ನಡೆದರೆ ತನಗೆ ಅವಳಿಂದ ಪಡೆಯುವ ಮೆಚ್ಚಿಗೆ ಬಹು ಹೆಚ್ಚಾಗಿ ಲಭ್ಯವಾಗುತ್ತದೆ ಎಂಬುದನು

ಕಲಿತುಕೊಳ್ಳುತ್ತದೆ. ಅದರ ಜೊತೆಗೆ ಅದು ಅವಳ ನೆರವನ್ನು ಅಥವಾ ಒಪ್ಪಿಗೆಯನ್ನು ಹಿಂದೆಗೆದುಕೊಂಡಾಗ ಅದು ಪ್ರತಿಕ್ರಿಯಿಸುದನ್ನು ಕಲಿತು ಕೊಳ್ಳುತ್ತದೆ.

## ಅವಲಂಬನೆಯ ಉದ್ದೇಶದ ಶಕ್ತಿ

ಮಕ್ಕಳು ಪ್ರದರ್ಶಿಸುವ ಅವರ ಅವಲಂಬನೆ ಸ್ವಭಾವದ ಬಲಕ್ಕೆ ಸಂಬಂಧಿಸಿದಂತೆ ಮಕ್ಕಳಲ್ಲಿ ಭಿನ್ನತೆಯುಂಟು. ಉದಾಹರಣೆಗೆ, ಅಂಥ ಸೀಯರ್ಸ್, ಮೆಕಾಬೆ ಮತ್ತು ಲೆವಿನ್, ಮಕ್ಕಳ ಪೋಷಣಾಕ್ರಮದ ಮಾದರಿಗಳಲ್ಲಿ ಅವಲಂಬನೆಗೆ ಸಂಬಂಧಿಸಿದಂತೆ ವಿವರಗಳನ್ನು ಕೊಡಲು ಪ್ರಯತ್ನಿಸಿದ್ದಾರೆ. ತಾಯಂದಿರೊಡನೆ ಕೈಗೊಂಡ ಸಂದರ್ಶನಗಳ ಆಧಾರದ ಮೇಲೆ ತಾಯಿಯ ಮತ್ತು ಮಗುವಿನ ಸ್ವಭಾವದ ಲಕ್ಷಣಗಳ ಪರಿಮಾಣ ಕಂಡು ಹಿಡಿದಿದ್ದಾರೆ. ಅವರ ತೀರ್ಮಾನ.

''ಅವಲಂಬನೆಯ ಮೆಚ್ಚಿಗೆ ಅಥವಾ ಬಹುಮಾನ ಸಲ್ಪವೇ ಇದ್ದಾಗ, ಕೆಟ್ಟ ನಡತೆಗೆ ನೀಡುವ ಶಿಕ್ಷೆಯ ಪರಿಮಾಣ, ಅದು ಸಂಭವಿಸಿದ, ಅದರ ಪ್ರಮಾಣಕ್ಕೆ ಅಂಥ ವ್ಯತ್ಯಾಸವೇನನ್ನು ಮಾಡುವುದಿಲ್ಲ''

## ಬಹುಮಾನ ಮತ್ತು ಶಿಕ್ಷೆ

ಶಿಕ್ಷೆ ಬಹುಮಾನದ ಜೊತೆ ಜೊತೆ ಬೆರೆತಾಗ, ಬಹುಮಾನಕ್ಕಿಂತ ವಿಶೇಷವಾಗಿ ಹೆಚ್ಚು ಬಲಿಷ್ಠವಾದ ಅವಲಂಬನೆಯ ಅಗತ್ಯವನ್ನು ಉಂಟುಮಾಡುತ್ತದೆ. ಆದರೆ ಮೆಚ್ಚುಗೆಯ ಕೊರತೆಯಲ್ಲಿ ಶಿಕ್ಷೆಯು ಅಥವಾ ಅದರ ಭಯವು ಬಲಯುಕ್ತ ಅವಲಂಬನೆಯನ್ನು ಉಂಟುಮಾಡಲು ಸಾಕಾಗುವುದಿಲ್ಲ. ಪ್ರೀತಿಯ ತಂದೆ ತಾಯಿಗಳಿಂದ ಅಥವಾ ಶಿಕ್ಷಕರಿಂದ ಹೊಂದುವ ಶಿಕ್ಷೆ ಹೆಚ್ಚು ಪರಿಣಾಮಕಾರಿ. ಏಕೆಂದರೆ ಅದು ಪ್ರೀತಿಯನ್ನು, ಹಿಂಜರಿಕೆಯನ್ನು ಯುವಕನಿಗೆ ಪ್ರತಿನಿಧಿಸಿದಂತಾಗುತ್ತದೆ. ಅದರ ವಿರುದ್ಧದ ಮತ್ತು ತುದಿಯಲ್ಲಿ ತಂದೆ ಅಥವಾ ತಾಯಿ ಅವನ/ಅವಳ ಮಗುವನ್ನು ವಿಶೇಷವಾಗಿ ಹಚ್ಚಿಕೊಂಡಿದ್ದರೆ, ಯಾವುದೇ ಬಗೆಯ ಅನಮತಿಯನ್ನು ಪ್ರದರ್ಶಿಸಿಲ್ಲದಿದ್ದರೆ, ಯಾವೊಬ್ಬ ತನ್ನ ಮಗುವಿನ ಬಗ್ಗೆ ಆಗಾಗ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾನೆ ಅವನಿಗಿಂತ ಕಡಿಮೆ ಶಕ್ತಿಯ ಅವಲಂಬನೆಯನ್ನು ಪ್ರದರ್ಶಿಸುತ್ತಾನೆ ಮತ್ತು ಕೂಡ ಒಮ್ಮೊಮ್ಮೆ ಅನುಮತಿಯನ್ನು ಅಥವಾ ಶಿಕ್ಷೆಯನ್ನು ಪ್ರದರ್ಶಿಸುತ್ತಾನೆ.

ತಾಯಿಯ ಪಕ್ಷದಲ್ಲಿ ಅನೇಕ ನಕಾರಾತ್ಮಕ ಅಥವಾ ಅಸಮ್ಮತ ಕ್ರಿಯೆಗಳು ಅವಳು ಸಾಧಾರಣವಾಗಿ ಒದಗಿಸುವ ತೃಪ್ತಿಕರಭಾವಗಳು ಅದಕ್ಕೆ ತಪ್ಪಿ ಹೋಗಬಹುದೆಂಬ ಸಂದೇಹಗಳೇ ಆಗಿ ಬಿಡುತ್ತವೆ. ಅಂಥ ಸಂದರ್ಭಗಳು ಸಂಭವಿಸಿದಾಗ, ಅಸಮ್ಮತಿಯನ್ನು ಹಿಂದೆಗೆದುಕೊಂಡಾಗ ಆ ಕಾತರತೆಯ ಅಂತ್ಯವೇ ಒಂದು ಮೆಚ್ಚಿಗೆಯಾಗಿ ಸಂಭವಿಸುತ್ತದೆ. ಅಷ್ಟೇ ಅಲ್ಲ ಬಹುಶಃ ಅವಳಲ್ಲಿ ಅವನ ನಚ್ಚು ಹೆಚ್ಚು ಆಳವಾಗುತ್ತದೆ. ಪರಿಣಾಮವಾಗಿ ತಾಯಿ ಒಬ್ಬ ಸಾಧಾರಣ ಬಲಯುಕ್ತ ಪ್ರತಿನಿಧಿಯಾಗುತ್ತಾಳೆ. ಸಾಮಾನ್ಯವಾಗಿ ಪ್ರತಿಯೊಬ್ಬರು, ಅಳುತ್ತಿರುವ ಹೆದರಿದ ಮಗುವನ್ನು ತಾಯಿ ಸಮಾಧಾನ ಪಡಿಸುವ ಮೃದುತ್ವದ ನಡತೆಯ ಶಕ್ತಿಯನ್ನು ಗಮನಿಸಿರಬಹುದು.

ಮಗು ಹುಡಗನಾಗಿ ಬೆಳೆಯುವಾಗಲೂ ಕೂಡ, ತಾಯಿಗೆ ಈ ಮಾರ್ಪಾಡು ಪೂರ್ಣವಾಗಿ ಅರಿವಾಗದಿದ್ದರೂ ಅವಳ ತಾಯ್ತನ ಕಡಿಮೆ ಆಗುವುದಿಲ್ಲ. ಭಾರತದಲ್ಲಿ ಪಿತೃತ್ವದ ಅಗತ್ಯಕ್ಕೆ ಸಾಕಷ್ಟು ಬೆಲೆ ಕೊಟ್ಟಂತೆ ಕಾಣುವುದಿಲ್ಲ. ಹಿತೈಷಿಯೂ ಗುಣಗ್ರಹಣ ಶಕ್ತಿಯುಳ್ಳವನೂ ಆದ ಒಬ್ಬ ತಂದೆ ತನ್ನ ಅಧಿಕಾರದ ಪಾತ್ರವನ್ನು ಬಲಪಡಿಸಿಕೊಳ್ಳಬಹುದು ಮತ್ತು ತಾಯಿಗೆ ಬೆಂಬಲ ನೀಡಬಹುದು.

## ತಾಯಿ ಮತ್ತು ಮಗಳ ಬಂಧುತ್ವ

ಸಾಮಾನ್ಯವಾಗಿ ಭಾರತದಲ್ಲಿ ತಾಯಿ ಮಗಳ ಬಂಧುತ್ವ ಹೆಚ್ಚು ಶಕ್ತಿಯುತವಾದದ್ದು. ಅದಕ್ಕೆ ಸರಳವಾದ ಕಾರಣವೆಂದರೆ ಅವರಿಬ್ಬರೂ ಚಿಂತಿಸುತ್ತಾರೆ ತಾವು ತಂದೆ ಮತ್ತು ಮಗನಿಗಿಂತ ಕೆಳಸ್ತರದವರು ಎಂದು. ಈ ಭಾವನೆ ಶಿಕ್ಷಣದ ಜೊತೆ ಜೊತೆಯಲ್ಲೇ ಬದಲಾವಣೆಯಾಗುತ್ತಿದ್ದರೂ ಈ ಸಂಪ್ರದಾಯ ಹೆಂಗಸು ಮತ್ತು ಗಂಡಸು ಇಬ್ಬರಲ್ಲೂ ಅತಿ ಆಳವಾಗಿ ಬೇರೂರಿಬಿಟ್ಟಿದೆ. ಆದರೆ ಈ ಭಾವನೆ ಹೆಚ್ಚು ಸತ್ವ ಪೂರ್ಣವಾಗಿ ಬದಲಾವಣೆ ಹೊಂದುವುದಕ್ಕೆ ಇನ್ನೂ ಬಹುಕಾಲ ಬೇಕಾಗುತ್ತದೆ.

ಅದಾಗ್ಯೂ ವಿಶ್ವವಿದ್ಯಾನಿಲಯದ ವಿದ್ಯಾರ್ಥಿನಿಯರನ್ನು ಕುರಿತು ನಡೆಸಿದ ಒಂದು ಸಣ್ಣ ವ್ಯಾಸಂಗದಿಂದ ಕಂಡು ಬಂದ ಅಂಶಗಳನ್ನು ಹೀಗೆ ವಿವರಿಸಬಹುದು.

ಕೆಲವು ವಿದ್ಯಾರ್ಥಿನಿಯರು ಭಾವಿಸುತ್ತಾರೆ ತಮ್ಮ ತಾಯಂದಿರು ಹಳೇಕಾಲದ

ಭಾವನೆಗಳನ್ನು ಹೊಂದಿದ್ದಾರೆ, ಅವರು ತಂದೆಯರ ವಾತ್ಸಲ್ಯಕ್ಕೆ ಪ್ರತಿಸ್ಪರ್ಧಿಗಳಾಗಿದ್ದಾರೆ. ಅವರು ತಮ್ಮ ತಾಯಂದಿರೊಡನೆ ವಿಶ್ವಾಸವನ್ನು ಬೆಳೆಸಿಕೊಳ್ಳುವುದಿಲ್ಲ.

ವಿದ್ಯಾರ್ಥಿನಿಯರ ಪರವಾಗಿ ಹೇಳುವುದಾದರೆ ಅವರ ತಾಯಂದಿರು ಹೆಣ್ಣುಮಕ್ಕಳಿಗಿಂತ ಗಂಡು ಮಕ್ಕಳು ಮೇಲ್ಮಟ್ಟದವರು ಎಂಬ ಭಾವನೆಯನ್ನುಳ್ಳವರಾಗಿದ್ದಾರೆ. ಆದ್ದರಿಂದ ಹೆಣ್ಣು ಮಕ್ಕಳನ್ನು ಅಡಿಗೆ ಮನೆ ಕೆಲಸಕ್ಕೆ ಸೀಮಿತಗೊಳಿಸಿ ಬಿಡುತ್ತಾರೆ. ತಾಯಂದಿರು ಕೆಲವು ವೇಳೆ ತಮ್ಮ ಹೆಣ್ಣು ಮಕ್ಕಳನ್ನು ಕೂಡ ಬಲವಂಥಪಡಿಸಿಯೂ ಪಡಿಸುತ್ತಾರೆ.

ಇನ್ನು ಕೆಲವರು ಹೇಳಿದರು. ಅವರ ತಾಯಂದಿರು ತಮ್ಮ ಹೆಣ್ಣುಮಕ್ಕಳ ಸ್ವಾತಂತ್ರ್ಯ ಪ್ರವೃತ್ತಿಯನ್ನು ಮತ್ತು ಅವಕಾಶಗಳನ್ನು ಅಸೂಯೆಯಿಂದ ಕಾಣುತ್ತಾರೆ. ಅವರು ಅನೇಕ ವೇಳೆ ತಮ್ಮ ಹಳೆಯ ಸಂಪ್ರದಾಯಗಳಿಗೆ ಅಂಟುಕೊಳ್ಳುವುದರಲ್ಲಿ ತುಂಬ ಹಟಮಾರಿಗಳಾಗಿರುತ್ತಾರೆ.

ಅದಾಗ್ಯೂ ಹೆಚ್ಚಿನ ಶೇಕಡಾವಾರು ಜನ ತಾವು ತಾಯಂದಿರೊಡನೆ ಮಾತನಾಡಬಹುದು, ಅವರಲ್ಲಿ ವಿಶ್ವಾಸ ನೀಡಬಹುದು ಮತ್ತು ಅವರೊಡನೆ ಅತ್ಯಂತ ಸಮೀಪದಿಂದ ವರ್ತಿಸಬಹುದು ಎಂದು ಭಾವಿಸುತ್ತಾರೆ.

ಅನೇಕ ಜನ ಹುಡಗಿಯರ ಭಾವನೆಯ ಪ್ರಕಾರ ''ತಾಯಂದಿರು ತಮಗೂ ತಮ್ಮ ತಂದೆಗಳಿಗೂ ಮಧ್ಯೆ-ತಡೆನಿವಾರಕರಂತೆ ವರ್ತಿಸುತ್ತಾರೆ ಮತ್ತು ತಾಯಂದಿರು ತುಂಬ ಕರ್ತವ್ಯ ಪ್ರಜ್ಞೆಯಿಂದ ಕೂಡಿದವರಾಗಿ, ಸ್ನೇಹಪರವಾಗಿ, ಅನುಕಂಪ ಸಹಿತರಾಗಿ, ವಿಚಾರ ಪರರಾಗಿ, ಅರ್ಥಮಾಡಿ ಕೊಳ್ಳುವವರಾಗಿ ಇರುವುದಲ್ಲದೆ ತಮ್ಮ ವಿಶ್ವಾಸಾತ್ಮಕ ವ್ಯಕ್ತಿಗಳಾಗಿ, ನಡೆದುಕೊಳ್ಳುತ್ತಾರೆ ಸಹ.

## ಪಿತೃ ಪೋಷಣೆ

ಒಬ್ಬನ ಸಂಸ್ಕೃತಿ ಧಾರ್ಮಿಕ ನವೀಕರಣ ರಾಷ್ಟ್ರ, ಸಮುದಾಯ ಮತ್ತುನೀಡುವ ಕುಟುಂಬ ಪ್ರಭಾವದಿಂದ ತಾಯಂದಿರು ಮತ್ತು ತಂದೆಗಳು ಮಕ್ಕಳನ್ನು ಬೆಳಸುವುದರಲ್ಲಿ ರೂಪುಗೊಳ್ಳುತ್ತದೆ. ಪಾರಸ್ಪರಿಕವಾಗಿ ಹೇಳುವುದಾದರೆ ಪರಿಪೂರ್ಣ ತಾಯಿಗಿಂದ

ಹೆಚ್ಚಾದಂತೆ ಪರಿಪೂರ್ಣ ತಂದೆಗಿಂತ ಹೆಚ್ಚಾದಂಥದ್ದು ಎಂಬಂಥ ಭಾವ ಬೇರೇನೂ ಇರುವುದಿಲ್ಲ. ಎಲ್ಲ ತಂದೆ ತಾಯಿಗಳು ತಪ್ಪನ್ನು ಮಾಡುತ್ತಾರೆ. ಅನೇಕ ಹೆಚ್ಚಿನ ಸಂದರ್ಭಗಳಲ್ಲಿ ಮಕ್ಕಳು ತಮ್ಮ ಕ್ಷೇಮಪಾಲಕರ ಕೊರತೆಗಳನ್ನು ಯಶ್ವಸಿಯಾಗಿ ನಿವಾರಿಸಿಕೊಳ್ಳುತ್ತಾರೆ. ಯಾವಾಗ ಎಂದರೆ ಅವರನ್ನು ಪ್ರೀತಿಯ ರಕ್ಷಣೆಯ ಮತ್ತು ಶಿಸ್ತಿನ ಪರಿಸರದಲ್ಲಿ ಬೆಳೆಸಿದಾಗ ಮಾತ್ರ.

ಕೋಸ್ಬಿಯ ಪ್ರಕಾರ, ಹೊಸ ಮಗುವಿಗೆ ಹೊಂದಿಕೊಳ್ಳುವುದು ಸ್ವಲ್ಪ ಶ್ರಮವನ್ನುಂಟು ಮಾಡಬಹುದು. ಏಕೆಂದರೆ ಮನೆಯ ರೂಢಿಗಳು ಮತ್ತು ಪದ್ಧತಿಗಳು ಮಕ್ಕಳ ಬೇಥಿಕೆಗಳ ಪ್ರತಿಕ್ರಿಯೆಗಳಿಗನುಸಾರವಾಗಿ ಬದಲಾಯಿಸುತ್ತಿರುವುದರಿಂದ ತಮ್ಮ ಪಾತ್ರದ ಬಗ್ಗೆ ಗಾಬರಿಗೊಂಡ ಅಥವಾ ತೊಳಲಾಟಕ್ಕೆ ಒಳಗಾದ ತಂದೆಯವರಂತಿರುವ ಜನಕ್ಕೆ ಇದೊಂದು ಇಕ್ಕಟ್ಟಿನ ಕಾಲ. ಅವರು ಸಂಪ್ರದಾಯಸ್ಥರಾಗಿದ್ದರೆ, ಉಡಿಸುವುದು, ಮೈತೊಳೆಸುವುದು, ಬಟ್ಟೆಹಾಕುವುದು ಮೊದಲಾದ ಅವರ ಸುಪರ್ದಿನ ಎಲ್ಲ ಅಥವಾ ಹೆಚ್ಚಿನ ಕೆಲಸಗಳನ್ನು ತಾಯಿಗೆ ಬಿಟ್ಟು ಬಿಟ್ಟು ತಾವು ಹಿಂಜರಿದು ನಿಲ್ಲಬಹುದು. ಸಾಂಪ್ರದಾಯಿಕ ತಾಯಂದಿರು ಕೂಡ ಗಂಡಸರನ್ನು 'ಸ್ತ್ರೀ' ಗೃಹಕಾರ್ಯಗಳಿಂದ ದೂರಿಡಲು ಪ್ರಯತ್ನಿಸಬಹುದು. ಇದು ಪರಸ್ಪರ ಹೋರಾಟದಲ್ಲಿ ಪರಿಣಮಿಸಬಹುದು. ಇಂಥ, ತಮ್ಮ ಪರಸ್ಪರ ಸ್ತ್ರೀಯ ಮತ್ತು ಪುರುಷರ ಪಾತ್ರಗಳನ್ನು ಮತ್ತು ಹೊಣೆಗಳನ್ನು ಚರ್ಚಿಸಿ, ನಿರ್ಧರಿಸಿಕೊಳ್ಳುವುದು ಅತಿ ಪ್ರಮುಖವಾದ ಅಂಶ. ಇದು ಮಗು ಗರ್ಭದಿಂದ ಹೊರಬರುವುದಕ್ಕೆ ಮುಂಚೆ ಆಗಬೇಕಾದ ಕಾರ್ಯ.

ಇಂದು ಹೆಚ್ಚು ಹೆಚ್ಚು ಜನ ಗಂಡಸರು, ಅಥವಾ ಪೋಷಕ ರಜೆಯನ್ನು ಬೇಡುತ್ತಿದ್ದಾರೆ ಕೆಲಸದಿಂದ ಬಿಡುವು ಮಾಡಿಕೊಳ್ಳುತ್ತಾರೆ. ಈ ಸಂಕಟದ ಆರಂಭದ ಅವಧಿಯನ್ನು ಆಧುನಿಕ ತಂದೆಯ ನಿರೀಕ್ಷಿತ ಕೆಲಸಗಳನ್ನು ಕಲಿಯುವುದಕ್ಕಾಗಿ ತಂದೆಯವರು ಆಗಾಗ್ಗೆ ತಾಯಿಯಂತೆಯೇ ತಮಗೆ ಹೊಸದಾಗಿ ಹುಟ್ಟಿದ ಮಕ್ಕಳಲ್ಲಿ ಆಸಕ್ತಿ ಬೆಳಿಸಿಕೊಳ್ಳುತ್ತಾರೆ ಮತ್ತು ಸಂತೋಷವನ್ನು ಅನುಭವಿಸುತ್ತಾರೆ. ಖಂಡಿತವಾಗಿ, ಎಷ್ಟೋ ಸಂದರ್ಭಗಳಲ್ಲಿ 'ಅಪ್ಪ' ಮಗುವಿನ ಮೇಲೆ ಅದರ 'ಅಮ್ಮ'ನಿಗಿಂತ ಮೇಲಂತಸ್ತಿನದವನಾಗಿರುತ್ತಾನೆ. ಕಾರಣ ಇಷ್ಟೆ 'ಅಮ್ಮ' ಹೆರಿಗೆಯ ಶಾರೀರಿಕ ಶ್ರಮವನ್ನು ಅನುಭವಿಸಿರುವುದರಿಂದ ಅವಳು ಹೆಚ್ಚು ಪ್ರಮಾಣದಲ್ಲಿ ಆಯಾಸಗೊಂಡವಳಂತೆ ಇದ್ದಾಳೆ ಎಂದು ಭಾವಿಸುವುದರಿಂದ.

ಅಗತ್ಯವಾದ ಸುಪರ್ದಿ ಕ್ಷೇಮ ಚಿಂತನೆಯಲ್ಲದೆ ಮಗು ಬೆಳೆಯಲು ಆರಂಭಿಸಿದಂತೆಲ್ಲ ತಂದೆಗಳು ತಮ್ಮ ಮಕ್ಕಳನ್ನು ಆವುಗಳ ಸಾಮಾಜಿಕ, ಶಾರೀರಿಕ ಮತ್ತು ಬೌದ್ಧಿಕ ಅಭಿವೃದ್ಧಿಯಲ್ಲಿ ಸಹಾಯಮಾಡಲು ಒಂದು ಸಕ್ರಿಯ ಪಾತ್ರವನ್ನು ಕೈಗೊಳ್ಳಬಹುದು. ಇದನ್ನು ಆಟವೆಂದು ಪರಿಗಣಿಸಿದ ಚಟುವಟಿಕೆಗಳ ಅವಧಿಯಲ್ಲಿ ವಿಶೇಷವಾಗಿ ಸಾಧಿಸಬಹುದು. ತಮ್ಮ ನವೀಕರಣ ಸ್ವಭಾವದಲ್ಲಿ ಕಡಿಮೆ ದ್ವಿಲಿಂಗತ್ವ ಭಾವನೆಯನ್ನು ಹೊಂದಿರುವುದರಿಂದ ಆಟಗಳನ್ನು ಆಡುವುದರಲ್ಲಿ ತಮ್ಮ ಮಕ್ಕಳಿಗೆ ಓದಿ ಹೇಳುವುದರಲ್ಲಿ ಅವುಗಳಿಗೆ ಕಾಚಾಗಳನ್ನು ತೊಡಿಸುವುದಕ್ಕಿಂತ, (ಮೈ ಒರಸುವುದಕ್ಕಿಂತ) ಬಟ್ಟೆ ಹಾಕುವುದಕ್ಕಿಂತ ಅಥವಾ ಬದಲಾಯಿಸುವುದಕ್ಕಿಂತ ಹೆಚ್ಚಿನ ಸುಖಾಸ್ವಾದನೆಯನ್ನು ಅನುಭವಿಸಬಹುದು. ಅವರು ತನ್ನ ಮಗ ಅಥವಾ ಮಗಳು ಅದರ ಪರಿಸರವನ್ನು ಹುಡುಕಿಕೊಳ್ಳುವಲ್ಲಿ ತಮ್ಮ ಮಕ್ಕಳಿಗೆ ಸಹಾಯವಾಗುವ ಆಟಕದ ಸಾಮಾನುಗಳು ಮತ್ತು ಆಟಗಳು ಇವುಗಳನ್ನು ಅವರು ಉಪಯೋಗಿಸಿಕೊಳ್ಳಬಹುದು. 'ಅಪ್ಪಂದಿರು ಕೂಡ ತಮ್ಮ ಮಗುವನ್ನು ಹಿಡಿದುಕೊಳ್ಳುವಲ್ಲಿ, ಮುಟ್ಟುವುದರಲ್ಲಿ, ತುಗಾಡಿಸುವುದರಲ್ಲಿ ಮತ್ತು ಎತ್ತಿಕೊಳ್ಳುವಲ್ಲಿ ಆನಂದಿಸುತ್ತಾರೆ. ಈ ಭೌತಿಕ ಆಟಗಳು ಮತ್ತು ಅಭ್ಯಾಸಗಳು ಮಗುವಿನ ಚಾಲಕ ವೃದ್ಧಿಗೆ ಮತ್ತು ಹೊಂದಾಣಿಕೆಗೆ ಬಹುಮುಖ್ಯವಾದವು.

ಕೆಲವು ತಂದೆಯುವರು ತಮ್ಮ ಮಕ್ಕಳ ಜೊತೆ ಶಾಲಾ ವಯಸ್ಸಿಗಿಂತ ದೊಡ್ಡವರಾದವರಿಗೆ ಸಂಬಂಧಸಿದಂತೆ ಹೆಚ್ಚು ಸಮೀಪಗತರಾಗಿರುವಂತೆ ಕಾಣಿಸಿಕೊಳ್ಳಲು ತೊಡಗುತ್ತಾರೆ. ಅಲ್ಲದೆ ಅವರಿಗೆ ಮಾದರಿಯ ಮತ್ತು ಮಾರ್ಗದರ್ಶಿಯ ಪಾತ್ರಧಾರಿಗಳಂತಿರಲು ಆಶಿಸುತ್ತಾರೆ. ಇದು ಎಲ್ಲಿಯವರೆಗೆ ಅವರು ತಮ್ಮ ಹೆಣ್ಣು ಮಕ್ಕಳನ್ನು ಆಲಕ್ಷಿಸುವುದಿಲ್ಲವೋ ಅಥವಾ ತಿರಸ್ಕರಿಸುವುದಿಲ್ಲವೋ ಅಥವಾ ನಿಯಮಿತ ಪಾತ್ರಗಳವರೆಗೆ ಮತ್ತು ಅವಕಾಶವಗಳವರೆಗೆ ಲಿಂಗರೂಪ ಗೊಳಿಸುವವರೆಗೆ ಆರೋಗ್ಯಕರವಾದುದೇ.

ಕೆಲವು ಜನ ತಂದೆಗಳು, ಅದೃಷ್ಟಹೀನರಾಗಿ, ತಮ್ಮ ಎದುರು ಬೀಳುವ, ಶಾಲಾವಯಸ್ಸಿನ ಮಕ್ಕಳಿಗೆ ವಾತ್ಸಲ್ಯದ ಭಾವನೆಗಳನ್ನು ಅಭಿವ್ಯಕ್ತಗೊಳಿಸದೆ ಹಿಡಿದಿಡುತ್ತಾರೆ. ಇದಕ್ಕೆ ಮುಖ್ಯ ಕಾರಣ, ಅವು ಅವರ ಬಲಿಷ್ಠ ವ್ಯಕ್ತಿತ್ವದ ಪ್ರತಿಮೆ ರೂಪಗೊಳ್ಳಲು ಅಡ್ಡಿಬರಬಹುದು ಮತ್ತು ಅತ್ಯಂತ ಕಠೋರ ಶಿಸ್ತುಗಾರ ಎಂಬ ಪರಿಣಾಮಕ ಭಾವವನ್ನು

ಕುಂಠಿತಗೊಳಿಸಬಹುದು ಎಂಬ ಭಯದಿಂದ. ಅತಿನಿಷ್ಠುರರಾದ ತಂದೆಗಳು ಆಗಾಗ್ಗೆ ಅಥವಾ ಹೆಚ್ಚುವೇಳೆ, ಚಾವಿಟಯಿಂದ ಬೆದರಿಸುವ ಪಾತ್ರವನ್ನು ನಟಿಸುತ್ತಾರೆ. ಇದರಿಂದ ಮಕ್ಕಳು ಅವರನ್ನು ಕಂಡರೆ ತುಂಬ ಭಯಪಡುವಂತೆ ಮಾಡುತ್ತಾರೆ. ಇಂಥ ನಡತೆ ಅಪ್ಪ- ಮಕ್ಕಳ ಹಿತಕರ ಭಂಧುತ್ವದಲ್ಲಿ ಮಧ್ಯೆಪ್ರವೇಶಿಸುತ್ತದೆ. ತಂದೆ ತಾಯಿಗಳು ಮಕ್ಕಳನ್ನು ಅತಿಯಾಗಿ ಭಯಪಡಿಸಬಾರದು ಅಥವಾ ಅವರಿಗೆ ಹಿಂಸೆಯ ಬೆದರಿಕೆಗಳನ್ನೊಡ್ಡಬಾರದು, ತಮ್ಮ ಮಾತನ್ನು ಕೇಳುವಂತೆ ಮಾಡಲು.

ಆಧುನಿಕ ತಾಯಂದಿರು ಶಿಕ್ಷೆಯನ್ನು ವಿಧಿಸುವ ನ್ಯಾಯಾಧೀಶನ ಹಾಗೆ ತಂದೆಯನ್ನು ನಿರಾಕರಿಸುವಂತೆ ಮಾಡುವುದನ್ನು ತಪ್ಪಿಸಬೇಕು. ಒಳ್ಳೆಯ ಅಥವಾ ಕೆಟ್ಟನಡತೆಗೆ ಮೆಚ್ಚುಗೆಯನ್ನು ಅಥವಾ ಶಿಕ್ಷೆಯನ್ನು ಕೊಡುವುದರಿಂದ ಅಪೇಕ್ಷಿತ ಫಲಿತಾಂಶವನ್ನು ಅಂಡಿನ ಮೇಲೆ ಹೊಡೆದು ಬುದ್ಧಿಕಲಿಸುವುದಕ್ಕಿಂತ-, ನೀಡಬಲ್ಲದು ಎಂಬುದನ್ನು ಗುರುತಿಸಿ ತಂದೆಗಳು ಶಿಸ್ತಿನ ಕ್ರಿಯೆಗಳಲ್ಲಿ ಉತ್ತಮವಾಗಿ ಭಾಗವಹಿಸಬಹುದು. ಪರಿಣತರು ಮೆಚ್ಚಿಗೆಯ ಮತ್ತು ಶಿಕ್ಷೆಯ ಮಾದರಿಯನ್ನು ನಿಷ್ಠೆ ಮತ್ತು ಪ್ರೀತಿಯಿಂದ ಕೂಡಿದ ಶಿಸ್ತನ್ನು ಶಿಫಾರಸು ಮಾಡಿದ್ದಾರೆ. 'ಹೋಗು, ನಿನ್ನ ಕೊಠಡಿಗೆ ನೀನು ಸರಿಯಾಗಿ ನಡೆದುಕೊಳ್ಳುವವರೆಗೆ ಹೊರಕ್ಕೆ ಬರಬೇಡ' ಎಂಬಂಥ ಶಿಕ್ಷೆ. ಮಗುವನ್ನು ಬಡಿಯುವುದಕ್ಕಿಂತ ಹೆಚ್ಚಿನ ಪ್ರಯೋಜನಕಾರಿ ಮತ್ತು ಕಡಿಮೆ ವೇದನೆಯನ್ನು ತಂದೆತಾಯಿಳೂ ಮಕ್ಕಳಿಗೂ ತಂದು ಕೊಡಬಹುದು.

ಇಂಥ ಕೆಲವು ನಿಷ್ಫಲವಾದ ಶಿಸ್ತಿನ ಅಂಶಗಳನ್ನು ಉತ್ತಮ ರೀತಿಯಲ್ಲಿ ನಿರ್ವಹಿಸಲು 'ಅಪ್ಪ ಮತ್ತು ಅಮ್ಮ ಇಬ್ಬರೂ ಒಮ್ಮತಕ್ಕೆ ಬರಬೇಕು' ಹದಿಹರೆಯದ ಮಕ್ಕಳನ್ನು ಸಾಮಾನ್ಯವಾಗಿ ಇಂಥವನ್ನು ಎದುರಿಸುತ್ತಾರೆ. ಅಲ್ಲದೆ ಅಧಿಕಾರದ ವಿರುದ್ಧ ತಿರುಗಿಬೀಳುತ್ತಾರೆ. ಏಕೆಂದರೆ ಅವರು ಹೆಚ್ಚಿನ ಸ್ವಾತಂತ್ರ್ಯದ ಕಡೆಗೆ ಮತ್ತು ತಮ್ಮ ಸ್ವಂತ ಸ್ವಾತಂತ್ರ್ಯದ ಕಡೆಗೆ ಮುನ್ನುಗ್ಗುತ್ತಿರುವುದರಿಂದ ಹದಿಹರೆಯದ ಅವಸ್ಥೆ ಒಂದು ವಿಶಿಷ್ಟ ಅವಧಿ. ಅದು ಆಗ ಮಾತಾಪಿತೃಗಳ ಗರಿಷ್ಠ ಮೆದು ಸ್ವಭಾವವನ್ನು ಅಪೆಕ್ಷಿಸುತ್ತದೆ ತಂದೆಯ ಕಾರ್ಯಗಳಲ್ಲಿ ಒಂದು, ಹೆಚ್ಚು ಹೆಚ್ಚು ನಿಯಂತ್ರಣವನ್ನು ಬಿಡ್ಡು ಕೊಡುವುದು ಮತ್ತು ಅದೇ ಸಮಯದಲ್ಲಿ ತನ್ನ ತರುಣ ಮಗನನ್ನು ಸರಿಯಾದ ದಾರಿಯಲ್ಲಿ ಹೋಗುವಂತೆ ನಿರ್ದೇಶಿಸುವುದೇ ಆಗಿದೆ.

ಶಿಸ್ತು

"ಕುಟುಂಬದಲ್ಲಿ ಮಾನವೀಯ ಅಂತರಕ್ರಿಯೆಯ ಸಹಜ ಸ್ವಭಾವ ಆಂತರಿಕ ನಿಯಂತ್ರಣ ಅಥವಾ ಪ್ರಜ್ಞೆಯನ್ನು ಅದರ ಅಭಿವೃದ್ಧಿಯ ಪರಾಕಾಷ್ಟೆಗೆ ಸೂಕ್ತ ಸ್ಥಿತಿಗಳನ್ನು ಒದುಗಿಸುವುದೇ ಆಗಿದೆ.

ತುಂಬ ಆತ್ಮೀಯರಾಗಿ ಜೀವಿಸುತ್ತಿರುವ ಹೆಚ್ಚು ಕಡಿಮೆ ಎಲ್ಲ ಜನರು ಪರಸ್ಪರವಾಗಿ ಬಿಗಿಯಾದ ಹೊಂದಾಣಿಕೆಯನ್ನು ಬೆಳೆಸುವುದೇ ಅವರ ಮುಖ್ಯ ಕೆಲಸವಾಗಿದೆ. ಹಾಗಾದರೂ ಪರಸ್ಪರರ ಅಗತ್ಯಗಳನ್ನು ಕೆಲವೊಮ್ಮೆ ಭಂಗಪಡಿಸುವುದು ಆಗಿರುತ್ತದೆ. ವಿಶೇಷವಾಗಿ ಯುವಜನ ಕುಟುಂಬದ ಹೊರಗೆ ಸಾಕಷ್ಟು ಅಥವಾ ತೃಪ್ತಿಕರವಾದ ಭಾವುಕ ಬೆಂಬಲದ ಮೂಲಗಳನ್ನು ಹೊಂದಿರುವುದಿಲ್ಲ. ಗಂಡಸು ಅಥವಾ ಹೆಂಗಸು ಆಗಬೇಕಾದರೆ ಅವರು ಅಸಮಾಜೀಕರಣದ ಅಗತ್ಯತೆಗಳನ್ನು ಹೊಂದಿರುತ್ತಾರೆ. ಆದರೆ ಅವುಗಳನ್ನು ಅವರ ತಂದೆ ತಾಯಿಗಳು ನಿಯಂತ್ರಿಸಲೇಬೇಕು ಪ್ರಜ್ಞಾಭಿವೃದ್ಧಿಗೆ, ಅನುರಾಗೋದಯಕ್ಕೆ ಮತ್ತು ಆಗತ್ಯತೆಗಳ ನಿಷ್ಫಲತೆಗೆ ಇಂಥ ಪೂರ್ವ ಅವಶ್ಯಕತೆಗಳು ಮಾದರಿ ಕುಟುಂಬದಲ್ಲಿ ಪ್ರತ್ಯಕ್ಷವಾಗಿಯೇ ಇರುತ್ತವೆ.

ಮಗು ಇತರರೊಡನೆ ಕ್ರಿಯೆಯಲ್ಲಿ ಅಂತರದಲ್ಲಿ ನಡೆದುಕೊಳ್ಳುವಾಗ ಅದು ತನ್ನಿಂದ ಯಾವ ರೀತಿಯ ನಡತೆಯನ್ನು ಇತರರು ಬಯಸುತ್ತಾರೆ ಎಂಬುದನ್ನು ಕಲಿತುಕೊಳ್ಳುತ್ತದೆ. ಅವರ ನಿರೀಕ್ಷೆಗಳಿಂದ ಅವನು ಒಂದು ವರ್ಗದ ಶಾಬ್ದಿಕ ನಿಯಮಗಳನ್ನು ರೂಪಿಸಿಕೊಳ್ಳುತ್ತಾನೆ ಅವುಗಳನ್ನು ತನಗೆ ತಾನೇ ಅನ್ವಯಿಸಿ ಕೊಳ್ಳುತ್ತಾನೆ. ತರುಣ ಜನ ತಮ್ಮ ತಮ್ಮಲ್ಲೆ ನಿಂದಾತ್ಮಾಕ ಕಲಹಗಳನ್ನು ಶಬ್ದವಾಗಿ ಮಾಡುವಾಗ ಅಥವಾ ಒಬ್ಬರನ್ನೊಬ್ಬರು ಕುರಿತು ಒದ್ದಾಡುವಾಗ ಈ ನಿಮಯಗಳ ಅನ್ವಯವನ್ನು ಯಾರೇ ಆದರೂ ಕೆಲವೊಮ್ಮೆ ನೇರವಾಗಿ ಗುರುತಿಸಬಹುದು. ಆದರೆ ವಯಸ್ಕ ಸ್ಥಿತಿ ತಲುಪಿದಾಗ ಪ್ರಜ್ಞೆಯಧ್ವನಿ ಒಳಧ್ವನಿವಾಗಿಬಿಡುತ್ತದೆ.

ಸಂಶೋಧನೆಯ ಅನೇಕ ಮಾರ್ಗಗಳು ಬೆಂಬಲಿಸುವ ದೃಷ್ಟಿಯೆಂದರೆ ಮಾನಸಿಕ ಅಥವಾ ಪ್ರೀತಿಯ ನವೀಕೃತ ಶಿಸ್ತು ಪ್ರಜ್ಞಾಭಿವೃದ್ಧಿಯಲ್ಲಿ ಶಾರೀರಕ ಶಿಕ್ಷಣಕ್ಕಿಂತ ಹೆಚ್ಚು ಪರಿಣಾಮಕಾರಿ ಎಂಬುದು. ಮಾನಸಿಕ ಶಿಸ್ತನಲ್ಲಿ ತಂದೆ ತಾಯಿರು ಮಗುವಿನ ಮೇಲೆ ಹತೋಟಿಯನ್ನು ಗೆದ್ದುಕೊಳ್ಳಲು ಅವರ ಮತ್ತು ಮಗುವಿನ ವಾತ್ಸಲ್ಯದ ಅಂಟನ್ನು

ಬಳಸಿಕೊಳ್ಳುತ್ತಾರೆ. ಹಿತಕರವಾದ ಸಂಬಂಧ ಮಾನಸಿಕ ಶಿಸ್ತಿನೊಡನೆ ಜೊತೆಗೂಡಿದಾಗ 'ಪ್ರಜ್ಞಾಶಕ್ತಿ' ಅತ್ಯಂತ ಪರಮಗತಿಗೆ ತಲುಪುತ್ತದೆ.

ತಮ್ಮ ಬಗ್ಗೆ ಹೆಚ್ಚು ಹಿತಕರವಾಗಿ ವರ್ತಿಸುವ ಆದರೆ, ಮಗುವಿನ ಒಳ್ಳೆಯ ನಡೆತೆಯನ್ನು ಆಕಸ್ಮಿಕವಾಗಿ ಅನುಮೋದಿಸಿರುವ ತಾಯಂದಿರನ್ನು ಪಡಿದಿರುವಂಥ ಮಕ್ಕಳು ಅತ್ಯುತ್ತಮವಾಗಿ ವೃದ್ಧಿ ಹೊಂದಿರುವ ಪುನಃ ಪ್ರಜ್ಞೆಯನ್ನು ಹೊಂದಿರುವಂತೆ ಕಾಣುತ್ತದೆ.

ಮತ್ತೊಂದು ಅಭ್ಯಾಸದ ವರದಿಯಂತೆ ಕೋಪದ ಭಾವನೆಗಳಿಂದ ಉದ್ಬುದ್ಧವಾದ ಅಪರಾಧ ಮನೋಭಾವಯಾದ ತಾಯಂದಿರು ಮಾನಸಿಕ ಶಿಕ್ಷೆಯನ್ನು ವಿಧಿಸುತ್ತಾರೋ ಅಂಥ ವರ ಮಕ್ಕಳಿಗಿಂತ ಶಾರೀರಕ ಶಿಕ್ಷೆಯನ್ನು ವಿಧಿಸುವ ತಾಯಂದಿರ ಮಕ್ಕಳಿಗಿಂತ ಹೆಚ್ಚಾಗಿ ಕಂಡು ಬರುತ್ತದೆ ಎಂಬುದು. (ಅಲ್ಲಿನಸ್ಮಿತ್ ಮತ್ತು ಗ್ರೀನಿಂಗ್ 1935) ಇದರಲ್ಲಿ ಬಹಳಷ್ಟು ತಾಯಂದಿರಿಗೆ ಅನ್ವಯಿಸುವಂತೆಯೇ ಶಿಕ್ಷಕರಿಗೂ ಅನ್ವಯಿಸುತ್ತದೆ.

## ಹಿತವಾದ ಮತ್ತು ಸುಧಾರಿತ ಪ್ರೀತಿಯ ಶಿಸ್ತು

'ಅವನು ಒಳ್ಳೆಯವನೆಂದು ನಾನು ಅವನನ್ನು ಪ್ರೀತಿಸುವುದಿಲ್ಲ. ಆದರೆ ಅವನು ನನ್ನ ಚಿಕ್ಕಮಗು ಎಂಬ ಕಾರಣದಿಂದ ಪ್ರೀತಿಸುತ್ತೇನೆ' ಠಾಕೂರ.

ಮಗುವು ಶಾರೀರಿಕವಾಗಿ ಭಾವಾತ್ಮಕವಾಗಿ ಇನ್ನೊಬ್ಬರ ಮೇಲೆ ಅವಲಂಭಿಸಿದ್ದ ಹೊರತು ಭವಿಷ್ಯದ ಸಮಾಜೀಕರಣತ್ವವು ದುರ್ಬಲಗೊಳ್ಳುತ್ತದೆ. ಒಂದು ಮಾದರಿ ಕುಟುಂಬದಲ್ಲಿ ಅವಲಂಬನೆಯ ಬೆಳವಣಿಗೆಯು ಕೌಟುಂಬಿಕ ಅಂತರ್ವರ್ತನೆಯ ಸ್ವಭಾವದಿಂದ ದೃಢೀಕೃತವಾಗುತ್ತದೆ. ಅದು ಅವಶ್ಯಕವಾಗಿ ಬಲಯುಕ್ತ ಅವಲಂಬನೆಗಳನ್ನು ಹಾಗೂ ಕಾಲಕಾಲಕ್ಕೆ ಹತಾಶೆಗಳನ್ನು, ಹೋರಾಟಗಳನ್ನು ಹುಟ್ಟು ಹಾಕುತ್ತದೆ. ಸಂಸ್ಥೀಕರಣವಾಗಿ ಬೆಳೆಸಿದ ಮಕ್ಕಳ ವಿಷಯದಲ್ಲಿ ಶಿಥಿಲ ಅವಲಂಬನೆ ಮಾತ್ರ ವೃದ್ಧಿಸಬಹುದು.

ತಂದೆ ತಾಯಿಗಳ ಮತ್ತು ಮಕ್ಕಳ ನಡುವೆ ಹಿತಕರವಾದ ಸಂಬಂಧವನ್ನು ರೂಢಿಸಿದರೆ, ಮಕ್ಕಳಲ್ಲಿ ಯುಕ್ತ ಆಂತರಿಕ ನಿಯಂತ್ರಣವನ್ನು ಬಳಸುವಲ್ಲಿ ಶಿಸ್ತಿನ ಮಾನಸಿಕ ರೂಪಗಳು ಹೆಚ್ಚು ಪರಿಣಾಮಕಾರಿಯಾಗುತ್ತವೆ. ಅತ್ಯಂತ ಮೇಲ್ಮಟ್ಟದ, ಗಮನಾರ್ಹವಾದ ಎರಡು

ಸಾಮಾಜಿಕ ಪ್ರೇರಣೆಗಳೆಂದರೆ ಒಂದು ಮೇಲೆ ಬೀಳುವಿಕೆ, ಇನ್ನೊಂದು ಸಾಧನೆ. ಇವೆರಡು ಈಗ ಪರಿಶೀಲಸಬೇಕಾದ ವಿಷಯಗಳು. ಬಾಲ್ಯದ ಪ್ರಾರಂಭದಲ್ಲಿ ತಾಯಿಯ ಕಡೆಯಿಂದ ಬರುವ ಹೆಚ್ಚಿನ ಅನುಮೋದನೆ ಮತ್ತು ಅಧಿಕ ಶಿಕ್ಷೆ ಎದುರುಬೀಳುವಿಕೆಯ ಗರಿಷ್ಠ ಹಂತಕ್ಕೆ ಎಳೆದೊಯ್ಯಬಹುದು. ಆದರೆ ಕಡಿಮೆ ಮಟ್ಟದ ಅನುಮೋದನೆ ಮತ್ತು ಕೀಳಮಟ್ಟದ (ಸರಳ) ಶಿಕ್ಷೆ ಎದುರು ಬೀಳುವಿಕೆಯ ಕನಿಷ್ಠ ಮಟ್ಟವನ್ನು ತಂದುಕೊಡಬಹುದು.

ಗಟ್ಟಿ ಸಾಧನೆಯ ಪ್ರೇರಣೆ ಮಧ್ಯಮ ವರ್ಗದ ಮಕ್ಕಳಲ್ಲಿ ಕೆಳದರ್ಜೆ ಮಟ್ಟದ ಮಕ್ಕಳಿಗಿಂತ ಹೆಚ್ಚು ವೈಲಕ್ಷಣವುಳ್ಳಾದ್ದಾಗಿರುತ್ತದೆ. ಅಲ್ಲದೆ ಅದು ಕೆಲವು ಬುಡಕಟ್ಟುಗಳಲ್ಲಿ ಅಥವಾ ಕುಲದ ವರ್ಗದಲ್ಲಿ ಕಂಡು ಬರುತ್ತದೆ. ಕೌಟುಂಬಿಕ ರಚನೆಯ ಕೆಲವು ಅಂಶಗಳು ಕೂಡ ಗುರಿಸಾಧನೆಗೆ ಕುಟುಂಬದ ಆಕಾರ, ಹುಟ್ಟಿನ ಕ್ರಮ, ತಾಯಿಯ ವಯಸ್ಸು ಮತ್ತು ಕುಟುಂಬದ ಶಕ್ತಿ ರಚನೆ ಮುಂತಾದುವನ್ನು ಒಳಗೊಂಡಂತೆ ಹೊಂದಿಕೊಂಡಿರುತ್ತದೆ.

## ಪ್ರಕರಣದ ಅಭ್ಯಾಸ

ಆನಂದ ಪ್ರೌಢಶಾಲೆಯ ವಿದ್ಯಾರ್ಥಿ. ಅವನ ತಂದೆ ತಾಯಿಗಳು ತಮ್ಮ ಮಗನ ವರ್ತನೆಗಳನ್ನು ರೂಪಿಸುವ ಪ್ರಯತ್ನದಲ್ಲಿ ಶಿಕ್ಷೆ ನೀಡುವ ಕ್ರಮವನ್ನು ಬಳಸಿದರು.

ತಂದೆ ತಾಯಿಗಳು ಮನೆಯಲ್ಲೆ ಕುಡಿಯುವುದರಿಂದ ರಾತ್ರಿಗಳನ್ನು ಕಳೆಯುತ್ತಿದ್ದರು. ಹಾಗೂ ಹೊರಗೆ ಹೋಗಿಯೂ ಕುಡಿಯುತ್ತಿದ್ದದು. ಆದರೆಆನಂದನೂ ಅವನ ಜೊತೆಯವರೊಡನೆ ಕುಡಿಯಲು ಆರಂಭಿಸಿದಾಗ ಅವರು ಕ್ಷೋಭೆಗೊಂಡರು. ಕೂಡಲೆ ಅವನು ಒಂದು ತಿಂಗಳವರೆಗೆ ಕುಡಿಯಬಾರದೆಂದು ತಡೆ ಹಾಕಿದರು. ಆದರೆ ಅವರು ಮಾತ್ರ ಕುಡಿಯುವುದನ್ನು ಮುಂದುವರಿಸುತ್ತಲೇ ಹೋದರು, ತಿಂಗಳು ಕಳೆದ ಕೂಡಲೆ ಅವನು ಮತ್ತೆ ಕುಡಿಯುವುದನ್ನು ಆರಂಭಿಸಿದ. 'ಮರಿಜುಯಾನ' ಒಂದು ಬಗೆಯ ಮಾದಕ ಪದಾರ್ಥವನ್ನು ಆರಂಭಿಸಿದಾಗ ಅವನನ್ನು ಪ್ರತಿದಿನವೂ ಹೊಡೆದು ಶಿಕ್ಷಿಸುತ್ತಿದ್ದರು. ಅವನು ತಂದೆ ತಾಯಿಗಳಿಂದ ದೂರಸರಿದು ಬಿಟ್ಟನು. ಯಾವುದರ ಬಗ್ಗೆಯೂ ತನ್ನ ಭಾವನೆಗಳನ್ನು ಅವರಿಗೆ ಹೇಳುವುದನ್ನು ಬಿಟ್ಟು ಬಿಟ್ಟು. ತನಗೆ ಅವರು ನೀಡುವ ಶಿಕ್ಷೆಯ ಅನ್ಯಾಯದ ಬಗ್ಗೆ ಅವನು ತುಂಬನೊಂದುಕೊಂಡ. ಆದರಿಂದ ಆ ಮೂಲಕ ಅವರಲ್ಲಿ ಪೂರ್ಣ ನಂಬಿಕೆಯನ್ನು ಕಳೆದುಕೊಂಡು ಬಿಟ್ಟ.

ಅವನು ಮಧ್ಯ ಸೇವನೆಗೆ ಹೆಚ್ಚು ಹೆಚ್ಚು ತೊಡಗಿದಾಗ ಅವರಿಂದ ಬರುವ ಛೀಮಾರಿಯ ಸಣ್ಣ ಶಬ್ದವೂ ಅವನು ಮನೆಯಿಂದ ಓಡಿ ಹೋಗುವಂತೆ ಮಾಡುತ್ತಿತ್ತು. ಕೆಲವೊಮ್ಮೆ ಅನೇಕ ದಿನಗಳವರೆಗೆ ಅಥವಾ ವಾರಗಳವರೆಗೆ ಅವನು ಮನೆಗೆ ಹಿಂದಿರುಗುತ್ತಲೇ ಇರಲಿಲ್ಲ. ಕಡೆಗೆ ಅವನು ವ್ಯಾಸಂಗವನ್ನು ಬಿಟ್ಟ ಬಿಟ್ಟ.

ಈಗ ಆನಂದ ಬಹುವಾಗಿ ಕ್ಷೋಭೆಗೊಂಡಿದ್ದಾನೆ. ಅವನ ತಂದೆ ತಾಯಿಗಳು ನೀಡುತ್ತಿದ್ದ ಶಿಕ್ಷೆಯ ರೂಪ ಅವನ ಇಂದಿನ ಸಮಸ್ಯೆಗೆ ಒಂದು ಪ್ರಭಾವಾರಿ ಅಂಶವೆಂದು ನಾವು ನಂಮಲೇಬೇಕಾಗಿದೆ. ಶಿಕ್ಷೆಯ ಸರಿಯಾದ ಸ್ವರೂಪ ಯಾವುದಾಗಿರಬೇಕಿತ್ತೆಂಬುದನ್ನು ನೀವು ಭಾವಿಸುತ್ತೀರಿ ?

## ವರ್ಗ ಚಟುವಟಿಕೆ

1) ನಿಮ್ಮನ್ನು ಪ್ರೀತಿಸುತ್ತಿದ್ದಾರೆ ಎಂದು ಭಾವಿಸುತ್ತೀರಾ ನಿಮ್ಮ ತಂದೆ ತಾಯಿಗಳಿಗೆ ನೀವು ಬೇಕಾಗಿದ್ದೀರಾ ? ಇಲ್ಲದಿದ್ದರೆ ಏಕೆ ? ಚರ್ಚಿಸಿ

2) ನಿಮ್ಮ ಸೋದರರೊಡನೆ, ಸೋದರಿಯರೊಡನೆ ಮತ್ತು ಬಂಧುಗಳೊಡನೆ ನಿಮ್ಮ ಸಂಬಂಧವನ್ನು ಹೇಗೆ ವಿವರಿಸುತ್ತೀರಾ ?

3) ಹುಡುಗಿಯಾದರೆ ನಿಮ್ಮ ತಾಯಂದಿರೊಡನೆ ನಿಮಗೆ ಏನಾದರೂ ಸಮಸ್ಯೆಗಳಿವೆಯೆ? ಹುಡಗನಾದರೆ ನಿಮ್ಮ ತಂದೆಯೊಡನೆ : ಹೌದಾದರೆ ಅದನ್ನು ಹೇಗೆ ನಿಭಾಯಿಸಿ ಬಲ್ಲಿರಿ ?

4) ಪ್ರಶ್ನಾವಳಿ - ನೀವು ನಿಶ್ಚಯವಾಗಿ ಇಷ್ಟಪಡುವ ವ್ಯಕ್ತಿಗಳೇ ? ನೀವು ನಿಜವಾಗಿ ಇಷ್ಟಪಡುವವರಾಗಿದ್ದೀರಾ ?

ನಮ್ಮಲ್ಲಿ ಅನೇಕರು ಮರುಳುತನದಿಂದ ಭಾವಿಸುತ್ತೇವೆ ನಾವು ಇತರರಿಂದ ಇಷ್ಟುಪಡುವವರಾಗಿದ್ದೇವೆ ಎಂದು. ಆದರೆ ಮಾನವೀಯ ಸಂಬಂಧದಲ್ಲಿ ಏನಾದರೂ ಸ್ವಲ್ಪ ಹೆಚ್ಚು ಕಡಿಮೆ ಆದರೆ ಅದು ಯಾವಾಗೂ ಇನ್ನೊಬ್ಬರ ತಪ್ಪೇ ಆಗಿರುತ್ತದೆ.

ನಮ್ಮ ಮಿತ್ರರು ನಮ್ಮೊಡನೆ ಹೇಗೆ ಸರಿಹೊಂದಿಕೊಂಡಿದ್ದಾರೆ ಎಂಬುದೇ ಆಶ್ಚರ್ಯಕರವಾದುದೆಂದು ನಮ್ಮಲ್ಲಿ ಕೆಲವರು ಎಂದೂ ಹೇಳುವುದಿಲ್ಲ.

ಇದರ ಬಗ್ಗೆ ನಿಮಗೆ ಸಂದೇಹ ಉಂಟಾದರೆ ನೀವು ಸ್ವಪರೀಕ್ಷಣವನ್ನು ಪ್ರಯತ್ನ ಮಾಡಿನೋಡಿ. ಕೊನೆಯಲ್ಲಿ ಸೂಚಿಸಿರುವ ಉತ್ತರದ ಕಡೆಗೆ ಗಮನಹರಿಸುವುದಕ್ಕೆ ಮುಂಚೆ ಪ್ರಶ್ನೆಗಳಿಗೆ ಹೌದು ಅಥವಾ ಇಲ್ಲ ಎಂಬಷ್ಟು ಉತ್ತರವನ್ನು ಮಾತ್ರ ನೀಡಿ.

1) ನೀವು ಜನರನ್ನು ದ್ವೇಷಿಸುವುದಕ್ಕಿಂತ ಹೆಚ್ಚಾಗಿ ಅವರನ್ನು ಇಷ್ಟಪಡುತ್ತೀರಾ ? ಹೌದು/ಇಲ್ಲ

2) ನಿಮ್ಮನ್ನು ಕುರಿತು ವಿಶೇಷವಾಗಿ ಇಷ್ಟಪಡುವವರ ಬಗೆ ನಿಮ್ಮ ವಾತ್ಸಲ್ಯವನ್ನು ಮತ್ತು ಗೌರವವನ್ನು ತೋರಿಸಲು ಆತುರ ಹೊಂದಿದ್ದೀರಾ ? - -

3) ಅನುಕಂಪವನ್ನು ಮೆಚ್ಚಲು ನೀವು ತುಂಬ ಚುರುಕೆ ? ನೆನಕೆಗಳು ಎಂದು ಹೇಳುತ್ತೀರಾ?

4) ಸಂತೋಷಪಡಿಸಲು ನೀವು ಸುಲಭ ಮತ್ತು ತಪ್ಪನ್ನು ಕಾಣಲು ನೀವು ನಿಧಾನಸ್ಥರೆ ?

5) ನಿಮ್ಮ ಬಳಿಗೆ ಜನ ಆಗಾಗ ಬರುತ್ತಾರೆಯೇ ? ಮತ್ತು ಮಾತನಾಡಲು ಆರಂಭಿಸುತ್ತಾರೆಯೇ ?- -

6) ಎಲ್ಲರೂ ಸುಖವಾಗಿರುವುದನ್ನು ನೋಡಲು ನಿಮಗೆ ಇಷ್ಟವೇ ? ಮತ್ತು ಜನ ನಿರಾತಂಕವಾಗಿರುವ ಂತೆ ಮಾಡುವುದರಿಂದ ನೀವು ಸಂತೋಷಪಡುತ್ತೀರಾ ?- -

7) ಜನ ತೊಂದರೆಯಲ್ಲಿರುವಾಗ ನೀವು ಅವರಿಗೆ ಸಹಾಯದ ಕೈ ನೀಡಲು ಚುರುಕಾಗಿರುತ್ತೀರಾ ? - -

8) ಜನರ ತಪ್ಪುಗಳನ್ನು ಕ್ಷಮಿಸಲು ನೀವು ಒಲವುಳ್ಳವರಾಗಿದ್ದೀರಾ ? - -

9) ಅಸೂಯೆಯನ್ನು ಸಾಧಿಸುವುದಕ್ಕಿಂತ ಹೆಚ್ಚಾಗಿ ಕ್ಷಮಿಸುವುದು ಮತ್ತು ಮರೆಯುವುದು ಸುಲಭವಾದದ್ದು ಎಂಬುದನ್ನು ಕಾಣುತ್ತೀರಾ ? - -

10) ನೀವು ತಪ್ಪು ಮಾಡಿದಾಗ ನಿಮ್ಮ ತಪ್ಪನ್ನು ನೀವು ಯಾವಾಗಲೂ ಒಪ್ಪಿಕೊಳ್ಳುತ್ತೀರಾ ಮತ್ತು ಕ್ಷಮಾಯಾಚನೆ ಮಾಡುತ್ತೀರಾ ? - -

11) ಭಿನ್ನಭಿಪ್ರಾಯವನ್ನು ತೋರಿಸದೆ ಭಿನ್ನತೆಗೆ ನೀವು ಸಮ್ಮತಿ ಸೂಚಿಸಬಲ್ಲಿರಾ ?- -

12) ಚುಚ್ಚು ಮಾತು ಅದು ನೋವುಂಟು ಮಾಡುವಂಥದಾಗಿದ್ದರೆ ಅದನ್ನು ಆಡಲು ಹಿಂಜರಿಯುತ್ತೀರಾ ? - -

13) ಜನರ ರಹಸ್ಯಗಳನ್ನು ಸುರಕ್ಷಿತವಾಗಿ ಇಟ್ಟುಕೊಳ್ಳಬಲ್ಲಿರಾ ? - -

14) ಬಹುಮಾನಗಳನ್ನು ಕೊಡಲು ಮತ್ತು ಹೆಚ್ಚಿನ ಒಳ್ಳೆಯ ಆಶ್ಚರ್ಯಗಳನ್ನು ಉಂಟುಮಾಡಲು ನೀವು ಆನಂದಿಸುತ್ತೀರಾ ? - -

15) ನಿಮ್ಮ ಪಾಲಿಗಿಂತ ಹೆಚ್ಚಾಗಿ ನೀಡಲು ನೀವು ಸಿದ್ಧವಾಗಿದ್ದೀರಾ ? - -

16) ಜನ ತಮ್ಮನ್ನು ಭೇಟಿಮಾಡುವಂತೆ ಅಥವಾ ಅವರ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ನಿಮ್ಮನ್ನು ಆಗಾಗ ಆಹ್ವಾನಿಸುತ್ತಾರೆಯೆ ? - -

17) ಜನ ನಿಮ್ಮ ಸಹವಾಸವನ್ನು ಎಷ್ಟರ ಪ್ರಮಾಣದಲ್ಲಿ ಆನಂದಿಸಿದರು ಎಂಬುದರ ಬಗ್ಗೆ ಅಭಿಪ್ರಾಯ ನೀಡುತ್ತಾರೆಯೇ ? - -

18) ಇತರರಿಗೆ ಸಹಾಯ ಮಾಡಲು ನೀವು ನಿಮ್ಮ ದಾರಿಯನ್ನು ಬಿಟ್ಟು ಹೊರಗೆ ಹೋಗುತ್ತೀರಾ ? - -

19) ಯಾರಾದರೂ ನಿಮಗೆ ನಿರಾಶೆಯನ್ನುಂಟು ಮಾಡಿದರೆ ನಿಮ್ಮ ಕೋಪವನ್ನು ಪ್ರದರ್ಶಿಸುತ್ತೀರಾ ? - -

20) ಸಕಾರಣ ಕೋರಿಕೆಗಳಿಗೆ ನೀವು ಸುಲಭವಾಗಿ ಹೊಂದಾಣಿಕೆ ಮಾಡಿ ಕೊಳುತ್ತೀರಾ?

ಒಟ್ಟು

ಎಣಿಕೆ

ಪ್ರತಿ ಒಂದು 'ಹೌದು' ಎಂಬ ಉತ್ತರಕ್ಕೆ ಐದು 'ಗುಣ'ಕ್ಕೆ ಕೊಡಿ. 80 ಅಥವಾ ಅದಕ್ಕೆ ಹೆಚ್ಚು ಬಂದರೆ ಅದು ಅತ್ಯುತ್ತಮವಾದದ್ದು 70 ರಿಂದ 80ರ ವರೆಗೆ ಒಳ್ಳೆಯದು, (ಚೆನ್ನಾದದ್ದು) 60 ರಿಂದ 70ರ ವರೆಗೆ ತೃಪ್ತಿಕರ. 60ಕ್ಕೆ ಕಡಿಮೆ ಬಂದರೆ ಅತೃಪ್ತಿಕರ.

ಒಟ್ಟಾಗಿ ಗಮನಿಸಿದಾಗ ಇಷ್ಟಪಡುವಿಕೆ ನಾವು ಇತರರ ಬಗ್ಗೆ ತೋರಿಸುವ ಕಾಳಜಿ

ಮತ್ತು ಸಹಾನುಭೂತಿ ಮತ್ತು ಆಸಕ್ತಿ ಇವುಗಳನ್ನು ಅವಲಂಬಿಸುತ್ತದೆ. ಜನದ ಬಗ್ಗೆ ನೀವು ಹೆಚ್ಚು ತಿಳುವಳಿಕೆಯನ್ನು ಹೊಂದುವ ಅಗತ್ಯವನ್ನು ಬೆಳೆಸಿಕೊಳ್ಳಬೇಕೇ ಹೊರತು ನಿಮ್ಮ ಬಗ್ಗೆ ಅತಿ ಹೆಚ್ಚಿನದನ್ನು ಕುರಿತು ಗಲಿಬಿಲಿ ಮಾಡಿಕೊಳ್ಳಬೇಕಾದುದಿಲ್ಲ.



ಅಧ್ಯಾಯ-೫

# ತರುಣ ಮತ್ತು ವ್ಯಕ್ತಿತ್ವದ ಬೆಳವಣಿಗೆ

ತರುಣ ಎಂದರೆ ಬಾಲ್ಯಾವಸ್ಥೆಯಿಂದ ವಯಸ್ಕಾವಸ್ಥೆಯ ನಡುವಿನ ಹಂತ.

ಭಾರತದಲ್ಲಿ ತರುಣ ಒಬ್ಬ ಪುರುಷ. ಅವನ ವ್ಯಕ್ತಿತ್ವವನ್ನು ಸಾಕಷ್ಟು ಇನ್ನೂ ಗುರುತಿಸಿರುವುದಿಲ್ಲ ಮತ್ತು ಪ್ರೋತ್ಸಾಹಿಸುವುದೂ ಇಲ್ಲ. ಆರ್ಥಿಕ ಕಾರಣಗಳಿಂದ ತರುಣನು ಆತನ ತಂದೆ ತಾಯಿಗಳ ಮೇಲೆ ಮತ್ತು ಹೆಚ್ಚಿನ ವರ್ಷಗಳವರೆಗೆ ಪಶ್ಚಿಮದೇಶಗಳಲ್ಲಿನದಕ್ಕಿಂತ ಹೆಚ್ಚು ಅವಲಂಬಿತನಾಗಿರುತ್ತಾನೆ. ಭಾವಾತ್ಮಕ ಅವಲಂಬನೆ, ಕೂಡ ಅತಿ ಹೆಚ್ಚಿನದು. ಅದು ಎಷ್ಟೆಂದರೆ ವಿಳಂಬಿತ ತರುಣಾವಸ್ಥೆ ಎಂದು ಕರೆಯುವಂತೆ ಹೇಳುತ್ತಿರುವವರೆಗೆ.

ತರುಣಾವಸ್ಥೆ ಅಥವಾ ತಾರುಣ್ಯ 12 ವರ್ಷಗಳಿಂದ ಹಿಡಿದು 21 ವರ್ಷಗಳವರೆಗೆ ಇರುತ್ತದೆ. ವಿಳಂಬಿತ ತಾರುಣ್ಯ 25 ವರ್ಷಗಳವರೆಗೂ ಹೋಗುತ್ತದೆ.

## ತಾರುಣ್ಯ

ತಾರುಣ್ಯ ಎಂದರೆ 'ಹೊರಹೊಮ್ಮುವುದು' ವ್ಯಕ್ತಿತ್ವವನ್ನು ಗಳಿಸುವುದು. ನಮಗೆ ಬೇಕಾಗಿರುವುದು ತರುಣನು ಸಾಧಿಸಬೇಕಾಗಿರುವ 'ವ್ಯಕ್ತಿತ್ವದ ಆವರಣ', ಅದು ಅದರ ಭೌತಿಕ ಅಥವಾ ಬೌದ್ಧಿಕ ಅಂಶಗಳಲ್ಲಿ ಮಾತ್ರವಲ್ಲ, ಅವನ ಪೂರ್ಣ ಮಾನವಕವಚದಲ್ಲಿ ಕೂಡ. ಅದು ಸಾಮಾನ್ಯವಾಗಿ ಕಡೆಗಣಿಸಲ್ಪಟ್ಟು, ಆದರೆ, ಅಷ್ಟೆ ಮುಖ್ಯವಾದ ಅಂಶಗಳನ್ನು ಒಳಗೊಳ್ಳುತ್ತದೆ. ಅವುಗಳೆಂದರೆ, ಭಾವುಕ ಅಥವಾ ಮಾನಸಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಭಾವನೆಗಳೇ ಆಗಿವೆ.

ಅಂಗಾಂಗಗಳು ಕಾರ್ಯಸ್ವರೂಪದ ಪಕ್ವತೆಯನ್ನು ಅಥವಾ ಪ್ರಾಯವನ್ನು (ಹೆಣ್ಣು ಮೈ ನೆರೆಯುವ ಸ್ಥಿತಿ) ತಲುಪಿದಾಗ ಲೈಂಗಿಕ ವೈಲಕ್ಷಣಗಳ ಮಾಧ್ಯಮಿಕ ಸ್ಥಿತಿಯ ಶಾರೀರಿಕವಾಗಿ ತೋರಿಕೆಯ ಲಕ್ಷಣಗಳಿಂದ ಪ್ರಾಥಮಿಕ ತಾರುಣ್ಯ ಕಂಡುಬರುತ್ತದೆ.

ಎರಡನೆಯ ತಾರುಣ್ಯಾವಸ್ಥೆ ಮಾನಸಿಕ ಬದಲಾವಣೆಗಳ ಲಕ್ಷಣಗಳಿಂದ ಕೂಡಿರುತ್ತದೆ. ಅವು ಮಗುವು ತನ್ನ ಅವಲಂಬನೆಯ ಸ್ಥಿತಿಯನ್ನು ತ್ಯಜಿಸುವಂತೆ ಉದ್ದೇಶಿಸುತ್ತವೆ ಮತ್ತು ಭಾವೋದ್ರೇಕಗಳು ಕೆಲವೊಮ್ಮೆ ಅತಿ ತೀವ್ರತರವಾಗಿ ಅನುಭವಿಸಲ್ಪಡುತ್ತವೆ.

ತರುಣನಾದವನು ತನ್ನನ್ನು ಗಮನಿಸುವಂತೆ ಕೇಳಿಕೊಳ್ಳುತ್ತಾನೆ ಮತ್ತು ತನ್ನ ಮೇಲೆ ತಾನು ಹೊರಿಸಿಕೊಳ್ಳುವ ಅನೇಕ ಬೇಡಿಕೆಗಳಿಂದ ಮತ್ತು ಅಗತ್ಯತೆಗಳಿಂದ ಎಚ್ಚೆತ್ತುಕೊಳ್ಳುತ್ತಾನೆ. ತರುಣನ ಅಗತ್ಯತೆಗಳನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬೇಕು ಹಾಗೂ ಪ್ರಾಪ್ತ ವಯಸ್ಸಿನ ಮೃದುವಾದ ಬದಲಾವಣೆಯನ್ನು ಸುಲಭಗೊಳಿಸಲು ನೋಡಿಕೊಳ್ಳಲೂಬೇಕು.

## 1. ಮಾನವನ ಅಗತ್ಯತೆಗಳ ತಕ್ಕಡಿ

1) ಜೈವಿಕ ಅಥವಾ ಭೌತಿಕ ಅಗತ್ಯತೆಗಳು - ಹಸಿವು, ಭದ್ರತೆ

2) ಬಂಧುತ್ವದ ಮೂಲಕ ರಕ್ಷಣೆ

   1) ಮೊದಲನೆಯದು

   2) ಎರಡನೆಯದು ಮತ್ತು ಮೂರನೆಯದು

3) ಪ್ರೀತಿ ಪುರುಷನಾಗುವುದು, ನೈತಿಕ ಭಾವನೆಯಲ್ಲಿ ಸೇರಿಕೆಯಲ್ಲ.

4) ಅವಶ್ಯಕವಾದ ಆತ್ಮಗೌರವವನ್ನು ಬೆಳಸಿಕೊಳ್ಳುವುದಕ್ಕಾಗಿ ಮಾನ್ಯ ಮತ್ತು ಗುರುತಿಸುವಿಕೆ

5) ಸ್ವಂತ ನೈಜಕತೆಗಾಗಿ ಸಾಧಿಸುವಿಕೆ.

## ಪ್ರೇರಣೆ ಉದ್ದೇಶಗಳ ಕ್ರಮಬದ್ಧ ಶ್ರೇಣಿ

ಒಂದು ವಿವರಣೆಯ ಪ್ರಕಾರ ಮಾನವ ಪ್ರೇರಣೆಗಳು ಅಥವಾ ಅಗತ್ಯಗಳು ಒಂದು ಕ್ರಮಬದ್ಧ ಶ್ರೇಣಿಯಲ್ಲಿ ಅತೃಪ್ತಿ ಜೀವಿಗಳಿಗೆ ಸಂಬಂಧ್ಧವಾದ ಕ್ರಮದಿಂದ ವ್ಯವಸ್ಥೆಗೊಳಿಸಲಾಗಿದೆ ಎಂದು ಭಾವಿಸಲಾಗಿದೆ. ಈ ಕ್ರಮಬದ್ಧ ಶ್ರೇಣಿಯಲ್ಲಿ ಅನೇಕ ಮಟ್ಟಗಳಿವೆ, ಆದರೆ ಶಾರೀರಿಕ ಅಗತ್ಯಗಳು, ಮೊದಲ ಮಟ್ಟದಲ್ಲಿ - ಮಾನವ ಪ್ರೇರಕಗಳ ತೀರ ಸಮೀಪದ ಮೂಲಾಂಶಗಳೇ ಆಗಿವೆ. ಈ ಅಗತ್ಯಗಳು ನೀರಡಿಕೆ, ಹಸಿವು, ನಿದ್ರೆ ಮತ್ತು ಇತರವು ಎಂಬಂಥ ಚಾಲಕ ಪ್ರವೃತ್ತಿಗೆ ಸಂಬಂಧಿಸಿದ್ದಾಗಿವೆ. ಇವೆಲ್ಲ ಬದುಕಿನ ನಿರ್ವಹಣೆಗೆ ಅವಶ್ಯಕವಾದುವುಗಳೇ ಆಗಿವೆ. ಪ್ರೇರಣೆಗಳು ಎಲ್ಲ ಹಂತಗಳಲ್ಲೂ - ಅತೃಪ್ತಿಕರವಾದುವೇ ಆಗಿದ್ದಾಗ ಇವೆಲ್ಲ ತುಂಬ ಹೊಸದಾದುವೇ ಆಗಿರುತ್ತವೆ ಆದರೆ ಶಾರೀರಿಕ ಅಗತ್ಯತೆಗಳನ್ನು ಪೂರೈಸಿದ್ದೇ ಆದರೆ ರಕ್ಷಣೆಗೆ, ಪೋಷಣೆಗೆ ಆಪೇಕ್ಷೆ ಮತ್ತು ಆಪಾಯದಿಂದ ಸ್ವಾತಂತ್ರ್ಯ ಅಂಥ ಸುಭದ್ರತಾ ಅಗತ್ಯಗಳು ಹೊರಹೊಮ್ಮುತ್ತವೆ. ಈ ಎರಡನೆಯ ಹಂತದಲ್ಲಿ ಸದೃಢ, ಸುಭದ್ರ ಪರಿಸರಕ್ಕೆ ಜೀವಿಗಳ ಅಪೇಕ್ಷೆಗಳಿಗೆ ಸಂಬಂಧಿಸಿದಂತೆ ಇರುವ ಪ್ರೇರಣೆಗಳು.

| |
|---|
| ಸ್ವನೈಜಕತೆ |
| ಆತ್ಮಪ್ರೌಢತ್ವ |
| ಪ್ರೀತಿ ಮತ್ತು ಸಂಬಂಧಿಸಿದವು |
| ಸುಭದ್ರತಾ ಅಗತ್ಯಗಳು |
| ಶಾರೀರಿಕ ಅಗತ್ಯಗಳು |

ಕ್ರಮಬದ್ಧಶ್ರೇಣಿಯ ಮುಂದಿನ ಮಟ್ಟದಲ್ಲಿ, ಪ್ರೀತಿ ಮತ್ತು ಸಂಬಂಧಿತ ವಸ್ತು. ನೆಂಟರುಗಳೇ ಮಿತ್ರರನ್ನು ಪಡೆಯುವುದು, ಜೊತೆಗಾರರನ್ನು ಹೊಂದಿರುವುದು, ಕುಟುಂಬವನ್ನು ಬಯಸುವುದು ಮತ್ತು ಒಂದು ಗುಂಪಿನೊಡನೆ ಗುರುತಿಸಿ ಕೊಳ್ಳುವುದು ಇವುಗಳೇ ಪ್ರೇರಣೆಗಳಾಗಿರುತ್ತವೆ. ಈ ಅಗತ್ಯಗಳು ಖಂಡಿತವಾಗಿ ಸಂಲಗ್ನತೆಯನ್ನು - ಮಿತ್ರತ್ವವನ್ನು ಮತ್ತು ಲೈಂಗಿಕ ಸ್ವಭಾವದ ಅಂಶಗಳನ್ನು ಒಳಗೊಂಡಿರುತ್ತದೆ. ಆದರೆ ಅವುಗಳನ್ನು

ತೃಪ್ತಿಗೊಳಿಸಿದರೆ ಆತ್ಮಘನತೆಯ ಪ್ರೇರಣೆಗಳ ಬಹುಮುಖ್ಯವಾಗಿಬಿಡುತ್ತವೆ. ಅವು ಗೌರವಾನ್ವಿತ ನಂಬಿಕೆಗೆ ಮತ್ತು ಮೆಚ್ಚುಗೆಗೆ ಆಶಯವನ್ನು ಒಳಗೊಳ್ಳುತ್ತವೆ. ಗೌರವಸ್ಥಾನದಲ್ಲಿ ಅನುರಾಗದ ಸಂಬಂಧಗಳ ಆಶಯಗಳು ಬಹುಶಃ ಪೂರ್ಣಗೊಂಡಿದ್ದ ಪಕ್ಷದಲ್ಲಿ, ಅನಂತರ ಸಾಧನೆ, ಹಿರಿತನ ಮತ್ತು ಗೌರವಾತ್ಮಕ ಪ್ರೇರಣೆಗಳು ಬಹುಮುಖ್ಯವಾಗಿಬಿಡುತ್ತವೆ. ಉನ್ನತ ಮಟ್ಟದಲ್ಲಿ ಕಂಡುಬರುವ ಅಪೇಕ್ಷೆ ಎಂದರೆ, ಒಬ್ಬ ವ್ಯಕ್ತಿಯ ಸಾಮರ್ಥ್ಯಗಳನ್ನು ಬಳಸಿಕೊಳ್ಳುವುದೇ ಮತ್ತು ಒಬ್ಬನು ಯಾವುದಕ್ಕೆ ಸ್ಪಷ್ಟನಾಗಿ ಯೋಗ್ಯನಾಗಿದ್ದಾನೆ ಎಂಬುದನ್ನು ಅರಿತು ಅವನನ್ನು ಆ ಚಟುವಟಿಕೆಗಳಲ್ಲಿ ಸೇರಿಸಿಕೊಳ್ಳುವುದೇ ಆಗಿದೆ. ಈ ಮಟ್ಟವನ್ನು 'ಸ್ವನೈಜಕತೆ' ಎಂದು ಕರೆಯಲಾಗಿದೆ.

## ತರುಣನ ಅಗತ್ಯಗಳು

| ಎ. ಜೈವಿಕ | ಬಿ. ಮಾನಸಿಕ |
|---|---|
| 1. ಕರುಳಿನ ಆಹಾರ, ನೀರು, ನಿದ್ರೆ ವಿಸರ್ಜನೆ, ವಿಶ್ರಾಂತಿ, ವಸ್ತ್ರ ಮತ್ತು ಆಶ್ರಯ ಆಶ್ರಯ. | 1. ಪ್ರೀತಿ ಮತ್ತು ಅನುರಾಗೆಕ್ಕೆ ಅಗತ್ಯ |
| 2. ಭದ್ರತಾ ಅಗತ್ಯಗಳು-ಸೂಕ್ತ ಹವಾಮಾನ, ಅಪಾಯಗಳಿಂದ ಮತ್ತು ಹೊರಗಿನ ಭಯಗಳಿಂದ ರಕ್ಷಣೆ | 2. ಅನುಮತಿಗೆ ಅಗತ್ಯ. |
| 3. ಲೈಂಗಿಕ ಪ್ರಚೋದನೆಗಳು- ಜಾತಿಗಳ ನಿರಂತರತೆಗೆ ಮತ್ತು ವೈಯಕ್ತಿಕ ಸಾಧನೆಗೆ ಮೂಲ. | 3. ಪಾಲನೆಗೆ ಅಗತ್ಯ |
| 4. ಇಂದ್ರಿಯ ಚಾಲಕ ಅಗತ್ಯಗಳು- ಇಂದ್ರಿಯ ಮತ್ತು ಚಾಲಕ ಅಭ್ಯಾಸಗಳನ್ನು ಹೊಂದಿರುವುದು | 4. ಸಂಲಗ್ನತೆಗೆ ಅಗತ್ಯತೆ<br>5. ಹೊಸದೃಷ್ಟಿಗೆ ಅಗತ್ಯತೆ<br>6. ಸಾಕಷ್ಟು ತೃಪ್ತಿಭಾವಕ್ಕೆ |

ಅವಶ್ಯಕ.

ಅಗತ್ಯತೆ

7. ಅಧ್ಯಾತ್ಮಿಕ ಅಗತ್ಯತೆಗಳು.

## ಅಹಂಭಾವದ ಅಗತ್ಯಗಳು :

1. ಪ್ರಾಬಲ್ಯಕೆ ಅಗತ್ಯತೆ
2. ಸ್ವಾಯತ್ತತೆಗೆ ಅಗತ್ಯತೆ
3. ಸಾಧನೆಗೆ ಅಗತ್ಯತೆ
4. ಸ್ವಾಧೀನತೆಗೆ ಅಗತ್ಯತೆ.
5. ಉಳಿಸಿಕೊಳ್ಳುವುದಕ್ಕೆ ಅಗತ್ಯತೆ
6. ಗಮನ ಸೆಳೆಯುವುದಕ್ಕೆ ಅಗತ್ಯತೆ
7. ಲಕ್ಷ್ಯಕ್ಕೆ ಅಗತ್ಯತೆ
8. ನಾಶಕ್ಕೆ ಅಗತ್ಯತೆ

11 ಕೊರತೆಗಳನ್ನು ತುಂಬಲು ಇರುವ ಅಡಚಣೆಗಳು

ಮಕ್ಕಳಲ್ಲಿರುವ ಕೊರತೆಗಳ ಹತಾಶೆಗಳಿಗೆ ಎಳೆದೊಯ್ಯುವ ಶಾರೀರಿಕ ಮತ್ತು ಸಾಮಾಜಿಕ, ಈ ಎರಡು ರೀತಿಯ ಭಾವುಕ ಎಡರುಗಳಲ್ಲಿ ಅತಿ ವಿಸ್ತಾರವಾದ ಸೀಮೆಗಳಿವೆ. ಅವುಗಳೆಂದರೆ,

1. ಬಡತನ-ಆರ್ಥಿಕ ಕಳೆತ
2. ಶೈಕ್ಷಣಿಕ ಅಪಹರಣ
3. ಬಲಿಷ್ಠ ಬಾಂಧವ್ಯದ ಮೇಲಾಟ
4. ಸಾಮಾಜಿಕ ಪದ್ಧತಿಗಳು, ಸಂಪ್ರದಾಯಗಳು ಮತ್ತು ಬಹಿಷ್ಕಾರಗಳು
5. ಒಡೆದ ಸಂಸಾರಗಳು
6. ತಂದೆ ತಾಯಿಗಳು ಬಿಟ್ಟು ಹೋಗುವುದು
7. ಅಧಿಕಾರ ಪ್ರವೃತ್ತಿ ಅಥವಾ ಅತಿಪೋಷಣೆ ಅಥವಾ ಶರಣತ್ವ ಅಥವಾ ಆದರ್ಶವಾದಿ ತಂದೆ ತಾಯಂದಿರು.
8. ಮನೆಯಲ್ಲಿ ಅಸಮಂಜಸ ಮತ್ತು ಅನುಚಿತ ಶಿಸ್ತು
9. ತಪ್ಪು ಮಾದರಿಗಳು-ಅಂತಃ ಕಲಹ ಮತ್ತು ತಂದೆ ತಾಯಿಗಳ ನಡುವೆ ಜಗಳ

10. ಕುಟುಂಬದಲ್ಲಿ ಪ್ರೀತಿಯ ಮತ್ತು ವಾತ್ಸಲ್ಯದ ಅಭಾವ

11. ಮದ್ಯಸೇವನೆಯ ತಂದೆ

12. ಕೆಟ್ಟ ಜೊತೆಗಾರರು

13. ಮಾನಸಿಕವಾಗಿ ರೋಗಗ್ರಸ್ಥ ತಂದೆ ಅಥವಾ ತಾಯಿ

14. ಅಂಗ ದೌರ್ಬಲ್ಯಗಳು

15. ಅನರ್ತಕ ಖಾಯಿಲೆಗಳು.

ಮೇಲೆ ಹೇಳಿದವುಗಳಲ್ಲಿ ಯಾವುದೇ ಒಂದು ಅಥವಾ ಘಟನೆಗಳ ಪರಂಪರೆ ಮಕ್ಕಳಲ್ಲಿ ಅತೃಪ್ತಿಗೆ ದಾರಿ ಮಾಡಿಕೊಡಬಹುದು.

## ಕೊರತೆಗಳ ಬಗ್ಗೆ ತೃಪ್ತಿಯನ್ನು ತಂದು ಕೊಡದೆ ಇರುವುದರ ಪರಿಣಾಮಗಳು

1. ಕಳವಳ-ಕಾಲ್ಪನಿಕ ಭಯಗಳು, ಒತ್ತಡ ವಾಸ್ತವಿಕತೆಯ ಮತ್ತು ಹೊಣೆಗಾರಿಕೆಯ ಅಂಜಿಕೆ

2. ಸಾಮಾಜಿಕ ತಪ್ಪು ಹೊಂದಾಣಿಕೆ-ಬಾಲಾಪರಾಧ, ಕೆಲಸಗಳ್ಳತನ, ಎದುರುಬೀಳುವುದು ಮತ್ತು ತಕ್ಸೀರು.

3. ವಿರೋಧ ಮನೋವ್ಯಾಧಿಯ ಅಕ್ರಮಗಳು ನಿರುತ್ಸಾಹದ ಪ್ರತಿಕ್ರಿಯೆಗಳು, ಭ್ರಾಂತಿ ಪೀಡಿತ ಬಲಾತ್ಕಾರದ ಪ್ರತಿಕ್ರಿಯೆಗಳು ಮತ್ತು ಸಂಬಂಧವಿಲ್ಲದ ಪ್ರತಿಕ್ರಿಯೆಗಳು

4. ಸ್ವಭಾವಸಿದ್ಧ ಸಮಸ್ಯೆಗಳು-ಮೇಲೆ ಬೀಳುವುದು, ನಾಶಮಾಡುವುದು, ಹಟಸಾಧಿಸುವುದು,ಶತ್ರುತ್ವ ಉತ್ಪ್ರೇಕ್ಷಿತ ಅಹಂಭಾವ.

5. ಮಾನಸಿಕ ಕೊರತೆ-ತರಗತಿಯಲ್ಲಿ ಹೊಂದಿಸಿಕೊಂಡು ಹೋಗಲು ಸಾಮರ್ಥ್ಯವಿಲ್ಲದಿರುವುದು.

6. ಹೆದರಿಕೆ ಅನಿಶ್ಚಯತೆ ಮತ್ತು ಮೇಲೆ ಬೀಳಬಹುದಾದ ಅನಾಹುತದ ಭಾವನೆಗಳು

ಮನೋವಿಕಲ್ಪಗಳು ಗಂಭೀರವಾದ ಮಾನಸಿಕ ಸ್ವಭಾವದ ಅಕ್ರಮಗಳು.

## ವಿಶಿಷ್ಟ ಅಗತ್ಯತೆಗಳೊಡನೆ ಪಾತ್ರ ವಹಿಸಲು ಯುವಕರನ್ನು ಸಿದ್ಧಮಾಡುವುದು

| ತಾರುಣ್ಯ | ಆರಂಭಿಕ ಪ್ರಾಪ್ತ ವಯಸ್ಕತೆ |
|---|---|
| ಗಂಡು ಹೆಣ್ಣುಗಳಿಬ್ಬರಲೂ ಸಮ ವಯಸ್ಸಿನ ಮಟ್ಟದ ಸಂಗಾತಿಗಳೊಡನೆ ಹೊಸ ಮತ್ತು ಹೆಚ್ಚು ಪಕ್ವವಾದ ಬಂಧುತ್ವವನ್ನು ಸಾಧಿಸುವುದು. | ಸಂಗಾತಿಯನ್ನು ಆರಿಸಿಕೊಳ್ಳುವುದು. |
| ಗಂಡಸಿನ ಅಥವಾ ಹೆಂಗಸಿನ ಪಾತ್ರವನ್ನು ಸಾಧಿಸುವುದು. | ವಿವಾಹವಾದ ಪಾಲುದಾರನಳೊಂದಿಗೆ ಬದುಕಲು ಕಲಿಯುವುದು. |
| ಒಬ್ಬನ ಶರೀರ ರಚನೆಯನ್ನು ಒಪ್ಪಿಕೊಳ್ಳುವುದು ಮತ್ತು ಶರೀರವನ್ನು ಪರಿಣಾಮಕಾರಿಯಾಗಿ ಬಳಸುವುದು. | ಕುಟುಂಬವನ್ನು ಆರಂಭಿಸುವುದು. |
| ತಂದೆ ತಾಯಿಗಳ ಮತ್ತು ಇತರ ವಯಸ್ಕರ ಭಾವಗಳ ಸ್ವಾತಂತ್ರ್ಯವನ್ನು ಸಾಧಿಸುವುದು. ಆರ್ಥಿಕ ಸ್ವಾತಂತ್ರ್ಯದ ಬಗ್ಗೆ ಭರವಸೆಯನ್ನು ಸಾಧಿಸುವುದು. | ಮಕ್ಕಳ ಪಾಲನೆ ಕುಟುಂಬ ನಿರ್ವಹಣೆ. |
| ಉದ್ಯೋಗಕ್ಕೆ ಸಿದ್ಧಮಾಡಿಕೊಳ್ಳುವುದು ಮತ್ತು ಅದನ್ನು ಆಯ್ಕೆ ಮಾಡುವುದು | ಒಂದು ಉದ್ಯೋಗದಲ್ಲಿ ಕಾರ್ಯಾರಂಭಿಸಲು ಸಿದ್ಧವಾಗುವುದು ಪೌರತ್ವ ಹೊಣೆಗಾರಿಕೆಯನ್ನು |

ಮತ್ತು ಕೌಟುಂಬಿಕ ಜೀವನಕ್ಕೆ ಮದುವೆಗೆ ಕೈಗೊಳ್ಳುವುದು.

ಸಿದ್ಧವಾಗುವುದು.

ಬೌದ್ಧಿಕ ನಿಪುಣತೆಗಳನ್ನು ಮತ್ತು ಪೌರ

ಸಾಮರ್ಥ್ಯಕ್ಕೆ ಅಗತ್ಯವಾದ ಪರಿಕಲ್ಪನೆ ಸಾಮಾಜಿಕ ಹಿತಕರ ತಂಡವನ್ನು

ಗಳನ್ನು ವೃದ್ಧಿ ಪಡಿಸಿಕೊಳ್ಳುವುದು. ಗುರುತಿಸುವುದು.

ಸಾಮಾಜಿಕವಾಗಿ ಜವಾಬ್ದಾರಿತನದ ಸ್ವಭಾವವನ್ನು ಅಪೇಕ್ಷಿಸುವುದು ಮತ್ತು ಸಾಧಿಸುವುದು ಸ್ವಭಾವಕ್ಕೆ ಮಾರ್ಗದರ್ಶನಿಯಾಗುವಂತೆ ಮೌಲ್ಯಗಳ ಒಂದು ಶ್ರೇಣಿಯನ್ನು ಮತ್ತು ನೀತಿಶಾಸ್ತ್ರದ ಪದ್ಧತಿಯನ್ನು ಸಪಾದಿಸುವುದು.

## ಯುವಕರು ತಮ್ಮ ಪಾತ್ರವನ್ನು ವಹಿಸಿಕೊಳ್ಳಲು ಸಹಾಯ ಮಾಡುವುದು :

## ತಂದೆ ತಾಯಿಗಳಿಗೆ ಮತ್ತು ಶಿಕ್ಷಕರಿಗೆ ಮಾರ್ಗದರ್ಶನಗಳು-

1. ಪ್ರತಿಯೊಬ್ಬ ವಿದ್ಯಾರ್ಥಿ ಸ್ವಭಾವದ ಚಾಲಕ ಶಕ್ತಿಯನ್ನು ಅರ್ಥಮಾಡಿಕೊಳ್ಳಿ
2. ಅವನನ್ನು ಪ್ರೀತಿಸಲಾಗುತ್ತದೆ ಮತ್ತು ಯಾವಕಾಲಕ್ಕೂ ಅವನು ಬೇಕು ಎಂಬುದನ್ನು ಅವನಲ್ಲಿ ದೃಢಪಡಿಸಿ.
3. ನಿಮ್ಮ ಧ್ಯೇಯವನ್ನು ಮತ್ತು ನಿರೀಕ್ಷೆಣೆಯನ್ನು ಸ್ಪಷ್ಟಪಡಿಸಿ.
4. ಅವನು ನಡೆದುಕೊಳ್ಳಬೇಕಾದ ಸ್ಪಷ್ಟವಾಗಿ ವಿವರಿಸಲ್ಪಟ್ಟ ಎಲ್ಲೆಗಳ ಮಿತಿಗಳನ್ನು ಹೊಂದಿರಲಿ
5. ಅವನ ಸ್ವಂತಗತಿಯಲ್ಲಿ ಅವನು ಬೆಳೆಯಲು ಮತ್ತು ವೃದ್ಧಿಹೊಂದಲು ತರುಣನನಿಗೆ ಆರೋಗ್ಯಕರ ಸೃಜನಾತ್ಮಕ ಅವಕಾಶಗಳನ್ನು ಒದಗಿಸಿ.
6. ನೀವೇ ಅವನಿಗೆ ಒಳ್ಳೆಯ ಮಾದರಿಯಾಗಿರಿ ಮತ್ತು ದೃಷ್ಯಂತವಾಗಿರಿ.
7. ತರುಣ:ತರುಣೆ ಏನಾಗಿದ್ದಾನೆ/ಳೆ ಎಂಬುದನ್ನು ನೀವು ಒಪ್ಪಿಕೊಳ್ಳಿ ಮತ್ತು ಅವನನ್ನು

ಅವಳನ್ನು ಕೆಲವು ಹಕ್ಕುಗಳನ್ನು ಮತ್ತು ಹೊಣೆಗಳನ್ನು ಹೊಂದಿರುವ ಪ್ರತ್ಯೇಕ ವ್ಯಕ್ತಿಯೆಂದು ಗೌರವಿಸಿ.

8. ಅವನ ಭಾವನೆಗಳ ಪ್ರತಿಕ್ರಿಯೆಗಳನ್ನು ರಚನಾತ್ಮಕವಾಗಿ ವಿನಿಮಯಗೊಳಿಸಿಮತ್ತು ಅವನ/ಳ ಧನಾತ್ಮಕ ಪ್ರಯತ್ನಗಳನ್ನು ಗುರುತಿಸಿ.

9. ಅವನ/ಳ ಅಭಿವೃದ್ಧಕರ ಕೆಲಸಗಳ ನೇರವೇರಿಕೆಯಲ್ಲಿ ಅವನನ್ನು/ಳನ್ನು ಬೆಂಬಲಿಸಿ ಮತ್ತು ಅವನಿಗೆ ಸಹಾಯ ಮಾಡಿ

10. ಪ್ರತಿಯೊಬ್ಬ ವಿದ್ಯಾರ್ಥಿಯೂ 'ಅಪೂರ್ವ' ಎಂದು ಅರ್ಥಮಾಡಿಕೊಳ್ಳಿ ಮತ್ತು ಮಕ್ಕಳ ಮಧ್ಯೆ ಪರಸ್ಪರ ಆಕಾರಣವಾದ ಹೋಲಿಕೆಗಳನ್ನು ತಪ್ಪಿಸಿ.

11. ಮಕ್ಕಳಿಗೆ ನೀವು ನೀಡುವ ನಿರ್ದೇಶನಗಳಲ್ಲಿ, ನೀವು, ಭಾವಪೂರ್ಣ ದೃಢತೆಯನ್ನು ಸುಸಂಗತಿಯನ್ನು / ಅಳವಡಿಸಿಕೊಳ್ಳಿ

12. ವಿದ್ಯಾರ್ಥಿಗಳೊಡನೆ ವ್ಯವಹರಿಸುವಲ್ಲಿ ಅಧಿಕಾರತ್ವವನ್ನು, ಮೈಲುಗೈಯನ್ನು, ಅತಿಪಾಲನೆಯ ಸ್ವಭಾವವನ್ನು ಮತ್ತು ಶರಣತ್ವವನ್ನು ದೂರವಿಡಿ.

13. ಸಾಧಿಸಲಾಗದ ನೆರವೇರಿಕೆಗಳ ನಿಮ್ಮ ಅಗತ್ಯಗಳನ್ನು ವಿದ್ಯಾರ್ಥಿಗಳ ಮೂಲಕ ಸಾಧಿಸಿಕೊಳ್ಳಲು ಎಂದೂ ಪ್ರಯತ್ನಿಸಬೇಡಿ. ಯುವಕರಿಗೆ ಸಹಾಯಮಾಡುವುದು-ಅವರ ಅಗತ್ಯಗಳನ್ನು ಅರ್ಥಮಾಡಿಕೊಳ್ಳುವುದು, ಅವುಗಳಿಗೆ ತೃಪ್ತಿಪಟ್ಟುಕೊಳ್ಳುವುದು ಮತ್ತು ಅವುಗಳನ್ನು ರೂಢಿಸುವುದು- ಒಂದು ಸುಖದಾಯಕ ಅನುಭವವಾಗಬಹುದು.

ನಾವು ಬಹುಶಃ ತರುಣರ ಅಗತ್ಯಗಳನ್ನು ಈ ಮೂರು ಪದಗಳಿಂದ ಸಂಗ್ರಹಿಸಬಹುದು.

1. ಸ್ವೀಕರಣೆ 2. ವಾತ್ಸಲ್ಯ 3. ಗಮನ

ನನ್ನನ್ನು ರೂಪಿಸುವುದು ಯಾವುದು ?

— ಕುಟುಂಬವೆ ?

— ಪುಸ್ತಕಗಳ, ಸಂಕೀರ್ಣಪತ್ರಿಕೆಗಳ, ಚಲನಚಿತ್ರಗಳ

ಸ್ನೇಹಿತರ, ವಿದ್ಯಾಭ್ಯಾಸದ ಪ್ರಭಾವವೆ ?

— ಬದುಕುವುದಕ್ಕೆ/ಪ್ರೇರಣೆಗೆ ನನ್ನ ಸಮರ್ಥನೆಯೆ ?

ಸರಿ ಸುಮಾರು ನಮ್ಮ ನಡತೆಯ ಶೇಕಡ ೫೦ರಷ್ಟು ನಮ್ಮ ವಂಶಾನುಗತವಾದದ್ದು. ಅಷ್ಟೆ ಸಮಪ್ರಮಾಣದಲ್ಲಿ ವಾತಾವರಣ ಕೂಡ ನಿರ್ಧರಿಸುತ್ತದೆ. ಮಾನವನ ಮನಸ್ಸು, ತನ್ನ ಎಲ್ಲ ಮಾನಸಿಕ ಬಲಗಳಿಂದ, ಬದುಕಿನ ಹೋರಾಟಗಳಲ್ಲಿ ಕಾರ್ಯನಿರ್ವಹಿಸಲು ತಮ್ಮ ತಮ್ಮ ಪೂರ್ಣ ಶಕ್ತಿಯೊಡನೆ ವಿಶ್ವಕ್ಕೆ ತೆರೆದಿಡಲು ಸಿದ್ಧವಾಗಿದೆಯೆಂಧು ಯಾರೊಬ್ಬರೂ ಯೋಚಿಸಬಾರದು.

ಮಾನವ ಅಕಾಂಕ್ಷೆಗಳು ಯಾವುದೋ ಒಂದು ರೀತಿಯ ಯೋಜನೆಗೆ ಒಟ್ಟು ಗುಂಪಾಗಿ ರೂಪುಗೊಳ್ಳುವ ನೈಸರ್ಗಿಕ ಪ್ರವೃತ್ತಿಗಳನ್ನು ಹೊಂದಿವೆ. ಮುಂದಿನ ಭವಿಷ್ಯವನ್ನು ದೃಷ್ಟಿಸಿದಾಗ, ಅದು ಯಾವಾಗಲಾದರೊಮ್ಮೆ, ಎಲ್ಲ ಸಾಧಾರಣ ಮಾನವ ಪ್ರಾಣಿಗಳಲ್ಲಿ ತಲೆದೋರುವುದು ಸಹಜ-ಸ್ವಾಭಾವಿಕವಾಗಿ ಈ ಪ್ರಶ್ನೆಗೆ ಎಡೆ ಮಾಡಿಕೊಡುತ್ತದೆ. 'ನನ್ನ ಮುಂದಿರುವ ವರ್ಷಗಳಲ್ಲಿ (ಆಯುಷ್ಯದಲ್ಲಿ) ನಾನು ಮಾಡಬೇಕಾದುದು ಏನು ?' ಬಹುಶಃ ಬಹುಸಂಖ್ಯಾತರು ಯಾವುದೇ ಒಂದು ನಿಶ್ಚಿತ ಉತ್ತರ ಕೊಡಲಾರರು ಮತ್ತು ಭವಿಷ್ಯದ ಬಗ್ಗೆ ಒಂದು ತರ್ಕಸಮ್ಮತ ವ್ಯವಸ್ಥೆಗೆ ಪ್ರಜ್ಞಾಪೂರ್ವಕವಾಗಿ ಯೋಜನೆ ಕೈ ಕೊಳ್ಳಲು ಯಾವುದೇ ರೀತಿಯ ಪ್ರಯತ್ನ ಮಾಡುವುದಿಲ್ಲ. ಪುಸ್ತಕಗಳು, ಚಲನಚಿತ್ರಗಳು, ತಂದೆ ತಾಯಿಗಳು, ಮಿತ್ರರು ಮತ್ತು ವಿದ್ಯಾಭ್ಯಾಸ, ಇವುಗಳ ಪ್ರಭಾವ ಕೆಲಮಟ್ಟಿಗೆ ಲಾಭದಾಯಕವೂ ಆಗಬಹುದು ಹಾಗೂ ಹೆಚ್ಚು ಕೆಡುಕಿನ ಪರಿಣಾಮಗಳನ್ನು ಮಾನವ ಮನಸ್ಸಿನ ಬೆಳವಣಿಗೆಯ ಮೇಲೆ ಬೀರಲೂಬಹುದು. ಉತ್ತಮಪಡಿಸಿಕೊಳ್ಳಲು, ಪ್ರಗತಿಹೊಂದಲು, ಶ್ರೇಷ್ಠತೆಗೇರಲು ಪ್ರೇರಣೆ ಬಹುಮುಖ್ಯ.

## 4. ಬದುಕಿನಲ್ಲಿ ಗುರಿ - ಬದುಕಿನ ಅರ್ಥ

''ಆಹಾ ! ಮಾನವನ ಗುರಿ ಅವನ ಮುಷ್ಠಿಗಿಂತ ಹೆಚ್ಚಾಗಿರಬೇಕು ಇಲ್ಲದಿದ್ದರೆ ಸ್ವರ್ಗ ಇರುವುದು ಏತಕ್ಕೆ ?

ರಾಬರ್ಟ್ ಬ್ರಾನಿಂಗ್.

ಬದುಕಿನಲ್ಲಿ ಸಾಕಾಗುವಷ್ಟು ಗುರಿಯನ್ನು ಹೊಂದಿರದ ವ್ಯಕ್ತಿಗಳು ತಮಗೆ

ಸಂತೋಷಕೊಡದ ವರ್ಷಗಳಲ್ಲಿ ವಿಶೇಷವಾಗಿ ನಷ್ಟಹೊಂದುವುದು ಸಾಮಾನ್ಯ. ಯೌವನ ಮತ್ತು ಮಹತ್ವಾಕಾಂಕ್ಷೆ ಬಾಡಿಹೋಗಲು ಆರಂಭಿಸಿದಾಗ, ಬದುಕಿಗೆ ಸಂಬಂಧಿಸಿದ ಯೋಜನೆ ಮಾಡುವಾಗ ಅತೀಯತೆಯಿಂದ ಉಂಟಾಗುವ ತಪ್ಪು (ದೋಷ) ಅವರನ್ನು ನಿರರ್ಥಕ ಕನಸುಗಳಿಗೆ ಒಳಪಡಿಸಿ ಬಿಡುತ್ತದೆ. ಅದರ ಪರಿಣಾಮ ಸ್ವಭಾವ ದೋಷಗಳು ಯಾವುದೇ ಗುರಿಯನ್ನು ಮುಟ್ಟಲು ಸಾಧಿಸಲು ತೊಡಗಾಲುಗಳಾಗಿ ಪರಿಣಮಿಸುತ್ತವೆ.

ಬದುಕಲು ಯಾವುದೇ ಒಂದು ಕಾರಣವುಳ್ಳವನು, ಹೆಚ್ಚುಕಡಿಮೆ ಯಾವುದೇ ಬಗೆಯ ಬದುಕನ್ನು ಸಹನೆಯಿಂದ ಎದುರಿಸುತ್ತಾನೆ. ಆದರೆ ಬದುಕಿನ ಅರ್ಥ ಏನೆಂಬುದು ತಿಳಿಯದು ಎನ್ನುವ ವ್ಯಕ್ತಿ ಬದುಕಿಗೆ ಅಕ್ಷೇಪಣೆಯನ್ನು ಒಡ್ಡಿದ್ದೇ ಆದರೆ, ಅವನ ಇರುವಿಕೆಯ ಅಪೂರ್ವ ಸಾಮರ್ಥ್ಯಗಳೇ ಅವನಿಗೆ ಸ್ಪಷ್ಟವಾಗಿಲ್ಲ ಎಂಬುದಂತೂ ನಿಜ. ಆಗ ಅವನಿಗೆ ನಾವು ಹೀಗೆ ಉತ್ತರಿಸಬಹುದು, ''ಅವನ ಪ್ರಥಮ ಕರ್ತವ್ಯ ಇಷ್ಟು ಮಾತ್ರ. ನನ್ನ ಸ್ವಂತ ಯೋಗ್ಯ ಕರ್ತವ್ಯದೆಡೆಗೆ ನಿನ್ನ ದಾರಿಯನ್ನು ಹುಡುಕಿ ಮತ್ತು ಬದುಕಿಗೆ ನಿನ್ನದೇ ಆದ ಅಪೂರ್ವ ಮತ್ತು ವೈಯಕ್ತಿಕ ಅರ್ಥವನ್ನು ಕಂಡುಹಿಡಿಯುವತ್ತ ಮುಂದುವರೆ' ಎಂದು.

ದಿಗಂತದ ಮೇಲೆ ಪ್ರಜ್ಞಾಪೂರ್ಣ ಗುರಿ ಕಂಡುಬರದೆಯೇ ಇದ್ದಲ್ಲಿ, ಕೆಲವು ಅಕಾಂಕ್ಷೆಗಳು ತದನಂತರ ಅಧಿಕಾರನಡಸುತ್ತವೆ ಮತ್ತು ಅವನ ಅರಿವಿಗೆಬಾರದೆಯೇ ಒಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಇರುವ ಎಲ್ಲವೂ ತಮ್ಮ ತಮ್ಮ ತೃಪ್ತಿಯಕಡೆಗೆ ಒಮ್ಮುಖವಾಗುತ್ತವೆ.

ಹೆಬ್ಬಯಕೆ ಒಂದು ಗುಣ. ಅದನ್ನು ಪ್ರೋತ್ಸಾಹಿಸಲೇಬೇಕು. ವಾಸ್ತವಿಕತೆ ಮತ್ತು ಸ್ವಸ್ವೀಕೃತಿ ಮಹತ್ವಾಕಾಂಕ್ಷೆಗೆ ನಿಜದ ದಿಕ್ಕನ್ನು ತೋರಿಸುತ್ತದೆ ಮತ್ತು ತೀವ್ರತೆಯನ್ನು ಸ್ಪರ್ಷಿಸುತ್ತದೆ. ಜೊಸೆಫ್ ಕೊನ್ರಾಡ್ ಹೇಳುತ್ತಾನೆ; ''ಎಲ್ಲ ಮಹತ್ವಾಕಾಂಕ್ಷೆಗಳು ಇತರರ ಸಂಕಟಗಳ ಅಥವಾ ಮೂಢನಂಬಿಕೆಗಳ ಮೇಲೆ ಸವಾರಿ ಮಾಡುವದನ್ನು ಹೊರತುಪಡಿಸಿ ನ್ಯಾಯಸಮ್ಮತವಾದುವೇ''.

ಪ್ರತಿಯೊಬ್ಬ ಮನುಷ್ಯನ ಅಂತರಿಕ ಸಾಮರ್ಥ್ಯಗಳು ವಿಷಯಕ್ಕೆ ಸಂಬಂಧಿಸಿದಂತೆ-ಎಂದರೆ ಬೇರೆ ರೀತಿಯಲ್ಲಿ ಹೇಳುವುದಾದರೆ ತಾನು ಇರುವುದಕ್ಕಿಂತ ಬೇರೆಯಾಗಿ ಹೇಗಿರಬೇಕು ಹೇಳುವಲ್ಲಿ ಗಯಟೆ ನೀಡಿರುವ ಉತ್ತರಕ್ಕಿಂತ ಬೇರೆ ಉತ್ತಮ ಉತ್ತರವಿಲ್ಲ. ''ನಮ್ಮನ್ನು ನಾವು ಅರ್ಥಮಾಡಿಕೊಳ್ಳಲು ನಾವು ಕಲಿಯುವುದು ಹೇಗೆ ?

ಪ್ರತಿಫಲನದಿಂದಂತಲೂ ಖಂಡಿತ ಅಲ್ಲ, ಆದರೆ ಕ್ರಿಯೆಯಿಂದ, ನಿಮ್ಮ ಕರ್ತವ್ಯವನ್ನು ನೀವು ಮಾಡಲು ಪ್ರಯತ್ನಿಸಿ. ನಿಮಗೆ ಕೂಡಲೆ ತಿಳಿಯುತ್ತದೆ- ನೀವು ಏನು ? ಯಾರು ? ಎಂಬುದು. ಆದರೆ ನಿಮ್ಮ ಕರ್ತವ್ಯ ಏನು ? ಪ್ರತಿದಿನದ ಬೇಡಿಕೆಗಳು.'' ಆದ್ದರಿಂದ ಈ ಪ್ರಪಂಚದಲ್ಲಿ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಬೇಕಾದರೆ, ಪ್ರತಿಯೊಬ್ಬನೂ ತನ್ನನ್ನು ತಾನು ಅರ್ಥಮಾಡಿಕೊಳ್ಳಬೇಕು ಮತ್ತು ತಾನು ತಾನಾಗಿಯೇ ಇರಬೇಕು ಎಂಬುದು ಅವಶ್ಯ. ಈ ಅಂಶದಿಂದ ಮುಂದಕ್ಕೆ ತನ್ನ ಸ್ವಂತ ಅಭಿವೃದ್ಧಿಯ ಗರಿಷ್ಠ ಪ್ರಯೋಜನಕ್ಕೆ ಮತ್ತು ಒಬ್ಬನ ಸುತ್ತಲಿನ ಕುಟುಂಬಕ್ಕೆ ಹೊಂದಿಕೊಳ್ಳುವಂತೆ ಬದುಕನ್ನು ಪೂರ್ಣವಾಗಿ ಜೀವಿಸಲು ಮುಂದುವರಿಸಬೇಕು.

## 5. ವ್ಯಕ್ತಿತ್ವದ ಬೆಳವಣಿಗೆ

ಮಾನವನ ವ್ಯಕ್ತಿತ್ವ ಅಪೂರ್ವ ಮತ್ತು ಐದು ಮುಖಗಳಿಂದ ಅಥವಾ ಹಲವಾರು ದೃಷ್ಟಿಗಳಿಂದ ಕೂಡಿದೆ.

1. ಭೌತಿಕ
2. ಮಾನಸಿಕ
3. ಆವೇಶಪರ
4. ಸಾಮಾಜಿಕ
5. ಆಧ್ಯಾತ್ಮಿಕ

ಈ ಎಲ್ಲ ಐದು ಮುಖಗಳು ಪರಂಪರೆಯಿಂದ ಹಾಗೂ ಪರಿಸರಗಳಿಂದ- ಎರಡರಿಂದಲೂ ನಿರ್ಧಾರವಾಗುತ್ತವೆ.

ಭೌತಿಕ ಆಭಿವೃದ್ಧಯ ಕಲ್ಪನೆ ಮೂಡಿದ ಕ್ಷಣದಿಂದ ಸಮತೋಲನ ಆಹಾರ, ಶಾರೀರಿಕ ವ್ಯಾಯಾಮ ಮತ್ತು ದೇಹವೃದ್ಧಿಗೆ ಬೇಕಾದ ವಿಶ್ರಾಂತಿ ಇವುಗಳ ಅಗತ್ಯವಾಗಿ ಬೇಕಾಗುತ್ತದೆ.

ಆವೇಶದ ಅಭಿವೃದ್ಧಿಗೆ ಪಕ್ವವಾದ ಅರಿವು ಮ್ತು ಒಳತೋಟಗಳೊಡನೆ ವ್ಯವಹರಿಸುವ

ಸಾಮರ್ಥ್ಯಗಳ ಅವಶ್ಯಕತೆ ಬೇಕಾಗುತ್ತವೆ.

ಬೌದ್ಧಿಕ ಬೆಳವಣಿಗೆಗೆ ನಾವು ಪ್ರಚೋದನೆಗೊಳ್ಳುವ, ಆಶಯಗಳನ್ನು ಹೊಂದಿರುವ ಮತ್ತು ಸ್ಫೂರ್ತಿಗೊಳ್ಳುವ ಅಗತ್ಯತೆಗಳು ಬೇಕಾಗುತ್ತವೆ.

ಸಾಮಾಜಿಕ ಅಭಿವೃದ್ಧಿಗೆ ಇತರರೊಡನೆ ವ್ಯವಹರಿಸುವ ಸಾಮರ್ಥ್ಯ ಮತ್ತು ಅರ್ಥಪೂರ್ಣ ನಡವಳಿಕೆಯಲ್ಲಿ ನಮ್ಮ ಕ್ರಿಯೆಗಳ ನಿಯಂತ್ರಣಗಳನ್ನು ನಾವು ಹೊಂದಿರಬೇಕಾಗುತ್ತದೆ.

ಆಧ್ಯಾತ್ಮಿಕ ಬೆಳವಣಿಗೆಗೆ ದೇವರೊಡನೆ ಪನಾತ್ಮಾಕ ಸಂಬಂಧ ಮತ್ತು ಆಳವಾದ ಸಂಬಂಧಗಲನ್ನು ಇಟ್ಟುಕೊಳ್ಳುವುದು ಅಗತ್ಯವಾಗುತ್ತದೆ.

ನಾವು ಹುಟ್ಟುವಾಗಲೆ,ವ್ಯಕ್ತಿತ್ವವನ್ನು ಪಡೆದುಕೊಂಡು ಹುಟ್ಟಿರುವುದಿಲ್ಲ. ನಾವು ವಂಶಪಾರಂಪರಿಕ ಲಕ್ಷಣಗಳಿಂದ ಅಥವಾ ಪ್ರವೃತ್ತಿಗಳಿಂದ ಕೂಡಿ ಹುಟ್ಟಿರುತ್ತೇವೆ. ಅವು ಒಳ್ಳೆಯ ಚಲನೆಯದಾಗಿದ್ದರೆ, ಪರಿಸರವು ಹಿತಕರವಾಗಿದ್ದರೆ ಮತ್ತು ಬಲಿಷ್ಠ ಮತ್ತು ಪ್ರಮುಖವಾಗಿ ಒಳ್ಳೆಯ ನಡತೆಯ ಮಾದರಿಗಳಾಗಿದ್ದರೆ ಅವುಗಳಿಂದ ಕೂಡಿ ಹುಟ್ಟಿರುತ್ತೇವೆ.

ನಮ್ಮ ಸ್ವಭಾವಲಕ್ಷಣ ಶಿಥಿಲವಾಗಿದ್ದರೆ ಅಥವಾ ಅಷ್ಟು ಚೆನ್ನಾಗಿಲ್ಲದಿದ್ದರೆ ಮತ್ತು ಪರಿಸರ ಒಳ್ಳೆಯದಾಗಿದ್ದರೆ, ಉತ್ತರದಾಯಿಯಾದ ಅಥವಾ ಮೊದಲೇ ನಿವಾರಣೆಯಾಗುವ ಅಂಶವು ಬೆಳೆಯುವುದಿಲ್ಲ ಇಲ್ಲದಿದ್ದರೆ ಕೆಲವು ಅಥವಾ ಅಪಾಯ ಪೂರ್ಣ ಕ್ರಿಯೆಗಳಲ್ಲಿ ಅಭಿವ್ಯಕ್ತವಾಗುತ್ತವೆ. ಅದಾಗ್ಯೂ ಪರಿಸರವು ಕೆಟ್ಟದಾಗಿದ್ದರೆ. ಒಳ್ಳೆಯ ಸ್ವಭಾವಲಕ್ಷಣಗಳು ಕೂಡ ಅವು ತಮ್ಮ ಅನುವಂಶೀಯ ಸಾಮರ್ಥ್ಯವನ್ನು ಮುಟ್ಟುವುದೇ ಇಲ್ಲ ಮತ್ತು ಕೆಟ್ಟ ಅಥವಾ ಶಿಥಿಲ ಸ್ವಭಾವಲಕ್ಷಣಗಳು ವ್ಯಕ್ತಿತ್ವದ ರಚನೆಯ ಭಾಗವಾಗಿ ಬಿಡುತ್ತವೆ ಹಾಗೂ ಅದರಂತೆ ವ್ಯಕ್ತಪಡುತ್ತವೆ. ಆದ್ದರಿಂದ ಪರಿಸರವ್ಯಕ್ತಿತ್ವದ ಬೆಳವಣಿಗೆಯಲ್ಲಿ ಅತ್ಯಂತ ಸಂದಿಗ್ಧ ಪಾತ್ರವನ್ನು ವಹಿಸುತ್ತದೆ. ವ್ಯಕ್ತಿತ್ವ ವ್ಯಕ್ತಿಯ ಪ್ರವೃತ್ತಿಯಲ್ಲಿ ಮತ್ತು ನಡತೆಯಲ್ಲಿ ಅಭಿವ್ಯಕ್ತವಾಗುತ್ತದೆ. ಅವನು ಬದುಕಿನಲ್ಲಿ ಸ್ಪಷ್ಟವಾದ ಮತ್ತು ಆಶಾವಾದಿತ್ವದ ದೃಷ್ಟಿಯನ್ನು ಗ್ರಹಿಸಿಕೊಂಡಿದ್ದೇ ಆದರೆ ಅವನು ಪಕ್ವವಾದ ಮತ್ತು ಆತ್ಮವಿಶ್ವಾಸದ ವ್ಯಕ್ತಿತ್ವವನ್ನು ಸಂಪಾದಿಸುತ್ತಾನೆ.







ಆರೋಗ್ಯ ಪೂರ್ಣ ವ್ಯಕ್ತಿತ್ವ : 'ನಮ್ಮ ಮನುಷ್ಯ' ಎಂದು ಕರೆಯುವ ಈ ವಸ್ತುವಿಗೆ ಮತ್ತು ವಸ್ತುವಿನಿಂದ ತರುವ ನಮ್ಮ ಆಯ್ಕೆಗಳ ಮೂಲಕ ನಮ್ಮನ್ನು ನಾವು ರೂಪಿಸಿಕೊಳ್ಳುತ್ತೇವೆ.

–ವಿ.ಎಸ್. ನಯ್‌ಪಾಲ್

ಯಾರು ತನ್ನ ಮೂಲ ಅಗತ್ಯತೆಗಳನ್ನು ತನ್ನದೇ ವ್ಯಕ್ತಿತ್ವವು ಮುಂದೆ ತನಗೆ ಸಮಸ್ಯೆಯಾಗದಂಥ ಸ್ವೀಕೃತವಾಗಬಹುದಾದ ಸ್ವಭಾವಗಳ ಮೂಲಕ ತೃಪ್ತಿಪಡಿಸಿಕೊಳ್ಳಲು ಸಮರ್ಥನಾಗುತ್ತಾನೋ, ಅಂಥ ವ್ಯಕ್ತಿಯಿಂದ ಆರೋಗ್ಯಪೂರ್ಣ ವ್ಯಕ್ತಿತ್ವ ಪ್ರದರ್ಶಿತವಾಗುತ್ತದೆ. ಅವನು ಹೆಚ್ಚುಕಡಿಮೆ ಪ್ರೀತಿಸಬಲ್ಲ, ತಿಳಿದುಕೊಳ್ಳಬಲ್ಲ, ತನ್ನನ್ನು ತಾನೇ ಅರ್ಥಪೂರ್ಣ ಸಾಮಾಜಿಕ ಆಸಕ್ತಿಗಳ ಕಡೆಗೆ, ಸಮಸ್ಯೆಗಳಿಗೆ, ಭರವಸೆ ಅಥವಾ ಪ್ರೀತಿಸುವಿಕೆ, ಅಥವಾ ಸ್ಥಾನ ಇವುಗಳಿಗೆ ಮೀರಿ ಮೀಸಲಿಡಬಲ್ಲ. (ಅಧ್ಯಾಯ 16 ನೋಡಿ)

ಸಾಧಿಸಬಹುದಾದ ಗುರಿಯನ್ನು ಗುರುತಿಸುವುದನ್ನೇ ಯಶಸ್ವಿ ಬದುಕು ಅಪೇಕ್ಷಿಸುತ್ತದೆ. ಈ ಗುರಿಯನ್ನು ತಲುಪಲು ಸತತ ಪ್ರಯತ್ನ ಮತ್ತು ಸತ್ಯ ಮತ್ತು ಪ್ರೀತಿಗೆ ಮೂಲತಃ ಕಟ್ಟುಬೀಳುವ ನಿರಂತರ ಶಿಸ್ತು ಬೇಕಾಗುತ್ತದೆ. ಇದನ್ನು ಆರೋಗ್ಯಪೂರ್ಣ ವ್ಯಕ್ತಿತ್ವ ಮಾತ್ರ ಸಾಧಿಸಲು ಮಾತ್ರಸಾಧ್ಯ. ಇಲ್ಲಿಯೇ ನೈತಿಕ ಅಥವಾ ಅಧ್ಯಾತ್ಮಿಕ ಮೌಲ್ಯಗಳು ಅತ್ಯಂತ ಅವಶಯಕವಾಗಿ ಬೇಕಾಗುತ್ತದೆ. ಭಾರತದಲ್ಲಂತೂ ಇದು ತೀರ ವಿಶೇಷ : ಏಕೆಂದರೆ ಭಾರತದಲ್ಲಿ ವಿದ್ಯಾಭ್ಯಾಸ ಮಾಡಿರುವವರ ಸಂಖ್ಯೆ ವಿರಳ. ಈ ಕೆಲವೇ ಜನ ತಮಗಿಂತ ಹೆಚ್ಚು ನತದೃಷ್ಟ ಸೋದರ ಸೋದರಿಯರಿಗೆ ನೀಡಬಹುದಾದಂಥ ಒಂದು ಪವಿತ್ರ ಸೇವೆಗೆ ಕಟ್ಟುಬಿದ್ದಿರುವುದು.

'ನಿಮ್ಮ ಬದುಕನ್ನು ತಿರುಗಿಸುವ, ಸಾಕಷ್ಟು ಸಾಮರ್ಥ್ಯವಿರುವ ವಸ್ತು ಒಂದೇ ಒಂದು ಇದೆ. ಅದೆಂದರೆ ಅದು ನೀವೇ'.

## 6. ತನ್ನನ್ನು ತಾನು ತಿಳಿಯುವುದು–ಸ್ವ ಸ್ವೀಕೃತಿ – ಸ್ವಮೂರ್ತಿ

ತನ್ನನ್ನ ತಾನು ತಿಳಿಯುವುದು ತನ್ನ ಬಲಾಬಲಗಳ, ತನ್ನ ದೌರ್ಬಲ್ಯಗಳ ಬಗ್ಗೆ ಪ್ರಜ್ಞೆ ಇರುವುದು, ಕೆಲವು ವಲಯಗಳಲ್ಲಿ ಬದಲಾವಣೆ ಅವಶ್ಯಕ ಎಂಬುದರ ಬಗ್ಗೆ ಜಾಗೃತವಾಗಿರುವುದು ಇದೆ ಮಾನಸಿಕ ಆರೋಗ್ಯ ಮತ್ತು ಪರಿಪೂರ್ಣ ವ್ಯಕ್ತಿತ್ವ. ಒಬ್ಬ ವ್ಯಕ್ತಿ

ತನ್ನಲ್ಲಿ ''ಯಾವುದೇ ಮೌಲ್ಯ ಇಲ್ಲ'' ಎಂದು ತಿಳಿದಿರುತ್ತಾನೋ ಅವನು ಇತರರೊಡನೆ ರಚನಾತ್ಮಕ ಸಂಬಂಧವನ್ನು ವೃದ್ಧಿಪಡಿಸಿಕೊಳ್ಳಲಾರ. ಅಲ್ಲದೆ ಬೇರೆಯಾಗಿ ನೋಡಿದರೆ, ಒಬ್ಬ ವ್ಯಕ್ತಿ ಪ್ರಪಂಚದ ಕೇಂದ್ರವೇ ತಾನು ಎಂದು ಕಾಣುತ್ತಾನೋ ಅವನು ಇನ್ನೊಬ್ಬ ಮನುಷ್ಯನನ್ನು ಅವನು ತನ್ನ ಪ್ರತಿಯೊಂದು ಉದ್ದೇಶವನ್ನು ರೂಢಿಸಬಲ್ಲ ವಸ್ತುವೆಂದು ಕಾಣುತ್ತಾನೆ. ''ಸೂರ್ಯ ಹುಟ್ಟುವುದು ತನ್ನ ಧ್ವನಿಯನ್ನು ಕೇಳುವುದಕ್ಕಾಗಿ ಎಂದು ಭಾವಿಸುವ ಒಂದು ಕೋಳಿಯಂತೆ'' ಅವನಿರುತ್ತಾನೆ. (ಜಾರ್ಜ್ ಇಲಿಯಡ್). ಈ ದೃಷ್ಟಿಗಳ ನಡುವೆ ಒಂದು ಸಮತೋಲನದ ಗೆರೆ ಎಳೆಯಬೇಕು.

'ನಾನೊಬ್ಬ ಅದಮ್ಯ ಆಶಾವಾದಿ, ಏಕೆಂದರೆ ನಾನು ನನ್ನನ್ನು ನಂಬುತ್ತೇನೆ. ನಾನು ಇನ್ನು ಪೂರ್ಣ ಜೀವಿಯಲ್ಲ. ನಾನು ಪೂರ್ಣ ಜೀವಿಯಾದಾಗ ನಾನು ಸುಮ್ಮನೆ ಒಂದು 'ಮಾತು' ಹೇಳುತ್ತೇನೆ. ಆಗ ರಾಷ್ಟ್ರ ನನ್ನನ್ನು ಕೇಳುತ್ತದೆ ನಾನು ಅದನ್ನು ಎಂದರೆ ಆಪರಿಪೂರ್ಣತೆಯನ್ನು ಪಡೆಯಲು ಇಚ್ಛಿಸುತ್ತೇನೆ''.

*ಗಾಂಧಿ*

ನೀನು ನಿನ್ನನ್ನು ಪೂರ್ಣವಾಗಿ ಅರ್ಥಮಾಡಿಕೊಂಡರೆ ಆಗ ನೀನು ಇತರರನ್ನು ಅರ್ಥಮಾಡಿಕೊಳ್ಳಬಲ್ಲೆ. ನೀನು ನಿನ್ನನ್ನು ಗೌರವಿಸಿಕೊಳ್ಳಬಲ್ಲೆಯಾದರೆ ಇತರರನ್ನು ಗೌರವಿಸುತ್ತೀಯ.

ಪ್ರತಿ ವ್ಯಕ್ತಿಯೂ ತನ್ನ ಸ್ವಂತ ಸ್ಪಷ್ಟ 'ಪ್ರತಿಮೆ'ಯನ್ನು ಪಡೆದಿರಬೇಕು, ನೀನು ನಿಷೇಧಾತ್ಮಕ ಅಥವಾ ದ್ವೇಷ ಪೂರ್ಣ ಸ್ವಂತ ಪ್ರತಿಮೆಯನ್ನಾದರೂ ಹೊಂದಿದ್ದರೆ ಅದು ಅಪಾಯಕಾರಕ ಮತ್ತು ಅದು ವ್ಯಕ್ತಿತ್ವದ ಅವ್ಯವಸ್ಥೆಯಲ್ಲಿ ಪರಿಣಾಮಹೊಂದಬಹುದು.

ಫಲದಾಯಕನಾಗಬೇಕಾದರೆ ವ್ಯಕ್ತಿಯು ತನ್ನನ್ನು ತಾನು ತಿಳಿದಿರಬೇಕು ಮತ್ತು ತನ್ನನ್ನ ತಾನು ಇಷ್ಟಪಡಬೇಕು. ನಮ್ಮಲ್ಲಿಯೇ ಇರಬಹುದಾದ ಯಾವುದೋ ಒಂದು ಪ್ರವೃತ್ತಿ, ನಾವು ಪ್ರೀತಿಸಲಾರದ್ದು ಇದ್ದರೆ, ಅದನ್ನು ನಾವು ತಿಳಿದವರಾಗಿರಬೇಕು ಮತ್ತು ಅದನ್ನು ನಾವು ಗೆಲ್ಲಲು ಅಥವಾ ಕಳೆದುಕೊಳ್ಳಲು ಪ್ರಯತ್ನಿಸಬಲ್ಲೆವು ಎಂಬ ಮನೋ ನಿರ್ಧಾರವನ್ನು ಒಪ್ಪಿಕೊಳ್ಳಬೇಕು. ಅದು ನಿಜವಾಗಿ ಪ್ರಕೃತಿಯ ಕುರುಹಾಗುತ್ತದೆ. ತನ್ನನ್ನು ತಾನು ಇಷ್ಟಪಡುವ

ಅವನಾಗಲಿ ಅವಳಾಗಲಿ ಅಂಥ ಉತ್ಪನ್ನದಾಯಕ ವ್ಯಕ್ತಿ ಇತರ ಮನುಷ್ಯವ್ಯಕ್ತಿಗಳೊಡನೆ ಪ್ರಿತ್ಯಾಸ್ಪದ ಬಂಧುತ್ವವನ್ನು ನಿಜವಾಗಿ ಸಂಪಾದಿಸಬಲ್ಲನು.

ಮೂರು ಮುಖ್ಯ ವಲಯಗಳಲ್ಲಿ ತನ್ನನ್ನು ತಾನು ಅರ್ಥಮಾಡಿಕೊಳ್ಳಲು ಮತ್ತು ವೈಯಕ್ತಿಕ ದೃಢತೆಯನ್ನು ಪಡೆಯಲು ಆತ್ಮ ಸ್ವೀಕೃತಿ ಖಂಡಿತವಾಗಿ ಅವಶ್ಯಕ.

1. ವ್ಯಕ್ತಿತ್ವದ ಹೊಂದಾಣಿಕೆ

2. ವ್ಯಕ್ತಿತ್ವದ ಅನುಕಲನ

3. ಈ ಮುಂದಿನ ವಲಯಗಳಲ್ಲಿ ಅಭಿವ್ಯಕ್ತವಾಗಿರುವಂತೆ ವೈಯಕ್ತಿಕ

ಪಕ್ವತೆ ಮತ್ತು ಬೆಳವಣಿಗೆ ಉದಾಹರಣೆ :

ಎ) ಕೋಪವನ್ನು ನಿರ್ವಹಿಸುವುದು

ಬಿ) ಅಂತರಾವಲಂಬನೆ

ಸಿ) ನಿರ್ಣಯ ಕೈಗೊಳ್ಳುವುದು: ಅವೇಗಪರವಲ್ಲದ್ದು ಹೆಚ್ಚು ವಿಳಂಬವಲ್ಲದ್ದು

ಡಿ) ತನ್ನ ಮತ್ತು ತನ್ನ ವಿಶ್ವದ ವಾಸ್ತವಿಕ ದೃಷ್ಟಿ (ಅಹಂಕಾರ ಒಂದು ಭಯಂಕರ ಪ್ರವೃತ್ತಿ)

ಇ) ವೃದ್ಧಿಪಡಿಸುವುದು, ಸಮಸ್ಯೆಯನ್ನು ಪರಿಹರಿಸುವುದು ಮತ್ತು ಇತರ ಸಾಮರ್ಥ್ಯಗಳು

ಈ) ಜವಾಬ್ದಾರಿ ಹೊತ್ತ ಸ್ವ-ನಿರ್ದೇಶನ

ಉ) ವಯಸ್ಸಿನ ಮಟ್ಟಕ್ಕೆ ಅನುಗುಣವಾದ ಸ್ವಭಾವ

ಊ) ಸಮೂಹ ಗುಣ ಮತ್ತು ಪ್ರಗತಿ

ಋ) ಸೂಚಿಸದಾಗಲೆಲ್ಲ ಸಮಾನತಾ ಒತ್ತಡವನ್ನು ಎದುರಿಸುವ ಸಾಮರ್ಥ್ಯ.

## ಒಳ್ಳೆಯ ವ್ಯಕ್ತಿತ್ವದ ಲಕ್ಷಣಗಳು

ತಮ್ಮ ತಮ್ಮ ವಯಸ್ಸಿಗೆ ತಕ್ಕುದಾದ ಜವಾಬ್ದಾರಿಗಳನ್ನು ವಹಿಸಲು ಸಾಮರ್ಥ್ಯ ಮತ್ತು ಇಷ್ಟವನ್ನು ಹೊಂದಿರುವುದು.

ಪ್ರತಿಯೊಂದು ಪ್ರಗತಿದಾಯಕ ವಯಸ್ಸಿನ ಮಟ್ಟಕ್ಕೆ ಸೇರಿರುವ ಅನುಭವದಲ್ಲಿ ಹರ್ಷದಿಂದ ಭಾಗವಹಿಸುವುದು.

ಬದುಕಿನಲ್ಲಿ ಅವರವರ ಪಾತ್ರಕ್ಕೆ ಸಂಬಂಧಿಸಿದ ಹೊಣೆಗಾರಿಕೆಗಳನ್ನು

ಸಂತೋಷದಿಂದ ಸ್ವೀಕರಿಸುವುದು

ಪರಿಹಾರ ಅಗತ್ಯವಾದ ಸಮಸ್ಯೆಗಳನ್ನು ಎದುರಿಸುವುದು

ಸುಖಕ್ಕೆ ಇರುವ ತೊಡಕುಗಳನ್ನು ಎದುರಿಸುವಲ್ಲಿ ಮತ್ತು ನಿವಾರಿಸುವಲ್ಲಿ

ಆನಂದಪಡುವುದು.

ತೀರ್ಮಾನಗಳನ್ನು ಕನಿಷ್ಠತರ ಚಿಂತೆಯಿಂದ, ಹೋರಾಟದಿಂದ ಮತ್ತು ತಿಳಿವಳಿಕೆಯನ್ನು ಬಯಸುವುದರಿಂದ ಕೈಕೊಳ್ಳುವುದು. ಅವರು ಮಾಡುವ ಆಯ್ಕೆಗೆ ಅದು ತಪ್ಪು ಆಯ್ಕೆ ಎಂದು ನಂಬಿಕೆ ಹುಟ್ಟುವವರೆಗೆ ಅಂಟಿಕೊಳ್ಳುವುದು. ಕಾಲ್ಪನಿಕ ಸಂಪನ್ನತೆಗಳಿಗಿಂತ ವಿಶೇಷವಾಗಿ ನಿಜವಾದವುಗಳಿಂದ ಅತಿಹೆಚ್ಚಿನ ತೃಪ್ತಿ ಸಮಾಧಾನಗಳನ್ನು ಪಡೆ. ಆಲೋಚನೆ ಮಾಡುವುದನ್ನು ಕ್ರಿಯಾತ್ಮಕತೆಗೆ ನೀಲಿನಕ್ಷೆಯಾಗಿ ಬಳಸಬಹುದು ಆದರೆ, ಕ್ರಿಯೆಯನ್ನು ವಿಳಂಬ ಮಾಡುವಲ್ಲಿ ಅಥವಾ ಅದರಿಂದ ತಪ್ಪಿಸಿಕೊಂಡು ಹೋಗುವದರಲ್ಲಿ ಒಂದು ಸಾಧನವಾಗಿ ಅಲ್ಲ. ಸೋಲುಗಳಿಂದ ಅವುಗಳಿಗೆ ಬಿಡುಗಡೆಯ ಕಾರಣಗಳನ್ನು ಕಂಡು ಹಿಡಿಯುವುದಕ್ಕೆ ಬದಲಾಗಿ ಪಾಠಗಳನ್ನು ಕಲಿಯಿರಿ.

ಯಶಸ್ಸನ್ನು ಬೃಹತ್ತಾಗಿ ಮಾಡಬೇಡಿ ಅಥವಾ ಅಸಂಬಂಧಿತ ಸ್ಥಳಗಳಿಗೆ ಅನ್ವಯಿಸಬೇಡಿ.

ಕಾರ್ಯನಿರತರಾದಾಗ ಕಾರ್ಯವನ್ನು ಆಟವಾಡುವಾಗ ಆಟವಾಡುವುದನ್ನು ಹೇಗೆ ನಿರ್ವಹಿಸಬೇಕು ಎಂಬುದನ್ನು ತಿಳಿದುಕೊಳ್ಳಿ.

ಅಪಾಯಕರವಾದ ಸನ್ನಿವೇಶಗಳಿಗೆ, ಅವುಗಳ ಉತ್ತಮ ಹಿತಾರ್ಥದ ದೃಷ್ಟಿಯಿಂದ 'ಸಾಧ್ಯವಿಲ್ಲ' ಎಂದು ಹೇಳಬಹುದು.

ಅಂತಿಮವಾಗಿ ನೆರವು ನೀಡುವ ಸನ್ನಿವೇಶಗಳಿಗೆ 'ಸರಿ' ಎಂದು ಹೇಳಬಹುದು.

ತೋದರೆಪಟ್ಟಾಗ ಅಥವಾ ನಿಯಮಗಳನ್ನು ಉಲ್ಲಂಘಿಸಿದಾಗ ಕೋಪವನ್ನು ನೇರವಾಗಿ ವ್ಯಕ್ತಪಡಿಸಬಹುದು.

ವಾತ್ಸಲ್ಯವನ್ನು ನೇರವಾಗಿ ತೋರಿಸಬಹುದು ಮತ್ತು ಪದಾರ್ಥರೂಪದಲ್ಲಿ ಮತ್ತು ಬೆಲೆಯ ರೂಪದಲ್ಲಿ ಸೂಕ್ತವಾಗಿ ತೋರಿಷಬಹುದು.

ಅವಶ್ಯಬಿದ್ದಾಗ ನೋವನ್ನು ಮತ್ತು ಉದ್ರಿಕ್ತ ಹತಾಶೆಗಳನ್ನು ಸಹಿಸಿಕೊಳ್ಳಬಹುದು ಅವರಿಗೆ ಮುಖ್ಯವಾದ ಗುರಿಯತ್ತ ಅವರ ಶಕ್ತಿಗಳನ್ನು ಕೇಂದ್ರೀಕರಿಸಬಹುದು. ಬದುಕು ಒಂದು ಅಂತ್ಯವಿಲ್ಲದ ಹೋರಾಟ ಎಂಬ ಸತ್ಯಾಂಶನ್ನು ಸ್ವೀಕರಿಸಿ.

## 7. ಮನೋಭಾವಗಳು

ಮನೋಭಾವ ಎಂದರೆ ಏನು ?

ನಮ್ಮನ್ನು ಕೆರಳಿಸುವ ಅಥವಾ ಕಲಕುವ ಯಾವುದೇ ವಿಷಯ ಘಟನೆ, ವಿಚಾರ ಇತ್ಯಾದಿಗಳಲ್ಲಿ ಒಂದಕ್ಕೆ ಪ್ರತಿಕ್ರಿಯಸುವುದೇ ಮನೋಭಾವ. ಪ್ರೀತಿ, ವಾತ್ಸಲ್ಯ, ಆಕಾಂಕ್ಷೆ, ಭಯ, ಕೋಪ ದ್ವೇಷ, ದುಃಖ ಇವುಗಳೆಲ್ಲ ಅನುಭವೈಕ ಸ್ವಭಾವಗಳು ಇವು ನಮ್ಮ ಮನಸ್ಸುಗಳನ್ನು, ಶರೀರಗಳನ್ನು ನಮ್ಮ ಒಟ್ಟು ವ್ಯಕ್ತಿತ್ವಗಳನ್ನು ಒಳಗೊಳ್ಳುತ್ತವೆ. ನಮಗೆ ನೆರವು ನೀಡುತ್ತಿದೆ ಅಥವಾ ನಮ್ಮ ಒಳ್ಳೆಯದಕ್ಕೆ ಅಂಶದಾನ ಮಾಡುತ್ತಿದೆ ಅಥವಾ ನಮ್ಮನ್ನು ಸುಖವನ್ನಾಗಿ ಅಂಶದಾನ ಇಡುತ್ತಿದೆ ಅಥವಾ ನಮ್ಮನ್ನು ಸುಖವನ್ನಾಗಿ ಇಡುತ್ತಿದೆ ಎಂಬ ಯಾವುದೇ ಅಂಶ ಒಂದು ಸ್ಪಷ್ಟವಾದ ಧನಾತ್ಮಕ ಅಥವಾ ಒಳ್ಳೆಯ ಸ್ವಭಾವವನ್ನು ಮೋಚಕ ಹೊರ ಹೊಮ್ಮಿಸುಗೊಳಿಸುತ್ತದೆ ನಮಗೆ ತೊಂದರೆ ಉಂಟುಮಾಡುತ್ತದೆ, ನಮ್ಮ ಕರ್ಮದ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ ಅಥವಾ ನಮ್ಮನ್ನು ಅಸುಖಿಯನ್ನಾಗಿ ಮಾಡುತ್ತದೆ ಎಂಬ ಯಾವೊಂದು ವಿಷಯವೂ ಒಂದು ನಿಷೇಧಾತ್ಮಕ ಅಥವಾ ಕೆಟ್ಟ ಸ್ವಭಾವವನ್ನು ಸ್ಪಷ್ಟಿಸುತ್ತದೆ

ಪ್ರತಿಯೊಬ್ಬನಲ್ಲೂ ಮನೋಭಾವಗಳುಂಟು ನಾವು ಬೆಳೆದ ಹಾಗೆಲ್ಲ ನಾವು ಹೇಗೆ ನಡೆಯುವುದನ್ನು ಅಥವಾ ಓದುವುದನ್ನು ಕಲಿಯುತ್ತೇವೆಯೋ ಹಾಗೆಯೇ ಕಲಿಯುತ್ತಾ ಹೋಗುತ್ತೇವೆ ಮಗುವಿಗೆ, ಒಂದು ದಿನ ಅದು ಬೆಂಕಿಯನ್ನು ಮುಟ್ಟಿ ಕೈಸುಟ್ಟುಕೊಳ್ಳುವವರೆಗೆ ಅದಕ್ಕೆ ಬೆಂಕಿಯ ಭಾವನೆ ಮೂಡಿರುವುದಿಲ್ಲ ಅಲ್ಲಿಂದ ಮುಂದೆ ಅದು ಬೆಂಕಿಯ ಬಗ್ಗೆ ಸ್ವಲ್ಪ

ಭಯವನ್ನು, ಗೌರವವನ್ನು ಕಲಿತಿರುತ್ತದೆ

ಮನೋಭಾವಗಳು ಬಲಯುಕ್ತವಾಗಿರಬಹುದು ಇಲ್ಲವೆ ನಿರ್ಬಲವಾಗಿರಬಹುದು. ಭಾವಗಳನ್ನು ಯಾರೊಬ್ಬರ ಒಂದು ಅನುಭವದ ಧನಾತ್ಮಕ ಅಥವಾ ನಿಷೇಧಾತ್ಮಕ ಪ್ರತಿಕ್ರಿಯೆ ಎಂದು ವ್ಯಾಖ್ಯಾನಿಸಬಹುದು.

ಭಾವಗಳ ವಿವಿಧರೀತಿಯ ವಿವಿಧಮಟ್ಟಗಳಿಗೆ ನಮ್ಮಲ್ಲಿ ವಿವಿಧ ಹೆಸರುಗಳಿವೆ ಕಿಂಚಿತ ಕರುಕುಗಳು ಹೊಂದುವುದರಿಂದ ಹಿಡಿದು ರೇಗುವುದು, ಕೋಪಿಸಿಕೊಳ್ಳುವುದು, ಉದ್ರೇಕಗೊಳ್ಳುವುದು, ಅಲ್ಲಿಯವರೆಗೆ ಮುಂದುವರಿಯಬಹುದು ಅಥವಾ ಎದೆಗುಂದುವುದು, ವ್ಯಸನಹೊಂದುವುದು, ಅಳಲಿಂದ ನರಳುವುದು ಅಥವಾ ನಿಸೆಯಿಂದ ತುಂಬಿರುವುದು ಹೀಗೆ ನಾವು ವಿಪಣ್ಣರಾಗಬಹುದು.

## ಮನೋಭಾವಗಳ ಉದ್ದೇಶ ಮತ್ತು ಕಾರ್ಯ

ಮನೋಭಾವಗಳು ಇರುವುದಾದರೂ ಏತಕ್ಕೆ ? ಒಂದು ವಾಹನದ ಕಾರ್ಬೊರೇಟರ್ 'ಗ್ಯಾಸೊಲಿನ್' ಅನ್ನು ಕಿಡಿಹಾರುವ ಪ್ಲಗ್‌ಗಳು ಉರಿಹತ್ತಿಸಿ ಅನಿಲದ ಹಬೆಯನ್ನು ಸಂಚರಿಸಲು ಹೇಗೆ ಚಿಮ್ಮಿಸುತ್ತವೆಯೋ ಎಂದರೆ ಮೊದಲಿಗೆ ಸಿಲಿಂಡರ್ ಅನ್ನು ಮುಂದಕ್ಕೆ ಚಲಿಸಿ ಕೊನೆಯದಾಗಿ ಪೂರ್ತ ವಾಹನವನ್ನು ಮುಂದಕ್ಕೆ ತಳ್ಳುತ್ತದೆಯೋ ಹಾಗೆ ಮನೋಭಾವಗಳು ನಮ್ಮ ನಡತೆಗೆ ಇಂಧನಗಳು ಎಂದು ಹೇಳಬಹುದು. ಮನೋಭಾವಗಳು ನಮ್ಮ ಕ್ರಿಯಾ ಚೇತನಗಳಗೆ ಮಾನಸಿಕ ಶಕ್ತಿಯನ್ನು ನೀಡುವ ಒಂದು ರೀತಿಯ ಮೂಲವೆನ್ನಬಹುದು. ತಂಪಾದ ಪಾನಿಯದ ಅಪೇಕ್ಷೆ ನಮ್ಮನ್ನು ಸುಖಾಸೀನದಿಂದ ತತ್‌ಕ್ಷಣ ಎಬ್ಬಿಸಿ. ಶೀತಕದ ಕಡೆಗೆ ಎಳೆದೊಯ್ಯುತ್ತದೆ ವೇಗದಿಂದ ನುಗ್ಗಿ ಬರುತ್ತಿರುವ ವಾಹನದ ಮಾರ್ಗದಿಂದ ನಾವು ಹಾರಿ ತಪ್ಪಿಸಿಕೊಳ್ಳುವಂತೆ ನೋಡಿಕೊಳ್ಳುತ್ತದೆ. ಭಯ ಪ್ರೀತಿ ನಮ್ಮನ್ನು ಕೆಳಗೆ ಬಿದ್ದು ಮಂಡಿ ಮುರಿದುಕೊಂಡು ತಮ್ಮನನ್ನು ಸಾಂತ್ವನಗೊಳಿಸಲು ಪ್ರೇರೆಪಿಸುತ್ತದೆ.

ಪ್ರವೃತ್ತಿ ಭಾವನೆಯ ಕಡೆಗೆ ಸೆಳೆಯುತ್ತದೆ. ಭಾವನೆ ಮನೋಭಾವದ ಕಡೆಗೆ ಎಳೆಯುತ್ತದೆ ಮನೋಭಾವ ಕ್ರಿಯೆಗೆ ದಾರಿಮಾಡಿಕೊಡುತ್ತದೆ ರಕ್ಷಣೆಗೆ, ನಿರ್ವಹತೆಗೆ ಅಥವಾ ನಾವು ಭಾವಿಸುವುದನ್ನು ಕಾರ್ಯಗತಗೊಳಿಸುವುದಕ್ಕೆ ಕ್ರಿಯೆಯೆ ಸ್ವಭಾವ ಪ್ರವೃತ್ತಿ.

ನಾವು ಏನು ಮಾಡಬೇಕೆಂದು ಪ್ರೇರೇಪಿಸುತ್ತದೆಯೋ ಅದೇ ಪ್ರವರ್ತನೆ

## ಬೋಧಕ ವರ್ತನೆ

ನಾವು ನಡೆದುಕೊಳ್ಳುವ ರೀತಿಯೇ ನಮ್ಮ ಕ್ರಿಯೆಯ ಅನೇಕ ಮಟ್ಟಗಳನ್ನು ಅಳವಡಿಸಿಕೊಳ್ಳುತ್ತದೆ.

ಮಾನವಶಿಶು ಬದುಕಿನಲ್ಲಿ ಯಾವುದೇ ಪಾಠ ಕಲಿಯುವುದಕ್ಕೆ ಮುಂಚೆ ಉಗುರುಬೆಚ್ಚಗಿರುವ ಹಾಲಿನ ಶೀಶೆಯ ತೊಟ್ಟನ್ನು, ಹುಟ್ಟರಿನಿಂಧ ಕೂಡಲೆ ಚೀಪುತ್ತದೆ ಒಂದು ವಿಮಾಯಾವನ್ನು ಕುಂತು ಆಲೋಚಿಸದೆಯೆ ನಿಮ್ಮ ಕಣ್ಣುಗಳನ್ನು ದ್ರವವಾಗಿಟ್ಟು ಕೊಳ್ಳುವಲ್ಲಿ ಒಂದು ನಿಮಿಷಕ್ಕೆ ಆರು ಸಲ ಮಿಟುಕಿಸುತ್ತೀರಿ ನಿಮ್ಮ ಶರೀರಿದಲ್ಲಿನ ಗಾಳಿಯ ಒತ್ತಡವನ್ನು ಸಮತೋಲನಗೊಳಿಸಲು ಒಮ್ಮೆಮ್ಮೆ ಆಕಳಿಸುತ್ತೀರಾ. ಬೆಂಕಿಯ ಉರಿಯಿಂದ ನಿಮ್ಮ ಬೆರಳನ್ನು ತತ್‌ಕ್ಷಣ ಹಿಂದಕ್ಕೆ ಸೆಳೆದುಕೊಳುತ್ತೀರಿ ಮತ್ತು ನೀವು ಬೀಳುತ್ತೇವೆಂದು ಭಾವಿಸಿದಾಗ ನಿಮ್ಮ ಕೈಗಳನ್ನು ಮುಂದಕ್ಕೆ ಚಾಚುತ್ತೀರಿ ಅತ್ಯಂತ ಪ್ರಾಥಮಿಕ ಪ್ರಚೋದಕ ಮತ್ತು ಪ್ರತಿಕ್ರಿಯೆಯ ನೋವುಗಳಲ್ಲಿ ಕಂಡುಬರುವ ವರ್ತನೆ ಇದೇ.

## ಮಾನಸಿಕ-ಮಾನವ ನರಗಳ ಗಣನ ಪದ್ಧತಿ

## (Psycho-Cyberneties)

ಎಂದರೆ ಮನಸ್ಸಿನ ರೂಪಾಂತರವು ಮನುಷ್ಯನ ಪ್ರಾಣಚೇತನವು ಸಂಶಯದಿಂದ ನಂಬಿಕೆಗೆ, ಹತಾಶೆಯಿಂದ ಭರವಸೆಗೆ, ನಿನ್ನ ಸಣ್ಣ ಆತ್ಮದಿಂದ ನಿನ್ನ ದೊಡ್ಡ ಆತ್ಮಕ್ಕೆ ವಿಕಸನಗೊಳ್ಳುವುದು. ಅದೇ ನಮ್ಮನ್ನು ಪರಿಪಕ್ವ ವರ್ತನೆಗೆ ಕೊಂಡುಯ್ಯುವುದು.

## ಮನೋಭಾವದ ಮತ್ತು ಯುಕ್ತ ವರ್ತನೆ ನಡತೆ

ಮನೋಭಾವದ ನಡತೆಯೇ, ನಾವು ಭಾವಿಸುವುದನ್ನೆ ಆಧಾರವಾಗಿಟ್ಟುಕೊಂಡು ನಡೆಸಿದ ಕ್ರಿಯೆ. ಇಂಥ ಸಂದರ್ಭಗಳಲ್ಲಿ ನಾವು ನಮ್ಮ ಮನೋಭಾವಗಳನ್ನು ಮಾತ್ರ ಎಂದರೆ ಕೋಪ, ಭಯ ಮೊದಲಾದವು ನಮ್ಮ ಕ್ರಿಯೆಗಳನ್ನು ನಿರ್ಧರಿಸುತ್ತದೆ.

ಜನ್ಮಪ್ರವೃತ್ತಿಗಳು ಮತ್ತು ಭಾವಗಳು ಇವುಗಳ ಜೊತೆಗೆ ನಮಗೆ ಮೆದುಳಿದೆ,

ಬುದ್ಧಿವಂತಿಗೆ ಇದೆ ನಾವು ಮನುಷ್ಯರಾಗಿ ಸಕಾರಣವಾಗಿ ವಾದ ಮಾಡುವ ಸಾಮರ್ಥ್ಯ ನಮಗಿದೆ ಮತ್ತು ಒಂದು ಸನ್ನಿವೇಶದ ಅರ್ಥವನ್ನು ಮತ್ತು ಮೌಲ್ಯವನ್ನು ಬಿಂಬಿಸುವ ಸಾಮರ್ಥ್ಯವಿದೆ ಅದೆಂದರೆ ಎಂಥ ರೀತಿಯ ನಡತೆ ಮತ್ತು ಯಾವುದು ಬೇಕು, ಯಾವುದು ಅವಶ್ಯಕ ಎಂಬುದನ್ನು ನಿರ್ಧರಿಸುವ ಶಕ್ತಿ ನಮ್ಮಲ್ಲಿದೆ. ಆಗ ನಾವು ನಮ್ಮ ಮನೋಭಾವಗಳನ್ನು ನಿಯಂತ್ರಿಸುವ ಮಾತ್ರವಲ್ಲದೆ ಅವುಗಳನ್ನು ಸರಿಯಾದ ಮಾರ್ಗದಲ್ಲಿ ಹೊರಬಿಡುವ ಶಕ್ತಿಯನ್ನು ಕೈಗೊಳ್ಳುತ್ತೇವೆ.

ಮನೋಭಾವಗಳು ಬರುತ್ತವೆ, ಅವು ಕೆಟ್ಟದಾಗಿರಬಹುದು ಅಥವಾ ಒಳ್ಳೆಯದಾಗಿರಬಹುದು. ಅದರೆ ನಮ್ಮ ಪ್ರಯುಕ್ತ ಆಯ್ಕೆ ಕ್ರಿಯೆಯಲ್ಲಿ ಪರಿಣಾಮಗೊಂಡಾಗ ಅದು ಒಳ್ಳೆಯದಾಗಬಹುದು, ಕೆಟ್ಟದಾಗಬಹುದು.

ನಾವು ಮಾನವ ಪ್ರಾಣಿಗಳಾಗಿ ನಮ್ಮ ಎಲ್ಲ ಕ್ರಿಯೆಗಳನ್ನು ನಮ್ಮ ನಿಯಂತ್ರಣದಲ್ಲಿ ಇಟ್ಟುಕೊಂಡಿದ್ದೇನೆ ಆದರೆ ಒಬ್ಬ ವ್ಯಕ್ತಿ ಮದ್ಯದ ಅಥವಾ ಮಾದಕ ದ್ರವ್ಯಗಳ ಪ್ರಭಾವಕ್ಕೆ ಯಾವಾಗ ಒಳಗಾಗಿರುತ್ತಾನೋ ಅಥವಾ ಮಾನಸಿಕವಾಗಿ ಸಾವಕಾಶಿಯಾಗಿರುತ್ತಾನೋ ಅಂಥವನು ಯಾವೊಂದು ಕ್ರಿಯೆಯ ಮೇಲೆ ಹತೋಟಿಯನ್ನು ಕಳೆದುಕೊಳ್ಳುತ್ತಾನೆ.

ಒಬ್ಬ ಸಾಧಾರಣ ಮನುಷ್ಯ ಪ್ರಾಣಿ ಪ್ರತಿ ಒಂದು ಕ್ರಿಯೆಯ ಮೇಲೂ ಸಂಪೂರ್ಣ ನಿಯಂತ್ರಣವನ್ನು ಹೊಂದಿರುತ್ತಾನೆ ಮಾಂಸಖಂಡಗಳು ಚಲಿಸುವುದಕ್ಕೆ ಮುಂಚೆ (ಕಣ್ಣು ಗುಡ್ಡೆಯಲ್ಲಿ ಒಂದು ಸಣ್ಣ ಚಲನೆ ಅಥವಾ ಕಿರುಬೆರಳಿನ ಚಲನೆ) ಮೆದುಳು ಆಜ್ಞೆಯನ್ನು ಕೊಡಬೇಕು.

## ಭಯ

ಭಯ ಪ್ರತಿಯೊಬ್ಬನು ಅನುಭವಿಸುವ ಒಂದು ಸಾಧರಣ ಭಾವ ಅದನ್ನು ಅರ್ಥಮಾಡಿಕೊಳ್ಳಬಹುದು ಮತ್ತು ಧನಾತ್ಮಕವಾಗಿ ಬಳಸಿಕೊಳ್ಳಬಹುದು.

ಭಯ ಮೂಲತ ಅಪಾಯಗೊಳ್ಳಗಾದ ಮನೋಭಾವ. ಏನೋ ಒಂದು ಅನಾಹುತ ಅಥವಾ ಅಪಾಯ ಎದುರಾಗಿದೆ ಎಂಬ ಎಚ್ಚರ ನಮಗೆ ಹೊಳೆದಾಗ ಅದನ್ನು ನಾವು ಪಾಪದ್ದು ಅಥವಾ ಕೆಡುಕನದು ಎಂದು ಅರ್ಥೈಸುತ್ತೇವೆ. ಈ ಕೆಟ್ಟ ಪಾಪದ ಬರುವಿಕೆಯನ್ನು

ನಿವಾರಿಸಿಕೊಳ್ಳಲು ಅಥವಾ ತಡೆಯಲು ಕೂಡಲೆ ಕಾರ್ಯಕ್ರಮವನ್ನು ಕೈಕೊಳ್ಳಲು ಬೋಧಿಸುವುದೇ ಅದು ಯಾವಾಗಲೂ ಅಂಜದೇ ಇರುವ ವ್ಯಕ್ತಿ ಭಾವನಾರಹಿತನಾಗಿರುತ್ತಾನೆ. ಇಲ್ಲವೆ ಪೆದ್ದನಾಗಿರುತ್ತಾನೆ ಶೂರ ಅಥವಾ ನಾಯಕ ಎಂದೂ ಹೆದರದ ಮನುಷ್ಯನಲ್ಲ. ಆದರೆ ವಿವೇಕಯುಕ್ತನಾಗಿ ಭಯವನ್ನು ಗೆದ್ದವನಾಗಿರುತ್ತಾನೆ. ಅನೇಕ ಮಕ್ಕಳು, ವಿಶೇಷವಾಗಿ ಹುಡುಗರು ತಾವು ಎಂದೂ ಹೆದರುವವರೇ ಅಲ್ಲ ಎಂದು ನಟಿಸುವುದು ಮತ್ತು ಘೋಷಿಸುವುದು ಅವಶ್ಯಕ ಎಂದು ಭಾವಿಸುತ್ತಾರೆ ಇದು ತುಂಬ ದುರದೃಷ್ಟ. ಏಕೆಂದರೆ ಕಡೆಗೆ ತನ್ನಷ್ಟಕ್ಕಾದರೂ ಭಯವನ್ನು ಸಾಮಾನ್ಯವಾಗಿ ಒಪ್ಪಿಕೊಳ್ಳುವುದರ ಮೂಲಕ ಅದನ್ನು ವಿಶ್ಲೇಷಿಸಬಹುದು ಮತ್ತು ಅದರ ಬಗ್ಗೆ ಚಿಂತಿಸಬಹುದು.

## ಸೋಲು

'ಸೋಲು' ಸರಳವಾಗಿ ಹೇಳುವುದಾದರೆ ನಾವು ಹಾಕಿಕೊಂಡ ಅಥವಾ ಇತರರು ನಮಗೆ ಗೊತ್ತುಪಡಿಸಿದ ಗುರಿಯನ್ನು ಸಾಧಿಸದೆ ಸ್ವಲ್ಪದರಲ್ಲಿ ಹಿಂದೆ ಬೀಳುವುದು.

ಬೆಳೆಯುತ್ತಿರುವ ವ್ಯಕ್ತಿ ಮತ್ತು ಪಕ್ವತೆಯನ್ನು ಸಾಧಿಸುತ್ತಿರುವ ವ್ಯಕ್ತಿ ಆಗಾಗ ಸೋಲುವುದು ಖಂಡಿತ ಸೋಲಿನ ಬಗ್ಗೆ ಅತ್ಯಂತ ಕೆಟ್ಟ ವಿಚಾರಗಳೆಂದರೆ, ಜನ ನಮ್ಮನ್ನು ಕೀಳಾಗಿ ಕಾಣುತ್ತಾರೆ. ನಾವು ಸೋತರೆ ನಗುತ್ತಾರೆ ಎಂಬ ಭಾವನೆಗಳೇ ಅದೇ ಮನುಷ್ಯನ ಅತಿದೊಡ್ಡ ಅಂಜಿಕೆ; ತಿರಸ್ಕೃನಾಗುವ ಭಯ.

ಸೋಲು ಕಲಿಯುವಲ್ಲಿ ಮತ್ತು ಬೆಳೆಯುವಲ್ಲಿ ಅತಿ ಅಗತ್ಯವಾದ ಭಾಗ ಗೆಲ್ಲಲು ನಮ್ಮ ಹಕ್ಕನ್ನು ನಾವು ರೂಢಿಸಿಕೊಳ್ಳಲೇಬೇಕು. ನೀವು ಸೋಲಿನಿಂದ ಕಲಿಯುವಾಗ ಧನಾತ್ಮಕ ಸ್ಪಷ್ಟ ಭಾವನೆಗಳ ಮತ್ತು ಗುರಿಗಳ ಕಡೆಗೆ ಚಲಿಸುವಾಗ ನೀವು ಬೆಳೆಯುತ್ತಾ ಹೋಗುತ್ತೀರಿ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಿ ಅಲ್ಲದೆ ನೀವು ಈ ಪ್ರಪಂಚದಲ್ಲಿ ಕಾಲಿಟ್ಟದ್ದು ಗೆಲ್ಲುವುದಕ್ಕೆ ಹೊರತು ಸೋಲಲು ಅಲ್ಲ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಿ . ಈ ಹೇಳಿಕೆ ನಿಮಗೆ ತಿಳಿದಿರಬಹುದು. 'ಸೋಲಲು ನಾವು ಯೋಜಿಸುವುದಿಲ್ಲ, ಯೋಜಿಸಲು ಸೋಲುತ್ತೇವೆ'.

ನಿಮ್ಮ ಗುರಿಯನ್ನು ತಲಪುವ ನಿಮ್ಮ ಹೋರಾಟದಲ್ಲಿ ಮುಂದರಿಯಲು ಇದೊಂದೇ ದಾರಿ.

## 8. ಹೋರಾಟಗಳು

'ಸಂಘರ್ಷ' ಮನೋಭಾವ ಹಗ್ಗಳೆಯುವ ಒಂದು ಸ್ಪರ್ಧೆ. ಇಂದಿನ ಪ್ರಪಂಚದಲ್ಲಿ ನಾವೆಲ್ಲ ಏನೋ ಒಂದು ಗಲಭೆ ಅಥವಾ ಘರ್ಷಣೆಯನ್ನು ಅನುಭಾವಿಸುತ್ತೇವೆ. ನಮ್ಮ ಅನೇಕ ಹೋರಾಟಗಳ ಮೂಲ ನಮ್ಮ ಬಾಲ್ಯ ಅವಸ್ಥೆಯಲ್ಲೆ ಅಡಗಿದೆ. ಏಕೆಂದರೆ ತರುಣರಾಗಿ ನಾವು ಭೇದ್ಯರು (ಭೇದಿಸಲ್ಪಡುವವರು) ಮತ್ತು ಇತರರ ಮೇಲೆ ಅವಲಂಬಿತರು. ನಾವು ಆಯೋಗ್ಯರು ಪ್ರೀತಿಸಲ್ಪಡದವರು, ಕಡೆಗೆ, ತಿರಸ್ಕೃತರು ಎಂಬ ಬಾಲಿಶ ಭಯಗಳಂಥ ಎಲ್ಲ ರೀತಿಯ ಅಂಜಿಕೆಗಳನ್ನೇ ಬೆಳೆಸಿಕೊಳ್ಳುತ್ತೇವೆ ಈ ಭಯಗಳನ್ನು ಹತ್ತಿಕ್ಕದೇ ಇದ್ದರೆ, ಅಥವಾ ಅವುಗಳನ್ನು ಹೂತುಹಾಕದಿದ್ದರೆ. ಅವು ನಮ್ಮ ವರ್ತನೆಯನ್ನು ಪ್ರಭಾವೀಕರೀಸುತ್ತಲೇ ಮುಂದುವರಿಯುತ್ತಿರುತ್ತದೆ. ಹೋರಾಟಗಳು ಮೂರು ವರ್ಗಗಳಲ್ಲಿರಬಹುದು.

1. ವೈಯಕ್ತಿಕ ಹೋರಾಟಗಳು
2. ಹೋರಾಟಗಳಿಂದ ಅಥವಾ ಆಂತರಿಕ ಹೇರಾಟಗಳಿಂದ ಹುಟ್ಟಿಬಂದವು
3. ಬಾಹ್ಯ ಹೋರಾಟಗಳು.

ಹೋರಾಟಗಳನ್ನು ಒಳಗೊಂಡಂತೆ ಬದುಕಿನಲ್ಲಿ ಏಳುಹಂತಗಳಿವೆ.

1. ಹುಟ್ಟು : ಇದುವರೆಗೆ ಸುರಕ್ಷಿತವಾಗಿ ಅಡಗಿಸಿಟ್ಟಿದ್ದ ಮತ್ತು ರಕ್ಷಿಸಸಲ್ಪಟ್ಟಿದ್ದ ಮಗುವಿಗೆ ತತ್‌ಕ್ಷಣ ಬದಲಾದ ಪರಿಸರದ ಕಾರಣ ಅದು ಶುದ್ಧಾಂಗವಾಗಿ ಗಾಯಗೊಂಡಂತೆ ಆದಾಗ.

2. ಶಾಲಾಪ್ರವೇಶ : ಅಧಿಕಾರದಲ್ಲಿರುವ ತಂದೆ ತಾಯಿಗಳೊಡನೆ ರಕ್ಷಿತವಾದ ಭದ್ರ ಗೃಹದ ಮಧ್ಯದಿಂದ ಮಗು ದಿನವೂ ಹಲವಾರು ಗಂಟೆಗಳ ಅವಧಿಯವರೆಗೆ, ಹೊಸ ಅಧಿಕಾರದ (ಶಿಕ್ಷಕ) ಹೊಸಬನೊಡನೆ, ಅಪರಿಚಯವಾದ ಹೊಸಜಾಗದಲ್ಲಿದ್ದಾಗ.

3. ಮೈನೆರೆಯುವುದು : ಅದು ತಾರುಣ್ಯವಸ್ಥೆಯ ಇಂತದಲ್ಲಿ ಸಂಭವಿಸುತ್ತದೆ ಮತ್ತು ತನ್ನೊಡನೆ ವ್ಯಕ್ತಿತ್ವ ಸ್ವರೂಪದಲ್ಲಿ ಎತ್ತರಕ್ಕೇರಿದ ಅರಿವನ್ನು ಮತ್ತು ಲೈಂಗಿಕ ಶಕ್ತಿಯನ್ನು ತಂದುಕೊಡುತ್ತದೆ.

4. ವಯಸ್ಕತನ : 21ನೆಯ ವಯಸ್ಸನ್ನು ತಲುಪಿದಾಗ (ಈಗ 18 ವಯಸ್ಸು) ವಯಸ್ಸನ್ನು

ತನಗೆ ಹೊಸಹಕ್ಕುಗಳು ಮತ್ತೆ ಶಕ್ತಿ ಬಂದಿದೆ ಎಂದು ಅರಿತುಕೊಳ್ಳುತ್ತಾನೆ (ಕಾನೂನು ರೀತ್ಯಾ ರಾಜಕೀಯವಾಗಿ ತನಗೆ ಮತಕೊಡುವ ಹಕ್ಕು ಇತ್ಯಾದಿಗಳು)

5. ಪಿತೃತ್ವ : ತಾಯಿ ತಂದೆಗಳು, ದೇವರೊಡನೆ ನಿಸ್ಸಹಾಯಕ ಶಿಶುವಿನ ಮೇಲೆ ಅಧಿಕಾರ ಹೊಂದಿ ಸಹ-ಸೃಷ್ಟಕರ್ತರಾದಾಗ.

6. ಬದುಕಿನಲ್ಲಿ ಬದಲಾವಣೆ : ಶಾರೀರಕ ಮತ್ತು ಮಾನಸಿಕ ಏರಿಳಿತಗಳನ್ನು ಅಥವಾ ಚೋದಕ ಸ್ರಾವಗಳ ಅಸಮತೋಲನಗಳನ್ನುಂಟು ಮಾಡಿ ಸ್ತ್ರೀಯರಲ್ಲಿ ಮುಟ್ಟುನಿಂತಾಗ ಪುರುಷರಲ್ಲಿ ವೀರ್ಯ ಶಿಥಿಲವಾದಾಗ

7. ಮುದಿಯವಸ್ಸು : ಬದುಕು ಅಧಿಕಾರ ಪ್ರಭಾವವನ್ನು ಮೀರಿಬಿಟ್ಟಿದೆ ಎಂಬ ಭಾವನೆ ಮೂಡಿದಾಗ ನಾನು ಪ್ರಯೋಜಕನೆ? ಮತ್ತು ಇನ್ನೂ ಸ್ವತಂತ್ರನೆ?

''ವಿಶೇಷವಾಗಿ ಈ ಎಲ್ಲ ಹಂತಗಳಲ್ಲಿ ಬುದ್ಧಿವಾದ ತುಂಬ ಅವಶ್ಯಕವಾದದ್ದು''

ಬದುಕಿನಲ್ಲಿ ಹೋರಾಟಗಳು ಅವಶ್ಯಕವಾದುವು :

ಆದರೆ, ನೀವು ನಿಮ್ಮ ಹೋರಾಟಗಳನ್ನು ಹತ್ತಿಕ್ಕಲು ಸಮರ್ಥರಾಗಬೇಕಾದರೆ, ನಿಮಗೆ ಬಲಿಷ್ಠವಾದ ವ್ಯಕ್ತಿತ್ವದ ಅಗತ್ಯವಿದೆ. ನೀವು ನಿಮ್ಮ ಹೋರಾಟ ಮನೋಭಾವವನ್ನು ಹತೋಟಿಯಲ್ಲಿಟ್ಟುಕೊಳ್ಳದಿದ್ದರೆ, ಹತಾಶೆಯ ಫಲ ಲಭಿಸಬಹುದು ನಿರುತ್ಸಾಹಕ್ಕೆ, ಔದಾಸೀನ್ಯಕ್ಕೆ, ಬದುಕಿನ ಬಗ್ಗೆ ನಿರಾಸಕ್ತಿಗೆ ಅಥವಾ ಆಕ್ರಮಣ ಪ್ರವೃತ್ತಿಗೆ ಹಾಗೂ ಮಾನಸಿಕ ಅಥವಾ ನರಗಳ ಕುಗ್ಗುವಿಕೆಗೂ ಕೂಡ ದಾರಿಮಾಡಿಕೊಡಬಹುದು. ನೀವು ಹೋರಾಟ ಪ್ರವೃತ್ತಿಯನ್ನು ಹತ್ತಿಕ್ಕಿದಾಗ ಅಥವಾ ನಿರ್ಧರಿಸಿದಾಗ, ನೀವು ಹೆಚ್ಚು ಪಕ್ವವಾಗುತ್ತೀರಿ ಮತ್ತು ಹೆಚ್ಚು ಆತ್ಮವಿಶ್ವಾಸವುಳ್ಳವರಾಗುತ್ತೀರಿ.

ಹೋರಾಟಗಳನ್ನು ನೇರವಾಗಿ ನಾಲ್ಕು ಕಡೆಗಳಿಂದ ಎದುರಿಸಬೇಕು. ಅದರ ಬಗ್ಗೆ ಎಂದೂ ಕೆಟ್ಟದ್ದಾಗಿ ಭಾವಿಸಬಾರದು. ಆದರೆ, ಅದನ್ನು ನೋಡಬೇಕು ಮತ್ತು ಪ್ರಶ್ನಿಸಬೇಕು. ಆಂತರಿಕ ಹೋರಾಟವನ್ನು ನಿರ್ಧರಿಸಲಾಗದಿದ್ದರೆ ಆ ವ್ಯಕ್ತಿ ಒಬ್ಬ ಸಲಹೆಗಾರನ, ಮಿತ್ರನ ಅಥವಾ ಹಿರಿಯರ ಬಳಿಗೆ ಹೋಗಬೇಕು ಮತ್ತು ಸಹಾಯ ಹುಡುಕಬೇಕು.

ಬಾಹ್ಯ ಹೋರಾಟಗಳು (ಹಗ್ಗ) ಎಳೆದಾಡುವ ಸ್ಪರ್ಧೆಗಳಿಂದ ಉಂಟಾಗುತ್ತದೆ ಒಬ್ಬ

ಅಥವಾ ಇಬ್ಬರು (ಅಥವಾ ಅನೇಕ) ವ್ಯಕ್ತಿಗಳು, ಒಬ್ಬ ಒಂಟಿ ವ್ಯಕ್ತಿಯನ್ನು ಅಥವಾ ಒಬ್ಬ ವ್ಯಕ್ತಯಿಂದ ನಿಯಂತ್ರಿಸಿದ ಘಟನೆಯನ್ನು ಎದುರಿಸಿದಾಗ ಹೀಗೆ ಎರಡೂ ಪಕ್ಷದವರು ಒಟ್ಟಿಗೆ ಕುಳಿತು ಸಮಸ್ಯೆಯನ್ನು ಕುರಿತು ಚರ್ಚೆ ಮಾಡದಿದ್ದರೆ, ಯಾವುದೇ ರೀತಿಯ ಪರಿಹಾರ ಕಂಡುಕೊಳ್ಳಲು ಸಾಧ್ಯವಿಲ್ಲ. ಅನಂತರ ಹತಾಶೆ ಮುಂದುವರಿಯುತ್ತದೆ

ಕೆಲವೊಮ್ಮೆ ಮೂರನೆಯ ಪಕ್ಷ ಅಥವಾ ಸಲಹೆಗಾರ, ಬೇಕಾಗುತ್ತದೆ ಮಧ್ಯವರ್ತಿಯಾಗಿ ಸಹಾಯಮಾಡಲು ಅಥವಾ ಪರಸ್ಪರವಾಗಿ, ತೃಪ್ತಿಕರವಾಗಿ ಸಮಸ್ಯೆಯನ್ನು ಬಿಡಿಸಲು ಇಂಥವರ ನೆರವು ಅವಶ್ಯಕವಾಗುತ್ತದೆ. ಅಲ್ಲದೆ ಸಮಸ್ಯೆಯನ್ನು 'ಹೊರನೋಟದಿಂದ ನೋಡುವುದೂ ಕೆಲವೊಮ್ಮೆ ಸಹಾಯಕವಾಗುತ್ತದೆ.

## ಹೋರಾಟಗಳನ್ನು ಪರಿಹರಿಸಲು ಮಾರ್ಗಸೂಚಿಗಳು

1. ನಿಮಗೆ ಬೇಕಾದ್ದನ್ನು ತಿಳಿಯಿರಿ ಮತ್ತು ನಿಮಗೆ ಇಷ್ಟವಾದದ್ದನ್ನು ತಿಳಿಯಿರಿ ಮತ್ತು ಅವುಗಳ ವ್ಯತ್ಯಾಸವನ್ನು ಹೇಗೆ ಹೇಳಬೇಕು ಎಂಬುದನ್ನು ತಿಳಿಯಿರಿ.

2. ಕೆಡುಕು ಮಾಡುವ ಜನರಿಂದ ಮತ್ತು ಪರಸರದಿಂದ ದೂರವಿರಿ.

3. ಸಮಾಧಾನವಾಗಿರುವುದಕ್ಕೆ ಸಿದ್ಧರಾಗಿ, ಉಸಿರಾಡಲು ಸ್ಥಳವಕಾಶ ಮಾಡಿಕೊಳ್ಳಿ, ಅತ್ಯಂತ ಸುಲಭವಾದ ಧ್ಯಾನದ ಅಭ್ಯಾಸವನ್ನಾಗಲಿ ಯೋಗ ಅಥವಾ ಪ್ರಾರ್ಥನೆಯ ಅಭ್ಯಾಸವನ್ನಾಗಲಿ ನಡೆಸಲು ಕಲಿಯಿರಿ ಸಮಯ ಇಲ್ಲ ಎಂದು ಹೇಳಬೇಡಿ. ದಿನಕ್ಕೆ ಕೆಲವು ನಿಮಿಷಗಳ ಕಾಲ ಮೀಸಲಿಟ್ಟರೆ ಎಷ್ಟನ್ನೋ ಸಾಧಿಸಬಹುದು.

4. ಒತ್ತಡದ ಸಮಯಗಳಲ್ಲಿ, ನೀವುನಂಬುವವರಿಂದ ಸಮಾಧನವನ್ನೂ ಬೆಂಬಲವನ್ನೂ ಬರಮಾಡಿಕೆಕೊಳ್ಳಿ, ನಾವು ಯಾರನ್ನು ನಂಬುತ್ತೇವೆಯೋ ಅಂಥ ಜನವೆಲ್ಲ ನಮಗೆಬೇಕು, ಆ ಮೂಲವನ್ನು ಎಚ್ಚರಿಕೆಯಿಂದ ವೃದ್ಧಿಪಡಿಸಿಕೊಳ್ಳಿ, ನಿಮ್ಮೊಡನೆ ಚೆನ್ನಾಗಿ ವರ್ತಿಸುವಂಥ ಒಳ್ಳೆಯ ಮಿತ್ರನನ್ನು ಕಂಡುಕೊಳ್ಳಿ, ನಿಮ್ಮ ಬದುಕಿನಲ್ಲಿ ಬರುವ ಸಹಾಯಕ ಜನರಲ್ಲಿ ಒಳ್ಳೆಯ ಜೊತೆಗಾಗಿ ಮತ್ತು ಒಳ್ಳೆಯ ಸ್ನೇಹಿತ ದೊರಕಿದ ಕೂಡಲೆ ಒಳೆಳಯ ವೈದ್ಯ ಬರುತ್ತಾನೆ.

5. ಮಾನವ ಸ್ವಭಾವವನ್ನು ಕುರಿತು ಕಲಿಯಿರಿ. ಜನ ತಾವು ಮಾಡುವ ಕೆಲಸವನ್ನು ಏತಕ್ಕೆ ಮಾಡುತ್ತಾರೆ ಎಂಬುದನ್ನು ತಿಳಿದುಕೊಂಡರೆ, ತಬ್ಬಿಬ್ಬು ಮಾಡುವ ಸ್ವಭಾವವನ್ನು ನೀವು

ಅರ್ಥಮಾಡಿಕೊಳ್ಳಬಹುದು ಮತ್ತು ಅದಕ್ಕಿಂತ ಹೆಚ್ಚಾಗಿ ನೀವು ಜನಸಾಮಾನ್ಯರಲ್ಲಿ ಉತ್ತಮ ರೀತಿಯಲ್ಲಿ ನಡೆದುಕೊಳ್ಳಬಲ್ಲಿರಿ.

6. ನಿಮ್ಮ ಭಾಗದ ಮಾತನ್ನು ಶಾಂತವಾಗಿ ಮತ್ತು ಸ್ಪಷ್ಟವಾಗಿ ಆಡಲು ಕಲಿಯಿರಿ ಹೀಗೆ ಮಾಡುವುದರಿಂದ ನಿಮ್ಮ ಹಕ್ಕನ್ನು ರಕ್ಷಿಸಿಕೊಳ್ಳಬಲ್ಲಿರಿ ಮತ್ತು ಇತರರಲ್ಲಿನ ಮೇಲು ಬೀಳುವಿಕೆಯ ಸ್ವಭಾವವನ್ನು ಮತ್ತು ಹಾಗೂ ನಿಮ್ಮಲ್ಲಿನ ಉದ್ರಿಕ್ತ ಮನೋಭಾವವನ್ನು ಶಾಂತಗೊಳಿಸಬಲ್ಲಿರಿ.

7. ನಿಮಗೆ ಸಾಕಷ್ಟು ಲಭ್ಯವಾದದ್ದನ್ನು ತಿಳಿಯಿರಿ ಮತ್ತು ಅದನ್ನು ಅಲ್ಲಿಗೆ ಬಿಟ್ಟುಬಿಡಿ. ಉಪಾಯದ ಹಿಂಜರಿಕೆಯ ಶಕ್ತಿಯನ್ನು ಉಳಿಸುವುದಲ್ಲದೆ ವಿವೇಕವನ್ನು ಪ್ರಧರ್ಶಿಸುತ್ತದೆ.

8. ಸರಳವಾದ ಸುಖಕರವಾದ ಆಹಾರಸೇವನೆಯನ್ನು, ವ್ಯಾಯಾಮ ಅಭ್ಯಾಸವನ್ನು, ವಿಶ್ರಾಂತಿಯನ್ನು, ಮತ್ತು ಮನೋರಂಜನೆಯನ್ನು ಅಭ್ಯಾಸಮಾಡಿ. ನಿಮ್ಮ ಆರೋಗ್ಯಕರ ಮನೋಭಾವ ನಿಮ್ಮ ಶಾರೀರಕ ಆರೋಗ್ಯಕ್ಕೆ ಅತಿಸಮೀಪದ ಸಂಬಂಧವುಳ್ಳದ್ದಾಗಿರುತ್ತದೆ.

9. 'ಏಕಾಂತ' ಬದುಕಿನ ಒಂದು ಭಾಗವೆಂದು ಸ್ವೀಕರಿಸಿ. ಇದನ್ನು ಅರ್ಥಮಾಡಿ ಕೊಳ್ಳುವುದು ಅಂತಃಶಾಂತಿಗೆ ಬೀಗದ ಕೈ.

10. ಪ್ರಪಂಚದ ಪ್ರಾಣಿ ಹಿಂಸೆಗಳು ಮತ್ತು ಅಸತ್ಯಗಳು ಜನದ್ಲಿಟ್ಟಿರುವ ನಿಮ್ಮ ಮೂಲ ನಂಬಿಕೆಗಳನ್ನು ನಾಶಮಾಡದಂತೆ ನೋಡಿಕೊಳ್ಳಿ, ನಂಬುವ ಸಾಮರ್ಥ್ಯ ಮನೋಭಾವದ ಆರೋಗ್ಯಕ್ಕೆ ಅತಿ ಅಗತ್ಯ. (ಒತ್ತಡ ವ್ಯವಸ್ಥೆಗೆ ಅಧ್ಯಾ 17 ನೋಡಿ)

## 9. ತರುಣ ಮತ್ತು ಧರ್ಮ

ಮನೆಯೇ ಧರ್ಮದ ಮೊದಲ ಶಾಲೆ ಮತ್ತು ತರುಣನಿಗೆ ಪ್ರಾರ್ಥನೆಯ ಮೊದಲಶಾಲೆಯೂ ಹೌದು. ಸೃಷ್ಟಿಯ ಶ್ರೇಷ್ಠ ಕರ್ತನಾದ ದೇವರ ಪ್ರೇಮದಲ್ಲಿ ನಂಬಿಕೆ ಹುಟ್ಟಿಸುವ ಮೊದಲ ಶಾಲೆಯು ಅದೇ. ಮತ್ತು ಅದೇ ಎಲ್ಲದರ ತಂದೆ. ತರುಣರು ದೇವರಲ್ಲಿ ಅಂಥ ನಂಬಿಕೆಯನ್ನು ತಮ್ಮ ಮಾತಾಪಿತೃಗಳ ಶಿಕ್ಷಕರ ಮತ್ತು ಸಮಾನಸ್ಕಂದರ ಧಾರ್ಮಿಕ ಪ್ರವೃತ್ತಿಗಳಿಂದ ಪಡೆದುಕೊಳ್ಳುತ್ತಾರೆ.

ತರುಣರು ಪ್ವಸಿದ್ದವಾದ ಹಂಬಲದಿಂದ ಧರ್ಮ, ದೇವರು, ಪೂಜೆ, ಪ್ರಾರ್ಥನೆ ಮತ್ತು

ಆಧ್ಯಾತ್ಮಿಕ ಮೌಲ್ಯಗಳನ್ನು ಸಾಧಿಸಿಕೊಳ್ಳುತ್ತಾತರೆ. ಧರ್ಮವನ್ನು ಅವರಿಗೆ ಬೇಸರತರದ ಇಕ್ಕಟ್ಟಾಗಿಲ್ಲದ ಮತ್ತು ಹೊರೆಯಲಾಗದ ಯಾವುದೇ ಒಂದು ಚಿತ್ರವೆಂದು ತೋರಿಸಿದರೆ, ಮತ್ತು ದೇವರು, ಭಯಂಕರ ಪ್ರಾಣಿ, ಶಿಕ್ಷಿಸಲು ಮತ್ತು ಹಿಯಾಳಿಸಲು ಸಿದ್ಧ ಎಂಬ ಚಿತ್ರವನ್ನು ಕೊಡದಿದ್ದರೆ, ಆಗ ತರುಣರು ದೇವರೆ ಬಗ್ಗೆ ತಾವು ತಾಳುವ ಪ್ರೀತಿಯಲ್ಲಿ ತಮ್ಮದೇ ಆದ ಸಾಧನೆಗಳ ಫಲ ಪೂರೈಕೆಗಳನ್ನು ಕಂಡು ಕೊಳ್ಳುತ್ತಾರೆ ಮತ್ತು ದೇವರಿಲ್ಲದೆ ಮಾನವನ ಇರುವಿಕೆಯ ಮಟ್ಟವನ್ನು ಸಾಧಿಸಲು ಸಾಧ್ಯವಿಲ್ಲ ಎಂಬ ಎಚ್ಚರಿಕೆಯನ್ನು ಅರ್ಥೈಸಿಕೊಳ್ಳುತ್ತಾರೆ.

ಯಾವುದು ವಾಸ್ತವಿಕವಾಗಿ ದುಷ್ಟವೋ ಅದು ಈ ಪ್ರಪಂಚ ತನ್ನಲ್ಲಿ ತಾನೇ ಇರುವ ಜೀವ, ಈ ಭೌತಿಕ ಪ್ರಪಂಚ ಎಂದರೆ, ನಮ್ಮ ಭಾವನೆಗಳ ಮುಂದೆ ಕಂಡುಬರುವುದು, ಯಾವುದು ವಿಜ್ಞಾನದ ವಿಷಯವೋ ಅದು ಖಂಡಿತವಾಗಿ ಸತ್ಯವಾದದ್ದು ಎಂಬುದು ಒಂದು ನೆಪ ಅಷ್ಟೆ. ಮನುಷ್ಯ ಯಾವುದೇ ಅನುಭವಾತೀತ ಸತ್ಯದಿಂದ ಸ್ವತಂತ್ರವಾದವನು ಮತ್ತು ಅವನು ತನ್ನ ಸ್ವಾರ್ಥಕ್ಕೆ ಈ ವಿಶ್ವವನ್ನೇ ನಿಯಂತ್ರಿಸಬಲ್ಲ ಎಂಬ ನಂಬಿಕೆಯೇ ಪಾಪ ಪೂರ್ಣವಾದದ್ದು.

## ಧರ್ಮ ವ್ಯಕ್ತಿತ್ವನ್ನು ಹೆಚ್ಚು ಬಲಪಡಿಸುತ್ತದೆ.

ಯಾವನು ದೇವರಿಂದ ಮುಚ್ಚಿಟ್ಟುಕೊಳ್ಳುತಾನೆಯೋ ಅವನು ತನ್ನನ್ನು ತನ್ನಿಂದಲೇ ಮುಚ್ಚಿಟ್ಟುಕೊಳ್ಳುತ್ತಾನೆ

ತಾರುಣ್ಯ ಯಾವುದೇ ನಾಡಿನ ಭವಿಷ್ಯಕ್ಕೆ ಆಶೆ. ಒಂದು ರಾಷ್ಟ್ರದ ಶಕ್ತಿ ಆ ದೇಶದ ತರುಣರ ಮೇಲೆ ಆಧರಿಸಿರುತ್ತದೆ. ತರುಣರು ಸಾಮಾನ್ಯವಾಗಿ ನೈತಿಕವಾಗಿ ಬಲಿಷ್ಠರು. ಅವರು ದೇವರಲ್ಲಿ ನಂಬಿಕೆಯುಳ್ಳವರು. ದೇವರನ್ನು ಪ್ರೀತಿಸುವವರು. ದೈವಭೀರುಗಳು, ದೈವಪ್ರಜ್ಞೆಯುಳ್ಳವರು, ಪ್ರಾರ್ಥನೆ ಮಾಡುವವರು ಮತ್ತು ಸಾಕಷ್ಟು ಆಧ್ಯಾತ್ಮಿಕ ಮೌಲ್ಯಗಳನ್ನು ಮತ್ತು ನಡತೆಗಳನ್ನು ತಮ್ಮಲ್ಲಿ ಹೊಂದಿರುವವರು.

''ಯಾವ ತರುಣರು ದೇವರಿಗೆ ಹತ್ತಿರವಾಗಿ ಬದುಕುತ್ತಾರೆ, ಯಾರು ಮೂಲತಃ ಮತ್ತು ವಿವೇಕವಾಗಿ ಪವಿತ್ರರಾಗಿರುತ್ತಾರೆ ಎಂದು ನಾವು ಸಾಮಾನ್ಯವಾಗಿ

ತಿಳಿಯುತ್ತೇವೆಯೋ ಅವರನ್ನು ನಾವು ಸಾಮಾನ್ಯರು ಎಂದು ಭಾವಿಸುತ್ತೇನೆ. ದೇವರನ್ನು ಗಾಢವಾಗಿ ಪ್ರೀತಿಸುವ ಸುಖೀ ತರುಣರು ಅವರ ಅವನ ಪ್ರತ್ರಕ್ಷತೆಯನ್ನು ಗುರುತಿಸಿರುತ್ತಾರೆ. ಧೈವದೊಡನೆ ವೈಯಕ್ತಿಕ ಪ್ರಾರ್ಥನೆಯ ಬದುಕನ್ನು ಹೊಂದಿರುತ್ತಾರೆ. ಅವನನ್ನು ಎಲ್ಲ ಬೆಳೆವಣಿಗೆಯಲ್ಲಿ ಬೆಳೆಯುವಾಗ ಮತ್ತು ಯಾವನು ಪ್ರಾರ್ಥಿಸುವುದು ಹೇಗೆ ಮತ್ತು ಪಾಪದ ಭೀತಿ ಏನು ಎಂದು ತಿಳಿದಿರುವವನನ್ನು ನಾವು ಗಮನಿಸಿರುತ್ತೇವೆ.

ಎಲ್ಲ ಧರ್ಮಗಳು ತರುಣರು ಒಂದು ಪಕ್ವವಾದ ಪ್ರಜ್ಞೆಯನ್ನು ಬೆಳಸಿಕೊಳ್ಳಬೇಕು ಎಂಬುದರ ಅಗತ್ಯತೆಯನ್ನು ಒತ್ತಿಹೇಳುತ್ತೇವೆ.

ಒಬ್ಬ ವ್ಯಕ್ತಿ ತನ್ನ ಸ್ವಂತಕಕ್ರಿಯೆಗಳಿಗೆ ಅಥವಾ ತಾನು ಯೋಚಿಸಿದ ಕ್ರಿಯೆಗಳಿಗೆ, ತನ್ನ ಸರಿ ಅಥವಾ ತಪ್ಪುಗಳ ಬಗ್ಗೆ ಒಂದು ತಿರ್ಮಾನಕ್ಕೆ ಬರಲು ಅನ್ವಯಿಸುವ ಮಾನಕಗಳಿಂದ (ನಿಯಮಗಳಿಂದ) ಕೂಡಿರುವ ಪ್ರಜ್ಞೆಯೇ ಒಂದು ಪದ್ಧತಿ ಮಾದರಿಗಾಗಿ ಈ ಮಾನಕಗಳ ಪ್ರಕಾರ ತಪ್ಪಾದ ಕ್ರಿಯೆಗಳು ಅವಮಾನದ ಅಥವಾ ಅಪರಾಧದ ಭಾವನೆಗಳನ್ನು ಉಂಟುಮಾಡುತ್ತವೆ. ಮತ್ತು ಅವುಗಳಿಂದ ಮುಂದುವರಿಯುತ್ತಾ ಅಪರಾಧಿ ಭಾವಗಳನ್ನು ಕಡಿಮೆ ಮಾಡುವ ಉದ್ದೇಶದಿಂದ ವಿವಿಧ ಸ್ವಭಾಗಳ ಕಡೆಗೆ ಎಳೆದೊಯ್ಯುತ್ತವೆ. ಈ ಮಾನಕಗಳೊಡನೆ ಸಾಮರಸ್ಯ ಹೊಂದುವ ಕ್ರಿಯೆಗಳು ಅಗೋಚರವಾಗಿ ಹೋಗಿಬಿಡುತ್ತವೆ. ಇಲ್ಲಿವೆ ಸ್ವಾರ್ಥದ ಕಡೆಗೆ ಸ್ಪಷ್ಟವಾದ ಭಾವನೆಗಳನ್ನು ಹುಟ್ಟಿಹಾಕುತ್ತವೆ. ಎಷ್ಟೋ ವೇಳೆ ಮನಶಾಸ್ತ್ರಜ್ಞರು ಈ ಮಾನಕಗಳನ್ನು ಅಂತರಿಕ ನಿಯಂತ್ರಕಗಳೆಂದು ಉಲ್ಲೇಖಿಸುತ್ತಾರೆ. ಈ ಸಂಪೂರ್ಣ ಕ್ರಿಯೆಯನ್ನು ಎಂದರೆ ಯಾವುದರಿಂದ ತಂದೆತಾಯಿಗಳ ಈ ಮಾನಕಗಳು ಮಗುವಿನಿಂದ ಅನುಸರಿಸಲ್ಪಡುತ್ತದೆಯೋ ಅದನ್ನು ಅಂತಸ್ತೀಕರಣ ಎಂದು ಕರೆಯುತ್ತಾರೆ.

## ಹಿರಿಯ ಪಾತ್ರ

ಅಂಥ ಗುಣಗಳು ಅಥವಾ ಅಧ್ಯಾತ್ಮಿಕ ಮೌಲ್ಯಗಳು, ತರುಣರು ಮನೆಯಲ್ಲಿ, ಶಾಲೆಯಲ್ಲಿ, ಕಾಲೇಜಿನಲ್ಲಿ ಸುಮ್ಮನೆ ತಾತ್ವಿಕವಾಗಿ ಕಾಯುವುದರಿಂದ ಲಭಿಸುವ ಫಲಿತಾಂಶಗಳಲ್ಲಿ ಆದರೆ ಅವು ವಾಸ್ತವಿಕವಾಗಿ ತಂದೆತಾಯಿಗಳು, ಶಿಕ್ಷಕರ, ಮತ್ತು ಹಿರಿಯರ ಒಳ್ಳೆಯ ನೀತಿಯ ಪ್ರವೃತ್ತಿಗಳ ಫಲಿತಾಂಶವೇ ಆಗಿವೆ.

ಸತ್ಯವಾದ ಆಧ್ಯಾತ್ಮಿಕತೆಯನ್ನು, ವಿವಿಧ ದಿನಾಂಕಗಳನ್ನು ಮತ್ತು ಧಾರ್ಮಿಕ ಕಥೆಗಳನ್ನು ಅಥವಾ ಅವರ ಧರ್ಮದ ಚರಿತ್ರೆಯನ್ನು ತಿಳಿದುಕೊಳ್ಳುವಷ್ಟರಿಂದ ಮಾತ್ರ ತರುಣರ ಸಾಮರ್ಥ್ಯಗಳನ್ನು ನಿರ್ಧರಿಸಲಾಗುದಿಲ್ಲ. ಆದಾಗ್ಯು ದೇವರಲ್ಲಿ ನಂಬಿಕೆ ಇರುವುದು, ಪ್ರಜ್ಞಾಪೂರ್ವಕವಾದ ಅನೀತಿಯುಕ್ತವಾದುದನ್ನು ದ್ವೇಷಿಸುವುದು ಮತ್ತು ದೇವರೆದುರಿನಲ್ಲಿ ಅನ್ಯಾಯವಾಗಿ ಕಾಣುವ ಅಪರಾಧ ಮೊದಲಾದ ಸ್ವಭಾವ ಜನ್ಯ, ಪ್ರವೃತ್ತಿಯು-(ಇವು) ನಿಧಾನವಾದ, ಸಹನಾಯುಕ್ತವಾದ ಮತ್ತು ವಿವೇಕದ ಸ್ವರೂಪಣೆ ಇವುಗಳ ಫಲವೇ ಆಗಿದೆ. ತರುಣರು ಬದುಕಿಗೆ ಅಕೃತಕ ಗೃಹಜೀವನದ ಸನ್ನಿವೇಶಗಳಿಗೆ ಧರ್ಮದಲ್ಲಿ ತಮ್ಮ ಆಸಕ್ತಿಯನ್ನು ಬೆಳೆಸಿಕೊಳ್ಳಲು ಸತ್ಯದ ದೃಷ್ಟಿಯಿಂದ ನೋಡುತ್ತಾರೆ ಮತ್ತು ಆಧ್ಯಾತ್ಮಿಕ ಮೌಲ್ಯಗಳ ಅವರ ಆಶೆಗಳನ್ನು ಅವರು ನಿಜದ ಕಣ್ಣಿನಿಂದ ನೋಡಲು ಯತ್ನಿಸುತ್ತಾರೆ

## ಆಧ್ಯಾತ್ಮಿಕ ಮತ್ತು ಮತಸಂಸ್ಕಾರ

''ದೇವರಿಗೋಸ್ಕರ '' ಎಂಬುದು ನನಗೆ ಕ್ರಿಯಾಪದವಾಗಿ ಕಾಣುತ್ತದೆಯೋ ಹೊರತು ನಾಮಪದವಾಗಿ ಅಲ್ಲ- ಫುಲ್ಲರ್

ಅತ್ಯಂತ ಹೆಚ್ಚಿನ ತರುಣರು ಇಂದು 'ದೇವರು' 'ಧರ್ಮ' ಎಂಬ ಹೆಸರು ಹೇಳಿದರೆ ಸಾಕು ಒಂದು ತರಹ ತಿರಸ್ಕಾರದ ನಗೆಯಿಂದ ಅಣಕಿಸುತ್ತಾರೆ ವಿಜ್ಞಾನ ಮತ್ತು ಧರ್ಮ ಒಂದಕ್ಕೊಂದು ಹೊಂದಲಾರದ್ದು (ನೈಜವಾಗಿ ಇದು ಸುಳ್ಳು) ಎಂಬ ದೃಷ್ಟಿಯೇ ಅವರ ತಿರಸ್ಕಾರಕ್ಕೆ ಎಷ್ಟೋ ವೇಳೆ ಹೊಣೆಯಾಗಿರುತ್ತದೆ ಧರ್ಮದ ಮೇಲಿನ ಉತ್ತಮ ಭಾಷಣಗಳಿಂದ ಮತ್ತು ಉತ್ತಮ ಅಧ್ಯಾತ್ಮಿಕ ಪುಸ್ತಕಗಳಗಿಂತ ಹೆಚ್ಚಾಗಿ ದೇವರ ಶಕ್ತಿಯ ಮೂಲಕ ಮತ್ತು ಮಾತಾಪಿತೃಗಳ ದೃಷ್ಟಾಂತಗಳಿಂದ, ತರುಣರು ದೇವರ ಸಮೀಪಕ್ಕೆ ಹೋಗುವಂತೆ ಬಯಸುತ್ತಾರೆ.

## ನೀವು ಅಧ್ಯಾತ್ಮಿಕ ಸ್ವಭಾವವುಳ್ಳವರೆ ?

ತರುಣರು, ಅಷ್ಟೆ ಏಕೆ ಹಿರಿಯರು ಕೂಡ 'ಅಧ್ಯಾತ್ಮಿಕತೆ' ಎಂಬ ಪದವನ್ನು 'ಸಂಸ್ಕಾರ' ಎಂಬ ಪದದೊಡನೆ ಸಮನ್ವಯಗೊಳಿಸುತ್ತಾರೆ ನಿಜವಾಗಿ ಆಧ್ಯಾತ್ಮಿಕತೆಯೆಂದರೆ 'ಮೂಲತತ್ತ್ವ' ಎಂಬುದನ್ನು ಅವರು ಮರೆಯುತ್ತಾರೆ.

1) ನಾವು ಪ್ರತಿಯೊಬ್ಬರು ದೇವರಿಂದ ಬದುಕಿನಲ್ಲಿ ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಸೃಷ್ಟಿಸಲ್ಪಟ್ಟಿದ್ದೇವೆ ಎಂಬುದನ್ನು ಸ್ವೀಕರಿಸಿಸಲು ಸಮರ್ಥರಾಗಬೇಕು ಮತ್ತು ಈ ಉದ್ದೇಶ ಬದುಕಿಗೆ ಅದರ ನಿಜವಾದ ಅರ್ಥವನ್ನು ಕೊಡುತ್ತದೆ.

2) ದೇವರು ನನ್ನ ಮೇಲಿನ ತನ್ನ ವಿವೇಕದಿಂದ ಮತ್ತು ಪ್ರೀತಿಯಿಂದ ಯಾವುದನ್ನು ಉದ್ದೇಶಿಸಿದ್ದಾನೋ ಅದನ್ನು ನಮ್ಮಲ್ಲಿ ಪ್ರತಿಯೊಬ್ಬರು ಗುರುತಿಸಬೇಕು ಮತ್ತು ಬದುಕಿನಲ್ಲಿ ಅವನ ಗುರಿಯನ್ನು ಮುಟ್ಟಬೇಕು.

3) ನಮ್ಮಲ್ಲಿ ಪ್ರತಿಯೊಬ್ಬರು ನಮ್ಮ ಸೃಷ್ಟಿಕರ್ತನಿಗೆ, - ಅವನು ಅಥವಾ ಅವಳು ಅವನಿಂದ ಯಾವ ಆಸ್ತಿಯನ್ನು ಪಡೆದಿದ್ದಾರೆಯೇ ಎಂದರೆ ತಾಯಿ ತಂದೆಗಳು, ಶಿಕ್ಷಣ, ಮೇಧಾಶಕ್ತಿ ಮತ್ತು ಅವಕಾಶಗಳನ್ನು ಅವುಗಳಿಗೆ ಉತ್ತರ ನೀಡಲೇಬೇಕು ಇವುಗಳ ಪರಿಪೂರ್ಣ ಸಾಧನೆಯೇ ನಾವು ಅಧ್ಯಾತ್ಮಿಕತೆಯಲ್ಲಿ ಗಾಢವಾಗಿ ಬೆಳೆಯಲು ಸಹಾಯಮಾಡುತ್ತದೆ.

ವಿಜ್ಞಾನ ಮತ್ತು ತಾಂತ್ರಿಕತೆ ಬೆಳೆದಿವೆ ಮತ್ತು ಅವು ಬಡತನದ ಸಮಸ್ಯೆಗಳನ್ನು ಬಿಡಿಸುವಲ್ಲಿ ಸಾಮರ್ಥ್ಯ ಹೊಂದಿವೆ ಆದರೆ ನಿಜದಲ್ಲಿ ಅವು ಬಡತನದ ಪ್ರಪಂಚದಲ್ಲಿ ಮೇಲೆ ಮೇಲೆಯೋ ತೇಲಾಡುತ್ತಿವೆ ನಮ್ಮನ್ನು ಎದುರಿಸುತ್ತಿರುವ ಸಮಸ್ಯೆ ಎಂದರೆ, ವಿಜ್ಞಾನ, ನಿಪುಣತೆಗಳು ಮತ್ತು ಇಷ್ಟವಿರುವಿಕೆಗಳು ಕಿತ್ತುಕೊಂಡವರ ಉತ್ಕಾಂಕ್ಷೆಗಳನ್ನು ಅದುಮಿಡುವ ಪ್ರವೃತ್ತಿ ತುಂಬ ವಿರಳವಾಗಿವೆ ಹಾಗೆಯೇ ಪ್ರಯತ್ನಿಸಲು ಉತ್ಸಾಹವೂ ಕೂಡ ಒಟ್ಟಿನಲ್ಲಿ ಬಡವರ ಜೀವನದಲ್ಲಿ ಸಕ್ರಿಯವಾಗಿ ಭಾಗವಹಿಸಲು ಸಿದ್ಧರಾಗಿದ್ದಾರೋ ಅವರೇ ಎತ್ತರದ ಆದರ್ಶವನ್ನುಳ್ಳಾವರಾಗಿರುವವರೇ ಆಗಿದ್ದಾರೆ. ಅವರೇ ಸಂಪೂರ್ಣವಾಗಿ ತಮ್ಮನ್ನು ಅವರಿಗೆ ಅರ್ಪಿಸಿಕೊಳ್ಳಲು ಸಿದ್ಧರಾಗಿರುವವರು ಅವರು ಅದು ತಮಗಾಗಿ, ತಮ್ಮ ದೇವರ ಸೇವೆಗಾಗಿ ಎಂದು ಕಾಣುವವರು.

## ದ್ವಿಮುಖ ಗುಣಮಟ್ಟಗಳು

ಆಧ್ಯಾತ್ಮಿಕ ಪ್ರವೃತ್ತಿಗಳನ್ನು ಆಧರಿಸಿ, ಮತ್ತು ತಂದೆತಾಯಿಗಳ ಮತ್ತು ಹಿರಿಯರ ಜೀವನಶೈಲಿಯನ್ನು ಅನುಸರಿಸಿ ತರುಣರು ಧರ್ಮ ಮತ್ತು ದೇವರಲ್ಲಿ ತಮ್ಮ ನಂಬಿಕೆಯನ್ನು

ಶಿಥಿಲಗೊಳಿಕೊಳ್ಳುತ್ತಾರೆ ಇಲ್ಲವೇ ಆಳವಾಗಿ ನೆಲೆಯೂರಿಸಿಕೊಳ್ಳುತ್ತಾರೆ ತಾವು ಕಾಣದ ವಿಷಯಗಳಲ್ಲಿ ಮತ್ತು ಮುಂಬರುವ ವಿಷಯಗಳಲ್ಲಿ ತಮ್ಮ ನಂಬಿಕೆಗಳನ್ನು ದೇವರೊಡನೆ ಮಾತ್ರ ಸಾಧ್ಯವಾಗಬಹುದಾದ, ವಾಸ್ತವಿಕತೆಗಳಲ್ಲಿನ ನಂಬಿಕೆಯನ್ನು ಮತ್ತು ದೇವರ ಪಿತೃತ್ವದಲ್ಲಿ ಶೈಥಿಲ್ಯವನ್ನಾಗಲಿ ಗಾಢತೆಯನ್ನಾಗಲಿ ಕಂಡುಕೊಳ್ಳುತ್ತಾರೆ ಮತ್ತು ಕೂಡ ತಂದೆತಾಯಿಗಳ ಮತ್ತು ಹಿರಿಯರ ಉದಾಹರಣೆಗಳ ಮೇಲೆ ಭಾಗಶ ಆಧರಿಸಿದ ದೇವರಲ್ಲಿ ಒಟ್ಟು ನಂಬಿಕೆಯ ಪ್ರವೃತ್ತಿಯೇ ಆಗಿರುತ್ತದೆ. ಆದರೆ, ಕೆಲವು ಅಪವಾದಗಳಿಂದ ಸಂದರ್ಭಗಳು ಉಂಟು. ಅಂಥಲ್ಲಿ ತಂದೆ ತಾಯಿಗಳು ಪ್ರಾರ್ಥನೆಗಳಿಂದ ಚರ್ಚುಗಳು, ಮಸೀದಿಗಳು, ದೇವಾಲಯಗಳು ಇತ್ಯಾದಿಗಳಿಗೆ ಪ್ರತಿ ದಿನವೂ ಕೊಡುವ ಭೇಟಿಗಳಿಂದ ಮತ್ತು ಧಾರ್ಮಿಕ ಉತ್ಸವಗಳಲ್ಲಿ ಆಗಾಗ ಭಾಗವಹಿಸುವುದರಿಂದ ತುಂಬ ಧಾರ್ಮಿಕ ಮತ್ತು ಆಧ್ಯಾತ್ಮಿಕ ಜೀವನವನ್ನು ನಡೆಸುತ್ತಿರುವ ಹಾಗೆ ತೋರಿಸಿಕೊಳ್ಳುತ್ತಾರೆ. ಇವೆಲ್ಲವೂ ಇದ್ದರೂ ಅವರು ತಮ್ಮ ಮಕ್ಕಳನ್ನು ಕರುಣೆಯಿಂದ ನೋಡಿಕೊಳ್ಳುವುದಿಲ್ಲ. ಈ ಧಾರ್ಮಿಕ ಕ್ರಮಗಳೆಲ್ಲ ದೈವತ್ವದ ಮತ್ತು ಆಧ್ಯಾತ್ಮಿಕತೆಯ ಬಾಹ್ಯ ಪ್ರದರ್ಶನ ಮಾತ್ರ ಎಂದು ಭಾವಿಸುತ್ತಾರೆ.

''ಯುವಕರು ವಿಶ್ವಾಸವಿಡುವ ಅತ್ಯಂತ ಮೆಚ್ಚಿನ ಮೌಲ್ಯಗಳಲ್ಲಿ ಸತ್ಯ ಮತ್ತು ಪ್ರೀತಿ ಮುಖ್ಯವಾದವು. (ಮಹಾತ್ಮಾಗಾಂಧಿ ಮತ್ತು ಮದರ್ ತೆರೆಸಾ)'' ಹಿರಿಯರಲ್ಲಿ ದ್ವಿಮುಖ ಗುಣಮಟ್ಟಗಳನ್ನು ಅವರು ದ್ವೇಷಿಸುತ್ತಾರೆ ಮತ್ತು ಅಸಹ್ಯಸುತ್ತಾರೆ''

''ಶುದ್ಧ ದೈವ ಕೇಂದ್ರಿತ ಕುಟುಂಬ ಪರಸ್ಪರ ಪ್ರೀತಿ ಮತ್ತು ಪೋಷಣೆಗಳಿಂದ ಬೆಳೆಯುತ್ತದೆ-ಬರಿಯ ಶುದ್ಧವಾದ ಭೌತಿಕತೆಯಿಂದಲ್ಲ ಏಕೆಂದರೆ ನಡತೆ ಅಂಟು ಲೇಪದಿಂದಾಗಲಿ, ಬಳಿಯುವ ಬಣ್ಣದಿಂದಾಗಲಿ ಸಾಧಿತವಾಗುವುದಿಲ್ಲ. ಅದು ಪ್ರೀತಿ, ಮತ್ತು ಬೆವರು ಮತ್ತು ಕಣ್ಣೀರಿನಿಂದ ಸಾಧ್ಯವಾಗುತ್ತದೆ ಅದೊಂದು ಚೌಕಟ್ಟು ಪಾಲುಗೊಂಡ ಆನಂದದ ನೆನಪಿನ ಕ್ಷಣಗಳಿಂದ ಓರಣಗೊಂಡಿರುತ್ತದೆ ಪಾಲುಗೊಂಡ ನರಳಾಟದ ಗಂಟೆಗಳಿಂದ ಸಂವಾರ್ತೆಗೊಂಡಿರುತ್ತದೆ ಅದರಲ್ಲಿ ವಾಸಮಾಡುವವರ ವ್ಯಕ್ತಿತ್ವಗಳ ಪ್ರತಿಸ್ವರೂಪವೇ ಆದಾಗಿರುತ್ತದೆ ಮತ್ತು ಅವರ ಇಷ್ಟಾನಿಷ್ಟಗಳ ಅಭಿವ್ಯಕ್ತಿಗಳಂದ ತುಂಬಿರುತ್ತದೆ ನಿಜವಾದ ದೈವಕೇಂದ್ರೀಕೃತ ಗೃಹ ಸ್ಪರ್ಥ ತ ಆ್ಯಗದ ವೇದಿಕೆ ಮತ್ತು ಸುಖಾಂತ ದೃಶ್ಯಗಳ ಮತ್ತು ನಾಟಕದ ರಂಗಭೂಮಿ ಅದೊಂದು ಕರ್ಮಸ್ಥಳ ಮತ್ತು ವಿಶ್ರಾಂತಿಧಾಮ

ಈ ದೈವಕೇಂದ್ರಿತ ಕುಟುಂಬದ ಮನೆ, ದೇವರಿಗೆ ಸಾಮೂಹಿಕವಾಗಿ ಪೂಜೆ ಮತ್ತು ಪ್ರಾರ್ಥನೆ ಸಲ್ಲಿಸುವ ಸ್ಥಳವೇ ಅಲ್ಪಸ್ವಲ್ಪ ಗೌರವಾಸ್ಪದ ಪ್ರವೃತ್ತಿಯನ್ನು ಹೊಂದಿರುವ ಮತ್ತು ಪ್ರಾಮಾಣಿಕ ಕಾಯಕದ ಮಾನ್ಯತೆ ಹೊಂದಿರುವ ಕುಟುಂಬವು ಹೊಣೆಗಾರಿಕೆಯನ್ನು ದೂರವಿಡುವ ಹೇಡಿತನವನ್ನು ವಿರೋಧಿಸುತ್ತದೆ. ಮತ್ತು ಹಣದ ಪ್ರತಿಫಲವನ್ನು ಲೆಕ್ಕ ಹಾಕದೆ ಇತರರಿಗೆ ಸೇವೆಯ ಅಮೂಲ್ಯ ಬಹುಮಾನಗಳನ್ನು ಅನುಭವಿಸುತ್ತದೆ.

## ಜಾತ್ಯತೀತತೆ

ಇನ್ನೊಂದು ತುತ್ತತುದಿಯೆಂದರೆ ಜಾತ್ಯತೀತೆಯ ಅಪಾಯ. ಆ ಪದದ ಅರ್ಥವನ್ನು ನಾವು ತಪ್ಪು ಅರ್ಥದಿಂದ ತಿಳಿದುಕೊಂಡಿದ್ದೇವೆ. ಈ ಬಗ್ಗೆ ಸಿ.ರಾಜಗೋಪಾಲಚಾರಿ ಹೇಳುವುದನ್ನು ಕೇಳಿ.

''ಒಂದು ರಾಜ್ಯ ತನು ಸರ್ಕಾರ ಜಾತ್ಯತೀತವಾದದ್ದು ಎಂದು ಘೋಷಿಸಿದರೆ ಸಂಸತ್ತಿನ ಆಡಳಿತಗಾರರು ಆಜ್ಞೇತಾವಾದಿಗಳು ಅಥವಾ ನಿರೀಶ್ವರಾವಾದಿಗಳೆಂದು ಅರ್ಥವಲ್ಲ.

''ಅದು ಮತಧರ್ಮವನ್ನು ಇಚ್ಛಿಸುವುದಿಲ್ಲ ಮತ್ತು ಉತ್ಸಾಹ ಗುಂದಿಸುತ್ತದೆ ಎಂದು ಅರ್ಥವಲ್ಲ.

''ಬೇರೆ ಬೇರೆ ಮತ ಧರ್ಮಗಳ ಜನರೆಲ್ಲರನ್ನು ನಿಷ್ಪಕ್ಷವಾಗಿ ಮತ್ತು ಮತಗಳ ಭಿನ್ನತೆಯ ಆಧಾರದ ಮೇಲೆ ಯಾವುದೇ ಪಕ್ಷಪಾತವಿಲ್ಲದೆ ನಡೆಸಿಕೊಳ್ಳಬೇಕು ಎಂಬುದೇ ಇದರ ಅರ್ಥ.

''ಅಲ್ಪಸಂಖ್ಯಾತ ವರ್ಗಕ್ಕೆ ನೀಡುವ ನ್ಯಾಯ ಬಹುಸಂಖ್ಯಾತರಿಗೆ ನೀಡುವ ಅನ್ಯಾಯ ಎಂಬುದು ಇದರ ಅರ್ಥವಲ್ಲ.

''ಕುಟುಂಬಗಳು ತಾವು ಒಪ್ಪಿಕೊಂಡಿರುವ ಧರ್ಮದ ಆಧಾರದ ಮೇಲೆ ಕೈಗೊಂಡ ಶಿಸ್ತುಗಳ ಪ್ರಯೋಜನಗಳನ್ನು ಹುಡುಗರುಮತ್ತು ಹುಡಗಿಯರು ಕಳೆದುಕೊಳ್ಳುತ್ತಾರೆ ಎಂಬುದು ಇದರ ಅರ್ಥವಲ್ಲ.

''ಮತಧರ್ಮ, ತನಗೆ ಅಂಟಿಕೊಂಡವರಿಗೆ ಅವರಿಗೇ ಕಟ್ಟುಮಾಡುತ್ತದೆ ಮತ್ತುತ ರೂಢಿಗೊಳಿಸುತ್ತದೆ ಎಂಬಂಥ ಅಡೆತಡೆಗಳಿಂದ ಬಿಡುಗಡೆ ಹೊಂದುವ ಹಾಗೆ ಸದ್ಯದಲ್ಲಿ

ವಯಸ್ಸಿಗೆ ಬರುವ ತಲೆಮಾರನ್ನು ಮುಂದಕ್ಕೆ ತರಲು ಸರ್ಕಾರ ಕಾರಣ ಭೂತವಾಗುತ್ತದೆ ಎಂಬುದು ಇದರ ಅರ್ಥ ಅಲ್ಲ.

"ಜನದ ಸ್ವಭಾವ ಮತ್ತು ನಡತೆಯನ್ನು ಸಮಗ್ರವಾಗಿ ಪೊಲೀಸರು ನೋಡಿಕೊಳ್ಳುತ್ತಾರೆ ಮತ್ತು ದೇವಾಲಯಗಳು, ಮಸೀದಿಗಳು ಮತ್ತು ಕ್ರೈಸ್ತದೇವಾಲಯಗಳು, ವಾಸ್ತುಶಿಲ್ಪದ ಹಿತಾಸಕ್ತಿಗಳು ಮಾತ್ರ ಎಂಬುದು ಜಾತ್ಯತೀತತೆಯ ಅರ್ಥವಲ್ಲ.

"ಜಾತ್ಯತೀತತೇಯ ರಾಜ್ಯದಲ್ಲಿ ಧರ್ಮಶ್ರದ್ಧೆಯ ಜನರನ್ನು ಅವರು ಯಾವುದೇ ಧರ್ಮನಿಷ್ಠೆಗೆ ಒಳಗಾಗಿದ್ದರೂ ಅವರನ್ನು ಗೌರವಿಸಬೇಕು ಮತ್ತು ಮುಂಚಿನಂತೆಯೇ ಅವರ ಸಮುದಾಯಗಳನ್ನು ಧರ್ಮದ ಮತ್ತು ಸ್ವಹಿಡಿತದಲ್ಲಿಟ್ಟು ಕೊಳ್ಳುವ ದಾರಿಯಲ್ಲಿ ಮಾರ್ಗದರ್ಶನ ನೀಡಲು ಪ್ರೋತ್ಸಾಹಿಸಬೇಕು.

"ಜಾತ್ಯತೀತತೆಗೆ ಸಂಬಂಧಿಸಿದ ಈ ವಿಷಯದಲ್ಲಿ ಸರಿಯಾಗಿ ಅರ್ಥಮಾಡಿಕೊಂಡದ್ದೆ ಆದರೆ ಆಕಸ್ಮಾತಾಗಿ ಹಾಗೆ ಯಾರಾದರೂ ಒಬ್ಬರು ಹೇಳುವುದಾದರೆ ಪಕ್ಷಪಾತ ಮಾಡದೇ ಇರುವುದನ್ನು ಬೆಂಬಲಿಸಲು ಮತ್ತು ಧರ್ಮಶ್ರದ್ದೆಯ ಎಲ್ಲ ಜನರನ್ನು ಸಮಾನ ಗೌರವದಿಂದ ನೋಡುವ ಹಿಂದು ಧರ್ಮದ ಗಟ್ಟಿಯಾದ ಸಿದ್ಧಾಂತವನ್ನು ನಾವು ಹೊಂದಿದ್ದೇವೆ"

ರಾಜಗೋಪಾಲಚಾರಿ ಅವರ ಜಾತ್ಯತೀತಿತೆಯ ಭಾವನೆಯನ್ನು ಇಂದು ಭಾರತದಲ್ಲಿ ಎತ್ತಿ ಹಿಡಿಯಬೇಕೆಂದು ನಾವೆಲ್ಲರೂ ಆಶಿಸಬೇಕು.

## ವರ್ಗಚಟುವಟಿಕೆ

### 1. ವಗ್ವಾದ/ ಚರ್ಚೆ

ಅ) ಭಾರತೀಯ ವಿದ್ಯಾರ್ಥಿಗಳ ಆವೇಶಯುಕ್ತ ಪಕ್ವತೆಯಲ್ಲಿ ಕೊರತೆಯಿದೆ.

ಆ) ಧರ್ಮ 'ನಡತೆ' ಯನ್ನು ಬಲವಧಿಸುತ್ತದೆ ಅಥವಾ ನಡತೆಯ ರೂಪಣದಲ್ಲಿ ಧರ್ಮದ ಪಾತ್ರ.

ಇ) ಮಹಾತ್ಮಗಾಂಧಿ ಮತ್ತು ಬಲವರ್ಥಿಸುತ್ತದೆ ಮದರ್‌ತೆರೆಸಾ ಅವರ ಬದುಕುಗಳಲ್ಲಿ ಧರ್ಮ ನಡೆಸಿದ ಪಾತ್ರ ಯಾವುದು ?

## 2. ಸ್ವಮೌಲ್ಯ : ನಿರ್ಧಾರಣ

ಅ) ನಾನು ಯಾರು ?

ಆ) ನಾನು ಏನು ?

ಇ) ಈ ಭೂಮಿಯ ಮೇಲೆ ನನ್ನನ್ನು ಏತಕ್ಕೆ ಇಟ್ಟಿದ್ದಾರೆ ?

ಈ) ನನ್ನ ಶಕ್ತಿಗಳೇನು ? ನನ್ನ ನಿಶಕ್ತಿಗಳೇನು ?

ಉ) ಯಾವ ಯಾವ ಅವಕಾಶಗಳನ್ನು ನಾನು ಉತ್ತಮಗೊಳಿಸಿಕೊಳ್ಳಬೇಕಾಗಿದೆ.

## 3. ನಿಮ್ಮನ್ನು ನೀವು ತಿಳಿದಿದ್ದೀರಾ ?

ಎಷ್ಟೋ ವೇಳೆ ನಾವು ನಮ್ಮನ್ನು , ಇತರ ಜನ ನಮ್ಮನ್ನು ನೋಡುವ ದೃಷ್ಟಿಗಿಂದ ಪೂರ್ಣವಾಗಿ, ಭಿನ್ನವಾದ ಬೆಳಕಿನಲ್ಲ ಚಿತ್ರಿಸಿಕೊಳ್ಳುತ್ತೇವೆ. ಇದಕ್ಕೆ ಕಾರಣ ಇಷ್ಟೆ ! ನಾವು ಏನನ್ನು ನೋಡಬೇಕೆಂದು ಕೊಳ್ಳುತ್ತೇವೆಯೋ, ಅದನ್ನೆ ಕಾಣುವ ಪ್ರವೃತ್ತಿ ಹೊಂದಿರುವುದೇ ಆಗಿದೆ. ಅಲ್ಲದೆ ನಾವು ಅಷ್ಟಾಗಿ ಆಸಕ್ತಿ ತೋರಿಸದ ನಮ್ಮ ನಡತೆಯ ಭಾಗಗಳಿಗೆ ನಾವು ಕುರುಡಾಗಿರುವುದೇ ಕಾರಣ. ಯಾರೂ ಪರಿಪೂರ್ಣರಲ್ಲ. ಆದ್ದರಿಂದ ನೀವು ಯಾವ ರೀತಿಯ ವ್ಯಕ್ತಿ ಎಂಬುದನ್ನು ಮುಂದೆ ಕೊಟ್ಟಿರುವ ಯಾವೊಂದು ಅಂಕಣದಲ್ಲಿ ಕೊಟ್ಟಿರುವ ನಡತೆಯ ಬಗೆಯಲ್ಲಿ ಹದಿನೈದನ್ನು ಗುರುತಿಸುವುದರ ಮೂಲಕ ಕಂಡು ಹಿಡಿದುಕೊಳ್ಳಿ, ಆದರೆ ನೆನಪಿಡಿ-ಪ್ರಾಮಾಣಿಕವಾಗಿರಬೇಕು.

### ಮೊದಲ ಅಂಕಣ

ನೀವು ಸೃಜನಶೀಲ ಮಾದರಿಯ ಗಟ್ಟಿ ಕುಳ,ಬಹುಶಃ ಕಲಾತ್ಮಕ ಮತ್ತು ಎಂದಿಗೂ ತನ್ನ ಸ್ವಂತವನ್ನು ವಿಶಿಷ್ಟವಾಗಿ ಚಿಂತಿಸುವ ವ್ಯಕ್ತಿ. ಸಣ್ಣಪುಟ್ಟ ಅಡೆತಡೆಗಳಿಗೆ, ನಿಯಮಗಳಿಗೆ ವಿನಿಯಮಗಳಿಗೆ ಎದುರುಬೀಳು ಪ್ರವೃತ್ತಿ ಪಡೆದಿರುತ್ತೀರಿ. ಮತ್ತು ನೀವು ಸಣ್ಣ ಗುಂಪಾದ ಕೆಲವೇ ಮಂದಿಗೆ ನೀವು ಸತತವಾಗಿ ಒಳ್ಳೆಯ ಮಿತ್ರರು ಮತ್ತು ನೀವು ಕೆಲಸವನ್ನು ಮಾಡದೇ ಇದ್ದರೆ ನೀವು ಸಂತೋಷದಿಂದಿರುವುದೇ ಇಲ್ಲ. ಮತ್ತು ನಿಮ್ಮ ಮಾರ್ಗದಲ್ಲಿ ನಿಮ್ಮದೇ ಬದುಕನ್ನು ಖಂಡಿತವಾಗಿ ಬದುಕುತ್ತೀರಿ.

# ಇಂಗ್ಲೀಷ್ ಪು 18 - ಕನ್ನಡ ಪುಟ 75

| ಒಂದು | ಎರಡು | ಮೂರು | ನಾಲ್ಕು |
|---|---|---|---|
| ಥಟ್ಟನೆ ಗ್ರಹಿಸುವ | ಬುದ್ಧಿಶಕ್ತಿಯುಳ್ಳ | ಹರ್ಷದಾಯಕ | ಸಾಹಸದ |
| ಬಹುಮುಕ ಸಾಮರ್ಥ್ಯದ | ದಪ್ಪ ಚರ್ಮದ | ಮಂಕು ಕವಿದ | ಹರ್ಷಭರಿತ |
| ನಿಗರ್ವಿ(ಅಹಂಕಾರರಹಿತ) | (ಮಂದಬುದ್ಧಿಯ) | ವಾತ್ಸಲ್ಯದ | ಸಂಘಜೀವಿಯಾದ |
| ಕಳವಳಗೊಂಡ(ಅಶ್ವಸ್ಥ) | ಚುರುಕಾದ | ಕತ್ತೆ ಚಾಕರಿಯ | ನಿಶ್ಚಿಂತ, ಮುಕ್ತ |
| ತಾಳ್ಮೆಯ | ಸ್ವನಿರ್ಧಾರದ | ಸುಸಂಘಟಿತ | ನಿಷ್ಠೆಯ |
| ಅನ್ಯಮನಸ್ಕನಾದ | ಸ್ಪಷ್ಟದೃಷ್ಟಿಯ | ಕುತೂಹಲೀಯ | ಅಹಂಕಾರದ |
| ಮಲೆತ (ಎದುರು ಬೀಳು) | ನಂಬಿಕೆ/ನಿಷ್ಠೆಯ | ಹಗಲುಗನಸಿಗ | ಹೊಂದಾಣಿಕೆಯ |
| ಆತ್ಮ ಪರಿಶೀಲನೆಯ | ಅವೇಗಪರ | ಸೌಂದರ್ಯ ಪ್ರೇಮಿ | ಜನಪ್ರಿಯವಾದ |
| ಮಹತ್ವಾಕಾಂಕ್ಷೆಯಿಲ್ಲದ | (ಹಿಂದುಮುಂದೆ | ಮೈಗಳ್ಳತನದ | ಜಂಬದ |
| ಶೀಘ್ರುಗಾಹಿಯಾದ | ನೋಡದೆ ನುಗ್ಗುವ | ಪ್ರಣಯಾಸಕ್ತ | ಗಟ್ಟಿ ಆಟದ |
| ಶಾಂತ | ಪ್ರಾಯೋಗಿಕ | ತಾಳ್ಮೆಯ | ಕಲ್ಪನಾ ಶಕ್ತಿಯುಳ್ಳ |
| ಗೂಢವಾದ (ರಹಸ್ಯ | ಹಂತದ ಕೇಂದ್ರ | ಆಕೃತ್ರಿಮ | ಬಾಹ್ಯ ಪ್ರವೃತ್ತ |
| ಪ್ರಕೃತಿಯ) | ಸುಖಶಾಂತಿ | ಸಿಡಿಮಿಡಿಗೊಳ್ಳುವ | ಪಕ್ಷದ ಜೀವ |
| | ಬಯಸುವ | ಶಾಂತಿಶೀಲ | ದಾನಶೀಲ |
| ಸ್ವತಂತ್ರವಾದ | ಅಪಾಯಕ್ಕೆ ತಲೆ | ಸೋಮಾರಿ | ಪಕ್ಷಗಳಲ್ಲಿ ಒಲವು |
| | ಕೊಡುವ | ಅರ್ಥಮಾಡಿಕೊಳ್ಳ | ಜೂಜುಗಾರ |
| ಉತ್ಸಾಹಿ | ಸಂಘಟಕ | ಪ್ರತಿಫಲಿಸುವ | ಧೈರ್ಯ |

| | | | |
|---|---|---|---|
| ಕೋಮಲ | ಅಸಹನೆಯ | ಇಂದ್ರಿಯ | ಚಡಪಡಿಸದ |
| | | ಸಂವೇದನೆಯ | ಗಟ್ಟಿಧ್ವನಿಯ |
| ಉದಾತ್ತಸ್ವಭಾವದ | ಮಹತ್ವಾಕಾಂಕ್ಷೆಯ | ಚೊಕ್ಕತಿವಲ್ಲದ | ದುಡಕಿನ |
| ಒಂಟಿ ತೋಳ | ಒರಟಾಧ | ಚಡಪಡಿಸುವ | |
| ಸಿಡಕಿನ | ಅಧಿಕಾರ | | |
| | ಚಲಾಯಿಸುವ | | |
| ನಿಶ್ಚಿಂತತೆ | ಧೈರ್ಯಸ್ಥನಾದ | | |
| ಮುಚ್ಚಿಡುವ | ಪ್ರಕ್ಷುಬ್ಧ | | |

ಈಗ ನಿಮ್ಮ ಗುರುತುಗಳನ್ನು ಸರಿನೋಡಿ- ಯಾವ ಅಂಕಣ ಅತಿ ಹೆಚ್ಚಿನ ಅಂಶಗಳನ್ನು ಹೊಂದಿರುತ್ತದೆ ಎಂಬುದನ್ನು ನೋಡಿ. ಅದು ಹೀಗಾದರೆ.

## ಎರಡನೆಯ ಅಂಕಣ

ನಿರ್ಬಲರಿಗೆ ಹೆಚ್ಚು ಸಮಯ ನೀಡಲಾರದಂಥ, ಬಲಶಾಲಿ, ಶಕ್ತ ಪ್ರಭಾವಯುಕ್ತ ಮಾದರಿ ಮನುಷ್ಯ. ನೀವೊಬ್ಬರು, ಮುಂದೆನುಗ್ಗುವ, ಸಂಘಟಿಸುವಂಥ ವ್ಯಕ್ತಿ ಕೂಡ. ಹಿಡಿದ ಕೆಲಸವನ್ನು ಮಾಡಿ ಮುಗಿಸುವ ಸ್ವಭಾವ ಮತ್ತು ಕೆಲಸಗಳು ಹೇಗಿದ್ದರೆ ಹಾಗೆಯೇ ಬಿದ್ದಿರಲಿ ಎಂದು ಬಿಟ್ಟು ಬಿಡುವುದರಿಂದ ನಿಮಗೆ ಎಂದೂ ಸುಖವಿರುವುದಿಲ್ಲ. ಸಹನೆಹೊಂದಲು ಕಷ್ಟ, ತನ್ನಷ್ಟಕ್ಕೆ ತಾನೆ ಬದುಕಲಿ, ಪ್ರಪಂಚದಲ್ಲಿ ತಪ್ಪು ಏನು ಎಂಬುದನ್ನು ಸ್ಪಷ್ಟವಾಗಿ ನೋಡಬಲ್ಲಿರಿ. ನಿಮ್ಮದಾರಿಗೆ ನಿಮ್ಮನ್ನು ಬಿಟ್ಟರೆ ಅದನ್ನು ಸುಲಭವಾಗಿ ಸರಿದಾರಿಯಲ್ಲಿ ನಡಸಬಲ್ಲೆವೆಂಬ ದೃಢವಿಶ್ವಾಸವನ್ನು ಹೊಂದಿರುವಿರಿ.

## ಮೂರನೆಯ ಅಂಕಣ

ನೀವು ಶ್ರದ್ಧಾಯುಕ್ತ ಶ್ರಮ ಸಹಿಷ್ಣು ಮಾದರಿಯವರು ಅಂಥವರು ಕೊನೆಯಲ್ಲಿ ಸಾಮಾನ್ಯವಾಗಿ ಅಲ್ಲಿಗೆ ತಲುಪುತ್ತಾರೆ. ಆದರೆ, ಅದು ಔದಾಸೀನ್ಯದ ಪ್ರಯತ್ನಗಳ ಮತ್ತು

ನಿರಾಶೆಗಳ ವರ್ಷಗಳ ನಂತರ ಮಾತ್ರ. ನಿಮ್ಮಂಥ ಜನ, ಬದುಕು ಅದು ಇರುವ ಹಾಗೆಯಲ್ಲಿ ಸ್ವೀಕರಿಸಿದೆ ಪ್ರಪಂಚ ಎಂದಿನಂತೆ ಸುತ್ತುತ್ತಿರುವಂತೆಯೇ ಇರಲಿ ಎಂದು ಇಷ್ಟಪಡುತ್ತೀರಿ. ಮುಂದಕ್ಕೆ ಮತ್ತು ಎತ್ತರಕ್ಕೆ (ನೀವು ಆಶಿಸುತ್ತೀರಿ) ಹೋಗಲು ಹೋರಾಡುವ ನಿಮ್ಮ ಅಪೇಕ್ಷೆಯಿಂದ ಎಂದಿಗೂ ಸ್ವಲ್ಪವನ್ನು ಸಾಧಿಸುವುದಾಗುವುದಿಲ್ಲ.

## ನಾಲ್ಕನೆಯ ಅಂಕಣ

ವಯಸ್ಸಾದಂತೆ ಶಾಂತಿ ಸಮಾಧಾನ ಸಾಧಿಸುವ ಪ್ರವೃತ್ತಿಯನ್ನು ಹೊಂದಿದ್ದರೂ ನೀವು ಹರ್ಷವಂತರು ಮತ್ತು ಬಾಹ್ಯ ಪ್ರವೃತ್ತರು. ಯಾವುದೂ ನಿಮ್ಮನ್ನು ನಿಜವಾಗಿ ಚಿಂತೆಗೀಡು ಮಾಡುವುದಿಲ್ಲ. ಮತ್ತು ಯಾವುದೂ ಮತ್ತು ಯಾರೊಬ್ಬರೂ ನಿಮ್ಮನ್ನು ಬದುಕಿನ ಒಂದು ವಿಶಿಷ್ಟ ದಾರಿಯಲ್ಲಿ ಕಟ್ಟಿ ಕೆಡಹುದಿಲ್ಲ. ನೀವು ಬದುಕನ್ನು ಭೋಗಿಸುತ್ತೀರಿ. ಬಹುಶ: ಇತರರೂ ಭೋಗಿಸುವಂತೆ ಸಹಾಯ ನೀಡುವದೇ ನಿಮ್ಮ ಅತ್ಯಂತ ಹೆಚ್ಚಿನ ಸುಖ. ನಿಮ್ಮಂಥ ಜನ ಬಹು ದೊಡ್ಡದು, ಆದ್ದರಿಂದ ನೀವು ಪೂರ್ಣವಾಗಿ ಬೆಳೆಯಲು ಕಷ್ಟವೆಂದು ಭಾವಿಸುತ್ತೀರಿ ಮತ್ತು ಬದುಕನ್ನು ಹುಡುಗಾಟದಿಂದ ನೋಡುವುದು, ನಿಮ್ಮ ದೃಷ್ಟಿ ಎಚ್ಚರಿಕೆ ವಹಿಸದಿದ್ದರೆ ಬದುಕಿನ ಶ್ರೇಷ್ಠ ಆನಂದಗಳಲ್ಲಿ ಹಲವನ್ನು ನೀವು ಕಳೆದುಕೊಳ್ಳುವ ಸಂಭವವೇ ಹೆಚ್ಚು.

## 4. ನೀವು ಆಶಾವಾದಿಗಳೇ ?

ಪ್ರತಿಯೊಂದು ತಪ್ಪಾಗಿ ನಡೆಯುತ್ತಿದೆ ಎಂದು ಕಂಡಾಗ ನಮ್ಮಲ್ಲಿ ಎಲ್ಲರೂ ಉದಾಸದ ಅವಧಿಗಳಲ್ಲಿ ಕೆಲವು ದಿನಗಳನ್ನು ಅನುಭವಿಸಿಯೇ ತೀರುತ್ತೇವೆ. ಆದಾದಾಗಲೇ ಆರೋಗ್ಯಕರ ಆಶಾವಾದ ನಮ್ಮ ನೆರವಿಗೆ ಬರುತ್ತದೆ. ಆಗ ಉತ್ತಮ ಕಾಲದ ಕಡೆಗೆ ನೋಡಲು ನಮಗೆ ಅವು ಸಹಾಯಮಾಡುತ್ತವೆ. ಆರೋಗ್ಯದಾಯಕ ಆಶಾವಾದ, ನಾವು ಕಣ್ಣು ಮುಚ್ಚಿಕೊಂಡು, ಕನಸಿನ ರಾಜ್ಯದಲ್ಲಿ ವಿಹರಿಸುವುದು ಎಂದು ಅರ್ಥವಲ್ಲ. ಅದು ಸತ್ಯಸ್ಥಿತಿಯನ್ನು ಪುನಃ ಪ್ರಯತ್ನಿಸಲು ಮುಂದುವರಿಯುವಂತೆ ಕೇವಲ ಪೇರೇಪಿಸುತ್ತದೆ.

ಇಲ್ಲೊಂದು 'ಸ್ವಪರೀಕ್ಷಣೆ' ನಿಮಗಿದೆ. ಕೊನೆಯಲ್ಲಿ ತಿರುಪುಕ್ಕೆಯನ್ನು ತಿರುಗಿಸುವುದಕ್ಕೆ ಮೊದಲು ಹೊದು ಅಥವಾ ಇಲ್ಲ ಎಂದು ಉತ್ತರಿಸಿ ಈ ಪ್ರಶ್ನೆಗಳಿಗೆ

ಹೌದು/ಇಲ್ಲ

1. ಜೀವನವನ್ನು ಒಂದು ಸಾಹಸ ಎಂದು ನೀವು ಆದರಿಸುವಿರಾ ? ಮತ್ತು ಹೊಸ ಜನವನ್ನು, ಬದಲಾವಣೆಯನ್ನು, ಅವಕಾಶಗಳನ್ನು ಹೆಚ್ಚಿನ ಅನುಭವಕ್ಕಾಗಿ ಸ್ವಾಗತಿಸುವಿರಾ?

ಹೌದು/ಇಲ್ಲ

2. ಅನಿವಾರ್ಯವಾದುದನ್ನು ಸಂತೋಷವಾಗಿ ಸ್ವೀಕರಿಸುವಿರಾ ? ಮುಂದೆ ಉತ್ತಮ ಅದೃಷ್ಟ ಲಭಿಸಲಿ ಎಂದು ಹೇಳುವಿರಾ ?

ಹೌದು/ಇಲ್ಲ

3. ನಿಮ್ಮ ಆಶೀರ್ವಾದಗಳನ್ನು ಗುಣಿಸಿಡು ಅಭ್ಯಾಸವನ್ನು ಕೈಕೊಳ್ಳವಿರಾ ? ಮತ್ತು ಅವುಗಳಿಗೆ ಅಭಾರಿಯಾಗಿರುವಿರಾ ? ಹೌದು/ಇಲ್ಲ

4. ನಿಮ್ಮ ಒಳ್ಳೆಯ ಗುಣಗಳು ಯಾವುವು ಎಂದು ನಿಮಗೆ ತಿಳಿದಿದೆಯೆ ?

ಹೌದು/ಇಲ್ಲ

5. ಯಾವುದೇ ಬೇರೆಯಾದುದನ್ನು ಪ್ರಯತ್ನಿಸುವ ಅವಕಾಶನ್ನು, ನೀವು ಸ್ವಾಗತಿಸುವಿರಾ? ಹೌದು/ಇಲ್ಲ

6. ನೀವು ಕೊಟ್ಟ ಕೊನೆಗೆ ಸಾಧಿಸಬಲ್ಲೆನೆಂದು ಆಶಾದಾಯಕವಾಗಿ ಭಾವಿಸುವ ಯಾವೊಂದು ಮಹತ್ವಾಕಾಂಕ್ಷೆಯುತ್ತ ಗುರಿಯನ್ನಿಟ್ಟು ಕೊಂಡಿರುವಿರಾ ?

ಹೌದು/ಇಲ್ಲ

7. ಕಷ್ಟಗಳು ಮತ್ತು ಪ್ರತಿಬಂಧುಗಳು ನಿಮ್ಮ ಧೈರ್ಯಕ್ಕೆ ಉತ್ತೇಜನ ಕೊಡುವುದಕ್ಕೆ ಮತ್ತು ನಿಮ್ಮ ಸ್ಥೈರ್ಯಕ್ಕೆ ಸವಾಲು ಹಾಕುವುದೇ ಹೌದು/ಇಲ್ಲ

8. ನೀವು ಮೊದಲು ಯಶಸ್ವಿಯಾಗದಿದ್ದರೆ 'ಮರಳಿಯತ್ನವ ಮಾಡು, ಮರಳಿಯತ್ನವ ಮಾಡು ಮರಳಿಯತ್ನ ಮಾಡು ಎಂಬ ಹೇಳಿಕೆಯ ಸತ್ಯವನ್ನು ನೀವು ನಿಜವಾಗಿ ನಂಬುತ್ತೀರಾ?

ಹೌದು/ಇಲ್ಲ

9. ನಿಮ್ಮ ತಪ್ಪುಗಳನ್ನು ಕುರಿತು ನೀವೇ ನಗುತ್ತೀರಾ ? ಮತ್ತು ಅವುಗಳ ಬಗ್ಗೆ ಹಾಸ್ಯ ಚಟಾಕಿ ಹಾರಿಸುತ್ತೀರಾ ? ಹೌದು/ಇಲ್ಲ

10. ನೀವು ಪ್ರಯತ್ನಿಸುವುದಕ್ಕೆ ಸಿದ್ಧವಾಗಿದ್ದೀರಾ ಮತ್ತು ಇತರರು ಪ್ರಯತ್ನಿಸುವುದಕ್ಕೆ ಪ್ರೋತ್ಸಾಹ ಕೊಡುತ್ತೀರಾ ? ಇಲ್ಲವೇ ಪ್ರಯತ್ನಿಸದೆ ಇರುವುದೇ ಉತ್ತಮ ಎಂಬುದಕ್ಕೆ ಕಾರಣಗಳನ್ನು ಕಂಡು ಹಿಡಿಯುತ್ತೀರಾ ? ಹೌದು/ಇಲ್ಲ

11. ಅತಿ ಹೆಚ್ಚಿನ ಜನ ನಿಮ್ಮನ್ನು ಇಷ್ಟಪಡುತ್ತಾರೆ ಎಂಬುದರ ಬಗ್ಗೆ ನೀವು ನಂಬಿಕೆ ಹೊಂದಿದ್ದೀರಾ ? ಮತ್ತು ನೀವು ಒಂದು ಸಾರ್ಥಕವಾದ ಕಾರ್ಯವೊಂದನ್ನು ಮಾಡುತ್ತಿರುವ ವಿಶಿಷ್ಟ ವ್ಯಕ್ತಿಯೆಂದು ಅವರು ಆದರಿಸುತ್ತಾರೆಯೆ ? ಹೌದು/ಇಲ್ಲ

12. ನೀವೊಬ್ಬ ಆಸಕ್ತ ವ್ಯಕ್ತಿ ಎಂದು ನೀವು ಯೋಚಿಸುತ್ತೀರಾ ? ಮತ್ತು ನೀವುಮಾಡುತ್ತಿರುವುದು ನಿಜವಾಗಿ ಯೋಗ್ಯವಾದದ್ದೆಂದು ತಿಳಿದಿದ್ದೀರಾ? ಹೌದು/ಇಲ್ಲ

13. ನೀವು ಹೆಚ್ಚು ಜನರನ್ನು ಬಲ್ಲಿರಾ ? ಅವರು ನಮಗೆ ಆಸಕ್ತರಾಗಿದ್ದಾರೆಯೇ ? ಅವರನ್ನು ತಿಳಿದುಕೊಳ್ಳುವುದು ಯೋಗ್ಯವೆ ? ಹೌದು/ಇಲ್ಲ

14. ಜನದಿಂದ ಉತ್ತಮಿಕೆ ಪಡೆಯುವುದನ್ನು ಮತ್ತು ಅವರಲ್ಲಿ ನಂಬಿಕೆಯಿಡುವುದನ್ನು ಕ್ಷಮಿಸುವುದು ಮತ್ತು ಮರೆಯುವುದು ನಿಮಗೆ ಸುಲಭ ಅಲ್ಲವೆ? ಹೌದು/ಇಲ್ಲ

15. ಜನದೊಡನೆ ಅವರ ಜೊತೆಯಲ್ಲಿ ಆನಂದಿಸುವ ಆಸೆಯಿಂದ ಬೆರೆಯುತ್ತೀರಾ ?

ಹೌದು/ಇಲ್ಲ

16. ನೀವು ಗೆಲ್ಲಬೇಕು ಅಥವಾ ನಿಮ್ಮ ವಾದಾಂಶವನ್ನು ಸ್ಥಾಪಿಸಿಬೇಕು, ಈ ವಿಷಯವನ್ನು ಗಮನಿಸದೆ ನೀವು ಚರ್ಚೆಯನ್ನು ಆನಂದಿಸುತ್ತೀರಾ ? ಹೌದು/ಇಲ್ಲ

17. ಕೆಲಸಗಳನ್ನು ಮಾಡಿಸುವುದರಲ್ಲಿ ನೀವು ಇತರರಷ್ಟೇ ಸಮರ್ಥರು ಎಂದು ನೀವು ಭಾವಿಸುತ್ತೀರಾ ? ಹೌದು/ಇಲ್ಲ

18. ವಿಮರ್ಶೆಯನ್ನು ನೀವು ಸಂತೋಷದಿಂದ ಸ್ವೀಕರಿಸುತ್ತೀರಾ ? ಮತ್ತು ಅದನ್ನು ಭಿನ್ನತೆಗೆ ಒಳಗಾಗದೆ ರಚನಾತ್ಮಕವಾಗಿ ಬಳಸುತ್ತೀರಾ ? ಹೌದು/ಇಲ್ಲ

19. ನಿಮಗೆ ನಂಬಿಕೆ ಮಾಡಿದ ಕೆಲಸವನ್ನು ನಿಮ್ಮ ಸುತ್ತಮುತ್ತಲಿನವರು ಆ ಬಗ್ಗೆ ಸಂಶಯಾತ್ಮಕವಾಗಿದ್ದರೂ ಅದನ್ನು ನೀವುಮುಂದುವರಿಸುತ್ತಲೇ ಹೋಗುತ್ತೀರಾ ?

ಹೌದು/ಇಲ್ಲ

20. ನೀವು ಕೈಕೊಳ್ಳುವ ಪ್ರಾಯೋಜನೆಗಳ ಯಶಸ್ವೀ ಅಂತ್ಯವನ್ನು ಮತ್ತು ನೀವು ಕೈಕೊಳ್ಳುವ ತೀರ್ಮಾನಗಳನ್ನು ನೀವು ಸಾಮಾನ್ಯವಾಗಿ ಮುಂಗಾಣುತ್ತೀರಾ ? ಹೌದು/ಇಲ್ಲ

ಗುಣಗಣನೆ

ಪ್ರತಿಯೊಂದು 'ಹೌದು'ಕ್ಕೆ 5 ಅಂಕಣಗಳನ್ನು ಲೆಕ್ಕ ಹಾಕಿ. 90-100 ರವರೆಗಿನ ಗಣನೆ ಬಹು ಶ್ರೇಷ್ಠ. 80 ಅಧಿಕ; ತುಂಬು ಒಳ್ಳೆಯದು. 70 ಅಧಿಕ ಒಳ್ಳೆಯದು. 60 ಅಧಿಕ ತೃಪ್ತಿಕರ. 50 ಅಧಿಕರು, 50ಕ್ಕೆ ಕಡಿಮೆ ಅತೃಪ್ತಿಕರ ನಾಸ್ತಿಕವಾಗಿ ಬಹು ಕೆಟ್ಟದ್ದನ್ನು ನಿರೀಕ್ಷಿಸುತ್ತಾನೆ, ಏಕೆಂದರೆ ಅವನು ಯಾವತ್ತೂ ತನ್ನನ್ನೇ ಕುರಿತು ಕುತೂಹಲಯಾಗಿರುತ್ತಾನೆ ಮತ್ತು ಏನೋ ತಪ್ಪಾಗುತ್ತದೆ ಎಂದು ಹೆದರುತ್ತಲೇ ಇರುತ್ತಾನೆ. ಅವನು ಎಷ್ಟು ಸಂಕಟಪಟ್ಟು ಕೊಳ್ಳುತ್ತಾನೆ ಎಂದರೆ ಅವನು ಸಾಮಾನ್ಯವಾಗಿ, ಅವನು ಮಾಡುವ ಮತ್ತು ಜನಗಳನ್ನು ನಡೆಸಿಕೊಳ್ಳುವ ಕೆಲಸಗಳಲ್ಲಿ ಎಡವಟ್ಟು, ಹೆಚ್ಚಿನ ಕೂತುಹಲಿಕ ತಪ್ಪುಗಳನ್ನು, ಅರಿಷ್ಟಗಳನ್ನು ಉಂಟು ಮಾಡುತ್ತದೆ. ತದ್ವಿರುದ್ಧವಾಗಿ ಅಶಾವಾದಿತ್ವವಾಗಿರುವುದಕ್ಕಾಗಿ ನಾವು ಇತರ ಜನರೊಡನೆ ಮತ್ತು ನಮ್ಮ ಸುತ್ತ ಮುತ್ತ ಏನು ನಡೆಯುತ್ತಿದೆ ಎಂಬುದರ ಬಗ್ಗೆ ನಮಗೆ ಹೆಚ್ಚು ಹೆಚ್ಚಾಗಿ ಸಂಬಂಧ ಅಗತ್ಯವಾಗಿದೆ.

ಇತರರೊಡನೆ ಚಟುವಟಿಕೆಗಳಲ್ಲಿ ಭಾಗವಹಿಸುವುದು ಬದುಕಿಗಾಗಿ, ನಾವು ನಮ್ಮ ತೊಡರು ಹೆಜ್ಜೆಗಳಲ್ಲಿ ಸಂಬಂಧಿಸುವ ಅಡಚಣೆಗಳನ್ನು ಕೈಕೊಳ್ಳುವುದಕ್ಕೆ- ಅಂಥ ಆಸಕ್ತಿ ಮತ್ತು ಅಭಿರುಚಿಯನ್ನು ತಂದು ಕೊಡುತ್ತದೆ.

## 5. ನೀವು ಎಷ್ಟರಮಟ್ಟಿಗೆ ಯಶಸ್ವಿಗಳು ?

ವ್ಯಾಪಾರ ಅಥವಾ ಉದ್ಯೋಗದ ಜೀವನದಲ್ಲಿ ಯಶಸ್ವಿಯಾಗಿರುವಂಥ ಜನರನ್ನು ಆರಿಸಿಕೊಳ್ಳುವುದರಲ್ಲಿ ಸಾಮರ್ಥ್ಯ ಪಡೆಯುವುದಕ್ಕೆ ಬಹಳಷ್ಟು ಮುಂಚೆ ನಾವು ಜನರ ಒಂದು ತಂಡವನ್ನು ತಿಳಿದುಕೊಳ್ಳಬೇಕಾಗಿಲ್ಲ.

ಪ್ರಾರಂಭಿಸುವುದಕ್ಕೆ ಮುಂಚೆ, ತಾವು ಯೋಗ್ಯವಾದ ಕೆಲಸವನ್ನು ಮಾಡುತ್ತಿದ್ದೇವೆ ಎಂದು ಅವರು ತಪ್ಪದೆ ನಂಬಿರುತ್ತಾರೆ. ಇತರ ಯಶಸ್ವಿ ಲಕ್ಷಣಗಳನ್ನು ಬಹಿರಂಗಗೊಳಿಸಿರುತ್ತಾರೆ.

ಇಲ್ಲೊಂದು ಸಣ್ಣ ಪರೀಕ್ಷೆಯಿದೆ. ಯಶಸ್ವಿ ಜನರಲ್ಲಿ ನಾವು ಸಾಮಾನ್ಯವಾಗಿ ಕಾಣುವ ಗುಣಗಳ ಮೇಲೆ ಅದು ಬೆಳಕುಚೆಲುತ್ತದೆ. ಸುಮ್ಮನೆ ಹೌದು ಅಥವಾ ಇಲ್ಲ ಎಂಬ ಉತ್ತರಗಳನ್ನು ಆ ಪ್ರಶ್ನೆಗಳಿಗೆ ಕೊನೆಗೆ, ಅದರ ತಿರುವು ಕೈಯನ್ನು ಪಡೆಯುವುದಕ್ಕೆ ಮುಂಚೆ ಕೊಡಿ.

1. ಬದುಕಿನಲ್ಲಿ ನಿಮಗೆ ನಿರ್ದಿಷ್ಟ ಗುರಿ ಇದೆಯೇ? ಹೌದು/ಇಲ್ಲ

2. ನೀವು ನಿಮ್ಮ ಗುರಿಯನ್ನು ಸಾಧಿಸಲು ಹೇಗೆ ಉದ್ದೇಶಿಸಿದ್ದೀರಿ ಎಂಬುದನ್ನು ಮೆಟ್ಟಲು ಮೆಟ್ಟಲಾಗಿ ಲೆಕ್ಕಹಾಕಿದ್ದೀರಾ? ಹೌದು/ಇಲ್ಲ

3. ಯಾವುದೇ ಒಂದು ವಿಶೇಷ ಶಿಕ್ಷಣ ಅಗತ್ಯವಿಲ್ಲವೆಂದು ಭಾವಿಸುತ್ತೀರಾ? ಹೌದು/ಇಲ್ಲ

4. ನೀವು ಕೆಲಸ ಮಾಡದೆ ಇರುವಾಗ ಅಥವಾ ವ್ಯಾಸಂಗದಲ್ಲಿಲ್ಲದ್ದಾಗಲೂ ಕೂಡ ಎಲ್ಲ ಕಾಲದಲ್ಲಿ ನೀವು ನಿಮ್ಮ ಗುರಿಯತ್ತ ಆಸಕ್ತಿ ಹೊಂದಿರುತ್ತೀರಾ? ಹೌದು/ಇಲ್ಲ

5. ಕೇವಲ ಕನಿಷ್ಠದಷ್ಟನ್ನು ಸುಮ್ಮನೆ ಮಾಡುವಷ್ಟರಿಂದ ನೀವು ತೃಪ್ತರೆ? ಹೌದು/ಇಲ್ಲ

6. ನಿಮ್ಮ ಜ್ಞಾನವನ್ನು ವಿಸ್ತರಿಸಿಕೊಳ್ಳಲು, ನಿಮ್ಮ ಅನುಭವವನ್ನು ದೊಡ್ಡದಾಗ ಮಾಡಿಕೊಳ್ಳಲು ಅಥವಾ ನಿಮ್ಮ ತಂತ್ರವನ್ನು ಅಭ್ಯಾಸಮಾಡಿಕೊಳ್ಳಲು ದೊರಕುವ ಪ್ರತಿಯೊಂದು ಅವಕಾಶನ್ನು ನೀವು ಹಿಡಿದುಕೊಳ್ಳುವಿರಾ? ಹೌದು/ಇಲ್ಲ

7. ನನಗೆ ಎಲ್ಲ ತಿಳಿದಿದೆ, ಇತರರಿಂದ ನಾನೇನು ಕಲಿಯಬೇಕಾದುದಿಲ್ಲ ಎಂದು ನೀವು ಯೋಚಿಸುತ್ತೀರಾ? ಹೌದು/ಇಲ್ಲ

8. ಅವಶ್ಯಬಿದ್ದಾಗ ಬುದ್ಧಿವಂತಿಕೆಯ ಪ್ರಶ್ನೆಗಳನ್ನು ಕೇಳುತ್ತೀರಾ?

ಹೌದು/ಇಲ್ಲ

9. ನೇರವಾಗುವ ಮತ್ತು ನಾಶಕಾರಣ ವಿಮರ್ಶೆಗಳಲ್ಲಿನ ಅಂತರವನ್ನು ಭೇದಿಸುವುದು ನಿಮಗೆ ಸಹಾಯಕವೆಂದು ಭಾವಿಸುತ್ತೀರಾ ? ಹೌದು/ಇಲ್ಲ

10. ನೀವು ತಪ್ಪುಗಳನ್ನು ಮಾಡಿದ್ದಾಗ ಅವುಗಳನ್ನು ಸರಿಮಾಡಿಕೊಳ್ಳುವುದು ತುಂಬ ಕಷ್ಟವೆಂದು ಕಾಣುತ್ತೀರಾ ? ಹೌದು/ಇಲ್ಲ

11. ಸ್ಪರ್ಧೆ ತೀಕ್ಷ್ಣವಾಗಿರುವಾಗ ನಿಮಗೆ ನಿಮ್ಮಲ್ಲಿ ಸಾಕಷ್ಟು ಭರವಸೆ ಇರುತ್ತದೆಯೆ ?

ಹೌದು/ಇಲ್ಲ

12. ನಿಮ್ಮ ಮೇಲೆ ಮೇಲ್ವಿಚಾರಣೆಯಿರುವಾಗ ಮಾತ್ರ ನೀವು ಕೆಲಸ ಮಾಡಬಲ್ಲಿರಾ ?

ಹೌದು/ಇಲ್ಲ

13. ಜನ ನಿಮ್ಮ ಮೇಲೆ ಯಾವಾಗಲೂ ಅವಲಂಬಿಸಿರಬಲ್ಲರೆ ? ಹೌದು/ಇಲ್ಲ

14. ಸುಖಕರವಲ್ಲದ ಅಥವಾ ಬೇಸರಬರಿಸುವ ಕೆಲಸದಲ್ಲಿ ಸಹಕಾರ ನೀಡುವುದು ನಿಮಗೆ ಕಷ್ಟವಾಗಿ ಕಾಣಿಸುತ್ತದೆಯೇ ? ಹೌದು/ಇಲ್ಲ

15. ನೀವು ಹೊಣೆಗಾರಿಕೆಯನ್ನು ಸ್ವಾಗತಿಸುತ್ತೀರಾ ? ಜನ ನಿಮ್ಮನ್ನು ಅವಲಂಬಿಸಿದ್ದಾರೆ ಎಂಬ ಭಾವನೆಯನ್ನು ಇಷ್ಟಪಡುತ್ತೀರಾ ? ಹೌದು/ಇಲ್ಲ

16. ತೊಂದರೆಗಳಿಂದ ಮತ್ತು ಅಡಚಣೆಗಳಿಂದ (ಎಡರು ತೊಡರುಗಳಿಂದ) ನೀವು ನಿರುತ್ಸಾಹ ಹೊಂದುತ್ತೀರಾ ? ಹೌದು/ಇಲ್ಲ

17. ಮೊದಲಿಗೆ ನಿಮ್ಮ ಸ್ವಂತ ಹಿತವನ್ನೆ ಯಾವಾಗಲೂ ಯೋಚಿಸುತ್ತಿರುತ್ತೀರಾ ?

ಹೌದು/ಇಲ್ಲ

18. ಸಮಂಜಸ ಅಪಾಯಗಳನ್ನು ನೀವು ಕೈಕೊಳ್ಳಲು ಸಿದ್ಧರಾಗಿರುತ್ತೀರಾ ?

ಹೌದು/ಇಲ್ಲ

19. ನೀವು ತೀರ್ಮಾನವೊಂದನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ನಿಮ್ಮ ದೌರ್ಬಲ್ಯಗಳ

ಮತ್ತು ಮಿತಿಗಳ ಬಗ್ಗೆ ನೀವು ಅಜ್ಞಾನಿಯೇ ? ಹೌದು/ಇಲ್ಲ

20. ನೀವು ತೀರ್ಮಾನವನ್ನು ಕೈಗೊಂಡ ಮೇಲೆ, ಅದರ ಬಗ್ಗೆ ಚಿಂತಿಸದೆ ನಿಮ್ಮ ತೀರ್ಮಾನದಂತೆ ಮುಂದೆ ಹೋಗಬಲ್ಲಿರಾ ? ಹೌದು/ಇಲ್ಲ

## ಅಂಕಗಣನೆ

1, 2, 4, 6, 8, 11, 13, 18 ಮತ್ತು 20ಕ್ಕೆ ಕೊಟ್ಟ ಪ್ರತಿಯೊಂದು 'ಹೌದು 5 ಅಂಕಗಳನ್ನು ಗುಣಿಸಿ. 3, 5, 7, 9, 10, 12, 14, 16, 17, ಮತುತ 19ಕ್ಕೆ ಕೊಟ್ಟ ಪ್ರತಿಯೊಂದು 'ಇಲ್ಲ'ಕ್ಕೂ 5 ಅಂಕಗಳನ್ನು ಗುಣಿಸಿ.

## 6. ನಿಮ್ಮ ಧರ್ಮದ ಬಗ್ಗೆ ನಿಮಗೆ ನಂಬಿಕೆ ಇದೆಯೇ

ಬೇರೆಯವರು ಏನಾದರೂ ಹೇಳಲಿ ನಮ್ಮ ಬದುಕಿನಲ್ಲಿ ಧರ್ಮ ಒಂದು ''ಬೇಕೇಬೇಕಾದ್ದು''. ನಿಮ್ಮ ಸುತ್ತಲೂ ನೋಡಿ ''ಧರ್ಮ ಹೊಂದಿರುವ ಅನೇಕ ಜನ ಇದ್ದಾರೆ, ಆದರೆ ಅದು ಹೆಸರಿಗೆ ಮಾತ್ರ. ಏನು ಮಾಡಬೇಕು ಎಂಬುದು ಅವರಿಗೆ ತಿಳಿದಿಲ್ಲ.

ಜನ ಅನೇಕ ಸಲ ಹೇಳುವುದನ್ನು ನಾನು ಕೇಳಿದ್ದೇನೆ. ''ನಾನು ನನ್ನ ಧರ್ಮವನ್ನು, ಅದನ್ನು ಆಚರಿಸುತ್ತಿರುವ ರೀತಿಯನ್ನು ಕಂಡು ದ್ವೇಷಿಸುತ್ತೇನೆ'' ''ನನ್ನ ಪ್ರಕಾರ, ನನ್ನ ಧರ್ಮ ಅನೇಕ ಧಾರ್ಮಿಕ ಆಚರಣೆಗಳಿಂದ ಮತ್ತು ಉತ್ಸವಗಳಿಂದ ತುಂಬಿದೆ'' ''ಧರ್ಮ ಕ್ರಮಬದ್ಧವಾಗಿ ಮತ್ತು ಯಾಂತ್ರಿಕವಾಗಿ ಬದುಕಲು ಮಾತ್ರ ನಮ್ಮನ್ನು ಎಳೆದೊಯ್ಯುತ್ತದೆ. ಅಷ್ಟೊ ಅಲ್ಲದೆ ಅದಕ್ಕಿಂತ ಹೆಚ್ಚಿನದೇನು ಇಲ್ಲ'' ''ನಮ್ಮ ಹಿರಿಯರು ನಮಗೆ ಧರ್ಮದೀಕ್ಷೆಕೊಟ್ಟದ್ದರಿಂದ ನಾನು ಕ್ರೈಸ್ತ ಅಥವಾ ಹಿಂದು ಅಥವಾ ಮಹಮ್ಮದೀಯ ಇತ್ಯಾದಿ ಅಷ್ಟೇ. ''ನಾನು ಭಾನುವಾರಗಳಂದು ಚರ್ಚಿಗೆ ಸೇವೆಗೆ ಪೂಜೆಗೆ ಹೋಗುತ್ತೇನೆ, ಏಕೆಂದರೆ ನನ್ನನ್ನು ಬಲವಂತ ಮಾಡುವುದರಿಂದ, ''ಧರ್ಮ ಎಂದರೆ ನನಗೆ ಏನು ಅಲ್ಲ'' ಜನ ಏಕೆ ಇಂಥ ಮೇಲಿನ ಹೇಳಿಕೆಗಳನ್ನು ಮಾಡುತ್ತಾರೆಯೋ ? ಬಹುಶಃ ಧರ್ಮದ ಬಗ್ಗೆ ಅವರಿಗೆ ಇನ್ನು ನಂಬಿಕೆ ಹುಟ್ಟಿಲ್ಲದಿರುವುದೇ ಕಾರಣ ಇರಬೇಕು.

ನೀವು ನಿಮ್ಮ ಧರ್ಮವನ್ನು ನಂಬಿದ್ದೀರಾ ಎನ್ನುವುದನ್ನು ಮನವರಿಕೆ ಮಾಡಿಕೊಳ್ಳಲು ಇಲ್ಲೊಂದು ಸಣ್ಣ 'ಪರೀಕ್ಷೆಯಿದೆ. ಆ ಪ್ರಯೋಗವನ್ನು ನಿಮ್ಮ ಮೇಲೆಯೋ ಮಾಡಿಕೊಳ್ಳಿ,

ಪ್ರತಿಯೊಂದು ಪ್ರಶ್ನೆಗೂ ಹೌದು ಅಥವಾ ಇಲ್ಲ ಎಂಬ ಎರಡಕ್ಷರದ ಉತ್ತರವನ್ನು ಕೊಡಿ. ಕಡೆಗೆ ಅಂತಿಮವಾಗಿ ಕೊನೆಯಿಲ್ಲ ಕೊಟ್ಟಿರುವ ಫಲಿತಾಂಶಗಳೊಡನೆ ಸರಿನೋಡಿ.

1. ನಿಮ್ಮ ಧರ್ಮದ ಬಗ್ಗೆ ಕೆಲವು ವಿವರಗಳನ್ನು ಇತರ ಜನರೊಡನೆ ಚರ್ಚೆಮಾಡಲು ನಿಮಗೆ ಸುಲಭವೆಂದು ಕಾಣುತ್ತದೆಯೇ? ಹೌದು/ಇಲ್ಲ

2. ನಿಮ್ಮ ಕುಟುಂಬದ ವಾತಾವರಣ ನಿಮ್ಮನ್ನು ಬಲವಂತಪಡಿಸುತ್ತದೆ ಎಂಬ ಕಾರಣದಿಂದ ನೀವು ನಿಮ್ಮ ಧರ್ಮಕ್ಕೆ ಸೇರಿದ್ದೀರಾ ? ಹೌದು/ಇಲ್ಲ

3. ನಿಮ್ಮ ಧರ್ಮ ಶಿಫಾರಸು ಮಾಡಿರುವಂತೆ ಪೂಜೆಯಲ್ಲಿ ನೀವು ಸಕ್ರಿಯವಾಗಿ ಭಾಗವಹಿಸುತ್ತೀರಾ ? ಹೌದು/ಇಲ್ಲ

4. ನಿಮ್ಮ ಧರ್ಮ ನಿಮಗೆ ನಿಮ್ಮ ದುಃಖಗಳಲ್ಲಿ, ಸೋಲುಗಳಲ್ಲಿ ಮತ್ತು ನಿರಾಶೆಗಳಲ್ಲಿ ಶಕ್ತಿ, ಸಂತೋಷ ಮತ್ತು ಆತ್ಮಜ್ಞಾನ ಕೊಡುತ್ತದೆ ಎಂದು ಧೈರ್ಯವಾಗಿ ಹೇಳಬಲ್ಲಿರಾ ?

ಹೌದು/ಇಲ್ಲ

5. ನಿಮ್ಮ ಧರ್ಮ ನೀವು ನ್ಯಾಯಯುತವಾದ ಮತ್ತು ಮರ್ಯಾದೆಯುಕ್ತ ಬದುಕಿನ ಮಾರ್ಗದಲ್ಲಿ ಮುಂದುವರಿಯಲು ಸಹಾಯಮಾಡುತ್ತದೆ ಎಂಬುದು ನಿಮಗೆ ಮನವರಿಕೆಯಾಗಿದೆಯೇ ? ಹೌದು/ಇಲ್ಲ

6. ನೀವು ಚರ್ಚಿಗೆ ದೇವಸ್ಥಾನಕ್ಕೆ ನಿಮ್ಮ ತಂದೆತಾಯಿಗಳು ಹಾಗೆ ಮಾಡುತ್ತಾರೆ, ಆದ್ದರಿಂದ ಹಾಗೆ ಮಾಡಬೇಕು ಎಂದು ನಿಮ್ಮ ಶಿಕ್ಷಕರು ಹೇಳುತ್ತಾರೆ ಎಂಬ ಕಾರಣಕ್ಕಾಗಿ ಮಾತ್ರ, ಹೋಗುತ್ತೀರಾ ? ಹೌದು/ಇಲ್ಲ

7. ನಿಮ್ಮ ನಂಬಿಕೆ ಹೆಚ್ಚು ಸುಖಮಯವಾಗಿ, ಸ್ವತಂತ್ರವಾಗಿ, ಹೆಚ್ಚು ಪ್ರೀತಿಯುಕ್ತವಾಗಿ, ಹೆಚ್ಚು ಚುರುಕಾಗಿ ಮತ್ತು ಶಾಂತವಾಗಿ ಇರಲು ನೆರವಾಗುತ್ತದೆಯೇ ? ಹೌದು/ಇಲ್ಲ

8. ನೀವು ನಿಮ್ಮ ಧರ್ಮವನ್ನು ಅದರ ಸತ್ಯತೆಯ ಬಗ್ಗೆ ನಂಬಿಕೆ ಹುಟ್ಟುವವರೆಗೆ ಅದನ್ನು ಬಿಟ್ಟು ಬಿಡಲು ಸಿದ್ಧವಾಗಿದ್ದೀರಾ ? ಹೌದು/ಇಲ್ಲ

9. ಒಳ್ಳೆಯದೆಲ್ಲಕ್ಕೂ ಧರ್ಮವೇ ತಳಪಾಯ ಮತ್ತು ಸಂಪನ್ಮೂಲ ಎಂಬುದರ ಬಗ್ಗೆ

ನಿಮಗೆ ನಂಬಿಕೆಯಿದೆಯೆ ? ಹೌದು/ಇಲ್ಲ

10. ಏನಾದರೂ ಕೆಲವು ತೊಂದರೆಗಳು ತಲೆದೋರಿದರೆ ನಿಮ್ಮ ಜೀವಕ್ಕೆ ಕೊನೆ ತಂದುಕೊಳ್ಳುವ ಭಾವನೆ ಏನಾದರೂ ನಿಮ್ಮ ಮನಸ್ಸಿಗೆ ಬಂದಿದೆಯೇ ? ಹೌದು/ಇಲ್ಲ

11. ನಿಮ್ಮ ಧರ್ಮವನ್ನು ಕುರಿತು ವೈಯಕ್ತವಾಗಿ ಆಳವಾದ ಅಭ್ಯಾಸವನ್ನು ಮಾಡಿದ್ದೇನೆ ಎಂದು ವಾಸ್ತವವಾಗಿ ನೀವು ಹೇಳಬಲ್ಲಿರಾ ? ಹೌದು/ಇಲ್ಲ

12. ನಿಮ್ಮ ಧರ್ಮ ನಿಮಗೆ ಸಂತೋಷದಾಯಕ ಮತ್ತು ಸುಖದಾಯಕ ಮನಸ್ಸಿನ ಚೌಕಟ್ಟನ್ನು ಕೊಟ್ಟಿದೆಯೆ ? ಹೌದು/ಇಲ್ಲ

13. ನೀವು ನಿಮ್ಮ ಧರ್ಮಕ್ಕಿಂತ ಇತರ ಧರ್ಮಗಳ ಪೂಜೆಯನ್ನು ವಿಶೇಷವಾಗಿ ಮೆಚ್ಚಬಲ್ಲಿರಾ ? ಹೌದು/ಇಲ್ಲ

14. ನಿಮ್ಮ ಧರ್ಮದ ಸಂಬಂಧದಲ್ಲಿರುವ ಕೆಟ್ಟ ಅಭಿಪ್ರಾಯಗಳನ್ನು ಅಳಿಸಿ ಹಾಕಿ ಬಿಡಲು ಏನಾದರೂ ಮಾಡಬೇಕು ಎಂದು ನೀವು ನಂಬಿದರೆ, ನೀವು ಅದಕ್ಕೆ ಮುಂದಾಳತ್ವವನ್ನು, ಇತರರು ಹಿಂಜರಿದರೂ, ಕೈಕೊಳ್ಳಬಲ್ಲಿರಾ ? ಹೌದು/ಇಲ್ಲ

15. ಧರ್ಮದ ಮೇಲೆ ಯಾವುದಾದರೂ ಗಂಭೀರವಾದ ಗ್ರಂಥವನ್ನು ಎಂದಾದರೂ ಓದಿದ್ದೀರಾ ? ಹೌದು/ಇಲ್ಲ

16. ಈ ಪ್ರಪಂಚವನ್ನು ಮತ್ತು ಅದರ ಸುಖಭೋಗಗಳನ್ನು ತಿರಸ್ಕರಿಸುವಲ್ಲಿ ನಿಮ್ಮ ಧರ್ಮವನ್ನು ಅದರೊಡನೆ ಸಂಗತವಾಗಿರುವಂತೆ ಮಾಡುತ್ತೀರಾ ? ಹೌದು/ಇಲ್ಲ

17. ನಿಮ್ಮ ಧರ್ಮವನ್ನು ಕುರಿತು ವಿಮರ್ಶೆಯನ್ನು ಮಾಡುವಾಗ ಅದರ ವಿರುದ್ಧ ದೃಢವಾದ ನಿಲುವನ್ನು ಧರಿಸಬಲ್ಲಿರಾ ? ಹೌದು/ಇಲ್ಲ

18. ನಿಮ್ಮ ಧರ್ಮ, ನಿಮ್ಮ ಬದುಕಿಗೆ ಏನನ್ನು ಮಾಡಬೇಕು ಎಂಬ ನಿಮ್ಮ ಬಯಕೆಯ ಬಗ್ಗೆ ನಿಮ್ಮನ್ನು ನೀವೇ ಪ್ರಶ್ನೆ ಮಾಡಿಕೊಂಡಿದ್ದೀರಾ ? ಹೌದು/ಇಲ್ಲ

19. ನಿಮ್ಮ ಧರ್ಮದ ಬಗ್ಗೆ ಸತ್ಯ ಮತ್ತು ವಾಸ್ತವಿಕತೆಗಳ ಬಗ್ಗೆ ಸ್ಪಷ್ಟವೂ ಆಳವೂ ಆದ

ಭಾವನೆಯನ್ನು ಹೊಂದಿದ್ದೀರಾ. ಹೌದು/ಇಲ್ಲ

20. ಅಸಹನೆಯ ಭಾವನೆಯನ್ನು ತಾಳದೆ ಏಕಾಂತವನ್ನು ಎದುರಿಸಬಲ್ಲಿರಾ ?

ಹೌದು/ಇಲ್ಲ

## ಅಂಕಗಣನೆ

2, 6, 10, 13, 16, 20 ರ ಸಂಖ್ಯೆಗಳ ಪ್ರಶ್ರೆಗಳಿಗೆ ಪ್ರತಿಯೊಂದು 'ಇಲ್ಲ'ಕ್ಕೆ 5 ಅಂಕಗಳನ್ನು ಎಣಿಸಿ.

ಉಳಿದ ಇತರ ಸಂಖ್ಯೆಗಳ ಎಲ್ಲ ಪ್ರಶ್ನೆಗಳಿಗೆ ಹೌದು ಎಂಬ ಪ್ರತಿಯೊಂದಕ್ಕೆ 5 ಅಂಕಗಳನ್ನು ಎಣಿಸಿ 80ಕ್ಕೆ ಹೆಚ್ಚಿದ್ದರೆ, ನಿಮ್ಮ ಧರ್ಮದ ಬಗ್ಗೆ ನಿಮಗೆ ಪೂರ್ಣ ನಂಬಿಕೆ ಇದೆ ಎಂಬುದನ್ನು ತೋರಿಸುತ್ತದೆ. 70ಕ್ಕೂ ಹೆಚ್ಚಿದ್ದರೆ, ನಿಮ್ಮ ಧರ್ಮದ ಬಗ್ಗೆ ಸಮಾಧಾನವಿದೆ ಹಾಗೂ ಮುಕ್ಕಾಲು ಮೂರು ನೀವು ನಂಬಿದ್ದೀರಿ ಎಂಬುದನ್ನು ಮನದಟ್ಟು ಮಾಡಿಕೊಡುತ್ತದೆ. 60ಕ್ಕೆ ಕಡಿಮೆ ಇದ್ದರೆ ನಿಮ್ಮ ನಂಬಿಕೆ ತಪ್ಪಾಗಿದೆ ಮತ್ತು ಮೂಢನಂಬಿಕೆಯದಾಗಿದೆ ಎಂದು ಹೇಳುತ್ತದೆ. ನೀವು ನಿಮ್ಮ ಬದುಕನ್ನು ಆಳಬೇಕೆ ಹೊರತು ಎಲ್ಲವನ್ನೂ ಅದೃಷ್ಟಕ್ಕೆ ಬಿಡಬಾರದು ?

## 7. ಬದುಕಿನ ಯಾದಿ

## ಉದ್ದೇಶ

ಈ ಅಭ್ಯಾಸ ವಿದ್ಯಾರ್ಥಿಯನ್ನು ಪ್ರಶ್ನಿಸುತ್ತದೆ, ತನ್ನ ಬದುಕಿನಲ್ಲಿನ ಕೆಲವು ಪ್ರಧಾನವಾದ ವಿಷಯಗಳನ್ನು ಮತ್ತು ಘಟನೆಗಳು ನೋಡು ಎಂದು. ಜೀವನ ಯೋಜನೆಯ ಅನುಕ್ರಮದಲ್ಲಿ ಅದು ಹಿಂದಿನ ಅಭ್ಯಾಸಗಳನ್ನು ಒಟ್ಟಾಗಿ ಸೇರಿಸಿ ಗಂಟು ಹಾಕುತ್ತದೆ ಮತ್ತು ವಿದ್ಯಾರ್ಥಿಯನ್ನು ಭ್ರಮೆಯನ್ನು ಮಟ್ಟದಿಂದ ದೂರ ಎಳೆದೊಯ್ದು ಭೂತ ವರ್ತಮಾನಗಳ ವಾಸ್ತವಾಂಶಗಳ ಕಡೆಗೆ ಕರೆತರುತ್ತದೆ.

## ಕಾರ್ಯವಿಧಾನ

ಉಪನ್ಯಾಸಕರು ವಿದ್ಯಾರ್ಥಿಗಳನ್ನು ನಾಲ್ಕು ಜನರ ಗುಂಪುಗಳನ್ನಾಗಿ ವಿಂಗಡಿಸುತ್ತಾರೆ.

ಅವರಲ್ಲಿ ಒಬ್ಬ ವ್ಯಕ್ತಿ ಬಿಂದು (ನಾಭಿ) ವಾಗುತ್ತಾನೆ. ಆ ಕಾಲದಲ್ಲಿ ಮತ್ತೊಬ್ಬ ಬಿಂದು ವ್ಯಕ್ತಿಯ ಬದುಕಿನ ಯಾದಿಯ ಪ್ರಶ್ನೆಗಳಿಗೆ ಪ್ರತಿಕ್ರಿಯೆಗಳನ್ನು ದಾಖಲಮಾಡುತ್ತಾನೆ. ಆಗ ಆ ಬಿಂದು ಧ್ವನಿ ತಟ್ಟೆಯಂತೆ (ರಿಕಾರ್ಡರ್) ಸುತ್ತುತ್ತದೆ. ಉಳಿದ ಇಬ್ಬರು ಸ್ವತಂತ್ರ ಸದಸ್ಯರು ಸ್ಪಷ್ಟೀಕರಿಸುವ ಪ್ರಶ್ನೆಗಳನ್ನು ಕೇಳುತ್ತಾ ಹೋಗಬೇಕು ಮತ್ತು ಕಾರ್ಯ ಮುಂದುವರೆಯಲು ಸಹಾಯ ಮಾಡಬೇಕು.

ಇಲ್ಲಿ ಕೆಲವು ಮಾದರಿ ಪ್ರಶ್ನೆಗಳಿವೆ. ಅವುಗಳನ್ನು ಕೇಳಬಹುದು.

1. ನಿಮ್ಮ ಬದುಕಿನಲ್ಲಿ ಅತ್ಯಂತ ಸುಖಮಯವಾದ ವರ್ಷ ಅಥವಾ ಅವಧಿ ಯಾವುದು ?
2. ನೀವು ಯಾವ ಯಾವ ಕಾರ್ಯಗಳನ್ನು ಚೆನ್ನಾಗಿ ಮಾಡಬಲ್ಲಿರಿ ?
3. ನಿಮ್ಮ ಜೀವನದಲ್ಲಿ ಆದ ತಿರುವಿನ ಬಿಂದುವನ್ನು ತಿಳಿಸಿ ?
4. ನಿಮ್ಮ ಜೀವನದಲ್ಲಿ ಅತಿ ಕನಿಷ್ಠ ಬಿಂದು ಯಾವುದು ?
5. ನೀವು ಅತಿ ಹೆಚ್ಚಿನ ಧೈರ್ಯವನ್ನು ಪ್ರದರ್ಶಿಸಿದಾಗಲಿನ ಯಾವುದಾದರೂ ಘಟನೆ ಇದೆಯೇ ?
6. ದುಃಖದ ಕಾಲವಾವುದಾದರೂ ಇತ್ತೆ ? ಒಂದಕ್ಕಿಂತ ಹೆಚ್ಚು ಸಲ ?
7. ನೀವು ಮಾಡಲೇ ಬೇಕಾದ ಕ್ಷುಲ್ಲಕ ಕಾರ್ಯದ ಬಗ್ಗೆ ತಿಳಿಸಿ.
8. ನೀವು ಯಾವ ಕಾರ್ಯಗಳನ್ನು ಮಾಡದೆ ನಿಲ್ಲಿಸಲು ಇಷ್ಟಪಡುತ್ತೀರಿ ?
9. ನೀವು ತುಂಬ ಚೆನ್ನಾಗಿ ನಿಜವಾಗಿ ಮಾಡಬಲ್ಲ ಕೆಲವು ಕಾರ್ಯಗಳನ್ನು ತಿಳಿಸಿ.
10. ನೀವು ಅನುಭವಿಸಿದ ಕೆಲವು ಅತಿಶ್ರೇಷ್ಠ ಅನುಭವಗಳ ಬಗ್ಗೆ ತಿಳಿಸಿ.
11. ನೀವು ಅನುಭವಸಿಬೇಕೆಂದಿರುವ ಕೆಲವು ಅತಿ ಶ್ರೇಷ್ಠ ಅನುಭವಗಳ ಬಗ್ಗೆ ತಿಳಿಸಿ.
12. ನೀವು ಸ್ಥಾಪಿಸಲು ಹೋರಾಡುತ್ತಿರುವ ಮೌಲ್ಯಗಳು ಕೆಲವು ಯಾವುದಾದರೂ ಇವೆಯೆ ?
13. ನಿಮ್ಮ ಬದುಕಿನಲ್ಲಿ ನೀವು ತಪ್ಪಿಸಿಕೊಂಡ ಅವಕಾಶವೊಂದನ್ನು ಹೇಳಿ.

14. ನಿಮ್ಮ ಬದುಕಿನ ಈ ಸಂದರ್ಭದಲ್ಲಿ, ಎಂದರೆ ಸಧ್ಯದಲ್ಲಿ ಆರಂಭಿಸಬೇಕೆಂದಿರುವ ಕೆಲವು ಕಾರ್ಯಗಳು ಯಾವುವು ?

ಹದಿನಾಲ್ಕು ಪ್ರಶ್ನೆಗಳು ಬಹುಶಃ ಅತಿ ಹೆಚ್ಚಿನದಾಗಬಹುದು. ಶಿಕ್ಷಕರು ಅಥವಾ ತರಗತಿ ಇವುಗಳಲ್ಲಿ ಕೆಲವನ್ನು ತೆಗೆದುಹಾಕಬಹುದು ಅಥವಾ ಬೇರೆಯವುಗಳನ್ನು ಬಳಸಬಹುದು. ಬಿಂದು ವ್ಯಕ್ತಿಯನ್ನು ಹೊರಗೆಳೆಯಲು ತಂಡಕ್ಕೆ ಪ್ರೋತ್ಸಾಹ ನೀಡಬೇಕು. ಆದರೆ ಈ ಸಮಯದಲ್ಲಿ ಅಂಶಗಳ ಬಗ್ಗೆ ಚರ್ಚೆಗೆ ಅವಕಾಶ ಕೊಟ್ಟು ಅದರಲ್ಲಿ ತೊಡಗಿಸಬಾರದು. ಪ್ರತಿಯೊಬ್ಬ ವ್ಯಕ್ತಿಗೆ ಕಾಲ ಮಿತಿಯನ್ನು ನಿರ್ದಿಷ್ಟ ಪಡಿಸುವುದರಿಂದ ಸಹಾಯವಾಗುತ್ತದೆ. ಒಬ್ಬನಿಗೆ 10 ನಿಮಿಷ ಗರಿಷ್ಠ ಮಿತಿಯಾಗಬಹುದು.

ಒಂದು ಭಾಗಕ್ಕೆ ನಲವತ್ತು ನಿಮಿಷಗಳು. ಸುತ್ತುವ ಧ್ವನಿತಟ್ಟೆ (ರಿಕಾರ್ಡರ್) ತಯಾರಿಸುವ ಪೂರ್ಣ ಪಟ್ಟಿಯನ್ನು ಕೇಂದ್ರ (ಬಿಂದು) ವ್ಯಕ್ತಿಗೆ ತಲುಪಿಸಲಾಗುವುದು. ಇದು ಅವನ 'ಬದುಕಿನ ಯಾದಿ'

ವಿದ್ಯಾರ್ಥಿಗಳು ಇಷ್ಟಪಟ್ಟರೆ ಅವರ ಉತ್ತರಗಳನ್ನು ಸಾಧ್ಯವಾದರೆ ಮನೆಯಲ್ಲಿ ಮೊದಲಿಗೆ ಬರೆಯಬಹುದು. ಅನಂತರ ಬೇರೆ ಸಮಯದಲ್ಲಿ ಗುಂಪುಗಳಲ್ಲಿ ಚರ್ಚಿಸಬಹುದು.

## ಉಪನ್ಯಾಸಕರಿಗೆ

ಬಿಂದು ವ್ಯಕ್ತಿಯಿಂದ ಹೊರಬಂದ ಯಾವುದೇ ಸಂಗತಿಗಳ ಬಗ್ಗೆ ಏಳಬಹುದಾದ ಚರ್ಚೆಯಲ್ಲಿ ಸಿಕ್ಕಿ ಹಾಕಿಕೊಳ್ಳದಂತೆ ತಪ್ಪಿಸಲು ತರಗತಿಗೆ ಪ್ರೋತ್ಸಾಹ ನೀಡಬೇಕು. ಬಿಂದು ವ್ಯಕ್ತಿಯನ್ನು ಅವನಿಗೆ ಕೊಟ್ಟ ಹತ್ತು ನಿಮಿಷದೊಳಗೆ, ಹೊರಕ್ಕೆ ಎಳೆದುಕೊಳ್ಳಬೇಕು ಮತ್ತು ಆ ಅವಧಿಯಲ್ಲಿ ಅವನಿಂದ ಹುಡುಕಿ ತೆಗೆದದ್ದನ್ನು ಮತ್ತು ಬಹಿರಂಗ ಪಡಿಸಿದ್ದನ್ನು ದಾಖಲೆಯಾಗಿಡಬೇಕು. ಹೆಜ್ಜೆಗಳನ್ನು ಜೀವಂತವಾಗಿಬೇಕು ಮತ್ತು ತೀವ್ರವಾಗಿ ಮುಂದುವರಿಸುವುದೂ ಅಗತ್ಯ. ಶಿಕ್ಷಕರು 9 ನಿಮಿಷಗಳು ಆದ ತಕ್ಷಣ ಕರೆಯಬೇಕು. ಹತ್ತು ನಿಮಿಷವಾದ ಕೂಡಲೆ ಎರಡನೆ ವ್ಯಕ್ತಿಯ ಕಡೆಗೆ (ವಿದ್ಯಾರ್ಥಿಗಳು) ಚಲಿಸುವಂತೆ ನೋಡಿಕೊಳ್ಳಬೇಕು.

## 8. ಉಡುಪುಗಳು ಮತ್ತು ಮೌಲ್ಯಗಳು

ಉದ್ದೇಶ ನಮಗೆ ಇಷ್ಟವಿರಲಿ ಇಲ್ಲದಿರಲಿ ನಮ್ಮ ಉಡುಪು ನಮ್ಮ ಮೌಲ್ಯದ ಬಗ್ಗೆ ಏನಾದರೂ ಇತರ ಜನಕ್ಕೆ ಕೆಲವೊಮ್ಮೆ ತಿಳಿಸುತ್ತದೆ. ನಾವು ಧರಿಸುವ ಉಡುಪಿನ ಮೂಲಕ ನಾವು ಏನು ಸಂದೇಶವನ್ನು ಕಳಿಸುತ್ತೇವೆ ಎಂಬುದನ್ನು ನಾವು ತಿಳಿದುಕೊಳ್ಳುವುದು ನಮಗೆ ಬಹಳ ಮುಖ್ಯವಾದುದು, ಎಂದು ಕಂಡು ಬರಬಹುದು. ಮತ್ತು ಈ ಸಂದೇಶಗಳನ್ನೆ ನಾವು ನಿಜದಲ್ಲಿ ಇತರರಿಗೆ ತಲುಪಿಸುವ ಆಕಾಂಕ್ಷೆಯನ್ನು ಹೊಂದಿದ್ದೇವೆಯೆ ಇಲ್ಲವೆ ಎಂಬುದನ್ನು ಕಾಣಲು ಬಯಸುತ್ತೇವೆ. ಈ ಉಪಾಯ ಈ ಕಾರ್ಯಗತಿಯನ್ನು ಆರಂಭಿಸುತ್ತದೆ.

ಈ ಅಭ್ಯಾಸ, ಯಾವದೋ ಒಂದು ನಿರ್ದಿಷ್ಟ ಪರಿಣಾಮವನ್ನು ಪಡೆಯುತ್ತದೆ ಎಂಬ ಆಶಯವನ್ನು ನಾವು ಕೆಲವೊಮ್ಮೆ ಹೊಂದಿರುವ ಭಾವನೆಯನ್ನು ಮುಂದು ಮಾಡುತ್ತದೆ. ಆದರೆ ನಿಜದಲ್ಲಿ ಅದು ತದ್ವಿರುದ್ಧವಾದ ಪರಿಣಾಮವನ್ನು ಹೊಂದಬಹುದು. ನಮ್ಮಲ್ಲಿ ಕೆಲವರು ನಮ್ಮ ಉಡುಪಿನ ಬಗ್ಗೆ, ಬೇರೆಯವರಿಗಿಂತ ಹೆಚ್ಚಾಗಿ ಅಭಿಪ್ರಾಯವನ್ನು ತಿಳಿಸಲು ಅಧಿಕಾ ಶ್ರಮವನ್ನು ವಹಿಸಿದ್ದಾಗ್ಯೂ ನಾವು ನಮ್ಮ ಉಡುಪನ್ನು ನಮಗೆ ಅರಿವಿಲ್ಲದೆಯೇ ಪರಿಪೂರ್ಣವಾಗಿ ಧರಿಸುವುದಿಲ್ಲ.

### ಕಾರ್ಯವಿಧಾನ

ಶಿಕ್ಷಕರ ವಿದ್ಯಾರ್ಥಿಗಳಿಗೆ ಅಥವಾ ಅವರೇ ಸಿದ್ಧಪಡಿಸುವಂತೆ ಈ ಮುಂದಿನ ನಕ್ಷೆಯನ್ನು ಕೊಡುತ್ತಾರೆ.

| ಉಡುಪಿನ ಬಾಬುಗಳು | ನನ್ನ ಬಗ್ಗೆ ನನ್ನ ಉಡುಪುಗಳು ಏನನ್ನು ಹೇಳಬೇಕು ಎಂದು ನಾನು ಇಷ್ಟ ಪಡುತ್ತೇನೆ. | ನನ್ನ ಉಡುಪು ನನ್ನ ಬಗ್ಗೆ ಇತರರಿಗೆ ಹೇಳುತ್ತದೆ. ಏನು |
|---|---|---|
| 1. ಷರ್ಟು ಅಥವಾ ಬ್ಲೌಸು | | |

2. ಜೀನ್ಸ್ ಟಿಷರ್ಟು ಇತ್ಯಾದಿ

3. ಷೂಗಳು, ಚಪ್ಪಲಿಗಳು

4. ಸ್ವೇಟರು, ವಿಂಡ್‌ಚೀಟರ್ ಇತ್ಯಾದಿ

5. ವಾಚ್, ಆಭರಣ

6. ಸೀರೆ ಬ್ಲೌಸ್

7. ರೂಪಕ ಪ್ರಸಾದನಗಳು

8. ಸುವಾಸನಾದ್ರವ್ಯ, ತಲೆಗೂದಲ ಶೈಲಿ

ಮೊದಲನೆಯ ಅಂಕಣದಲ್ಲಿ ವಿದ್ಯಾರ್ಥಿಗಳು ಆ ಸಮಯದಲ್ಲಿ ಅವರು ವಾಸ್ತವವಾಗಿ ಧರಿಸಿರುವ ಉಡುಪುಗಳ ಅಲ್ಪಸ್ವಲ್ಪ ವಿವರಗಳೊಡನೆ ಒಂದು ಪಟ್ಟಿಮಾಡಬೇಕು.

ಆಗ ಶಿಕ್ಷಕರು ಹೇಳುತ್ತಾರೆ: ನಾವು ಏನನ್ನು ಧರಿಸುತ್ತೇವೆ ಅದು ನಮ್ಮ ಮೌಲ್ಯಗಳ ಬಗ್ಗೆ ಏನನ್ನಾದರೂ ಹೇಳುತ್ತದೆ. ನಾವೇ ಎಷ್ಟೋ ಸಲ ನಮ್ಮ ಉಡುಪಿನ ಬಗ್ಗೆ ಹೇಳಿಕೆಗಳನ್ನು ನೀಡುತ್ತೇವೆ. ಇವುತ್ತ ಧರಿಸಲು ಏನ್ನು ಆರಿಸಿಕೊಂಡಿದ್ದೀಯಾ ಎನ್ನುವುದರ ಬಗ್ಗೆ ನಿಮ್ಮನ್ನು ಕುರಿತು ನೀವೇ ಏನನ್ನು ಹೇಳಬಯಸುತ್ತೀರಿ. ಉದಾಹರಣೆಗೆ ಹೇಳವುದಾದರೆಃ ನಾನು ಅತಿಪ್ರಿಯನಾಗಿ ಆಧುನಿಕನಾಗಿ ಕಾಣಲು ಇಷ್ಟಪಡುತ್ತೇನೆ. ಅಥವಾ ನಾನು ಕಾಲೇಜು ತಂಡದಲ್ಲಿ ಇದ್ದೇನೆಂದು ಜನ ತಿಳಿಯಬೇಕೆಂದು ಬಯುಸುತ್ತೇನೆ. ನೀವು ಎಷ್ಟ ಪ್ರಾಮಾಣಿಕವಾಗಿರಬೇಕೋ ಅಷ್ಟರಮಟ್ಟಿಗೆ ಇರಿ. ಎರಡನೆಯ ಅಂಕಣವನ್ನು ತುಂಬುವಾಗ ಸಮರ್ಥನೆ ಮಾಡಿಕೊಳ್ಳದಂತೆ ಇರಲು ಪ್ರಯತ್ನಿಸಿ. ಆಮೇಲೆ ನೀವು ಇತರ ಜನದೊಡನೆ ಅವರು ನಿಮ್ಮನ್ನು ಹೇಗೆ ನೋಡುತ್ತಾರೆ, ಮತ್ತು ನೀವು ಇಂದು ಧರಿಸಿರುವ ಉಡುಪಿನಿಂದ ಅವರಿಗೆ ನೀವು ಏನನ್ನು ತಿಳಿಸುತ್ತೀರಾ ಎಂಬುದನ್ನು ತಿಳಿಯಲು ನಿಮಗೆ ಒಂದು ಅವಕಾಶ ಸಿಗುತ್ತದೆ.

ನೀವು ಧರಿಸುವ ಉಡುಪಿನ ಕೆಲವೊಂದು ಅಂಶಗಳ ಮೂಲಕ ತಿಳಿಸಲು ಏನೂ ಇಲ್ಲವೆಂದು ನೀವು ಆಲೋಚಿಸಿದ್ದೇ ಆದರೆ ಆಗ ಕೆಲವು ಜಾಗಗಳನ್ನು ಖಾಲಿಯಾಗಿ ಬಿಟ್ಟು

ಬಿಡಿ. ಉಡುಪಿನ ವಿವಿಧ ವರ್ಗಗಳು ಎಲ್ಲವೂ ಒಂದೇ ಒಂದು ದೃಷ್ಟಿಯ ಕಡೆಗೆ ಸಹಭಾಗಿಯಾಗುವುದಾದರೆ ಅವುಗಳನ್ನು ಹೇಗಾದರೂ ಒಂದು ಗುಂಪಾಗಿ ಮಾಡಿ.

ಪ್ರತಿಯೊಬ್ಬ ವ್ಯಕ್ತಿಯೂ ಕಾರ್ಯವನ್ನು ಪೂರ್ಣಗೊಳಿಸಿದಂತೆಲ್ಲ ಮೂವರ ಗುಂಪನ್ನು ಸಿದ್ದಮಾಡಿ. ಆಗ ಅವರು ಪ್ರತಿಯೊಬ್ಬರೂ ಮೂರನೆಯ ಅಂಕಣವನ್ನು ತುಂಬುತ್ತಾರೆ. ಎರಡನೆಯ ಅಂಕಣವನ್ನು ಕಾಗದದ ಬಾವುಟದಿಂದ ತೋರಿಸಿಡುವುದು ಉಚಿತ. ಮೂರನೆಯ ಅಂಕಣವನ್ನು ತುಂಬುವುದಕ್ಕೆ ಮುಂಚೆ ಅಭಿಪ್ರಾಯಗಳನ್ನು ಟಿಪ್ಪಣಿ ಮಾಡದೆ ದಾಖಲಿಸಬೇಕು.

ಪ್ರತಿಯೊಬ್ಬ ವಿದ್ಯಾರ್ಥಿಯೂ ತಾನು ಏನನ್ನು ತಿಳಿಸಬೇಕು ಎಂದುಕೊಂಡಿದ್ದೇನೆ. ಆದರೆ ಅವನು ವಾಸ್ತವವಾಗಿ ಏನನ್ನು ತಿಳಿಸಿದ್ದೇನೆ ಎಂಬುದರ ವ್ಯತ್ಯಾಸಗಳನ್ನು, ಏನಾದರೂ ಇದ್ದರೆ ತಾಳೆ ನೋಡಲು ಅವಕಾಶವಾಗುತ್ತದೆ. ಸಮಯ ಸಿಕ್ಕರೆ ವಿದ್ಯಾರ್ಥಿಗಳು ಮೂವರ ಎರಡನೆಯ ತಂಡವನ್ನು ರಚಿಸಿಕೊಂಡು ಹೆಚ್ಚಿನ ವಿಷಯಗಳನ್ನು ಪುನಃ ಕುರಿತು ಚಿಂತಿಸಬಹುದು. ತರುವಾಯ ತರಗತಿಯವರೆಲ್ಲ ಕಾರ್ಯಚಟುವಟಿಕೆ ಮುಗಿದ ಮೇಲೆ ಉಡುಪಿನ ಮತ್ತು ಮೌಲ್ಯದ ವಿಷಯವನ್ನು ಕುರಿತು ಚರ್ಚಿಸಬಹುದು.

### ಉಪನ್ಯಾಸಕರಿಗೆ

ಇಬ್ಬರು ವಿದ್ಯಾರ್ಥಿಗಳಿಂದ ಮಾತ್ರ ಒಂದು ಹಿಮ್ಮುಕದ ವಿಷಯದಿಂದ (Feed Back) ನಾವು ಧರಿಸುವ ಉಡುಪಿನ ರೀತಿಯನ್ನು ಪ್ರತಿಯೊಬ್ಬರು ನೋಡುವುದು ಒಂದು ಚೆನ್ನಾದ ದೃಷ್ಟಾಂತವೆಂದು ಭಾವಿಸಲಾಗುವುದಿಲ್ಲ ಎಂಬುದನ್ನು ತರಗತಿಯ ನೆನಪಿಗೆ ತನ್ನಿ.

ಪಾಣ್ಮಾಸಿಕ ಶಿಕ್ಷಣದ ಅವಧಿಯ, ಬೇರೆ ಬೇರೆ ಕಾಲದಲ್ಲಿ ಈ ಅಭ್ಯಾಸವನ್ನು ಪುನಾರಾವೃತ್ತಿಸಬಹುದು. ಪ್ರತಿಯೊಬ್ಬ ವಿದ್ಯಾರ್ಥಿಯೂ ಉಡುಪು ಧರಿಸುವ ತನ್ನ ಹವ್ಯಾಸಗಳಲ್ಲಿ ಮುಂದಿನ ದಿನಗಳಲ್ಲಿ ಮಾದರಿಗಳನ್ನು ಕಂಡುಕೊಳ್ಳಲು ಮತ್ತು ತನ್ನ ಮೌಲ್ಯಗಳ ಬಗ್ಗೆ ಇನ್ನೂ ಹೆಚ್ಚಿನ ಅಂತರ್ ದೃಷ್ಟಿಗಳನ್ನು ಸಾಧಿಸಲು ತನ್ನ ಉತ್ತರ ಪತ್ರಿಕೆಗಳನ್ನು ಕಾಪಾಡಿಕೊಳ್ಳಬೇಕು.

ಅದೇ ರೀತಿಯಲ್ಲಿ ಸರ್ವೇಕ್ಷಣೆ ಕೈಕೊಳ್ಳಲು ಇನ್ನೂ ಕೆಲವು ಕಾರ್ಯಗಳಿವೆ,

ಉದಾಹರಣೆಗೆ ಮನೆಯ ನಿಮ್ಮ ಕೋಣೆಯಲ್ಲಿನ ಆರು ಪ್ರಮುಖ ವಸ್ತುಗಳ ಪಟ್ಟಿಮಾಡಿ. ನಿಮ್ಮ ಕೊಠಡಿಯನ್ನು ಯಾರಾದರೂ ಪ್ರವೇಶಿಸಿದಾಗ ಅವರು ಏನನ್ನು ಹೇಳಬೇಕು ಎಂದು ನೀವು ಇಷ್ಟಪಡುತ್ತೀರಾ ? ಈ ಆರು ವಸ್ತುಗಳು ನಿಜದಲ್ಲಿ ನಿಮ್ಮ ವಿಷಯಕ್ಕೆ, ನಿಮ್ಮ ಕೊಠಡಿಗೆ ಬಂದ ಜನಕ್ಕೆ ನಿಮ್ಮ ಬಗ್ಗೆ ಏನು ಹೇಳುತ್ತವೆ ? ಅಥವಾ ನೀವು ನಿಮ್ಮ ಶಾಲೆಯ ಪುಸ್ತಕಗಳಲ್ಲಿ ನೀವು ಬರೆದಿರುವ ಐದು ವಿಷಯಗಳು ಯಾವುವು ? ಅವು ನಿಮ್ಮ ಬಗ್ಗೆ ಏನು ಹೇಳಬೇಕೆಂದು ನೀವು ಬಯಸುತ್ತೀರಾ ? ಅದು ಇತರರಿಗೆ ಏನು ಹೇಳುತ್ತದೆ ?



ಅಧ್ಯಾಯ 6

# ಸಮಾಜದಲ್ಲಿ ತರುಣ

## 1. ವಿದ್ಯಾರ್ಥಿ ಮತ್ತು ನಾಗರಿಕತನ

ನಾಗರಿಕತನ - ನಿನ್ನ ನಾಡು ನಿನಗ ಏನು ಮಾಡುತ್ತದೆ ಎಂಬುದನ್ನು ಕೇಳಬೇಡ. ನಿನ್ನ ನಾಡಿಗೆ ನೀನು ಏನು ಮಾಡುತ್ತೀಯ ಎಂದು ಕೇಳು

- ಜೆ.ಎಫ್.ಕೆನಡಿ

ಸಮಗ್ರ ಕೌಟುಂಬಿಕ ನೀತಿ ಮತ್ತು ಯೋಜನೆ ಸಮಾಜದಲ್ಲಿ ಅವಶ್ಯವಾದ ಒಂದು ಅಗತ್ಯ. ಏಕೆಂದರೆ ಅದು ಒಂದು ನಾಡಿನ ನಾಗರಿಕರ ಒಂದು ಪೂರ್ಣ ತಂಡದಂತೆ ಕುಟುಂಬದ ಅಭಿವೃದ್ಧಿಗೆ ಎಳೆದೊಯ್ಯುತ್ತದೆ.

ಭಾರತದಲ್ಲಿ ಅಥವಾ ಇನ್ನಾವುದೇ ದೇಶದಲ್ಲಿ ಕೌಟುಂಬಿಕ ನೀತಿಯನ್ನು ರೂಪಿಸುವಲ್ಲಿ ಅಡಗಿರುವ ಉದ್ದೇಶ ಸಮಾಜದ ಮೂಲ ಘಟಕದಂತೆ ಕುಟುಂಬದ ಅವಶ್ಯ ಪಾತ್ರವನ್ನು ಬಲಪಡಿಸಬೆಕು. ಮತ್ತು ಕುಟುಂಬದ ಎಲ್ಲ ಸದಸ್ಯರು ಅವರ ದೇಶದ ವ್ಯಕ್ತಿಗಳಾಗಿ ಮತ್ತು ನಾಗರಿಕರಾಗಿ ಬೆಳೆಯಲು ಮತ್ತು ವೃದ್ಧಿ ಹೊಂದಲು ಅನುಕೂಲಕರವಾದ ಪರಿಸರವನ್ನು ಒದಗಿಸಬೇಕು. ಶ್ರೀಮತಿ ಅವಬಾಯಿ ವಾಡಿಯ ಹೇಳುತ್ತಾರೆ "ಕುಟುಂಬ ತನ್ನ ಸ್ವಂತದ್ದೇ ಆದ, ಅತ್ಯಂತ ಹಿತಕರವಾದ ಪರಿಸರವನ್ನು ಸೃಷ್ಟಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆದಿರಬೇಕು. ಆಗ, ಅದು ಅಂತಿಮ ಮಾನವ ವಿಶ್ವವನ್ನು ಅರಳಿಸುವ ಮೂಲ ಬೀಜವಾಗಿಬಲ್ಲದು.

ಕುಟುಂಬವು ನಿಜವಾದ ತನ್ನ ನಾಗರಿಕ ಪಾತ್ರವನ್ನು ಸೂಕ್ತವಾಗಿ ನಿರ್ವಹಿಸಬೇಕಾದರೆ ಅದಕ್ಕೆ ನೆರವು ಅಗತ್ಯ. ಹೊಸ ಅವಕಾಶಗಳ ಅನುಕೂಲಗಳನ್ನು ಸ್ವೀಕರಿಸಲು, ಹೊಸ ಅವಕಾಶಗಳನ್ನು ಸೃಷ್ಟಿಸಲು, ಅಗತ್ಯತೆಗಳ ಕಬ್ಬಿಣದ ಬಂಧನಗಳಿಂದ ಮತ್ತು ಬೇರು ಬಿಟ್ಟ ಆಚಾರಗಳಿಂದ ತನ್ನನ್ನು ಬಿಡಿಸಿಕೊಳ್ಳಲು ಮಾನವನ ಅಗತ್ಯತೆಗಳು ಎಲ್ಲಿ ಸಾಕಷ್ಟು ಹೆಚ್ಚಾಗಿ ದೊರಬತ್ತವೆಯೋ ಅಂಥ ಎತ್ತರದ ಮಟ್ಟವನ್ನು ತಲುಪಲು ಬೇಕಾದ ನೆರವು. ಒಂದು ಸಮಾಜ

ಆಧುನಿಕ ಕ್ಷೋಭೆಯಿಂದ, ಬದಲಾವಣೆಗಾಗಿ ಹೊರಬರುವುದಕ್ಕೆ ಕುಟುಂಬಕ್ಕೆ ಅವಕಾಶಗಳು ಇರುವಾಗ, ಈ ಅವಕಾಶಗಳನ್ನು ಸೃಷ್ಟಿಸುತ್ತಿರುವ ಅಂಶಗಳು ಒಳ್ಳೆಯ ನಾಗರಿಕತನದ ಹೊಸ ಆರಂಭಗಳಿಗೆ ನಾಶ ಉಂಟು ಮಾಡಬಲ್ಲವು ಅಥವಾ ತಡೆ ಹಿಡಿಯಬಲ್ಲವು ಹಾಗೂ ದಾರಿಮಾಡಿಕೊಡಲೂ ಬಲ್ಲವು.

ಪ್ರತಿಯೊಂದು ಅವಕಾಶದಲ್ಲಿ ಬಲವತ್ತರವಾದ ಒಂದು ಪೌರಭಾವನೆಯನ್ನು ಕಾಲೇಜಿನಲ್ಲಿ ಮತ್ತು ಅದರ ಚಟುವಟಿಕೆಗಳಲ್ಲಿ ಬೆಳೆಸಿಕೊಳ್ಳಬೇಕು.

ಅಭಿವೃದ್ಧಿಯ ಲಾಭಗಳ ಸ್ವೀಕೃತಿದಾರರನ್ನಾಗಿ, ಅಂತೆಯೇ ಅಭಿವೃದ್ಧಿಯ ಗುರಿಗಳ ಸಾಧನೆಗೆ ಸಹಾಯಗಾರರನ್ನಾಗಿ ವ್ಯಕ್ತಿಗಳನ್ನು ಮತ್ತು ಕುಟುಂಬಗಳನ್ನು ಅವಲೋಕಿಸಬಹುದು. ಕುಟುಂಬ ತುಂಬ ಮುಖ್ಯವಾದದ್ದು. ಏಕೆಂದರೆ ಮತ್ತಾವುದೇ ಶಕ್ತಿಗಿಂತ ಇದು ಹೆಚ್ಚಾಗಿ ನಮ್ಮನ್ನು ರೂಪಿಸುತ್ತದೆ. ನಾವು ಎಂಥ ಬಗೆಯ ಜನ ಎಂಬುದನ್ನು ನಿರ್ಧರಿಸುತ್ತದೆ, ನಾಳೆಯ ನಾಗರಿಕರು ಎಂಥ ಜನರಾಗಿರಬೇಕು ಎಂಬುದನ್ನು ದೃಢಪಡಿಸುತ್ತದೆ. ವಿದ್ಯಾರ್ಥಿ ತಾನು ಭಾರತೀಯನಾಗಿರುವುದಕ್ಕೆ ಹೆಮ್ಮೆ ಪಡಬೇಕು.

"ಅವನು / ಅವಳು ಅಂಥ ಚೆನ್ನಾಗಿಲ್ಲದಿರುವುದನ್ನು ಬದಲಾಯಿಸುವಲ್ಲಿ ತಾನು ನಿರ್ವಹಿಸಬೇಕಾದ ನಿಜವಾದ ಪಾತ್ರವಿದೆ ಎಂಬುದನ್ನು ಕಡ್ಡಾಯವಾಗಿ ಭಾವಿಸಬೇಕು. ಇತರ ದೇಶದೊಡನೆ ಹೋಲಿಸುವದು ಸಂಕುಚಿತ ದೃಷ್ಟಿಯುದದ್ದಾರೆ ಅದು ತುಂಬ ಅಪಾಯಕರವಾಗಬಹುದು"

ಅಷ್ಟೇ ಅಲ್ಲದೇ ಕೆಲಸ ಮಾಡುತ್ತಿರುವ ಇತರ ಅಂಶಗಳೂ ಇವೆ. ಆದರೆ ಒಂದು ದೇಶದ ನಾಗರಿಕರ ಅಭಿವೃದ್ಧಿಯಲ್ಲಿ ಕುಟುಂಬದ ಪ್ರಭಾವವೇ ಅತ್ಯಂತ ಬಲಿಷ್ಠ ಆದದ್ದು, ಆಗಿರುವುದು ಮತ್ತು ಆಗಬೇಕಾಗಿರುವುದು. ಕಾರಣ ಇಷ್ಟೆ, ನಾಳೆಯ ನಾಗರಿಕರನ್ನು ನಿರ್ಧರಿಸುವುದೆಂದರೆ, ಒಟ್ಟಿನಲ್ಲಿ ಅದು ಜನರ ವ್ಯಕ್ತಿತ್ವ ಮತ್ತು ನಡತೆ. ಕುಟುಂಬವು ವ್ಯಕ್ತಿಯ ಪ್ರವೃತ್ತಿಗಳನ್ನು, ಆಶಯಗಳನ್ನು ಮತ್ತು ಆಕಾಂಕ್ಷೆಗಳನ್ನು ಮತ್ತು ಮೌಲ್ಯಗಳನ್ನು ಅವನು ನಾಡಿನ ನಾಗರಿಕನಾಗುವಂತೆ ರೂಪಿಸಲು ಶಕ್ತಿಯುತ ಪ್ರಭಾವವನ್ನು ಹೊಂದಿದೆ.

## 2. ನಾಯಕತ್ವ

ಎಲ್ಲದರ ನಾಯಕತ್ವದ ಅತಿ ಉನ್ನತ ಗುಣವೆಂದರೆ ಅದರ ಬೆಳವಣಿಗೆಯನ್ನು ಇತರರಲ್ಲಿ ಹೊರಹೊಮ್ಮಿಸುವ ಸಾಮರ್ಥ್ಯ.

ತರುಣರನ್ನು ಅವರ ನಾಡಿನ ರಾಜಕೀಯ ಜೀವನಕ್ಕೆ ನಾಗರಿಕರನ್ನಾಗಿ ಪಕ್ವವಾಗುವಂತೆ ಪ್ರತಿಕ್ರಿಯಿಸಲು, ಸಾಮಾಜಿಕ ಹಾಗೂ ರಾಜಕೀಯ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು

ಪ್ರೋತ್ಸಾಹಿಸಬೇಕು. ಮಹಾತ್ಮಾಗಾಂಧಿ ಹೇಳಿದರು. ಒಳ್ಳೆಯ ನಡತೆಯ ಮನುಷ್ಯ ಅವನಿಗೆ ಕೊಟ್ಟ ಯಾವುದೇ ಸ್ಥಾನಕ್ಕೆ ತನ್ನನ್ನು ಯೋಗ್ಯನನ್ನಾಗಿ ಮಾಡಿಕೊಳ್ಳುತ್ತಾನೆ.

## ಒಳ್ಳೆಯ ನಾಯಕರು

ಒಳ್ಳೆಯ ನಾಯಕ ಸೂಕ್ತವಾಗಿ ತನ್ನನ್ನು ತಾನೇ ಅನ್ವಯಿಸಿಕೊಳ್ಳುವುದರಿಂದ ತನ್ನ ತಂಡದ ಗುಪ್ತ ಶಕ್ತಿಗಳಿಗೆ ಕ್ರಿಯಾಶಕ್ತಿಯನ್ನು ಜೀವಕಳೆಯನ್ನು ತುಂಬಲು ಇಚ್ಛಿಸುತ್ತಾನೆ. ಇದನ್ನು, ಅವನು ಒಳ್ಳೆಯ ಗುಣಗಳನ್ನು ಅದುಮಿಡುತ್ತಿರುವ ದೌರ್ಬಲ್ಯಗಳನ್ನು ಕಂಡು ಹಿಡಿಯಬಲ್ಲವನಾದರೆ ಮಾತ್ರ ಹಾಗೆ ಮಾಡಬಲ್ಲನು.

ಒಬ್ಬ ಮನುಷ್ಯನಲ್ಲಿರುವ ದೌರ್ಬಲ್ಯಗಳನ್ನು ನಿವಾರಿಸಲು ಮತ್ತು ನಾಯಕತ್ವವನ್ನು ತುಂಬಲು ಅನೇಕ ಮಾರ್ಗಗಳಿವೆ. ನಾಯಕನಾದವನು ಸರಿಯಲ್ಲದುದನ್ನು ಕತ್ತರಿಸಿ ಹಾಕಿ ಹೊಸರೂಪವನ್ನು ಕೊಡಬೇಕು. ಆದರೆ ಒಬ್ಬನನ್ನು ಅವನ ದೌರ್ಬಲ್ಯಗಳಿಗಾಗಿ ಎಂದೂ ತಿರಸ್ಕರಿಸಬಾರದು.

ನಾಯಕನಾದವನು ಪರಂಪರೆ, ಪೋಷಣೆ, ಶಿಕ್ಷಣ ಮತ್ತು ಸಂಪ್ರದಾಯಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳಲೇ ಬೇಕು. ಏಕೆಂದರೆ ಇವುಗಳೇ ಮನಸ್ಸಿನ ಹಿನ್ನೆಲೆಯನ್ನು ತಯಾರಿಸುತ್ತವೆ. ಅಜ್ಞಾನ ಮತ್ತು ಮಾನಸಿಕ ಔದಾಸೀನ್ಯಗಳು ಬಹು ಬಾರಿ ಶತ್ರುಗಳು. ಸರಿಯಾದ ಶಿಕ್ಷಣದ ಮೂಲಕ ಒಬ್ಬ ಮನುಷ್ಯನಿಗೆ ಉನ್ನತವಾದದ್ದನ್ನು ಕಾಣಲು ಕಲಿಸಬಹುದು.

ಶಿಕ್ಷಣದಿಂದ ನಾವು ಶಿಸ್ತು, ಅರ್ಥವಂತಿಕೆ ಮತ್ತು ಆಸಕ್ತಿಗಳನ್ನು ಉತ್ಪಾದಿಸಬಹುದು. ಶಿಸ್ತು ಕ್ರಮವಾಗಿ ಬೆಳೆಯಬೇಕು. ನಾಯಕನಿಗೆ ಶಿಸ್ತು ಸಾಮಾನ್ಯ ಮನುಷ್ಯರಿಗಿಂತ ಇಮ್ಮಡಿಯಷ್ಟಿರಬೇಕು.

ನಾಯಕನು ಹಕ್ಕು ಬೇಡಿಕೆಗಳನ್ನು ಮಾಡಲೇ ಬೇಕು ಮತ್ತು ಇವು ಕ್ರಮವಾಗಿ ಬೆಳೆಯಬೇಕು. ಕ್ಲಾಸ್ ವಿಡ್ಜ್ ಹೇಳುತ್ತಾನೆ.

"ಸೇನಾ ನಾಯಕನು ತನ್ನ ತುಕಡಿಗಳಿಂದ ಬೇಡಿಕೆಗಳನ್ನು ಪಡೆಯುವ ಹವ್ಯಾಸವನ್ನು ಎಷ್ಟು ಹೆಚ್ಚು ಹೆಚ್ಚಾಗಿ ಬಯಸುತ್ತಾನೋ ಅವನು ತನ್ನ ಬೆಡಿಕೆಗಳನ್ನು ಅಷ್ಟರ ಮಟ್ಟಿಗೆ ಉತ್ತರಿಸುತ್ತವೆ ಎಂಬುದು ಅವನಿಗೆ ಖಚಿತವಾಗಿರುತ್ತದೆ".

ಆದರೆ ಅನಾವಶ್ಯಕ ಬೇಡಿಕೆಗಳು ವ್ಯರ್ಥ ಮತ್ತು ಇಕ್ಕಟ್ಟು. ಈ ಬೇಡಿಕೆಗಳು ಆರಂಭದ ದಿಸೆಯಲ್ಲಿ ಸ್ವಂತ ಉತ್ತಮಿಕೆಗಾ^ ಇರಬೇಕು.

ತಮ್ಮ ನಾಡಿನ ರಾಜಕೀಯ ಜೀವನದಲ್ಲಿ ನಾಗರಿಕರಾಗಿ ಭಾಗವಹಿಸಲು ಬದ್ಧರಾಗಿರುವ ಅವರು ಆತ್ಮ ಪ್ರತಿಜ್ಞೆಯನ್ನು ಪ್ರತಿಬಿಂಬಿಸುವಂಥ ರಾಜಕೀಯ ಅಭಿವ್ಯಕ್ತಿಯ ಮಾರ್ಗಗಳನ್ನು ಕಂಡುಕೊಳ್ಳೇಕು.

'ರಾಜಕೀಯ ಜೀವನದಲ್ಲಿ ತರುಣರ ಭಾವಹಿಸುವಿಕೆ ಪ್ರಪಂಚದಾದ್ಯಂತ, ಭಾರತದಲ್ಲೂ ಕೂಡ ಪ್ರಮುಖವಾಗಿ, ಹೆಚ್ಚುತ್ತಿದೆ, ಆದಾಗ್ಯೂ, 'ವಿದ್ಯಾಪ್ರೌಢತೆ'ಯ ಜೀವನವು ಈ ಭಾಗವಹಿಸುವಿಕೆಯಲ್ಲಿ ಎರಡನೆಯ ಸ್ಥಾನವನ್ನು ಎಂದಿಗೂ ಪಡೆಯಬಾರದು.

ರಸ್ತೆಗಳು, ಬ್ಯಾಂಕುಗಳು, ಶಾಲಾ ಕಟ್ಟಡಗಳು ಇತ್ಯಾದಿಗಳ ರಚನೆ ತರುಣ ಜನಾಂಗ ಬಡ ಸಮಾಜಕ್ಕೆ ನೀಡಿದ ಸೇವೆಯೇ ನಿಜವಾದ ಸೇವೆ.

ವಿದ್ಯಾರ್ಥಿಯು ಕಾಲೇಜಿನ ಗೋಡೆಗಳ ಆಚೆ ಇರುವ ಸಮಾಜಕ್ಕೆ ಸ್ವಲ್ಪವಾಗಿ ಒಂದು, ಚಿಕ್ಕ ರೀತಿಯಲ್ಲಿ 'ಸೇವೆ' ಮಾಡಲೇಬೇಕು. ವಯಸ್ಕರ ಶಿಕ್ಷಣ ಶಾಲೆಯ ದುರ್ಬಲ ಮಕ್ಕಳಿಗೆ ಪಾಠ ಹೇಳುವದು ಮತ್ತು ಪೌರಸೌಲಭ್ಯ ಇತ್ಯಾದಿಗಳು. ಇವು ಕೆಲವು ಕ್ಷೇತ್ರಗಳು ಅವುಗಳೇ ವಿದ್ಯಾರ್ಥಿಯು ತೊಡಗಿಸಿಕೊಳ್ಳುವ ಮತ್ತು ಭಾಗವಹಿಸುವ ಕಾರ್ಯಕ್ಕೆ ದಾರಿ ಮಾಡಿಕೊಡುತ್ತವೆ. ಇಂಥ ಸೇವೆಗಳು ವಿದ್ಯಾರ್ಥಿಗಳು ತಮ್ಮ ನಾಡಿನ ತರುಣ ನಾಗರಿಕರಾಗಿ ಏನಾದರೂ ಸತ್ವಯುಕ್ತವಾದದ್ದನ್ನು ಮಾಡಬಲ್ಲರೆಂಬುದನ್ನು ಪ್ರಮಾಣೀಕರಿಸುತ್ತದೆ ಹಾಗೂ ತೋರಿಸಿ ಕೊಡುತ್ತದೆ.

ವಿದ್ಯಾರ್ಥಿಗಳು ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಹೇಗೆ ತೊಡಗಿಸಿಕೊಂಡಿದ್ದರೆಂಬುದು ಸುವಿದಿತ.

ವಿದ್ಯಾರ್ಥಿ ಮತ್ತು ತರುಣ ಪರಿಷತ್ತುಗಳಿಗೆ ಮತ್ತು ಸಂಘ ಸಂಸ್ಥೆಗಳಿಗೆ ನಡೆಯುವ ಚುನಾವಣೆಯನ್ನು ಪರೋಕ್ಷ ಮತ್ತು ಅಪರೋಕ್ಷ ಪದ್ಧತಿಗಳು ಎರಡೂ ಸೇರಿದಂತೆ ನಡೆಸಬೇಕು. ವಿಭಿನ್ನ ಘಟಕಗಳು, ವರ್ಗಗಳು ಅಥವಾ ಇಲಾಖೆಗಳು ಮದೊಲಿಗೆ ತಮ್ಮ ಕಾರ್ಯದರ್ಶಿಯನ್ನು ಚುನಾಯಿಸಬೇಕು. ಇದು ಹೊರಗಿನ ಪ್ರಭಾವಗಳನ್ನು ಮತ್ತು ಅನೇಕ ವಿಶ್ವವಿದ್ಯಾಲಯಗಳ ಆವರಣಗಳಲ್ಲಿ ಮತ್ತು ತರುಣರ ಸಂಘಗಳಲ್ಲಿ ಕಂಡು ಬರುವ ವಿದ್ಯಾರ್ಥಿಗಳ ರಾಜಕೀಯದ ಹೆಚ್ಚಳವನ್ನು ತಡೆಯುತ್ತದೆ. ವಿದ್ಯಾರ್ಥಿ ಶಕ್ತಿಯನ್ನು ಸದುಪಯೋಗಪಡಿಸಿಕೊಳ್ಳಬೇಕೇ ಹೊರತು ದುರಪಯೋಗಿಸಿಕೊಳ್ಳಬಾರದು, ಹಣದ ದುಂದುವೆಚ್ಚವನ್ನು ಪ್ರೋತ್ಸಾಹಿಸಬಾರದು.

ಪ್ರತಿಯೊಬ್ಬ ಶಿಕ್ಷಿತ ವ್ಯಕ್ತಿಯೂ ಒಬ್ಬ ನಾಯಕನೇ.

ಅವನು / ಅವಳು ಜೀವ ತುಂಬುವವರೇ ಆಗಿರಬಹುದು.

## 3. ದ್ವಿವಿಧ ಹೊಣೆಗಾರಿಕೆ

ಭಗವದ್ಗೀತೆ ಹೇಳುವ "ಅಸ್ವಾಧೀನತೆ" ಎಂದರೆ ಮೋಕ್ಷವನ್ನು ಅಪೇಕ್ಷಿಸುವವರೆಲ್ಲರೂ, ಅತಿಶಯವಾದ ಆಸ್ತಿಗಳನ್ನು ತಮ್ಮ ಹತೋಟಿಯಲ್ಲಿಟ್ಟು ಕೊಂಡಿದ್ದರೂ, ಅವುಗಳಲ್ಲಿ ಯಾವುದೊಂದನ್ನು ತನ್ನದೆಂದು ಭಾವಿಸಸದೆ ಅವುಗಳ ಧರ್ಮದರ್ಶಿಯಂತೆ ನಡೆದುಕೊಳ್ಳಬೇಕು.

- ಗಾಂಧಿ

ಈ ಪ್ರಪಂಚದಲ್ಲಿ ಮನುಷ್ಯ ದ್ವಿವಿಧ ರೀತಿಯ ಕಾರ್ಯವನ್ನು ಹೊಂದಿರುತ್ತಾನೆ. ಒಂದು ತನ್ನದು ಇನ್ನೆಂದೂ ಹೊರಗಿನ ಪ್ರಪಂಚದ ವ್ಯಕ್ತಿಗಳಿಗೆ ಸೇರಿದ್ದು, ಎರಡು ಹೊಣೆಗಳಲ್ಲಿ ಮೊದಲನೆಯದರ ವಿಸರ್ಜನೆ ಆತ್ಮಾಭಿವೃದ್ಧಿಯ ಭೌತಿಕ, ಬೌದ್ಧಿಕ, ನೈತಿಕ ಮತ್ತು ಆಧ್ಯಾತ್ಮಿಕ ಕಾರ್ಯ ರೀತಿಗಳಲ್ಲಿ ಅಭಿವ್ಯಕ್ತಗೊಳ್ಳಬೇಕು. ಹೊಣೆಗಾರಿಕೆ ಸಾಮಾಜಿಕ ಪ್ರಜ್ಞೆಯನ್ನು ವೃದ್ಧಿಪಡಿಸಿಕೊಳ್ಳುವಲ್ಲಿ ಇತರರ ಕಲ್ಯಾಣಕ್ಕಾಗಿ ದುಡಿಯುವದರಲ್ಲಿ ಅಡಗಿದೆ.

ಈ ಎರಡೂ ಪದಗಳು ಒಂದನ್ನು ತನ್ನ ಸ್ವಂತಕ್ಕಾಗಿ, ಇನ್ನೊಂದನ್ನು ವಿಶಾಲ ಸಮಾಜಕ್ಕಾಗಿ ಇರುವ ಹಂಕುಗಳನ್ನು ತಿಳಿಸುತ್ತವೆ ಎಂದು ಅರ್ಥ ಮಾಡಬೇಕು. ಹೊಣೆಗಾರಿಕೆಗಳ ಈ ಎರಡು ಮಾದರಿಗಳು ಬದುಕಿನ ಸುತ್ತಣದ ಒಂದೇ ರೀತಿಯ ಒಂದೇ ಒಂದಾದ ಪ್ರವೃತ್ತಿಯ ಎರಡು ಮುಖಗಳು ಎಂದು ಮಾತ್ರ ತಿಳಿಯಬೇಕು. ಆದರಿಂದ ಹೊಮ್ಮಿ ಬರುವ ಅದೇ ಚಟುವಟಿಕೆಯಾಗಿದೆ. ಅಲ್ಲದೆ ಒಬ್ಬನು ತಾನು ವೃದ್ಧಿಪಡಿಸಿಕೊಳ್ಳಬೇಕಾದ ಮನಸ್ಸಿನ ಸ್ವಭಾವವನ್ನು ಗುರುತಿಸುತ್ತದೆ. ಮನಸ್ಸಿನ ಈ ಸ್ಥಿತಿಯಲ್ಲಿ ಕಂಡುಬರುವ ವಿಷಯವೆಂದರೆ, ಪ್ರತಿಯೊಬ್ಬ ಮಾನವ ಕ್ರಿಯೆಯ ಸ್ವಭಾವವನ್ನು ತೀರ್ಮಾನಿಸುವುದೇ ಆಗಿದೆ.

### ಉದ್ದೇಶಗಳು ಚರ್ಯೆಗಳನ್ನು ನಿರ್ಧರಿಸುತ್ತವೆ

ಚರ್ಯೆ ಉದ್ದೇಶಗಳ ಮೇಲೆ ನಿಂತಿದೆ. ಏಕೆಂದರೆ ಚರ್ಯೆಯೋ ಮನಸ್ಸಿನ ಸೂಜಿ ಅಥವಾ ತನ್ನ ಚರ್ಯೆಯನ್ನು ತಾನು ಕಾರ್ಯಗತಗೊಳಿಸುವ ಮನುಷ್ಯನ ಸ್ವಭಾವದಲ್ಲಿ ಮಾಡಿದ ಸಮತೋಲನವನ್ನು ಚಲಾಯಿಸಲು ಮನಸ್ಸು ಆಯ್ಕೆ ಮಾಡಕೊಳ್ಳುತ್ತದೋ ಆ ಕ್ರಮ. ಆದ್ದರಿಂದ ಒತ್ತಡವನ್ನು ಮನಸ್ಸಿನ ಸ್ವಚ್ಛತೆಯ ಮೇಲೆ ಹೇರಲಾಗುತ್ತದೆ ಮತ್ತು ಈ ಸ್ವಚ್ಛತೆ ಸಮತಾಳದ ಮಿಶ್ರಣವನ್ನು ಗುರಿಯಾಗಿಟ್ಟುಕೊಂಡ ಮನುಷ್ಯನ ಸ್ವಭಾವದಲ್ಲಿ ಮೂಡಿರುವ ಸಮತೋಲನದ ಸೂಕ್ತ ಚಾಲನೆಯಿಂದ ಪ್ರವರ್ಧಿಸಲ್ಪಡುತ್ತದೆ. ಒಬ್ಬನ ಸ್ವಂತಿಕೆಯನ್ನು ಮತ್ತು ಇತರರಿಗೆ ನೀಡಬೇಕಾದ ಆಭಾರಗಳನ್ನು ಗುರುತಿಸುವ ಅಗತ್ಯತೆಗಳನ್ನು ಅಖಂಡ ದೃಷ್ಟಿಗಳನ್ನು ಅಕ್ಕಪಕ್ಕದಲ್ಲಿ ಇಡಲಾಗಿದೆ. ಒಬ್ಬನ ಪಾತ್ರ ತನ್ನ ಕೌಟುಂಬಿಕ ವೃತ್ತದಲ್ಲಿ ಅಥವಾ ಸಮಾಜದಲ್ಲಿ, ಏನೇ ಇರಲಿ, ಪ್ರತಿಯೊಬ್ಬನೂ ಈ ದ್ವಿವಿಧ ಹೊಣೆಗಾರಿಕೆಯನ್ನು ಮನಗಾಣಲೇಬೇಕು. ಹೀಗೆ

ಮನಗಾಣುವುದು 'ಒಳ್ಳೆಯದು' ಹೀಗೆ ಮನಗಾಣದೆ ಇರುವುದು ಪಾಪದ್ದು. ಈ ತಿಳುವಳಿಕೆ ಬದುಕಿನ ಎಲ್ಲ ಕ್ಷೇತ್ರದ ಚಟುವಟಿಕೆಯಲ್ಲಿ ಭೌತಿಕ, ಬೌದ್ಧಿಕ, ನೈತಿಕ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ, ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಮೇಲೆತ್ತಿ ಹಿಡಿಯಬೇಕು.

ಕೆಲವೊಮ್ಮೆ ವಿದ್ಯಾರ್ಥಿಗಳು ತಮ್ಮ ಸ್ವಂತ ಸಾಮರ್ಥ್ಯಗಳನ್ನು ಪರೀಕ್ಷಣೆಗೊಳಪಡಿಸಲು ಕಾನೂನು ಭಂಗ ಮಾಡುತ್ತಾರೆ, ಅವರು ತಮ್ಮ ಶಕ್ತಿ ಏನನ್ನಾದರೂ, ಅದು ನಾಶಕಾರಕವಾಗಿದ್ದರೂ ಸರಿ ಸಾಧಿಸುತ್ತದೆ ಎಂಬುದನ್ನು ಕಾಣಲು ರೋಮಾಂಚನಗೊಳ್ಳುತ್ತಾರೆ. ಅವರು ಹಲವಾರು ಸಲ ಅದರ ಪರಿಣಾಮಗಳನ್ನು ಸ್ಪಷ್ಟವಾಗಿ ಕಾಣುವುದಿಲ್ಲ. ಅವರು ಎಷ್ಟು ಎಷ್ಟು ಅಸಹಾಯಕರೆಂದು ಭಾವಿಸುತ್ತಾರೋ ಅಷ್ಟು ಅಷ್ಟು ಅಥವಾ ಅದಕ್ಕಿಂತ ಹೆಚ್ಚಾಗಿ ತಮ್ಮ ಸ್ವಭಾವದಲ್ಲಿ ಬೇಜವಾಬ್ದಾರಿಯನ್ನು ಅನುಭವಿಸುತ್ತಾರೆ.

## 4. ಕಾಲೇಜುಗಳು ಏನು ಮಾಡಬಲ್ಲವು ?

ಹಿರಿಯರು ಕಾನೂನನ್ನು ಉಳಿಸಿಕೊಳ್ಳಲು, ತಮ್ಮ ಶಕ್ತಿಯನ್ನು ಬಳಸಲು ಸಹಾಯ ಮಾಡಬೇಕು ಮತ್ತು ರಚನಾತ್ಮಕವಾಗಿರಬೇಕು ಮತ್ತು ಆ ಮಟ್ಟದಲ್ಲಿ ಸೃಜನಾತ್ಮಕವಾಗಿಯೂ ಇರಬೇಕು. ಅವರ ಬುದ್ಧಿವಂತಿಕೆಯಲ್ಲಿ ಮಾತ್ರವಲ್ಲ ಅವರ ಕೈಮಟ್ಟದಲ್ಲೂ ಹಾಗೆಯೇ ಇರಬೇಕು.

ನನಗೊಂದು ಕನಸು ಬಿತ್ತು
ದೇವರ ತೀರ್ಪಿನ ಆಸನದ ಮುಂದೆ ಒಬ್ಬ ಮನುಷ್ಯ ಬಂದ
ಅವನು ಹೇಳಿದ "ದೇವರೇ, ನೀವು ನೋಡಿ,
ನಾನು ಏನೇ ಕೆಟ್ಟದ್ದನ್ನು ಮಾಡಿಲ್ಲ, ಅಪ್ರಮಾಣಿಕನಾಗಿರಲಿಲ್ಲ
ಅಥವಾ ಅಧಾರ್ಮಿಕನಾಗಿರಲಿಲ್ಲ.
ನನ್ನ ಕೈಗಳು ಶುಭ್ರವಾಗಿವೆ"
"ಆದರೆ?" ದೇವರು ಹೇಳಿದ
"ಅವು ಬರಿಯದಾಗಿವೆ"

## ನೈತಿಕ ಶಿಕ್ಷಣ

ನೈತಿಕ ಶಿಕ್ಷಣ ಮತ್ತು ಧಾರ್ಮಿಕ ಉಪದೇಶ ಇವೆರಡೂ ಸಾಮಾಜಿಕ ನೀತಿಯ ಮೇಲೆ ಮತ್ತು ಗುಂಪು ನೀತಿಯ ಮೇಲೆ ಹೆಚ್ಚು ಒತ್ತಾಯ ಹಾಕಬೇಕು. ಹಿಂಸೆಗೆ ಒಯ್ಯುವ ಸ್ವಾಭಾವಿಕ ಮತ್ತು ಸಂಭವನೀಯ ಹೋರಾಟದ ಕ್ಷೇತ್ರಗಳನ್ನು ಗುರುತಿಸುವ ಸಮಾಜದ ಅಭ್ಯಾಸ ಅತಿ. ಮುಖ್ಯ ಹಾಗೆಯೆ ಅಧಿಕ ರೀತಿಯ ನ್ಯಾಯಕ್ಕೆ ವರದಕ್ಷಿಣೆಯ ಅಥವಾ ಮಾನಭಂಗದ

ಬಲಿಗಳನ್ನು ಕುರಿತ ಸಾರ್ವಜನಿಕ ಚರ್ಚೆಗಳನ್ನು ನೋಡಿ ಮತ್ತು ಹೆಚ್ಚಿನ ಪರಿಣಾಮಕಾರಿತ್ವಕ್ಕೆ ತಿದ್ದುಪಡಿ ಮಾಡಲು ಹಿಂಜರಿತಗಳನ್ನು ಕಾಣಲು ಸಾರ್ವಜನಿಕ ಕಾನೂನಿನ ವ್ಯಾಸಂಗವೂ ಕೂಡ ಮುಖ್ಯವಾದದ್ದೆ.

## ರಚನಾತ್ಮಕ ಚಲನಚಿತ್ರಗಳ ವಿಮರ್ಶೆ

ನೈತಿಕ ಮತ್ತು ಧಾರ್ಮಿಕ ನಿರ್ಮಾಣಗಳ ವರ್ಷಗಳನ್ನು ಕೆಲವು ಕೆಟ್ಟ ಚಿತ್ರಗಳನ್ನು ಹೊರಪಡಿಸುವುದರಿಂದ ಅಳಿಸಿ ಹಾಕಿಬಿಡಬಹುದೆಂದು ಯಾರೋ ಒಬ್ಬರು ಟೀಕಿಸಿದರು. ಸಮಕಾಲೀನ ಚಿತ್ರಗಳನ್ನು ಕುರಿತು ಚರ್ಚಿಸಬೇಕು.

ಬದುಕಿನಲ್ಲಿ ಆದರ್ಶಗಳನ್ನು ಹೊಂದಿರಬೇಕಾದರೆ, ಪ್ರಾತ್ಸಾಹವಿರುವುದು ಅಗತ್ಯ.

## ಕಾಲೇಜಿನ ಧ್ಯೇಯ ಮತ್ತು ಕಾಲೇಜಿನ ಪ್ರಾರ್ಥನಾ ಗೀತೆ

ಅದು ಮತ್ತು ರಾಷ್ಟ್ರಗೀತೆ ವಿದ್ಯಾರ್ಥಿಗಳು ಮತ್ತು (ಉಪಾಧ್ಯಾಯ) ಬದುಕಿಗೆ ಎಷ್ಟು ಹತ್ತಿರವಾಗಿದೆ, ಎಷ್ಟು ಗಟ್ಟಿಯಾಗಿದೆ, ಎಷ್ಟು ಪರಿಣಾಮಕಾರಿಯಾಗಿದೆ. ಅದನ್ನು ಅತಿ ಲಘುವಾಗಿ ಹೊಂದಾಣಿಸಲಾಗದಂಥ ಆದರ್ಶಗಳಿಗೆ ನಿಷ್ಠೆಯನ್ನು ಉತ್ತೇಜಿಸಲು ಎಷ್ಟರ ಮಟ್ಟಿಗೆ ಅನ್ಯಥಾ ಕಾರಣವಾಗಿದೆ. ಸಾರ್ವಜನಿಕ ಹಿತಾಸಕ್ತಿಯ ವಿಷಯಗಳಿಗೆ ಸಂಬಂಧಿಸಿದಂತೆ ಚರ್ಚೆಗಳು ಸಾರ್ವಜನಿಕ ಸಭೆಗಳು ಮತ್ತು ಸಂಪಾದಕರಿಗೆ ಪತ್ರಗಳನ್ನು ಲೇಖಿಸುವದು, ಇತ್ಯಾದಿಗಳ ಮೂಲಕ ಹೇಗೆ ಅಭಿವ್ಯಕ್ತಿಸಬೇಕು ಎಂಬುದನ್ನು ವಿದ್ಯಾರ್ಥಿಗಳಿಗೆ ಹೇಳಿ ಕೊಡಬೇಕು. ಅಪೇಕ್ಷಿತ ಸಾಮಾಜಿಕ ಬದಲಾವಣೆಗಳಿಗೆ ಕ್ರಿಯೆಗಳನ್ನು ಉತ್ತೇಜಿಸಿ, ಚಿತ್ರಪ್ರದರ್ಶನಗಳು, ಎನ್.ಎಸ್.ಎಸ್., ರೋಟರಿ, ಲಯನ್ಸ್, ಲಿಯೊ ಕ್ಲಬ್, ಜಾಯ್‌ಸೀಸ್ ಮತ್ತು ಚರ್ಚು ಮತ್ತು ಧರ್ಮಸಂಬಂಧಿತ ಸೇವಾ ಚಟುವಟಿಕೆಗಳು.

## 5. ವೃತ್ತಿ ಸಂಬಂಧ ಮಾರ್ಗದರ್ಶನ

ನಮ್ಮ ಕಾಳಜಿಯನ್ನು ಪ್ರಮಾಣೀಕರಿಸುವದರಷ್ಟು ಅಪರೂಪವಾಗಿದೆ. ವೃತ್ತಿ ಸಂಬಂಧ ಮಾರ್ಗದರ್ಶನ ಏಕೆಂದರೆ, ಅದು ಅಪೇಕ್ಷಿತವಾಗಿರುವುದಷ್ಟೇ ಅಲ್ಲ, ಈ ನಮ್ಮ ಸ್ಪರ್ಧಾತ್ಮಕ ಮತ್ತು ಜಿಗುಟಾದ ಪ್ರಪಂಚದಲ್ಲಿ ಅವಶ್ಯಕವೂ ಆಗಿರುವುದರಿಂದ 'ವೃತ್ತಿ ವೊಕೇಶನ್' ಎಂಬ ಪದ ಲ್ಯಾಟಿನ್ ಭಾಷೆಯ ಪದ, 'ವೊಕೇರ್' ಎಂಬ ಪದದಿಂದ ಬಂದಿದೆ. ಅದರ ಅರ್ಥ ಕರೆಯನ್ನು ಉತ್ತರಿಸು ಎಂದು.

ವೃತ್ತಿ ಸಂಬಂಧ ಮಾರ್ಗದರ್ಶನದಲ್ಲಿ, ಇಂದಿನ ಸಾರ್ವಜನಿಕ ಹಿತಕ್ಕೆ ನೀಡುವ ಎರಡು ಅಂಶಗಳೆಂದರೆ, ".ಂದು ಪ್ರತಿಯೊಬ್ಬ ನಾಗರಿಕರ ಕಲ್ಯಾಣಕ್ಕಾಗಿ ಸಾಮಾಜಿಕ ಹೊಣೆ‑ಃನ್ನು

ಸ್ವೀಕರಿಸುವುದು. ಎರಡನೆಯದು ಪ್ರತಿ ವ್ಯಕ್ತಿಯ ಭಿನ್ನತೆಗಳನ್ನು ಮತ್ತು ಪ್ರವೃತ್ತಿಗಳನ್ನು ಗುರುತಿಸುವುದಕ್ಕೆ ಮತ್ತು ಬೆಲೆ ಕಟ್ಟುವುದಕ್ಕೆ ಕಾರ್ಯ ವಿಧಾನಗಳ ಅಭಿವೃದ್ಧಿ ಹಾಗೂ ಅವುಗಳನ್ನು ಸರಿಯಾದ ವೃತ್ತಿಗೆ ಅವರನ್ನು ನಿರ್ದೇಶಿಸುವುದು.

### ನಡತೆ (Career)

ನಡತೆಯನ್ನು ಒಂದು ಉದ್ಯೋಗವೆಂದು, ಒಂದು ವ್ಯಾಸಂಗವೆಂದು ಅಥವಾ ಕಾಯಕ ಬದುಕಿನ ಒಂದು ದಾರಿಯೆಂದು ವ್ಯಾಖ್ಯಾನಿಸಲಾಗಿದೆ. ಅದು ಒಂದು ವಿಶಿಷ್ಟ ಕೆಲಸದಲ್ಲಿ ಜೀವನಪರ್ಯಂತ ಆಸಕ್ತಿಯನ್ನು ಸಾಮಾನ್ಯವಾಗಿ ರೂಪಿಸುತ್ತದೆ.

### ಕೆಲಸ (Job)

ಕೆಲಸವನ್ನು ಹಣ ಪಾವತಿಗೆ ಪ್ರತಿಯಾಗಿ, ನೆರವೇರಿಸಿದ ಒಂದು ಚಟುವಟಿಕೆ ಅಥವಾ ಕ್ರಮಬದ್ಧವಾಗಿ ನೆರವೇರಿಸಿದ ಯಾರೊಬ್ಬರ ವೃತ್ತಿ, ಉದ್ಯೋಗ ಅಥವಾ ಕಸುಬು ಎಂದು ವ್ಯಾಖ್ಯಾನಿಸಲಾಗಿದೆ. ನಡತೆಯನ್ನು ಕೆಲಸದಿಂದ ಭಿನ್ನವಾದದ್ದೆಂದು ಹೇಳಬಹುದು. ಕೆಲವು ಜನಕ್ಕೆ ನಡತೆ ಎಂದರೆ ಕೆಲಸ ಎಂದಷ್ಟೇ ಅರ್ಥ. ಆದರೆ ಬಹುಜನಕ್ಕೆ ನಡತೆ ಒಂದು ರೀತಿಯದು, ಕೆಲಸ ಮತ್ತೊಂದು ರೀತಿಯದು.

ನಡತೆಯ ಆಯ್ಕೆ ತನ್ನಷ್ಟಕ್ಕೆ ತಾನೆ ಆಗುವುದಿಲ್ಲ. ತರುಣ ಜನವನ್ನು ಪ್ರಭಾವಿಸುವ ವಿವಿಧ ನಿರ್ಣಾಯಕಗಳಿವೆ. ತಂದೆ ತಾಯಿಗಳು, ಸೋದರರು, ಬಾಲ್ಯದ ಕೌಟುಂಬಿಕ ಪ್ರಾರಂಭಿಕ ಪರಿಸರಗಳು ಮೊದಲಾದವುಗಳ ಪ್ರಭಾವಗಳು.

### ಉದ್ಯೋಗ

ಕಾನೂನು, ಬ್ರಹ್ಮವಿದ್ಯೆ ಅಥವಾ ವಿಜ್ಞಾನಗಳು ಇವುಗಳಂತೆ ಶಿಕ್ಷಣವನ್ನು ಬಯಸುವ ಒಂದು ಕಸುಬು. ನಡತೆಯನ್ನು ಆಯುವುದು ಮತ್ತು ಒಂದು ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುವುದು. ಅದಕ್ಕೆ ನೀವು ಅತ್ಯುತ್ತಮವಾಗಿ ಮತ್ತು ವಿಶೇಷವಾಗಿ ಯುಕ್ತರು. ಆರ್ಥಿಕ ಸೌಲಭ್ಯಗಳನ್ನು ಲೆಕ್ಕಿಸದೆ ಅದು ನಿಮಗೆ ಅರ್ಥಪೂರ್ಣವಾದ ಮತ್ತು ಉದ್ದೇಶಸಹಿತ ಬದುಕನ್ನು ಕೊಡುತ್ತದೆ.

ಖಂಡಿತವಾಗಿ ಹೇಳವುದಾದರೆ, ಬದುಕಿನಲ್ಲಿ ಮೂರು ತೆರನಾದ ವೃತ್ತಿಗಳು ಮಾತ್ರಿವೆ. ಅದೆಂದರೆ ಒಬ್ಬಂಟಿಗನ ಬದುಕು. ವಿವಾಹಿತ ಜೀವನ ಮತ್ತು ಧಾರ್ಮಿಕ ಜೀವನ. ಆಕ್ಸ್‌ಫರ್ಡ್ ಶಬ್ದಕೋಶ ವೃತ್ತಿಯನ್ನು ಬದುಕಿನ ಒಂದು ನಿರ್ದಿಷ್ಟ ಮಾರ್ಗಕ್ಕೆ 'ದೇವವಾಣಿಯ ಕರೆ' ಎಂದು ವ್ಯಾಖ್ಯಾನಿಸುತ್ತದೆ. ಆದ್ದರಿಂದ ತರುಣ ವ್ಯಕ್ತಿಗಳು ವಿವೇಕಪೂರ್ಣವಾಗಿ ಮತ್ತು

ಚೆನ್ನಾಗಿ ಆಯ್ಕೆ ಮಾಡಿಕೊಳ್ಳಲು ಅವರಿಗೆ ಎಚ್ಚರಿಕೆಯಿಂದ ದಾರಿ ತೋರಿಸಬೇಕು ಮತ್ತು ಪ್ರೋತ್ಸಾಹಿಸಬೇಕು.

ಆ ಎಲ್ಲ ಮೂರು ವೃತ್ತಿಗಳೂ ಅರ್ಥಪೂರ್ಣವಾದವು. ಈ ಭೌತಿಕ ಯುಗದಲ್ಲಿ ಧಾರ್ಮಿಕ ಜೀವನಕ್ಕೆ ಸ್ವಲ್ಪ ಮರ್ಯಾದೆ ಅಂಟಿಕೊಂಡಿದೆ. ಆದರೆ, ರೋಗಿಗಳ, ಅಂಗವಿಕಲರ, ಕಳೆದುಕೊಂಡವರ, ಕ್ಷೇಮಾಭ್ಯುದಯಕ್ಕೆ ಸಾಮಾನ್ಯವಾಗಿ ಅರ್ಪಿಸಬಹುದಾದ ಬದುಕು ಎಷ್ಟು ತೃಪ್ತಿಕರವಾಗಿರುತ್ತದೆ ಪೂರ್ಣವಾಗಿರುತ್ತದೆ ಎಂಬುದು ನಮಗೆ ತಿಳಿದಿದೆ, ಕೋಟ್ಯಂತರ ವಿದ್ಯಾರ್ಥಿಗಳು ಭಾರತದಲ್ಲಿ ಮತ್ತು ಪರದೇಶಗಳಲ್ಲಿ ಮದರ್ ತೆರಸಾ ಮತ್ತು ಅವುಳು ಸಹಾಯಿಸಿದ ಸಾವಿನ ದವಡೆಯಲ್ಲಿರುವವರಿಗೆ ನಿರ್ಗತಿಕರಿಗೆ ಮತ್ತು ಅಲಕ್ಷಿತರಿಗೆ ಪ್ರೇರಿತರಾಗಿದ್ದಾರೆ.

## ನಡತೆ

ನಡತೆಯನ್ನು 'ಜೀವನದ ಮೂಲಕ ವ್ಯಾಸಂಗ' ಅಥವಾ 'ಜೀವನೋಪಾಯವನ್ನು ಕಂಡುಕೊಳ್ಳುವ ಮಾರ್ಗ' ಎಂದು ವ್ಯಾಖ್ಯಾನಿಸಲಾಗಿದೆ. ನಡತೆ ಮಾರ್ಗದರ್ಶನ ಒಂದು ಅತ್ಯಂತ ವಿಶೇಷ ವಿಷಯ. ಅದನ್ನು ಎಲ್ಲ ಕಾಲೇಜುಗಳು ಗಂಭೀರವಾಗಿ ಪರಿಗಣಿಸಬೇಕು.

ವಿದ್ಯಾರ್ಥಿ ಒಮ್ಮೆ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡು ಬಿಟ್ಟರೆ, ಆಗ ಅವನು ತನ್ನತನದ ಗಟ್ಟಿ ತಿಳುವಳಿಕೆಯನ್ನು ಪಡೆಯುತ್ತಾನೆ. ಆನಂತರ ಅವನು ಯಾವ ದಾರಿಯನ್ನು ಆರಿಸಬೇಕು ಎಂಬುದನ್ನು ತಿಳಿದುಕೊಳ್ಳುತ್ತಾನೆ.

ಈ ಹಿಂದೆಯೇ ಹೇಳಿದಂತೆ ನೈತಿಕ ಗುಣಗಳು ಬೌದ್ಧಿಕ ಸಾಧನೆಗಿಂತ ಹೆಚ್ಚಿನ ಮೌಲ್ಯವುಳ್ಳದ್ದು ಅವನಲ್ಲಿ ಭದ್ರವಾದ ನೈತಿಕ ತಳಪಾಯವಿದ್ದರೆ ಅವನ ಪ್ರವೃತ್ತಿ, ವಾಸ್ತವಿಕತೆ, ಆಸ್ಪದ ಮತ್ತು ಸೇವೆ ಇವುಗಳೆಲ್ಲದರಿಂದ ಕೂಡಿ ತನಗೆ ಮಾರ್ಗ ತೋರಿಸುವಂತೆ ತಾನೇ ಒಪ್ಪಿಕೊಳ್ಳುತ್ತಾನೆ. ಇಲ್ಲಿ ನನ್ನ ಅರ್ಥ ಇಷ್ಟೆ ಅವನ "ಪ್ರವೃತ್ತಿ ಅಥವಾ ಸಾಮರ್ಥ್ಯ ಅಥವಾ ಕೌಶಲ" ಇವುಗಳನ್ನು ಅವನಿಂದ ಮೊದಲೇ ಗುರುತಿಸಲ್ಪಟ್ಟಿರಬೇಕು. ಅವನಿಗೆ ಹಲವಾರು ಕೌಶಲಗಳಿದ್ದರೆ ಆಗ ಅವನಿಗೆ ಅವನ ಪ್ರಬಲತರ ಅವಶ್ಯಕತೆಯನ್ನು ಅವನೇ ಕಂಡುಹಿಡಿಯಲು ಅವನಿಗೆ ತಿಳುವಳಿಕೆ ಹೇಳುವವರು ಬೇಕಾಗುತ್ತಾರೆ. ಅದರಲ್ಲಿ ಒಂದು, ವಿಶೇಷವಾಗಿ ಅವನು ಹುಡುಗನಾಗಿದ್ದರೆ, ಸಾಕಷ್ಟು ಶಿಕ್ಷಣ ಅಥವಾ ವ್ಯಾಸಂಗದ ಅನಂತರ ಅವನಿಗೆ ಜೀವನೋಪಾಯವನ್ನು ಪಡೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿರುವುದು. ಅವನು / ಅವಳು ಅವನ / ಅವಳ ಸ್ವಂತ ಸಾಮರ್ಥ್ಯಕ್ಕೆ ಆರೋಗ್ಯಕರಾವಾಗಿ, ಬೌದ್ಧಿಕವಾಗಿ ಇತ್ಯಾದಿಯಾಗಿ ವ್ಯಾಸಂಗವನ್ನು ಮುಂದುವರಿಸಲು ಅನುಭವಜನ್ಯ ಬುದ್ಧಿಯನ್ನು ಕೂಡ ಹೊಂದಿರಬೇಕು.

'ಆಸ್ಪದ' ಎಂದರೆ ಶಿಕ್ಷಣ ಅಥವಾ ವ್ಯಾಸಂಗದ ಆನಂತರ ಅವನು / ಅವಳು ಉದ್ಯೋಗವನ್ನು ಅಥವಾ ಆದಾಯ ಹುಟ್ಟಿಸುವ ಕೆಲಸವನ್ನು ಕಂಡುಕೊಳ್ಳುವ ಸಾಮರ್ಥ್ಯವನ್ನು ಹೊಂದಿರುವುದು.

ಸೇವೆಯನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಅದು ವಿಶೇಷವಾಗಿ ನಮ್ಮ ದೇಶದಲ್ಲಿ ಎಂದರ್ಥ. ಏಕೆಂದರೆ ನಮ್ಮಲ್ಲಿ ಒಬ್ಬ ಶಿಕ್ಷಿತ ವ್ಯಕ್ತಿ ಯಾವುದಾದರೂ ಒಂದು ಅಥವಾ ಮತ್ತೊಂದು ರೀತಿಯಲ್ಲಿ ಸೇವೆ ಸಲ್ಲಿಸುವ ಉದ್ದೇಶವನ್ನು ಅಂತರ್ಗತವಾಗಿ ಹೊಂದಿರಬೇಕು.

## ಪ್ರವೃತ್ತಿ ಪರೀಕ್ಷಣೆ

ಇದನ್ನು ಕೆಲವು ಕೇಂದ್ರಗಳಲ್ಲಿ ನಡೆಸುತ್ತಾರೆ. ಆದರೆ, ಗೊಂದಲಗೊಂಡ ಅಥವಾ ಯಾವುದೇ ಒಂದು ನಡತೆ (ಉದ್ಯೋಗ)ವೇ ತಂದೆ ತಾಯಿಗಳಿಂದ ಅಥವಾ ಸನ್ನಿವೇಶಗಳಿಂದ ತಪ್ಪು ನಿರ್ದೇಶನ ಹೊಂದಿದಾಗ, ಅವರು ಬೇರೆ ಬಗೆಯಾಗಿ ಭಾವಿಸಿದಾಗ ಅಥವಾ ಪ್ರಬಲವಾಗಿ ಮತ್ತೊಂದು ನಡೆತೆಗೆ ಅಂಟಿಕೊಂಡಿರುವಾಗ, ಅಂಥವರಿಗೆ ಇನ್ನು ಹೆಚ್ಚಿನ ಕೇಂದ್ರಗಳು ದೊರಕುವಂತಿರಬೇಕು. ಅದು ಬಹುವಾಗಿ ಅನೇಕ ಸಲ ಭಾರತದಲ್ಲಿ ನಡೆಯುತ್ತದೆ. ಅಲ್ಲದೆ ಅತಿ ಹೆಚ್ಚಿನ ಅನಾವಶ್ಯಕ ನರಳುವಿಕೆಗೆ ಕಾರಣ ಮತ್ತು ಮಾನವ ಸಂಪನ್ಮೂಲಗಳ ಹಾಳು "ನಾವು ಸೋಲಿಗೆ ಯೋಜನೆ ಮಾಡಬಾರದು, ಆದರೆ ನಾವು ಎಷ್ಟೋ ಯೋಜನೆ ಮಾಡುವಲ್ಲಿ ಸೋಲುತ್ತೇವೆ"

ವಿಜ್ಞಾನ ಹುಡುಗ ಹುಡುಗಿಯರನ್ನು ತನ್ನೆಡೆಗೆ ಹೆಚ್ಚು ಹೆಚ್ಚಾಗಿ ಆಕರ್ಷಿಸುತ್ತದೆ. ಕಲಾ ವಿಷಯಗಳ ಮತ್ತು ಮಾನವ ಶಾಸ್ತ್ರದ ವಿಷಯಗಳು, ವ್ಯಾಸಂಗಗಳು ಅನೇಕ ವೇಳೆ ಉತ್ತಮವಾಗಿ ಯೋಜಿಸಲ್ಪಟ್ಟಿರುವುದಿಲ್ಲ. ವಿಜ್ಞಾನಕ್ಕೆ ವಿಭಜನಾ ಕ್ರಮದ ಮನಸ್ಸು, ಕ್ರಮಬದ್ಧ ಅಭ್ಯಾಸ ಮತ್ತು ಸಾತತ್ಯ (ಸಂತತವಾಗಿರುವಿಕೆ) ಅಗತ್ಯ.

ವಾಣಿಜ್ಯ, ಸಮಾಜ ವಿಜ್ಞಾನ, ತಾಂತ್ರಿಕ ಮತ್ತು ಕೃಷಿಕ ವ್ಯಾಸಂಗಗಳು ಈ ನಡುವೆ ಹೆಚ್ಚು ಅನುಕೂಲವಾದ ಅಭ್ಯಾಸಗಳಾಗುತ್ತಿವೆ.

ಸ್ತ್ರೀಯರು, ಅವರು ವಿವಾಹವಾಗಲು ಇಚ್ಛಿಸಿದರೆ ಗೃಹಿಣಿಯಾಗಿ, ತಾಯಿಯಾಗಿ ನಡೆಸುವ ಪಾತ್ರದ ಜೊತೆಗೆ ಯಾವುದಾದರೊಂದು (ನಡತೆಯನ್ನು) ಕೆಲಸವನ್ನು ಆಯ್ದುಕೊಳ್ಳುವುದು ಅಗತ್ಯ.

ಭಾಷಾ ಬೋಧನೆ, ಅಂಗವಿಕಲರೊಡನೆ ಕೆಲಸ ಮಾಡಲು ಶಿಕ್ಷಣ ಮತ್ತು ಗೃಹ ಸಂಬಂಧಿ ಕುಶಲಕಲೆಗಳು ತುಂಬ ಉಪಯೋಗಕರವಾದದ್ದು ಮತ್ತು ತೃಪ್ತಿಕರವಾದ ಉದ್ಯೋಗಗಳು.

ವಿದ್ಯಾರ್ಥಿಗಳು ಈಗಾಗಲೆ, ತಮ್ಮ ತಮ್ಮ ನಡತೆಯಲ್ಲಿ ಸ್ಥಾಪಿತವಾಗಿರುವ ಪುರುಷರು ಮತ್ತು ಸ್ತ್ರೀಯರು ಇವರೊಡನೆ ಮಾತನಾಡಲು ಅವಕಾಶವನ್ನು ಕಲ್ಪಿಸಬೇಕು, ಬುದ್ಧಿವಾದ ಮತ್ತು ಮಾರ್ಗದರ್ಶನದಿಂದ ಹೆಚ್ಚಿನ ವಿದ್ಯಾರ್ಥಿಗಳು ಸರಿಯಾದ ಆಯ್ಕೆಯನ್ನು ಆರಿಸಿಕೊಳ್ಳಲು ಸಮರ್ಥರಾಗುತ್ತಾರೆ.

ನಾಯಕತ್ವದ ಗುಣಗಳನ್ನು ಪ್ರೋತ್ಸಾಹಿಸಬೇಕು. ಸಮರ್ಥ ನಾಯಕರನ್ನು ಚೆನ್ನಾಗಿ ತಿದ್ದಬೇಕು. (ಜೀವನ ಮಾರ್ಗ) ಮಾರ್ಗದರ್ಶನದ ಅವಶ್ಯಕತೆ ಇಂದು ಅತಿ ಪ್ರಾಮುಖ್ಯವನ್ನು ವಹಿಸಿಕೊಂಡಿದೆ ಅದಕ್ಕೆ ಕಾರಣ :

1. ಕೆಲಸಕ್ಕೆ ಸ್ಪರ್ಧೆ
2. ಉದ್ಯೋಗಗಳ ಸಂಖ್ಯೆ ಕಡಿಮೆ
3. ತಾಂತ್ರಿಕ ಜ್ಞಾನದಲ್ಲಿ ಬದಲಾವಣೆಗಳು, ಉದಾಹರಣೆಗೆಃ ಕಂಪ್ಯೂಟರ ತಂತ್ರಜ್ಞತೆ
4. ಸಾಮಾಜಿಕ ರಚನೆಯಲ್ಲಿ ಪರಿವರ್ತನೆಗಳು ಕೌಟುಂಬಿಕ ಬೆಂಬಲದ ರಚನೆಯಲ್ಲಿ ಮುರಿದು ಬೀಳುವಿಕೆ.
5. ತರುಣ ಜನ ಪರಿವರ್ತನೆಯಾಗುತ್ತಿದ್ದಾರೆ, ಒಬ್ಬ ತರುಣ ಮನುಷ್ಯ ತುಂಬಾ ಸಮಸ್ಯೆಗಳನ್ನು ಎದುರಿಸುತ್ತಾನೆ.

ಅ. ತರುಣ ವ್ಯಕ್ತಿ ಮಾಡಬೇಕಾದ ಅಸಂಖ್ಯಾತ ತೀರ್ಮಾನಗಳು ಹೆಚ್ಚಾಗಿ ಬೆಳೆದಿವೆ. ಅವನು ಧರಿಸುವ ಉಡುಪು, ಅವನ ಜೀವನ ಮಾರ್ಗ, ವಿವಾಹ, ಅವನು ವಾಸಿಸುವ ಸ್ಥಳ ಮತ್ತು ಬದುಕಿನ ಶೈಲಿಗಳ ಮಾದರಿ, ಮೊದಲಾದವು ಸ್ವಲ್ಪ ಕಾಲದ ನಂತರ ಅವನು ತೀರ್ಮಾನಗಳನ್ನು ಕೈಕೊಳ್ಳುವದನ್ನೇ ನಿಲ್ಲಿಸಿ ಬಿಡುತ್ತಾನೆ. ಕಡೆಗೆ ಅವನು ಮಾಧ್ಯಮಗಳು, ಸಂಗಡಿಗರು ಹೇಳುವುದನ್ನು ಒಪ್ಪಿಕೊಳ್ಳುತ್ತಾನೆ.

ಆ. ಒಬ್ಬ ವ್ಯಕ್ತಿ ತನಗೆ ತಾನು ಪಡೆಯುವ ಹೂಡುವಳಿಯ ಸಂಖ್ಯೆ ಅತಿ ಹೆಚ್ಚಿನದು, ಮೊದಲಿಗೆ ಅದು ಕುಟುಂಬ. ಈಗ ಅದು, ಕುಟುಂಬದ ಆರ್ಥಿಕ ಸ್ಥಿತಿಯ ಮತ್ತು ಸೋದರ ಸೋದರಿ ಸಮೂಹದ ಲಕ್ಷ್ಯವಿಲ್ಲದೆ ಸ್ಪರ್ಧಿಸುವ ಮಾಧ್ಯಮಗಳಾಗಿವೆ.

ಹೊವಾರ್ಡ್ ಗಾರ್ಡನ್ ಅವನ ಪ್ರಕಾರ ಆರು ಬಗೆಯ ಬುದ್ಧಿಗಳಿವೆ

**1. ಗಣಿತ ತರ್ಕ ಶಾಸ್ತ್ರದ್ದು**

ಈ ಬಗೆಯ ಬುದ್ಧಿಯ ಅಥವಾ ಪ್ರವೃತ್ತಿಯ ಜನ ಗಣಿತವನ್ನು ಅಥವಾ ತರ್ಕಶಾಸ್ತ್ರ, ಭೌತಶಾಸ್ತ್ರ ಇತ್ಯಾದಿಗಳಂಥ ಸಂಬಂಧಿತ ವಿಷಯಗಳನ್ನು ತೆಗೆದುಕೊಳ್ಳಬಹುದು.

2. **ಭಾಷಾ ಶಾಸ್ತ್ರದ್ದು**

ಈ ಕ್ಷೇತ್ರದಲ್ಲಿರುವವರು ಬರಹಗಾರರಾಗಬಹುದು, ಕವಿಗಳಾಗಬಹುದು, ವ್ಯಾಪಾರಿಗಳಾಗಬಹುದು, ಪುರೋಹಿತರಾಗಬಹುದು, ಇದೇ ರೀತಿಯ ಇತರರೂ ಆಗಬಹುದು.

3. **ಸಂಗೀತದ**

ವಿವರಣೆ ಅನಗತ್ಯ. ಅವರು ಆದರಿಂದಲೇ ಜೀವನೋಪಾಯವನ್ನು ಸಾಧಿಸಿಕೊಳ್ಳಬಹುದು.

4. **ಸ್ಥಳ ಸಂಬಂದದ್ದು**

ಈ ಬಗೆಯ ಬುದ್ಧಿಯುಳ್ಳವರು ಕಲಾವಂತರು, ವಾಸ್ತು ಶಿಲ್ಪಿಗಳು, ಛಾಯಾ ಚಿತ್ರಗಾರರು, ಮೊದಲಾದವರು ಆಗಬಹುದು.

5. **ವೈಯಕ್ತಿಕ ಅಂತರಾಂತರ**

ಈ ರೀತಿಯ ಬುದ್ಧಿಯುಳ್ಳವರು, ಒಳ್ಳೆಯ ಉಪಾಧ್ಯಾಯರು, ಹಿತವಾದಿಗಳು ಮತ್ತು ವ್ಯಾಪಾರ ಸಿಬ್ಬಂದಿಯವರು ಆಗಬಹುದು.

6. **ಶರೀರ ಚಾಲನತ್ವ**

ಈ ಪ್ರವೃತ್ತಿಯವರು ನರ್ತನ, ಶರೀರ ವ್ಯಾಯಾಮ ಇತ್ಯಾದಿಗಳಲ್ಲಿ ನಿಪುಣರಾಗಬಹುದು. ಜೀವನ ಮಾರ್ಗದ (ನಡತೆಯು) ಆಯ್ಕೆ ಒಂದು

ಕಾರ್ಯವಿಧಾನ - ಅದೊಂದು ಘಟನೆಯಲ್ಲಿ



ನಾಲ್ಕು ಅಗತ್ಯಗಳು




ಉದ್ಯೋಗ (ನಡತೆ) ಆಯ್ಕೆಯಲ್ಲಿ ಹೆಜ್ಜೆಗಳು




## ನಡತೆ (ಉದ್ಯೋಗ) ಆಯ್ಕೆಯ ಕಾರ್ಯ ರೀತಿ

### 1. ತನ್ನನ್ನು ತಾನು ತಿಳಿದುಕೊಳ್ಳುವುದು

ಕಲ್ಪನೆ - ನಾನು ಏನಾಗಬೇಕು - ವಾಸ್ತವಿಕ ಆಧಾರದ ಮೇಲೆ - ತನ್ನನ್ನು ತಾನು ಅಡಗಿಸಿಕೊಳ್ಳುವುದು ಅಗತ್ಯ - ಆತ್ಮ ನಿರೀಕ್ಷಣೆಯ ನಂತರ - ತನ್ನನ್ನು ತಾನು ಕಂಡುಕೊಂಡ ಮೇಲೆ - ತಿಳಿದುಕೊಂಡ ಮೇಲೆ ನಾವು ಕಾರ್ಯ ಪ್ರಪಂಚವನ್ನು ಅರ್ಥ ಮಾಡಿಕೊಳ್ಳಬೇಕು.

### 2. ಕಾರ್ಯಪ್ರಪಂಚವನ್ನು ತಿಳಿದುಕೊಳ್ಳುವುದು

ನಮಗೆ ಇಂದು ತೆರೆದಿರುವ ವಿವಿಧ ಮಾರ್ಗಗಳನ್ನು ಮತ್ತು ಹೊರದಾರಿಗಳನ್ನು ನಾವು ಅರ್ಥ ಮಾಡಿಕೊಳ್ಳಲೇಬೇಕು. ವಿವಿಧ ಕಸುಬಿನ ಅವಕಾಶಗಳ ಮತ್ತು ವಿಜ್ಞಾನ ಕಲೆಗಳು ಮತ್ತು ವಾಣಿಜ್ಯಗಳ ಶಾಖೆಗಳ.

### 3. ಉದ್ಯೋಗ (ನಡತೆ) ಆಯ್ಕೆ

ಕಾರ್ಯ ಪ್ರಪಂಚವನ್ನು ಅರ್ಥ ಮಾಡಿಕೊಂಡ ಮೇಲೆ ಮತ್ತು ತನ್ನನ್ನು ತಾನು ತಿಳಿದುಕೊಂಡ ಮೇಲೆ ಅವನು ತಾನು ಅಂತಿಮವಾಗಿ ಯಾವುದರಿಂದ ಆಯ್ಕೆ ಮಾಡಿಕೊಳ್ಳಬಲ್ಲ ಎಂಬುದರ ಬಗ್ಗೆ ಪರ್ಯಾಯವನ್ನು ಕಂಡುಕೊಳ್ಳಬೇಕು. ಪ್ರತಿಯೊಬ್ಬನು ಯಾವುದರಿಂದ ಆಯ್ಕೆ ಮಾಡಿಕೊಳ್ಳುತ್ತಾನೆ ಅಂಥಲ್ಲಿ ಯಾವಾಗ್ಲೂ ಎರಡಕ್ಕಿಂತ ಹೆಚ್ಚು ಪರ್ಯಾಯಗಳನ್ನು ಹೊಂದಿರಬೇಕು.

## ಕಾಲೇಜು ಸಿಬ್ಬಂದಿಗೆ ಪ್ರತಿಕ್ರಿಯೆಗಳಿಗೆ ಮತ್ತು ವಿನಿಮಯಕ್ಕೆ ಪ್ರಶ್ನೆಗಳು

1. ನಿಮ್ಮ ವಿದ್ಯಾರ್ಥಿಗಳಿಗೆ ಅಥವಾ ನಿಮ್ಮ ಸ್ಥಳೀಯ ಜಾಗದಲ್ಲಿ ಎಷ್ಟು ಪ್ರಮಾಣದಲ್ಲಿ ಉದ್ಯೋಗ ಮಾರ್ಗದರ್ಶನ ಸೇವೆಗಳು ಈಗಾಗಲೆ ದೊರಕಬಲ್ಲದು ?
2. ಕ್ರಮಬದ್ಧ ರೀತಿಯಲ್ಲಿ ಅಂಥ ಸೇವೆಗಳನ್ನು ಸ್ಥಾಪಿಸಲು ಬೇಕಾದ ಅಗತ್ಯತೆಗಳೇನು ?
3. ಸೇವೆಯನ್ನು ಸ್ಥಾಪಿಸಲು ನೀವು ಯಾವ ವ್ಯವಹಾರಿಕ ಮಾರ್ಗೋಪಾಯಗಳನ್ನು ಸೂಚಿಸುತ್ತೀರಿ ?

   - ದೀರ್ಘ ಅವಧಿಯ ಕಾರ್ಯಕ್ರಮಕ್ಕೆ
   - ತತ್‌ಕ್ಷಣದ ಕಾರ್ಯಕ್ರಿಯೆಗೆ

## ವರ್ಗ ಚಟುವಟಿಕೆ

1. ವಿವಾದ / ಚರ್ಚೆ

1. ಆಧುನಿಕತೆ ಎಂದರೆ ಪಾಶ್ಚಾತ್ತೀಕರಣ
2. ಮಹಾತ್ಮಾ ಗಾಂಧಿ ಹೇಳಿದರು "ಒಳ್ಳೆ ನಡತೆಯುಳ್ಳ ಮನುಷ್ಯ ಅವನಿಗೆ ಒದಗಿಸಿದ ಯಾವುದೇ ಸ್ಥಾನಕ್ಕೆ ತನ್ನನ್ನು ಯೋಗ್ಯನನ್ನಾಗಿ ಮಾಡಿಕೊಳ್ಳುತ್ತಾನೆ.
3. ಸತ್ಯ ಮತ್ತು ಅಹಿಂಸೆ ಸಾಮಾಜಿಕ ಮೌಲ್ಯಗಳು. ನನ್ನ ಜನದ ನರಳುವಿಕೆಯನ್ನು ತಡೆಯುವುದಕ್ಕಿಂತ ಹೆಚ್ಚಾಗಿ ಮಾನವ ಸ್ವಭಾವದ ಕ್ರೌರ್ಯವನ್ನು ತಡೆಯುವುದರಲ್ಲಿ ನಾನು ಹೆಚ್ಚು ಆಸಕ್ತಿಯುಳ್ಳವನು.

- ಗಾಂಧಿ

2. ನಿಮ್ಮ ಭವಿಷ್ಯದ ವೃತ್ತಿಯನ್ನು, ನಡತೆಯನ್ನು ಮತ್ತು ಜೀವನ ಶೈಲಿಯನ್ನು ಕುರಿತು ಸಾಕಷ್ಟು ಯೋಚನೆ ಮಾಡಿದ್ದೀರಾ ?
3. ಪ್ರಶ್ನಾವಳಿ

   1. ಸ್ವತಂತ್ರವಾಗಿ ಆಯ್ಕೆ ಮಾಡುವುದು.
   2. ಪರಿಣಾಮಗಳನ್ನು ಯೋಚಿಸಿದ ಮೇಲೆ ಆಯ್ಕೆ ಮಾಡುವುದು.
   3. ಸಾರ್ವಜನಿಕ ಭೇಟಿಗಳು
   4. ಮೌಲ್ಯಾಧಾರಿತ ಮತ ನೀಡಿಕೆ

## ಅ. ಬದುಕಿನ ಭಾಗ

### ಉದ್ದೇಶ

ಇದು ವಿದ್ಯಾರ್ಥಿಗಳನ್ನು ಕುರಿತು ಅವರ ಬದುಕುಗಳ ದಾಸ್ತಾನುಗಳ ವಿವರಗಳನ್ನು ಕೇಳುತ್ತದೆ, ಅವರು ತಮ್ಮ ಕಾಲ, ಹಣ ಇತ್ಯಾದಿಗಳನ್ನು, ವಾಸ್ತವವಾಗಿ ಹೆಗೆ ವ್ಯಯ ಮಾಡುತ್ತಾರೆ ಎಂಬುದನ್ನು ನೋಡಲು ಪ್ರಶ್ನಿಸುತ್ತದೆ. ಅವರು ತಮ್ಮ ಬದುಕಿನಲ್ಲಿ ಈಗ ಪಡೆಯುತ್ತಿರುವುದಕ್ಕಿಂತ ಮುಂದೆ ಏನನ್ನು ಬಯಸುತ್ತಾರೆ ಎಂಬುದನ್ನು ತಿಳಿದು ಮುಂದುವರಿಯುವ ಆಶೆಯನ್ನು ಹೊಂದಿದ್ದರೆ ಆಗ ಈ ಮಾಹಿತಿ ಅಗತ್ಯವೆನಿಸುತ್ತದೆ.

### ಕಾರ್ಯ ರೀತಿ

ಶಿಕ್ಷಕನು ಬೋರ್ಡಿನ ಮೇಲೆ ಒಂದು ದೊಡ್ಡ ವೃತ್ತವನ್ನು ಬರೆದು ಹೇಳುತ್ತಾನೆ: "ಈ ವೃತ್ತ ನಿಮ್ಮ ಬದುಕಿನ ಒಂದು ಭಾಗವನ್ನು ಪ್ರತಿನಿಧಿಸುತ್ತದೆ. ಇಂಥ ಹಲವಾರು ಭಾಗಗಳನ್ನು ತಯಾರಿಸುತ್ತೇವೆ. ಮೊದಲಿಗೆ, ನೀವು ಒಂದು ಮಾದರಿ ದಿನವನ್ನು ಹೇಗೆ ಉಪಯೋಗಿಸುತ್ತೀರಿ ಎಂಬುದನ್ನು ನೋಡುತ್ತೇವೆ. ನಿಮ್ಮ ವೃತ್ತವನ್ನು ಚುಕ್ಕಿಗಳ ಸಾಲಿನಿಂದ ನಾಲ್ಕು ವಿಭಾಗ ಮಾಡಿ ಪ್ರತಿಯೊಂದು ಭಾಗ ಆರು ಗಂಟೆ ಅವಧಿಯನ್ನು ಪ್ರತಿನಿಧಿಸುತ್ತದೆ. ಈಗ ಪ್ರತಿಯೊಬ್ಬರೂ ಶಾಲೆಯ ಮಾದರಿ ದಿನವೊಂದನ್ನು ಈ ಕೆಳಗಿನ ಪ್ರತಿಯೊಂದು ಕ್ಷೇತ್ರಗಳಲ್ಲಿ ನೀವು ಎಷ್ಟು ಗಂಟೆಗಳನ್ನು ಅಥವಾ ಗಂಟೆಗಳ ಭಾಗಗಳನ್ನು ವ್ಯಯ ಮಾಡುತ್ತೀರಾ ಎಂಬುದನ್ನು ಅಂದಾಜು ಮಾಡಿ. ಸ್ವಾಭಾವಿಕವಾಗಿ ನಿಮ್ಮ ಉತ್ತರ ಒಂದಕ್ಕಿಂತ ಒಂದು ಭಿನ್ನವಾಗಿರುತ್ತದೆ. ಎಷ್ಟು ಗಂಟೆಗಳನ್ನು ನೀವು ವ್ಯಯಿಸುತ್ತೀರಾ ?

1. ನಿದ್ರೆಯಲ್ಲಿ
2. ಶಾಲೆ / ಕಾಲೇಜಿನಲ್ಲಿ
3. ಪ್ರಾರ್ಥನೆಯಲ್ಲಿ
4. ಮಿತ್ರರೊಡನೆ
5. ಮನೆ ಪಾಠಗಳ ಅಭ್ಯಾಸದಲ್ಲಿ
6. ಏಕಾಂತವಾಗಿ ಆಟದಲ್ಲಿ ಬಾನುಲಿ ಕೇಳುವಲ್ಲಿ ಇತ್ಯಾದಿ
7. ಮನೆಯ ಸುತ್ತಮುತ್ತ ಕೆಲಸ ಮಾಡುವಲ್ಲಿ
8. ಊಟದ ಕಾಲವೂ ಸೇರಿದಂತೆ ಕುಟುಂಬದೊಡನೆ
9. ಇತರ ಸಂಕೀರ್ಣ ಆಟಪಾಟಗಳಲ್ಲಿ

ನಿಮ್ಮ ಅಂದಾಜು ಖಚಿತವಾಗಿರುವುದಿಲ್ಲ. ಆದರೆ ಅದು ಪ್ರತಿಯೊಬ್ಬನ ದಿನದ ಗಂಟೆಗಳನ್ನು ಎಂದರೆ 24 ಗಂಟೆಗಳನ್ನು ಒಟ್ಟಾಗಿ ಸೇರಿಸಬೇಕು. ಆದರೆ ನಿಮ್ಮ ವೃತ್ತದಲ್ಲಿ ಪ್ರತಿಯೊಂದು ವರ್ಗದಲ್ಲಿ ನೀವು ವ್ಯಯಿಸಿದ ಭಾಗವನ್ನು ಸಮಕಟ್ಟಾಗಿ ಪ್ರತಿನಿಧಿಸುವಂತೆ ಭಾಗಗಳನ್ನು ಗುರುತಿಸಿ.

ಈಗ ಈ ಪ್ರಶ್ನೆಗಳನ್ನು ಕುರಿತು ಆಲೋಚನೆ. ನಿಮ್ಮ ಕಾಪಿ ಪುಸ್ತಕದಲ್ಲಿ ಅವುಗಳ ಬಗ್ಗೆ ಬರೆಯಿರಿ.

1. ನೀವು ಮಾಡಿಕೊಂಡ ಭಾಗಗಳ ಪರಸ್ಪರ ಆಕಾರಗಳ ಬಗ್ಗೆ ನಿಮಗೆ ತೃಪ್ತಿಯಾಗಿದೆಯೆ?

2. ಆದರ್ಶವಾಗಿ, ಪ್ರತಿಯೊಂದು ಭಾಗವೂ ಎಷ್ಟು ದೊಡ್ಡದಾಗಿರಬೇಕೆಂದು ನೀವು ಇಚ್ಛಿಸುತ್ತೀರಾ? ನಿಮ್ಮ ಆದರ್ಶ ವೃತ್ತವನ್ನು ಬರೆಯಿರಿ.

3. ಅನುಭವ ಸಿದ್ಧವಾಗಿ ನಿಮ್ಮ ಭಾಗ ಕೆಲವುದರ ಆಕಾರವನ್ನು ಪರಿವರ್ತಿಸಲು ಆರಂಭಿಸುವುದಕ್ಕೆ ನೀವೇನಾದರೂ ಮಾಡಬಲ್ಲಿರಾ ?

4. ನಿಮ್ಮ ಹೆಸರನ್ನು ಸಹಿ ಮಾಡುವ ಮತ್ತು ರೂಪಿಸುವ ಅಪೇಕ್ಷೆಯನ್ನು ಹೊಂದಿರಲು ಏನಾದರೂ ಸ್ವಯಂ ಒಪ್ಪಂದವಿದೆಯೇ ?

## ಟಿಪ್ಪಣಿ

ವೃತ್ತವನ್ನು ಭಾಗಿಸುವಲ್ಲಿ ಯಾವುದೇ ಸರಿಯಾದ ಮಾರ್ಗವಿಲ್ಲವೆಂಬ ಅಂಶವನ್ನು ಒತ್ತಾಯ ಮಾಡಿ. ಪರಿವರ್ತಿಸುವ ಯಾವುದೇ ತೀರ್ಮಾನಗಳು ಪ್ರತಿ ವ್ಯಕ್ತಿಗೆ ಸಂಬಂಧಿಸಿದ್ದು.

ಬದುಕಿನ ವೃತ್ತದಲ್ಲಿನ ಭಾಗಗಳ ದೃಷ್ಟಿಯಲ್ಲಿ ನೋಡಬಹುದಾದ ವಿಷಯಗಳು ಬೇಕಾದಷ್ಟಿವೆ. ಉದಾಹರಣೆಗೆ: ಒಂದು ವೃತ್ತ. ಪ್ರತಿ ವಾರವೂ ಹಣ ಎಲ್ಲಿಗೆ ಹೋಗುತ್ತದೆ ಎಂಬುದು ನಿಮ್ಮ ವಸ್ತ್ರದ ಬೀರುವಿನಲ್ಲಿ ನೇತುಬಿದ್ದಿರುವ ವಿವಿಧ ರೀತಿಯ ಬಟ್ಟೆಗಳು ಎಂಥವು ಎಂಬುದು. ನೀವು ಕೇಳುವ ಸಂಗೀತ ಅಥವಾ ನೀವು ಓದುವ ಪುಸ್ತಕಗಳು, ಪತ್ರಿಕೆಗಳು ಮತ್ತು ವೃತ್ತ ಪತ್ರಿಕೆಗಳು ಯಾವುವು ಎಂಬುದು ಅಥವಾ ನಿಮ್ಮ ಮನೆಗೆ ಭೇಟಿ ಕೊಡುವ ಜನ, ಮೊದಲಾದವುಗಳು.

## ಅ. ಸಾಮಾಜಿಕ ಮೌಲ್ಯಗಳು

ಅಂಥ ಸನ್ನಿವೇಶಗಳಲ್ಲಿ ನೀವು ವೈಯಕ್ತಿಕವಾಗಿ, ಪ್ರಾಮಾಣಿಕವಾಗಿ ಏನನ್ನು ಮಾಡುತ್ತೀರಿ ಎಂದು ಭಾವಿಸುತ್ತೀರಿ ಎಂಬ ಉತ್ತರವನ್ನು ಗುರುತಿಸಿ.

1. ನೀವು ಒಂದು ಕಾರಖಾನೆಯ ಮಾಲೀಕರಾಗಿದ್ದರೆ ನೀವು ಹೀಗೆ ಮಾಡುತ್ತಿದ್ದಿರಾ ?

ಅ. ಕೆಲಸಗಾರರೊಡನೆ ನಿಮ್ಮ ಲಾಭವನ್ನು ಹಂಚಿಕೊಳ್ಳುತ್ತಿದ್ದಿರಾ ?

ಆ. ನಿಮ್ಮ ಕೆಲಸಗಾರರಿಗೆ ಜೀವನಕ್ಕೆ ಶಷ್ಯ ಮಂಜೂರಿಯನ್ನು ಕೊಡುತ್ತಿದ್ದಿರಾ ?

ಇ. ಕಡಿಮೆ ಕೂಲಿಗೆ ಕೆಲಸ ಮಾಡಲು ಇಚ್ಛಿಸುವ ಕೆಲಸಗಾರರನ್ನು ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದಿರಾ ?

2. ನೀವೊಬ್ಬ ಕಾರ್ಖಾನೆ ಮಾಲೀಕರಾಗಿದ್ದರೆ ಕೆಲಸಗಾರರಿಗೆ ಕೆಳಕಂಡ ಸೌಲಭ್ಯಗಳನ್ನು ಒದಗಿಸುತ್ತಿದ್ದಿರಾ ?

ಅ. ತಮ್ಮ ಸ್ವಂತ ತೀರ್ಮಾನಗಳನ್ನು ಕೈಕೊಳ್ಳುವ

ಆ. ಕೆಲಸಗಾರರೊಡನೆ ಸಮಾಲೋಚಿಸುವ

ಇ. ಉತ್ಪನ್ನವನ್ನು ಉತ್ತೇಜಿಸುವ ಸಲುವಾಗಿ ಕೆಲಸಗಾರರನ್ನು ಬಳಸಿಕೊಳ್ಳುವ

3. ನೀವೊಬ್ಬ ಕಾರಖಾನೆ ಮಾಲಿಕರಾಗಿದ್ದರೆ ಇವುಗಳಲ್ಲಿ ಯಾವುದಕ್ಕೆ ಆದ್ಯತೆ ಕೊಡುತ್ತಿದ್ದಿರಿ.

ಅ. ಕೆಲಸಗಾರರ ಲಾಭ ಮತ್ತು ಕಲ್ಯಾಣ

ಆ. ಕೆಲಸಗಾರರ ಕಲ್ಯಾಣ ಮತ್ತು ಸುಖ

ಇ. ಲಾಭ ಮಾತ್ರ

4. ಸಂಪತ್ತು ಹೇಗಿರಬೇಕು ಎಂದು ಯೋಚಿಸುತ್ತೀರಿ ?

ಅ. ಎಲ್ಲ ಜನವೂ ಜೀವನದ ಅವಶ್ಯಕತೆಗಳನ್ನು ಪಾಲು ಮಾಡಿಕೊಳ್ಳುವಂಥ ಮಾರ್ಗದಲ್ಲಿರಬೇಕು.

ಆ. ಸಮಾನವಾಗಿ ಹೊಂದಿರಬೇಕು.

ಇ. ಕೆಲವರಿಂದ ಮಾತ್ರ ಸ್ವಾಧೀನಪಡಿಸಿಕೊಂಡಿರಬೆಕು.

5. ನೀವು ರೈಲ್ವೆ ನಿಲ್ದಾಣದಿಂದ ಹೊರಕ್ಕೆ ಬರುವಿರಿ. ಅಲ್ಲಿ ಮೂರು ರಿಕ್ಷಾಕಾರರು ನಿಮ್ಮನ್ನು ಸಂಧಿಸುತ್ತಾರೆ. ರಿಕ್ಷಾ ನ್ಯಾಯ ಬಾಡಿಗೆ ರೂ.2.50 ಆಗ ನೀವು

ಅ. ಯಾವೊಂದು ರಿಕ್ಷಾ ಹಿಡಿದು 2.50 ರೂ. ಕೊಡುತ್ತೀರಾ ?

ಆ. ಹಳಬ ರಿಕ್ಷಾವಾಲನನ್ನು ನೇಮಿಸಿಕೊಂಡು 3.00 ರೂ. ಕೊಡುತ್ತೀರಾ ?

ಇ.ಚೌಕಾಸಿ ಮಾಡಿ ಅತ್ಯಂತ ಕಡಿಮೆ ತೆರ ಹೇಳುವವನನ್ನು ಆರಿಸಿಕೊಳ್ಳುತ್ತೀರಾ ?

6. ನೀವೊಂದು ಸಂಸ್ಥೆಯ ನಿರ್ದೇಶಕರಾಗಿದ್ದರೆ, ಈ ಕೆಳಗೆ ಸೂಚಿಸಿದ ಆಧಾರದ ಮೇಲೆ ಜನಗಳನ್ನು ನೇಮಿಸಿಕೊಳ್ಳಲು ಇಚ್ಛಿಸುತ್ತೀರಾ ?

ಅ. ಯೋಗ್ಯತೆಯ ಮೇಲೆ

ಆ. ಸಮುದಾಯ, ಜಾತಿ, ಭಾಷೆ, ಧರ್ಮಗಳ ಆಧಾರದ ಮೇಲೆ.

ಇ. ಶಿಫಾರಸುಗಳ ಮೇಲೆ

7. ರಜಾ ದಿನಕ್ಕಾಗಿ ನಿಮ್ಮ ತಾಯಿ ತಂದೆಗಳಿಂದ 50.00 ರೂ. ಅಧಿಕ ಹಣವನ್ನು ಪಡೆಯುತ್ತೀರಿ. ಆಗ ನೀವು ಹೇಗೆ ವೆಚ್ಚ ಮಾಡುತ್ತೀರಿ

ಅ. ಅದರಲ್ಲಿ ಸ್ವಲ್ಪವನ್ನು ಬಡ ಮಗುವಿಗೆ ಶಾಲಾ ಫೀಸಿಗೆ ಕೊಡುತ್ತೀರಾ?

ಆ. ನಿಮ್ಮ ಮಿತ್ರರನ್ನು ಒಂದು ಸಣ್ಣ ಕೂಟಕ್ಕೆ ಆಹ್ವಾನಿಸುತ್ತೀರಾ ?

ಇ. ಯಾವುದಾದರೂ ಎಲಂ.ಪಿ. ರಿಕಾರ್ಡನ್ನು ಕೊಳ್ಳುತ್ತೀರಾ?

8. ನೀವು ಒಬ್ಬ ವ್ಯಕ್ತಿಯನ್ನು ಯಾವುದಾದರೂ ಒಂದು ಕೆಲಸಕ್ಕೆ ಶಿಫಾರಸ್ಸು ಮಾಡಬೇಕಾಗಿ ಬಂದರೆ ಅವನನ್ನು ಇವುಗಳಲ್ಲಿ ಯಾವ ರೀತಿ ಶಿಫಾರಸು ಮಾಡುತ್ತೀರಿ.

ಅ. ಯೋಗ್ಯತೆಯ ಆಧಾರದ ಮೇಲೆಯೆ ?

ಆ. ಅವನು ನಿಮ್ಮ ಅಥವಾ ಯಾವೊಂದು ಕುಟುಂಬದ ಮಿತ್ರನೆಂಬ ಕಾರಣದಿಂದ ?

ಇ. ಮತ್ತಾವುದಾದರೂ ಅನುಕೂಲವನ್ನು ಪ್ರತಿಯಾಗಿ ಪಡೆಯಲೋಸುಗ ?

9. ಒಂದು ಮುಷ್ಕರದ ಬಗ್ಗೆ ಓದಿದರೆ ಅಥವಾ ಕೇಳಿದರೆ ನಿಮ್ಮ ಪ್ರತಿಕ್ರಿಯೆ ಹೇಗಿರುತ್ತದೆ?

ಅ. ಕೆಲಸಗಾರರು ನ್ಯಾಯಬದ್ಧ ಬೇಡಿಕೆಗಳನ್ನು ಹೊಂದಿದ್ದಾರೆ.

ಆ. ಕೆಲಸಗಾರರು ರಾಜಕೀಯ ಉದ್ದೇಶಗಳಿಂದ ಕೂಡಿದ್ದಾರೆ.

ಇ. ಕೆಲಸಗಾರರು ತಮ್ಮ ಸ್ವಂತ ಆಸಕ್ತಿಗಳನ್ನು ಮಾತ್ರ ನೋಡುತ್ತಾರೆ.

10. ನೀವು ಒಂದು ಚಿತ್ರವನ್ನು ನೋಡಲು ಉತ್ಸುಕರಾಗಿದ್ದೀರಿ. ಆ ಚಿತ್ರಮಂದಿರ ಭರ್ತಿಯಾಗಿದೆ. ಆಗರೆ ಒಬ್ಬನ ಬಳಿ ಎರಡು ಟಿಕೇಟುಗಳಿವೆ, ಅವನ್ನು ಕಪ್ಪು

ಮಾರ್ಕೆಟನಲ್ಲಿ ಮಾರುತ್ತಿದ್ದಾನೆ. ಆಗ ನೀವು

ಅ. ಅವುಗಳನ್ನು ಕೊಳ್ಳಲು ನಿರಾಕರಿಸುತ್ತೀರಾ ಮತ್ತು ಅಲ್ಲೇ ಹೋಗುತ್ತಿರುವ ಪೋಲಿಸನವನಿಗೆ ತಿಳಿಸುತ್ತೀರಾ ?

ಆ. ಅವುಗಳನ್ನು ಕೊಳ್ಳಲು ತಿರಸ್ಕರಿಸುತ್ತೀರಾ ?

ಇ. ಅವುಗಳನ್ನು ಕೊಳ್ಳುತ್ತೀರಾ ?

## ವಿಧಾನ ಶಾಸ್ತ್ರ

1. ಅ, ಆ ಅಥವಾ ಇ ಗಳನ್ನು ಸ್ವಂತವಾಗಿ ಪ್ರತಿಯೊಬ್ಬ ವಿದ್ಯಾರ್ಥಿಯೂ ಸರಿಗೆರೆ ಎಳೆದು ಗುರುತಿಸಬೇಕು.

2. ಪ್ರತಿಯೊಂದು ಪ್ರಶ್ನೆಗೆ, ಎಷ್ಟು ಜನ ಅ, ಆ ಅಥವಾ ಇ ಗಳನ್ನು 'ಸರಿ' ಗುರುತಿನಿಂದ ಸೂಚಿಸಿದ್ದಾರೆ ಎಂಬುದನ್ನು ಕೈ ಎತ್ತುವುದರ ಮೂಲಕ ಕಂಡು ಹಿಡಿಯಿರಿ. ಇದರ ಫಲಿತಾಂಶವನ್ನು ಬೋರ್ಡಿನ ಮೇಲೆ ಬರೆಯಿರಿ.

3. ಆನಂತರ 3 ಅಥವಾ 4ರ ಗುಂಪಿನಲ್ಲಿ ಚರ್ಚೆ ಆರಂಭವಾಗುತ್ತದೆ. ಪ್ರತಿಯೊಂದು ಗುಂಪು ಅವುಗಳ ಚರ್ಚಾ ವರದಿಯನ್ನು ಓದಿ ಹೇಳುತ್ತವೆ.

2. ಪರಿಣಾಮಗಳನ್ನು ಕುರಿತು ಸಮಾಲೋಚಿಸಿದ ನಂತರ ಆಯ್ಕೆ ಮಾಡುವುದು

## ಬಲಾತ್ಕರಿಸಿದ ಏಣಿಯ ಉದ್ದೇಶ

ವಿದ್ಯಾರ್ಥಿಗಳು ಸ್ಪರ್ಧಾತ್ಮಕ ಪರ್ಯಾಯಗಳ ನಡುವೆ ಅವರ ಆಯ್ಕೆಗಳನ್ನು ಮಾಡಬೇಕು. ಅನೇಕ ಬಾಬುಗಳಿಂದ ಕೂಡಿರುವ, ಆದಾಗ್ಯೂ, ಅದೊಂದು ಅತಿ ಹೆಚ್ಚಿನ ತೊಡಕಿನ ಉಪಾಯ. ಪರ್ಯಾಯಗಳ ಮತ್ತು ಅವುಗಳ ಪರಿಣಾಮಗಳ ಸಂಬಂಧಿತ ಪ್ರಾಮುಖ್ಯಗಳನ್ನು ತೂಗಿ ನೋಡಲು ಅತಿಶಯವಾದ ಆಲೋಚನೆ ಬೇಕಾಗುತ್ತದೆ. ವಾದಾಂಶಗಳ ಮತ್ತು ಮೌಲ್ಯಗಳ ಬಗ್ಗೆ ತಂಡವು ಬಿಸಿ ಬಿಸಿಯಾದ, ಆದರೆ ಸಾಮಾನ್ಯವಾಗಿ ಮಿತ್ರ ಸಂಹಿತವಾದ ಚರ್ಚೆಯಲ್ಲಿ ಮುಳುಗಿ ಬಿಡಲು ಈ ಉಪಾಯವೇ ಖಂಡಿತವಾದ ಮಾರ್ಗ.

## ಕಾರ್ಯರೀತಿ

ಶಿಕ್ಷಕನು ವಿದ್ಯಾರ್ಥಿಯನ್ನು ಕೇಳುತ್ತಾನೆ ಅಥವಾ ಕೊಡುತ್ತಾನೆ ನಿರ್ಬಂಧಿತ ಆಯ್ಕೆ ಏಣಿಯನ್ನು 8 ರಿಂದ 16 ಮೆಟ್ಟಿಲುಗಳನ್ನು ಒಳಗೊಂಡಂತೆ ಶಿಕ್ಷಕನು ಮುಂದಿಡಬಹುದಾದ ಬಾಬುಗಳ ಸಂಖ್ಯೆ ಪ್ರಮಾಣವನ್ನಾಧರಿಸಿ ರಚಿಸು ಎಂದು ಹೇಳುತ್ತಾನೆ.

# ನಿರ್ಬಂಧಿತ ಆಯ್ಕೆ ಏಣಿ




ಶಿಕ್ಷಕನು ಹೇಳಿಕೆಗಳ, ಸನ್ನಿವೇಶಗಳ ಅಥವಾ ಪರ್ಯಾಯಗಳ ಶ್ರೇಣಿಯನ್ನು ಕೊಡುತ್ತಾನೆ. ಅವು ವಿದ್ಯಾರ್ಥಿಗಳ ಮೌಲ್ಯಾಧಾರಿತ ತೀರ್ಪುಗಳನ್ನು ಬಯಸುತ್ತವೆ. ಪ್ರತಿಯೊಂದು ಬಾಬನ್ನು ಓದಿದ ಅನಂತರ, ವಿದ್ಯಾರ್ಥಿ, ಏಣಿಯ ಮೆಟ್ಟಿಲುಗಳಲ್ಲಿ ಒಂದರ ಮೇಲೆ, ಬಾಬುಗಳಿಗೆ ಮೂಲ ಪದಗಳನ್ನು ಆ ಬಾಬಿನ ಬಗ್ಗೆ ಪರವಾಗಿ ಅಥವಾ ವಿರೋಧವಾಗಿ ತನ್ನ ಭಾವದ ಬಲವನ್ನು ಅನುಸರಿಸಿ ಬರೆಯಬೇಕು. ವಿದ್ಯಾರ್ಥಿಗಳಿಗೆ ಶಿಕ್ಷಕ ವಿವರಿಸಿ ಹೇಳಬೇಕು. ಏಣಿಯು ಅವರ ಭಾವದ ತೀವ್ರತೆಯನ್ನು ಮಾತ್ರ ಅಳೆಯುತ್ತದೆ, ಎಂದು. ಈ ಅಭ್ಯಾಸಕ್ಕೆ ಭಾವಗಳು ಪರವಾಗಿವೆಯೋ ಅಥವಾ ವಿರೋಧವಾಗಿಯೋ ಎಂಬುದು ಮುಖ್ಯವಲ್ಲ. ಮುಖ್ಯವಾದ ಅಂಶವೆಂದರೆ ಭಾವನೆಗಳು ಎಷ್ಟು ಶಕ್ತಿಯುತವಾಗಿವೆ ಎಂಬುದು ಹೊಸ ಹೊಸ ಬಾಬುಗಳನ್ನು ಮುಂದಿಟ್ಟಾಗ, ವಿದ್ಯಾರ್ಥಿಗಳು ಅಡ್ಡಲಾಗಬಹುದು, ಬಾಣಗಳನ್ನು ಎಳೆಯಬಹುದು ಅಥವಾ ಬದಲಾವಣೆಗಳನ್ನು ಮಾಡಬಹುದು. ಅಂತೂ ಕೊನೆಯಲ್ಲಿ ತಮ್ಮ ಅಂತಿಮ ವ್ಯವಸ್ಥೆಯನ್ನು ಮಾಡುವಲ್ಲಿ ಕೆಲವು ನಿಮಿಷಗಳನ್ನು ಅವರು ಹೊಂದಿರುತ್ತಾರೆ.

ಒಟ್ಟಿನಲ್ಲಿ ಹೇಳುವುದಾದರೆ, ಬಾಬುಗಳನ್ನು ಶಿಕ್ಷಕರು ಓದುತ್ತಾರೆ. ತಂಡಗಳ ಶ್ರೇಣಿಯ ಪ್ರಕಾರ ವ್ಯವಸ್ಥೆ ಮಾಡುತ್ತಾರೆ. ವಿದ್ಯಾರ್ಥಿಗಳನ್ನು ಅವರ ಪ್ರತಿ ಕ್ರಿಯೆಗಳನ್ನು ಹೋಲಿಸಲು ಮತ್ತು ಚರ್ಚಿಸಲು 3 ಅಥವಾ 4 ಜನರ ಸಣ್ಣ ಸಣ್ಣ ಗುಂಪುಗಳಾಗಿ ವಿಭಾಗಿಸಲ್ಪಡುತ್ತಾರೆ.

## ಮಾದರಿಗಳು

1. ಒಬ್ಬ ಪ್ರತಿವರ್ಷ ತನ್ನ ಆದಾಯ ತೆರಿಗೆಯ ಬಗ್ಗೆ ವಂಚಿಸುತ್ತಾನೆ. ಆದರೆ ಅವನು ಉಳಿಸಿದ ಎಲ್ಲ ಹಣವನ್ನು ಧರ್ಮದತ್ತಿಗೆ ದಾನವಾಗಿ ಕೊಡುತ್ತಾನೆ. ಈ ಕಾರಣದಿಂದ ವಂಚಿಸಬಹುದು, ಈ ಮೊಬಲಗು ಅವನ ನಿಯಮಬದ್ಧ ಕಾಣಿಕೆಗಿಂತ ಅಧಿಕವಾದದ್ದು.

2. ಕಾಲ್ಚೆಂಡು ತಂಡದ ಶಿಕ್ಷಕ ತನ್ನ ತಂಡಕ್ಕೆ ಹೇಳಿ ಕೊಡುತ್ತಾನೆ. ಮಧ್ಯಸ್ಥಗಾರನ ಕೈಗೆ ಸಿಕ್ಕಿಕೊಳ್ಳದ ಹಾಗೆ, ಹೇಗೆ ವಂಚಿಸಬಹುದು ಎಂದು.

3. ತನ್ನ ವಿದ್ಯಾರ್ಥಿನಿಯರೆಲ್ಲರ ಜೊತೆಗೆ ಸ್ನೇಹದಿಂದಿರುವ ಶಿಕ್ಷಕಿ ಅವರಂತೆಯೇ ಉಡುಪು ಧರಿಸುತ್ತಾಳೆ ಮತ್ತು ಅವರೊಡನೆ ಸಾಮಾಜಿಕವಾಗಿ ಹೊರಗೆ ತಿರುಗಾಡುತ್ತಾಳೆ.

4. ಒಂದೇ ಕುಟುಂಬದ ಹದಿಹರಿಯದ ಹುಡುಗಿ ಹುಡುಗರು ವಿಭಿನ್ನ ನಿಯಮಗಳನ್ನು ಹೊಂದಿರುತ್ತಾರೆ. ಹುಡುಗ ತನಗೆ ಇಷ್ಟ ಬಂದದ್ದನ್ನೆಲ್ಲವನ್ನು ಮಾಡಬಲ್ಲ. ಆದರೆ ಹುಡುಗಿ ಅವಳು ಮಾಡಬೇಕೆಂದು ಇಷ್ಟ ಪಡುವ ಕಾರ್ಯವನ್ನು ಮಾಡಲು ತಾಯಿ ತಂದೆಯರಿಬ್ಬರನ್ನೂ ಕೇಳಬೇಕು.

5. ಶಿಕ್ಷಕಿ, ತಾನು ಸಂವೀಕ್ಷಣೆ ಮಾಡುತ್ತಿರುವ ಪರೀಕ್ಷಣೆಗಳಲ್ಲಿ ಬಾಲಕರು ಕಣ್ಣುತಪ್ಪಿಸುವಾಗ, ಯಾವಾಗಲೂ ಬೇರೊಂದು ಕಡೆ ನೋಡುತ್ತಿರುತ್ತಾಳೆ.

6. ತಾಯಿ ತನ್ನದೇ ಆದ ಒಂದೇ ಒಂದು ಸೀರೆಯನ್ನು ಹೊಂದಿರುತ್ತಾಳೆ. ಕಾರಣ ಅವಳ ಹಣವೆಲ್ಲ ಪ್ರೌಢಶಾಲೆಯ ಅವಳ ಮೂರು ಹೆಣ್ಣು ಮಕ್ಕಳಿಗೆ ಫ್ಯಾಷನ್ನಾಗಿ ಉಡುಪು ಧರಿಸಲು ಖರ್ಚು ಮಾಡಿರುತ್ತಾಳೆ.

7. ಒಬ್ಬ ವಿದ್ಯಾರ್ಥಿನಿ ಪರೀಕ್ಷೆಯಲ್ಲಿ ತನ್ನ ಸಮೀಪ ಕುಳಿತಿರುವ ವಿಧಾನಸ್ಥ (ಸೋಮಾರಿ) ಹುಡುಗಿಗೆ ತನ್ನ ಉತ್ತರ ಪತ್ರಿಕೆಯನ್ನು ತೋರಿಸುತ್ತಾಳೆ ಕಾರಣ ಒಟ್ಟು ವರ್ಗ ಹೆಚ್ಚಿನ ಅಂಕಗಳನ್ನು ಪಡೆಯಲು ಎಂದು.

8. ಒಬ್ಬ ವಿದ್ಯಾರ್ಥಿನಿ ಶಾಲೆ ಬಿಟ್ಟ ನಂತರ ತನ್ನ ಸಹಪಾಠಿಗಳೊಡನೆ ಒಂದು ಚಿತ್ರಕ್ಕೆ ಹೋಗುತ್ತಾಳೆ. ಮನೆಯಲ್ಲಿ ತಂದೆ ತಾಯಿಗಳಿಗೆ ಹೇಳುತ್ತಾಳೆ, ಏನೋ ಕಾರಣಕ್ಕಾಗಿ ತಾನು ಶಾಲೆಯಲ್ಲೇ ಉಳಿಯಬೇಕಾಗಿತ್ತು ಎಂದು.

## 2. ಉಚಿತವೆಂದು ಕಂಡುಬಂದಾಗ ಬಹಿರಂಗವಾಗಿ ದೃಢೀಕರಿಸುವುದು

### ಪ್ರಶ್ನೆಗಳು

1. ಬಹುದೂರ ವಾಕಿಂಗ್ ಹೋಗಲು ಇಷ್ಟಪಡುತ್ತೀರಾ ? ಎಲ್ಲಿ ಗಾಳಿ ಸಂಚಾರ ಹೋಗಲು ನೀವು ಇಷ್ಟಪಡುತ್ತೀರಾ ?

2. ಬದುಕು ಇದರ ಅರ್ಥ ಏನು?

3 ನೀವು ದೂರದರ್ಶನವನ್ನು ಹೆಚ್ಚಾಗಿ ನೋಡುತ್ತೀರಾ ? ಎಷ್ಟು ಹೆಚ್ಚು?

4. ಸಾರ್ವಜನಿಕ ಕಲ್ಯಾಣದ ಬಗ್ಗೆ ನಿಮ್ಮ ಅಭಿಪ್ರಾಯವೇನು (ಯಾವುದೇ ರಾಜಕೀಯ ವಿವಾದಾಂಶ)

5. ನೀವು ದೇವರನ್ನು ನಂಬುತ್ತೀರಾ ?

6. ನಿಮ್ಮ ಮನೆಯಲ್ಲಿ ನಿಮ್ಮ ಕೌಟುಂಬಿಕ ಊಟದ ವಿಷಯದಲ್ಲಿ ಏನಾದರೂ ವಿಶಿಷ್ಟತೆ ಇದೆಯೆ ?

7. ಗರ್ಭನಿರೋಧಕದ ಬಗ್ಗೆ ನಿಮ್ಮ ನಿಲುವು ಏನು ?

8. ಧರ್ಮಕಾರ್ಯ, ಸತ್ಕಾರಣ ಇತ್ಯಾದಿಗಳಿಗೆ ನೀವು ಎಷ್ಟು ದಾನ ಮಾಡುತ್ತೀರಿ.

9. ಮುಂದಿನ ಚುನಾವಣೆಯಲ್ಲಿ ನೀವು ಯಾರನ್ನು ಬೆಂಬಲಿಸುತ್ತೀರಿ.

10. ವರದಕ್ಷಿಣೆಯ ಬಗ್ಗೆ ನಿಮ್ಮ ನಿಲುವೇನು ?

11. ಈ (ಬೇಸಿಕೆ) ರಜಾದಲ್ಲಿ ಏನು ಮಾಡಲು ಯೋಜನೆ ಹಾಕಿಕೊಂಡಿದ್ದೀರಾ ?

13. ವಿವಾದ ವಿಚ್ಛೇದನವನ್ನು ಕುರಿತು ಏನನ್ನು ಯೋಚಿಸುತ್ತೀರಾ ?

14. ಎಲ್ಲರನ್ನೂ ಆಶ್ಚರ್ಯಗೊಳಿಸುವಂಥ ಆಯ್ಕೆಯನ್ನು ಎಂದಾದರೂ ಮಾಡಿದ್ದೀರಾ ?

15. ನಿಮ್ಮ ತಂದೆ ತಾಯಿಗಳು ಮುದುಕರಾದ ಮೇಲೆ ಅವರನ್ನು ಯಾವ ರೀತಿ ಕಾಮುತ್ತೀರಿ ಎಂಬುದನ್ನು ಕುರಿತು ಯೋಚಿಸಿದ್ದೀರಾ ? ಆ ಬಗ್ಗೆ ನಿಮ್ಮ ಅನಿಸಿಕೆಯೇನು?

16. ದೇವರು ಸಂಕಟಗಳಿಗೆ ಏಕೆ ಎಡೆಮಾಡಿಕೊಡುತ್ತಾನೆ ?

17. ನೀವು ಸಾಯುವುದಕ್ಕೆ ಮುಂಚೆ ನೀವು ಕಲಿಯಲು ಇಷ್ಟಪಡುವ ಯಾವುದಾದರೂ ಒಂದು ವಿಷಯ.

18. ನೀವು ಉಪಯೋಗಿಸುವ ಹಲ್ಲು ಅಂಟು (Tooth Paste) ಯಾವ ಪ್ರಾಂಡಿನದು ?

19. ನಿಮ್ಮ ಕೆಲಸದ ಅಥವಾ-ಶಾಲೆಯ ಕೆಲವು ಅಸುಖಕರ ಅಂಶಗಳನ್ನು ಹೇಗೆ ವ್ಯವಹರಿಸುತ್ತೀರಿ.

20. ಈಗ ನಿಮಗಿರುವ ಅತ್ಯಂತ ಶ್ರೇಷ್ಮ ಮಿತ್ರ ಮೊದಲಿಗೆ ಅವನು ಏನಾಗಿದ್ದ ?

21. ಸಂಪಾದಕರಿಗೆ ಎಂದಾದರೂ ಯಾವುದಾದರೂ ಪತ್ರ ಬರೆದಿದ್ದಿರಾ ? ವಿಷಯ ಏನು?

22. ನಿಶ್ಚಿತಾರ್ಥಗಳು ಎಷ್ಟು ಪ್ರಧಾನವಾಗಿ ನಿಮ್ಮಲ್ಲಿ ಅನುಕರಣಗೊಳ್ಳುತ್ತವೆ ?

23. ಹಣವನ್ನು ಏತಕ್ಕಾಗಿ ಕೂಡು ಹಾಕುತ್ತೀರಿ.

24. ನೀವು ರಿಕಾರ್ಡುಗಳು ಅನೇಕವನ್ನು ಕೊಳ್ಳುತ್ತೀರಾ ? ಯಾವ ಬಗೆಯದು ? ದುಡ್ಡೆಲ್ಲಿ ಬರುತ್ತದೆ ?

25. ಮೂರು ವರ್ಷಗಳ ಹಿಂದೆ ಇದ್ದುದಕ್ಕಿಂತ ಈಗ ನೀವು ಹೆಚ್ಚು ಅಥವಾ ಕಡಿಮೆ ಧರ್ಮವಂತರೆ ?

26. ವಯಸ್ಕರಾದಾಗ ನೀವು ಏನು ಮಾಡಬೇಕೆಂದಿರುವಿರಿ ಎಂಬ ಬಗ್ಗೆ ಏನಾದರೂ ಭಾವನೆಗಳು ನಿಮ್ಮಲ್ಲಿವೆಯೆ ?

27. ತಾಯಿ ತಂದೆಗಳೊಡನೆ ನಿಮ್ಮ ಭವಿಷ್ಯದ ಬಗ್ಗೆ ಯಾವ ಯಾವ ಸಾಧ್ಯತೆಗಳನ್ನು -ಕುರಿತು ಮಾತನಾಡಿದಿರಿ ?

28. ನಿಮ್ಮ ತಂದೆ ಬದುಕಿಗೆ ಏನು ಮಾಡುತ್ತಿದ್ದಾರೆ ?

29. ನಿಮ್ಮ ತಂದೆಯವರ ಆಸಕ್ತಿಗಳು, ಹವ್ಯಾಸಗಳು ಕೆಲವಾದರೂ ಯಾವುವು ? ಅವರು ಕೆಲಸವಿಲ್ಲದಾಗ ಏನು ಮಾಡುತ್ತಾರೆ ?

30. ನಿಮ್ಮ ತಾಯಿ ಕೆಲಸ ಮಾಡುತ್ತಾರೆಯೆ ? ಹೌದು ಆದರೆ ಏಕೆ ?

31. ನಿಮ್ಮ ತಾಯಿಯ ಆಸಕ್ತಿಗಳು, ಹವ್ಯಾಸಗಳು ಯಾವುವು ?

32. ವರ್ಣದ್ವೇಷದ ಬಗ್ಗೆ ನಿಮ್ಮ ಅಭಿಪ್ರಾಯವೇನು ?

33. ನಿಮ್ಮ ಬಿಡುವಿನ ಕಾಲದಲ್ಲಿ ನೀವು ಮಾಡುವ ಎಲ್ಲ ಕೆಲಸಗಳಲ್ಲಿ ನಿಮಗೆ ಅತ್ಯಂತ ಪ್ರಿಯವಾದ ಕೆಲಸ ಯಾವುದು ?

34. ನಿಮ್ಮ ಬಿಡುವಿನ ಚಟುವಟಿಕೆಗಳಲ್ಲಿ ನೀವು ಕಡಿಮೆ ಪ್ರೀತಿಸುವುದು ಯಾವುದು ?

35. ಕ್ರಿಸಮಸ್, ದಿವಾಳಿ, ಈದ್ ಹಬ್ಬದ ದಿನಗಳನ್ನು ನಿಮ್ಮ ಕುಟುಂಬ ಸಾಮಾನ್ಯವಾಗಿ ಹೇಗೆ ಆಚರಿಸುತ್ತಾರೆ ?

36. ಹಿಂದಿನ ಎರಡು ರಜಾ ಕಾಲಗಳಲ್ಲಿ ನೀವು ಏನು ಮಾಡಿದಿರಿ ?

37. ನೀವು ನಿಯಮಿತವಾಗಿ ಯಾವ ಮ್ಯಾಗಜೈನ್ ಓದುತ್ತೀರಿ ?

38. ನೀವೇ ಸ್ವಂತವಾಗಿ ಯಾವ ಮ್ಯಾಗಜಿನ್‌ಗೆ ಚಂದಾದಾರರಾಗಿದ್ದೀರಿ ?

39. ನಿಮ್ಮ ಒಲವಿನ ಚಿತ್ರಗಳು ಯಾವುವು ?

40. ನಿಮ್ಮ ಒಲವಿನ ಚಿತ್ರನಟ / ನಟಿ ಯಾರು ? ಏಕೆ ?

## 2. iv. ಮೌಲ್ಯಾಧಾರಿತ ಮತ ನೀಡಿಕೆ

### ಉದ್ದೇಶ

ಮತ ನೀಡುವುದು ಒಂದು ಸರಳ ಮತ್ತು ಅತಿ ಶೀಘ್ರ ಉಪಕರಣವನ್ನು ಒದಗಿಸುತ್ತದೆ. ಆ ಮೂಲಕ ತರಗತಿಯ ಪ್ರತಿಯೊಬ್ಬ ವಿದ್ಯಾರ್ಥಿ ವಿವಿಧ ಮೌಲ್ಯಾಧಾರಿತ ವಿವಾದಾಂಶಗಳ ಮೇಲೆ ಸಾರ್ವಜನಿಕ ಪ್ರತಿಜ್ಞಾ ವಚನಗಳನ್ನು ನೀಡಬಹುದು. ಇತರರು ಬೇರೆ ರೀತಿಯಾಗಿ ಆಗಾಗೆ ನೋಡುವ ವಿವಾದಾಂಶಗಳು ನಾವು ಕಾಮುವುದಕ್ಕಿಂತ ಹೆಚ್ಚು ಭಿನ್ನವಾಗಿ ಕಾಣಬಹುದೆಂಬ ಸತ್ಯ ಸಾಕ್ಷಾತ್ಕಾರವನ್ನು ವೃದ್ಧಿಪಡಿಸುತ್ತದೆ ಮತ್ತು ಮುಖ್ಯ ಅಂಶವನ್ನು ನ್ಯಾಯಬದ್ಧವಾಗಿ ಮಾಡುತ್ತವೆ.

### ಕಾರ್ಯರೀತಿ

ಉಪನ್ಯಾಸಕನು ನಿಮ್ಮಲ್ಲಿ ಎಷ್ಟು ಜನ ಎಂಬ ಪದಗಳಿಂದ ಆರಂಭವಾಗುವ ಪ್ರಶ್ನೆಗಳನ್ನು ಒಂದೊಂದಾಗಿ ಗಟ್ಟಿಯಾಗಿ ಓದುತ್ತಾನೆ. ಉದಾಹರಣೆಗೆ ನೀವು ಎಷ್ಟು ಮಂದಿ ದೀರ್ಘವಾದಿ (ಗಾಳಿ ಸಂಚಾರಕ್ಕಾಗಿ) ಅಥವಾ ವಾಯು ಸಂಚಾರಕ್ಕಾಗಿ ನಡೆಯುತ್ತೀರಿ ? ಪ್ರತಿಯೊಂದು ಪ್ರಶ್ನೆಯನ್ನು ಓದಿದ ನಂತರ ವಿದ್ಯಾರ್ಥಿಗಳು ಕೈ ಎತ್ತುವುದರ ಮೂಲಕ ಒಂದು ಸ್ಥಾನವನ್ನು ಪಡೆಯುತ್ತಾರೆ, ಎಂದರೆ, ಒಪ್ಪಿದ ದೃಢೀಕರಣವಾಗಿ ಉತ್ತರಿಸಲು ಇಚ್ಛಿಸುವವರು ತಮ್ಮ ಕೈಯನ್ನು ಮೇಲೆತ್ತುತ್ತಾರೆ. ನಿರ್ಧರಿಸಿಲ್ಲದವರು ಕೈ ಕಟ್ಟಿ ಕುಳಿತಿರುತ್ತಾರೆ. ಸುಮ್ಮನೆ ಹಾಗೇ ಬಿಡುವವರು ಯಾವ ಕ್ರಿಯೆಯನ್ನು ತೋರಿಸುವುದಿಲ್ಲ. ಉಪಾಧ್ಯಾಯರು ಪೂರ್ಣಪಟ್ಟಿಯನ್ನು ಮುಗಿಸುವವರೆಗೂ ಚರ್ಚೆಯನ್ನು ಮುಂದುವರಿಸುತ್ತಲೇ ಇರುತ್ತಾರೆ.

### ಮಾದರಿ ಮತ ನೀಡುವ ಪಟ್ಟಿ

ಈ ಮುಂದಿನ ಮತ ನೀಡುವ ಪಟ್ಟಿಯನ್ನು ಮಾಧ್ಯಮಿಕ ವಿದ್ಯಾರ್ಥಿಗಳ ಉಪಯೋಗಕ್ಕೆ ರೂಪಿಸಲಾಗಿದೆ (ಮತ್ತು ಹೆಚ್ಚಿನ ಉದಾಹರಣೆಗಳನ್ನು ವಿವಿಧ ಮಟ್ಟಗಳಲ್ಲಿ ಬಳಸಲು ಕೆಳಗೆ ಸೂಚಿಸಲಾಗಿದೆ)

ಮುಂದಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೂ ನೀವು ಎಷ್ಟು ಜನ ಎಂಬ ಹೇಳಿಕೆಯಿಂದ ಆರಂಭಿಸಿ.

1. .......... ಹದಿಹರಿದವರನ್ನು ಅವರು ತಮ್ಮ ಸ್ವಂತ ಉಡುಪನ್ನು ಆಯ್ಕೆ ಮಾಡಿಕೊಳ್ಳಲು ಅನುಮತಿಸಬೇಕು ಎಂದು ಯೋಚಿಸುತ್ತೀರಿ.

2. .......... ನಿಮ್ಮನ್ನು ಬೆಳೆಸಿದುದಕ್ಕಿಂತ ಎಷ್ಟು ಕಠಿಣವಾಗಿ ನಿಮ್ಮ ಮಕ್ಕಳನ್ನು ಬೆಳಸುತ್ತೀರಿ.

3. .......... ಪ್ರತಿ ವಾರವೂ ದಿನಕ್ಕೆ ಮೂರು ಗಂಟೆಗಿಂತ ಹೆಚ್ಚಾಗಿ ದೂರದರ್ಶನ (ಚಲನಚಿತ್ರ)ವನ್ನು ನೋಡುತ್ತೀರಿ ?

4. ......... ಶಾಲೆಯ ಚುನಾವಣೆಯಲ್ಲಿ ಅತ್ಯಂತ ಅರ್ಹ ವ್ಯಕ್ತಿ ಸಾಮಾನ್ಯವಾಗಿ ಗೆಲ್ಲುತ್ತಾನೆ ಎಂದು ಯೋಚಿಸುತ್ತೀರಿ.

5. .......... ಯಾವಾಗ ವಂಚನೆ ನ್ಯಾಯವಾದದ್ದು ಎಂದು ಹೇಳುವ ಸಮಯಗಳು ಇವೆ ಎಂದು ಯೋಚಿಸುತ್ತೀರಿ.

6. .......... ಅವರ ಉಸಿರು ಕೆಟ್ಟದಾಗಿದೆ ಎಂದು ಯಾರಿಗಾದರೂ ಹೇಳುವಿರಿ ?

7. ......... ಸಾಮಾಜಿಕ ಯಶಸ್ಸನ್ನು ಸಾಧಿಸಲು ಹುಡುಗಿ / ಹುಡುಗರ, ಗೆಳೆಯ / ಗೆಳತಿಯರು ಮುಖ್ಯವಾದವರು ಎಂದು ಯೋಚಿಸುತ್ತೀರಿ ?

8. .......... ಕ್ರಮವಾಗಿ ಧಾರ್ಮಿಕ ಸೇವೆ ಕಾರ್ಯಗಳಿಗೆ ಹಾಜರಾಗುತ್ತೀರಿ ಹಾಗೂ ಸಂತೋಷಿಸುತ್ತೀರಿ.

## ಶಿಕ್ಷಕರಿಗೆ

ಮತ ನೀಡುವುದು ಒಂದು ವಿಶಿಷ್ಟ ಮೌಲ್ಯಾಧಾರಿತ ವಿವಾದಾಂಶ ಎಂಬುದನ್ನು ತರಗತಿಗೆ ಪರಿಚಯ ಮಾಡಿಕೊಡಲು ಒಂದು ಶ್ರೇಷ್ಟ ಮಾರ್ಗ ಉದಾಹರಣೆಗೆ ಜಾತಿ ತತ್ವದ ಮೇಲೆ ನೀವು ಒಂದು ತಂಡವನ್ನು ಸೃಷ್ಟಿಸಲು ಇಚ್ಛಿಸುತ್ತೀರಿ, ಎಂದುಕೊಳ್ಳಿ. ಇಲ್ಲಿ ಜಾತಿ ಸಂಬಂಧಿ ವಿವಾದಾಂಶಗಳ ಮೇಲೆ ವಿದ್ಯಾರ್ಥಿಗಳ ಭಾವನೆಗಳನ್ನು, ಆಲೋಚನೆಗಳನ್ನು ಮತ್ತು ಕ್ರಿಯೆಗಳನ್ನು ಕುರಿತು ಪ್ರಶ್ನೆಗಳಿಂದ ಒಂದು ಮತ ನೀಡಬಹುದಾದ ಪಟ್ಟಿಯನ್ನು ತಯಾರಿಸಲಾಗುವುದು. (ಉದಾಃ ನಿಮ್ಮಲ್ಲಿ ಎಷ್ಟು ಜನ ಬೇರೆ ಜಾತಿಯ ಒಬ್ಬ ಮಿತ್ರನ ಮನೆಗೆ ಎಂದಾದರೂ ಪ್ರವೇಶಿಸಿದ್ದೀರಾ ? ವಿವಿಧ ಜಾತಿಗಳು ನಿಜವಾಗಿ ಭಿನ್ನವಾದದ್ದು ಎಂದು ಯೋಚಿಸಿದ್ದೀರಿ) ಇಂಥ ವಿವಾದಾಂಶಗಳು ಈ ತಂಡದಲ್ಲಿ ಆಸಕ್ತಿಯನ್ನು ಕೆರಳಿಸಲು ಒಂದು ಪರಿಣಾಮಕಾರಿ ಮಾರ್ಗವನ್ನು ಒದಗಿಸುತ್ತದೆ.

ಕೆಳಗಿನ ಪ್ರತಿಯೊಂದು ಪ್ರಶ್ನೆಯನ್ನು ನಿಮ್ಮಲ್ಲಿ ಎಷ್ಟು ಜನ ಅಥವಾ ಇಲ್ಲಿ ಎಷ್ಟು ಜನ ಎಂಬ ಪದಗಳಿಂದ ಆರಂಭಿಸಿ.

ವಯಸ್ಸಿನ ಎಲ್ಲ ಹಂತಗಳ ಸಾಮಾನ್ಯ ಉಪಯೋಗಕ್ಕೆ ಉದಾಹರಣೆಗಳು

1. ದರ್ಚಿಗೆ ಅಥವಾ ದೇವಾಲಯಕ್ಕೆ ನಿಯತವಾಗಿ ಹೋಗುತ್ತೀರಿ.
2. ಚರ್ಚಿಗೆ ಅಥವಾ ದೇವಾಲಯಕ್ಕೆ ಹೋಗುವುದರಿಂದ ಸುಖವನ್ನು ಹೊಂದಿದ್ದೀರಿ.
3. ಬೇರೊಂದು (ಜಾತಿಯ) ಜನಾಂಗದಲ್ಲಿ ನಿಕಟ ಮಿತ್ರನನ್ನು ಉಳ್ಳವರಾಗಿದ್ದೀರಿ?
4. ನಿಮ್ಮ ತಂದೆತಾಯಿಗಳ ರಾಜಕೀಯ ಪಕ್ಷಕ್ಕೆ ಮತ ನೀಡಲು ಯೋಚಿಸಿದ್ದೀರಿ.
5. ಅಚ್ಚು ಮೆಚ್ಚಿನ ಹವ್ಯಾಸವನ್ನು ಅಥವಾ ಕಾಲಕ್ಷೇಪವನ್ನು ಹೊಂದಿದ್ದೀರಿ.
6. ಧರ್ಮ ನಿಮ್ಮ ಬದುಕಿನ ಮುಖ್ಯ ಅಂಗವೆಂದು ಭಾವಿಸಿದ್ದೀರಿ.
7. ವಿದ್ಯಾರ್ಥಿಗಳು ಅವರು ಶಿಕ್ಷಕರ ಬಗ್ಗೆ ಗೌರವವನ್ನು ಕಳೆದುಕೊಳ್ಳುತ್ತಿದ್ದಾರೆ ಎಂದು ಯೋಚಿಸುತ್ತೀರಿ.
8. ನೀವು ಜಾತಿ ದ್ವೇಷಿಗಳು ಎಂದು ಯೋಚಿಸಿದ್ದೀರಿ.
9. ಅತಿ ಸ್ನೇಹ ತಿರಸ್ಕಾರವನ್ನು ಹುಟ್ಟಿಸುತ್ತದೆ ಎಂದು ಯೋಚಿಸಿದ್ದೀರಿ.
10. ನೀವು ಏನನ್ನು ಮಾಡಜಲು ಇಷ್ಟಪಟ್ಟರೂ ಈಗ ಮನೆಯಲ್ಲೇ ಇರುವುದು ಒಳ್ಳೆಯದು ಎಂದು ಇಷ್ಟಪಡುತ್ತೀರಿ ?
11. ಜಾತಿಗಳ ಹೋರಾಟವನ್ನು ಎಂದಾದರೂ ವೈಯಕ್ತಿಕವಾಗಿ ನೋಡಿದ್ದೀರಾ ?
12. ನಾನು ಅದನ್ನು ಎರುದಿಸುವದನ್ನು ತಪ್ಪಿಸಿಕೊಳ್ಳುವದಕ್ಕಾಗಿ ಸಾಯುವುದು ಅಪೇಕ್ಷಿತ ಎಂಬಂಥ ಕೆಲವು ಸಮಸ್ಯೆಯನ್ನೇ ಎಂದಾದರೂ ಎದುರಿಸಿದ್ದೀರಿ ?
13. ಹೆಂಗಸರು ಮನೆಯಲ್ಲೇ ಇರಬೇಕು ಅವರು ಮುಖ್ಯವಾಗಿ ಹೆಂಡತಿಯರೋ ತಾಯಂದಿರೋ ಆಗಿರಬೇಕು ಎಂದು ಯೋಚಿಸಿದ್ದೀರಿ ?
14. ಅತಿ ಹೆಚ್ಚು ಸಂಖ್ಯೆ ವಿದ್ಯಾರ್ಥಿಗಳು ತಮ್ಮ ಮಾತಾ ಪಿತೃಗಳೊಡನೆ ಸ್ವತಂತ್ರವಾಗಿ ಮಾತಾಡಲು ಭಾವನೆ ಹೊಂದಿದ್ದಾರೆ ಎಂದು ಯೋಚಿಸಿದ್ದೀರಿ?
15. ಅತಿ ಹೆಚ್ಚು ಸಂಖ್ಯೆಯ ವಿದ್ಯಾರ್ಥಿಗಳು ತಮ್ಮ ಶಿಕ್ಷಕರೊಡನೆ ಸ್ವತಂತ್ರವಾಗಿ ಮಾತನಾಡುವ ಭಾವನೆ ಹೊಂದಿದ್ದಾರೆ ಎಂದು ಯೋಚಿಸಿದ್ದೀರಿ ?
16. ನಿಮ್ಮ ಸ್ವಂತ ಮೌಲ್ಯಗಳ ಬಗ್ಗೆ ಸ್ಪಷ್ಟ ಭಾವನೆಯನ್ನು ಹೊಂದಿದ್ದೀರಿ ?
17. ಸಂಗೀತ ವಾದ್ಯಗಳನ್ನು ನುಡಿಸುತ್ತೀರಿ.
18. ವನ ಭೋಜನಕ್ಕೆ ಹೋಗುವ ಸುಖವನ್ನು ಅನುಭವಿಸುತ್ತೀರಿ ?
19. ತರಗತಿಯಲ್ಲಿ ಎಂದಾದರೂ ಹಗಲು ಗನಸನ್ನು ಕಂಡಿದ್ದೀರಿ.
20. ಮಿತ್ರನಿಂದ ನೋವು ತಿಂದಿದ್ದೀರಿ ?
21. ಒಂದೇ ಮಗುವನ್ನು ಪಡೆದಿದ್ದೀರಿ ?

22. ಜನ ತಮ್ಮ ಕುಟುಂಬಗಳ ಗಾತ್ರವನ್ನು ಸೀಮಿತಗೊಳಿಸಬೇಕು ಎಂದು ಯೋಚಿಸಿದ್ದೀರಿ?

23. ತಮ್ಮ ತಮ್ಮ ಕುಟುಂಬಗಳು ಎರಡು ಮಕ್ಕಳು ಗಾತ್ರಕ್ಕೆ ಸೀಮಿತವಾಗಿರಬೇಕು ಎಂಬ ಕಾನೂನನ್ನು ಅನುಮೋದಿಸುತ್ತೀರಿ ?

24. ಹಿರಿಯ ಸೋದರರು ಮತ್ತು ಸೋದರಿಯರು ತಮಗಿಂತ ಚಿಕ್ಕವರನ್ನು ಹದ್ದುಬಸ್ತಿನ ಶಿಸ್ತಿನಲ್ಲಿಡುವುದು ಸರಿ ಎಂದು ಭಾವಿಸಿದ್ದೀರಿ ?

25. ಬಹುಸಂಖ್ಯಾತರು ಯಾವುದಾದರೂ ವಿಷಯಕ್ಕೆ ವಂಚಿಸುತ್ತಾರೆ ಎಂದು ಯೋಚಿಸುತ್ತೀರಿ?

26. ಹೆಚ್ಚು ಜನ ವಯಸ್ಕರು ಇಂದಿನ ತರುಣ ಜನವನ್ನು ಅರ್ಥ ಮಾಡಿಕೊಳ್ಳುತ್ತಾರೆ ಎಂದು ಭಾವಿಸಿದ್ದೀರಿ ?

27. ಈ ನಗರದಲ್ಲಿ ನಿಮ್ಮ ಜೀವನಪೂರ್ಣ ವಾಸಿಸುತ್ತಿದ್ದೀರಿ ?

28. ಅ. ನೀವು ಸತ್ತ ಮೇಲೆ ನಿಮ್ಮ ದೇಹವನ್ನು ವಿಜ್ಞಾನ ಪರೀಕ್ಷೆಗೆ ದಾನ ಮಾಡಲು ಇಷ್ಟ ಪಡುತ್ತೀರ ?

ಆ. ಎಂದಾದರೂ ನಿಮ್ಮ ರಕ್ತವನ್ನು ದಾನ ಮಾಡಿದ್ದೀರಿ ?

29. ಸಾಮಾನ್ಯವಾಗಿ ರಾತ್ರಿ ಹೊತ್ತು ಚೆನ್ನಾಗಿ ನಿದ್ರೆ ಮಾಡುತ್ತಿಲ್ಲ ? ನಿದ್ರೆ ಹೋಗಲು ತೊಂದರೆ ಪಡುತ್ತೀರಿ.

30. ಪಠ್ಯ ಪುಸ್ತಕಗಳಿಲ್ಲದೆ ತರಗತಿಗಳಿಗೆ ಹೋಗಲು ಆಕ್ಷೇಪಿಸುವುದಿಲ್ಲ ?

31. ಸಂಗೀತ ವಾದ್ಯವನ್ನು ನುಡಿಸುವಲ್ಲಿ ಆನಂದ ಪಡುತ್ತೀರಿ ?

32. ನೀವು ಮರಣ ಹೊಂದಿದಾಗ ನಿಮ್ಮ ದೇಹವನ್ನು ಸುಟ್ಟು ಹಾಕಲು ಇಷ್ಟ ಪಡುತ್ತೀರಿ.

33. ನಿಮ್ಮ ಬದುಕಿನಲ್ಲಿ ಇಲ್ಲಿಯವರೆಗೆ ನೀವು ಸಾಧಿಸಿರುವುದರಲ್ಲಿ ಪೂರ್ಣವಾಗಿ ತೃಪ್ತಿ ಪಡೆದಿದ್ದೀರಿ ಅಥವಾ ಪಡೆಯಬಲ್ಲಿರಿ ?

34. ಗರ್ಭಪಾತವನ್ನು ಕಾನೂನು ಬದ್ಧವಾಗಿ ಮಾಡಲೇಬೇಕು ಎಂದು ಯೋಚಿಸಿದ್ದೀರಿ ?

35. ಮತ ನೀಡುವ ವಯಸ್ಸನ್ನು ಹೆಚ್ಚಿಸಲೇಬೇಕು ಎಂದು ಯೋಚಿಸಿದ್ದೀರಿ ?

36. ನಿಮ್ಮ ತಂದೆ ತಾಯಿಗಳಲ್ಲಿ ಒಬ್ಬರಿಗಿಂತ ಇನ್ನೊಬ್ಬರ ಸನ್ನಿಹಕ್ಕೆ ಹೆಚ್ಚು ಅಂಟಿಕೊಂಡಿರುವ ಬಾವನೆಯನ್ನು ಹೊಂದಿದ್ದೀರಿ ?

37. ನೀವು ತಪ್ಪು ಮಾಡಿದಾಗ ಒಪ್ಪಿಕೊಳ್ಳಲು ಇಷ್ಟ ಪಡುತ್ತೀರಿ ?

38. ನೀವು ಕೋಪಗೊಂಡಿರುವುದನ್ನು ತೋರಿಸಲು ಇಷ್ಟಪಡುವುದಿಲ್ಲ ?

ಅಧ್ಯಾಯ 7

# ಸಾಮಾಜೀಕರಣ

ಕ್ಷೇಮ ನೀಡುವ ಸಾಮರ್ಥ್ಯ ಬದುಕಿಗೆ ಅದರ ಉತ್ತಮೋತ್ತಮ ಅರ್ಥವನ್ನು ಕೊಡುತ್ತದೆ.

## 1. ಸಾಮಾಜಿಕ ಕಾರಣ ಕಾರ್ಯವಿಧಾನ

ಮಾನವ ಪ್ರಾಣಿಗಳಲ್ಲಿ ಸಂಭವಿಸುವ ಅತ್ಯಂತ ಮಹತ್ವವಾದ, ಅದ್ಭುತ ಕಾರ್ಯಗತಿಗಳೆಂದರೆ ನಿಸ್ಸಹಾಯಕ ಶಿಶು ಪಕ್ವವಾದ ವಯಸ್ಕನಾಗಿ ಪರಿಣಮಿಸುವ ರೂಪಾಂತರ. ಮತ್ತಾವುದೇ ವಂಶಜಾತಿ ಬೆಳೆಯುವ ಕಾರ್ಯಗತಿ ಇಷ್ಟು ದೀರ್ಘವಾದ ಮತ್ತು ಇಷ್ಟು ಗಾಢವಾದ ಮಾರ್ಗದಿಂದ ಮುಂದುವರಿಯುವುದಿಲ್ಲ ಮತ್ತು ಮತ್ತಾವುದೇ ವಂಶಜಾತಿಯಲ್ಲಿ ಶಿಶು ಮತ್ತು ವಯಸ್ಕರ ನಡುವಿನ ವ್ಯತಿರಿಕ್ತತೆ ಇಷ್ಟು ಹೆಚ್ಚಿನದಾಗಿರುವುದಿಲ್ಲ. ಬೆಳೆದಂತೆಲ್ಲ ಶಿಶು ಒಂದು ಅಥವಾ ಹೆಚ್ಚು ಭಾಷೆಗಳನ್ನು ಕಲಿಯುತ್ತದೆ ಮತ್ತು ತನ್ನ ಶಾರೀರಿಕ ಮತ್ತು ಸಾಮಾಜಿಕ ಪರಿಸರದ ಬಗ್ಗೆ ಅನುಭವಾತ್ಮಕ ಅಂಶಗಳ ಸಂಪತ್ತನ್ನು ಮತ್ತು ವಿಶಿಷ್ಟ ನಿಪುಣತೆಗಳ ವೈವಿಧ್ಯಗಳನ್ನು ಹಾಗೂ ಜ್ಞಾನ ಕಾರ್ಯಗಳನ್ನು ಕಲಿಯುತ್ತದೆ.

ಅವನು ಪ್ರವೃತ್ತಿಗಳನ್ನು ಮತ್ತು ಮೌಲ್ಯಗಳನ್ನು ಸ್ವಾಧೀನಪಡಿಸಿಕೊಳ್ಳುತ್ತಾನೆ. ಅವುಗಳಲ್ಲಿ ಕೆಲವು ನೈತಿಕ ಪ್ರಮಾಣಕಗಳಿಗೆ ಸಂಬಂಧಿಸಿದವು ಮತ್ತೆ ಕೆಲವು ಜನಕ್ಕೆ ಸಂಬಂಧಿಸಿದ ಮಾರ್ಗಗಳು ಎಂದರೆ ಪ್ರೀತಿಸುವುದು ಅಥವಾ ದ್ವೇಷಿಸುವುದು, ಇತರ ವ್ಯಕ್ತಿಗಳಿಗೆ ಸಹಾಯ ಮಾಡುವುದು ಇತ್ಯಾದಿಗಳಂಥವು. ಈ ರೂಪಾಂತರ ಸಮಾಜೀಕರಣತ್ವದ ಕಾರ್ಯಗತಿಯೆಂದು ಹೆಸರಿಸಲ್ಪಟ್ಟಿರುವುದರ ಫಲಿತವಾಗಿ, ಬೃಹತ್ತಾದ ಪ್ರಮಾಣದಲ್ಲಿ ಆಗುತ್ತದೆ.

ಸಾಮಾಜೀಕರಣದಲ್ಲಿ ಪ್ರಮುಖ ಕಾರ್ಯನಿರ್ವಾಹಕರೆಂದರೆ ಹೆಚ್ಚಾಗಿ ಗುರುತಿಸಬಹುದಾದ, ಮಗುವಿನ ತಂದೆ ತಾಯಿಗಳು, ಶಿಕ್ಷಕರು, ರಕ್ತ ಸಂಬಂಧಿಗಳು, ಜೊತೆ ಆಟಗಾರರು ಮತ್ತು ಅವನಿಗೆ ಮಹತ್ವದವರೆಂದು ಕಾಣುವ ಇತರ ವ್ಯಕ್ತಿಗಳು. ಬೆಳೆಯುವ

ಕಾರ್ಯಗತಿಯಲ್ಲಿ ಮಗು ಕಲಿಯುವುದೆಲ್ಲವನ್ನೂ ಕ್ರಮ ಪೂರ್ಣವಾಗಿಯಾಗಲಿ ಪ್ರಜ್ಞಾಪೂರ್ವಕವಾಗಿಯಾಗಲಿ ಕಲಿಸಿ ಕೊಟ್ಟದಲ್ಲ. ತಂದೆ ತಾಯಿಗಳು ತಮ್ಮನ್ನು ಶಿಕ್ಷಕರೆಂದು ಸಾಮಾನ್ಯವಾಗಿ ವ್ಯಖ್ಯಾನಿಸಿಕೊಳ್ಳುವುದಿಲ್ಲ. ಆದೂರ ಈ ಪಾತ್ರವನ್ನು ಭಾವಿಸಿಕೊಳ್ಳುತ್ತಾರೆ. ಅವರು ಕಲಿಸುವುದರಲ್ಲಿ ಬಹಳಷ್ಟು ಉದ್ದೇಶಪೂರ್ವಕ ಆಶಯದ ಮೂಲಕವಾಗಿ ಹಸ್ತಾಂತರಿಸಿದ್ದಲ್ಲ ಹಾಗಿದ್ದರೂ ಮಗು ಕಲಿಯುತ್ತದೆ.

ವ್ಯಕ್ತಿಯನ್ನು ಪ್ರಮಾಣಿಕ ಸಾಮಾಜಿಕ ನಮೂನೆಯನ್ನಾಗಿ ರೂಪಿಸುವುದೆಂದು ಎಂದಿಗೂ ಸಾಮಾಜಿಕ ಕಾರಣವನ್ನು ಕುರಿತು ಚಿಂತಿಸಲೇಬಾರದು. ವ್ಯಕ್ತಿಗಳು ಒಬ್ಬೊಬ್ಬರೂ ಸಮಾಜೀಕರಣದ ಒತ್ತಡಗಳ ವಿವಿಧ ಸಂಯೋಗಗಳಿಗೆ ಒಳಪಟ್ಟವರು ಹಾಗೂ ಅವರು ವಿಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾರೆ. ಪರಿಣಾವಾಗಿ ಸಾಮಾಜೀಕರಣದ ಕಾರ್ಯಗತಿಗಳ (ಸಂಸ್ಕರಣ) ವ್ಯಕ್ತಿಗಳ ಹಾಗೂ ಒಂದೇ ಸಮನಾಗಿರುವವರ ನಡುವೆ ವಿಶಿಷ್ಟವಾದ ಬೇಧಗಳನ್ನು ಉಂಟು ಮಾಡುತ್ತವೆ.

ಮೂರು ರೀತಿಯ ಬಂಧುತ್ವಗಳಿವೆ

1.ವೈಯಕ್ತಿಕ

2.ಸಾಮಾಜಿಕ

3.ಆಧ್ಯಾತ್ಮಿಕ

### 1. ವೈಯಕ್ತಿಕ ಬಂಧುತ್ವ

ಎಂದರೆ ಅಥವಾ ಧ್ವನಿತವಾಗುವುದಾದರೆ ನಮ್ಮ ಸ್ವಸ್ವರೂಪವೇ ಅಥವಾ ನಾವು ನಮ್ಮನ್ನು ಹೇಗೆ ನೋಡುತ್ತೇವೆ ಎಂಬುದೇ ನಮ್ಮ ವೈಯಕ್ತಿಕ ಬಂಧುತ್ವ. ಅದು ನಮ್ಮ ಭಾವಾವೇಶಗಳಿಂದಲೇ ಪ್ರಭಾವಿತವಾಗುತ್ತದೆ.

### 2. ಸಾಮಾಜಿಕ ಬಂಧುತ್ವ

ಅದು, ನಾವು ನಮ್ಮ ಸಮಾಜದಲ್ಲಿ ಇತರರೊಡನೆ ಹೇಗೆ ಸಂಬಂಧವನ್ನು ಬೆಳೆಸಿಕೊಂಡಿದ್ದೇವೆ ಎಂಬುದು. ಸಾಮಾಜಿಕ ಬಂಧುತ್ವಗಳು ನಮ್ಮ ಕುಟುಂಬದಿಂದ ಮತ್ತು ಅತಿ ಮುಂಚಿನ ಸಹವಾಸಗಳಿಂದ ಪ್ರಭಾವಿಸಲ್ಪಡುತ್ತವೆ.

### 3. ಆಧ್ಯಾತ್ಮಿಕ ಬಂಧುತ್ವ

ಇದು ನಮ್ಮ ಮತ್ತು ದೇವರ ಬಂಧುತ್ವವನ್ನು ತಿಳಿಸುತ್ತದೆ. ಆಧ್ಯಾತ್ಮಿಕ ಬಂಧುತ್ವಗಳು ನಮ್ಮ ಆತ್ಮ ಸಾಕ್ಷಿಯಿಂದ ರೂಪುಗೊಳ್ಳುತ್ತವೆ.

ತಂದೆ ಮಕ್ಕಳ ಬಂಧುತ್ವ ಅಪೂರ್ವವಾದದ್ದು. ಅದೇ ನಮ್ಮ ಪ್ರಥಮ ಸಂಬಂಧವಾದದ್ದರಿಂದ ಮಗು ಅನುಭವವನ್ನು ಸಂಪಾದಿಸುತ್ತದೆ. ಅದೇ ಆರಂಭದ ಹೆಜ್ಜೆ ಅದರಿಂದ ಇತರ ಎಲ್ಲ ಬಂಧುತ್ವಗಳು ವೃದ್ಧಿಯಾಗುತ್ತವೆ. ಪ್ರತಿಯೊಂದು ಬೆಳೆಯುವ ಶಿಶುವೂ ಯಾವುದರ ಬಗ್ಗೆ ಏನನ್ನೂ ಭಾವಿಸುತ್ತದೆ, ತನ್ನ ಸೋದರ ಸೋದರಿಯರೊಡನೆ ಅದರ ಚಿಕ್ಕಮ್ಮ ಚಿಕ್ಕಪ್ಪರೊಡನೆ ಅವನ ಶಿಕ್ಷಕರು ಮತ್ತು ಉದ್ಯೋಗದಾತರೊಡನೆ ಮತ್ತು ಅನಂತರ ತನ್ನ ಸ್ವಂತ ಹೆಂಡತಿ ಮಗುವಿನೊಡನೆ ವರ್ತಿಸುತ್ತದೆ. ಇವೆಲ್ಲವೂ ತನ್ನ ತಾಯಿ ತಂದೆಗಳೊಡನೆ ಕಲಿಯುವ ಮೊದಲ ಅಪೂರ್ವ ಅನುಭವದ ಅಭಿವೃದ್ಧಿಯೇ ಆಗಿದೆ.

ಅತಿ ಹೆಚ್ಚಿನ ಸಂಭ್ರಮ ಮಕ್ಕಳ ಬದುಕಿನ ಮೊದಲ ಅನುಭವ ಇಬ್ಬರು ವಯಸ್ಕರು ಮತ್ತು ಕೆಲವಷ್ಟೇ ಇತರ ಮಕ್ಕಳಿಂದ ಕೂಡಿದ ಜನದ ಸಣ್ಣ ಗುಂಪಿನಲ್ಲಿ ಆರಂಭವಾಗುತ್ತದೆ. ಅನೇಕ ಜನ ವಯಸ್ಕರಿಗೆ ಇದು ಅಗೋಚರ. ಈ ಮೊದಲ ಅಪೂರ್ವ ಬಂಧುತ್ವ. ಈಗ ಅವರು ಸಂಪರ್ಕಿಸುವ ಜನದ ಕೆಡೆಗೆ ಪ್ರವೃತ್ತಿಗಳನ್ನು ಮತ್ತು ನಡತೆಗಳನ್ನು ಬಾಧಿಸುತ್ತವೆ ಎಂಬುದನ್ನು ಅವರು ಗುರುತಿಸುವುದಿಲ್ಲ, ಅಲ್ಲಿಂದ ಮುಂದಿನ ಬಂಧುತ್ವಗಳೆಲ್ಲ ಮಗುವಿನ ಮೊದಲ ಅನುಭವದೊಡನೆ, ವಿವಿಧ ರೀತಿಗಳಲ್ಲಿ ಸೇರಿಕೊಂಡಿರುತ್ತವೆ.

ಮಗುವನ್ನು ಪೋಷಿಸುವ ಕುಟುಂಬದ ಅಭ್ಯಾಸಗಳು ತಲೆಮಾರಿನಿಂದ ತಲೆಮಾರಿಗೆ ಒಂದೇ ರೀತಿಯಾಗಿ ಪುನರಾವೃತ್ತಿಯಾಗಬಹುದು. ಅವು ಆ ಮೂಲ ಬಂಧುತ್ವದ ಮೇಲೆ ಭಿನ್ನ ಸ್ವರೂಪವನ್ನುಂಟು ಮಾಡಲೂಬಹುದು ಅಥವಾ ಅದಕ್ಕೆ ವಿರುದ್ಧವಾಗಿ ಪ್ರತಿಕ್ರಿಯೆಯಾಗಿಯೂ ಇರಬಹುದು.

## 2. ಗೆಳೆತನಗಳು

ಗೆಳೆಯ ಒಬ್ಬ ವ್ಯಕ್ತಿ. ಯಾರು ನಿಮ್ಮನ್ನು ಯಾವುದೇ ರೀತಿಯಲ್ಲಿ ಕಟ್ಟಿ ಹಾಕುವುದಿಲ್ಲವೊ, ಆದರೆ ನಿಮ್ಮ ಅಭಿಪ್ರಾಯವನ್ನು ಎತ್ತಿ ಹಿಡಿದು ನಿಮ್ಮನ್ನು ಬಲವಂತ ಮಾಡುತ್ತಾನೆ. ನಿಮಗೆ ಎಡಬಿಡದೆ ಅತ್ಯಂತವಾಗಿ ಒಳ್ಳೆಯದನ್ನು ಮಾಡುತ್ತಾನೋ ಅವನೇ ಗೆಳೆಯ. ಗೆಳೆಯರು ಬದುಕಿನ ಅವಶ್ಯಕವಾದ ಭಾಗ ಮತ್ತು ಅವರು ನಿಮ್ಮನ್ನು ಮಾನವರಾಗುವಂತೆ ಮಾಡುವವರು. ನಮ್ಮನ್ನು ನಾವು ನಿಜವಾಗಿಯೂ ಏನಾಗಿದ್ದೇವೆಂದು ನೋಡಿಕೊಳ್ಳುವಂತೆ ಮಾಡುವವರು. ನಮಗೆ ನಾವು ಕೊಟ್ಟುಕೊಳ್ಳುವ ಶ್ರೇಷ್ಠ ಕಾಣಿಕೆಯೆಂದರೆ ಒಳ್ಳೆಯ ಗೆಳೆಯರು.

ಯಾರನ್ನು ನೀವು ಸಂತೋಷದಿಂದ ಇರಬೇಕೆಂದು ಇಚ್ಛಿಸುತ್ತೀರೊ ಅಂಥ ಗೆಳೆಯ ಒಬ್ಬ ಗೆಳೆಯನಾಗಿರಲು ನೀವು ಪ್ರಯತ್ನಿಸುತ್ತೀರಿ. ನೀವು ಯಾವಾಗಲೂ ನಿಮ್ಮದೇ ದಾರಿಯನ್ನು

ಾದವನ್ನು ಬಲವಂತವಾಗಿ ತಗಾದೆ ಮಾಡುವುದಿಲ್ಲ. ನಿಮ್ಮ ಗೆಳೆಯ ಏನನ್ನು ಇಷ್ಟಪಡುತ್ತಾನೆ ಎಂಬುದನ್ನು ತಿಳಿಯಲು ಪ್ರಯತ್ನಿಸುತ್ತೀರಿ. ಅಷ್ಟೇ ಅಲ್ಲ, ಅದೇ ವಿಷಯಗಳನ್ನು ಇಷ್ಟಪಡಲೂ ಕಲಿಯುತ್ತೀರಿ.

ಗೆಳೆತನ ಆರಂಭವಾಗುವುದು ಯಾವಾಗ ? ಯಾರೊಬ್ಬರು ನಿಮ್ಮ ಬಗ್ಗೆ ಎಚ್ಚರಿಕೆ ವಹಿಸುತ್ತಾರೆ ಎಂಬುದನ್ನು ಕಂಡು ಕೊಂಡಾಗ ಆ ಮನುಷ್ಯ ಬರುತ್ತಾನೆ, ನಿಮ್ಮನ್ನು ಕರೆಯುತ್ತಾನೆ. ಅವನು ತನ್ನ ಅನುಭವಗಳನ್ನು ನಿಮ್ಮೊಡನೆ ಹಂಚಿಕೊಳ್ಳಲು ಇಚ್ಛಿಸುತ್ತಾನೆ. ವಿಶೇಷ ರೀತಿಯಲ್ಲಿ ನಿಮ್ಮನ್ನು ಕುರಿತು ಆಲೋಚಿಸಲು ನಿಮಗೊಬ್ಬ ಗೆಳೆಯ ಬೇಕು, ಕಾರಣ ನೀವು ಅವನ ಅಥವಾ ಅವಳ ಪರವಾಗಿ ಚಿಂತನಾಪೂರ್ವಕ ಮತ್ತು ಕರುಣಾಪೂರ್ವಕ ನಡೆದುಕೊಳ್ಳುವದಕ್ಕಾಗಿ.

ಗೆಳೆಯ ಎಂದರೆ

ನೀವು ತಟಸ್ಥರಾದಾಗ ನಿಮಗೆ ಚಾಲನೆ ಕೊಡುವವನು.

ನಾವು ಏಕಾಂತದಲ್ಲಿರುವಾ ನಿಮಗೊಂದು ನುಡು ನುಡಿಯುವವನು

ನೀವು ಹುಡುಕುತ್ತಿರುವಾಗ ಮಾರ್ಗದರ್ಶಿನಿಯಾಗುವವನು

ನೀವು ದುಃಖದಲ್ಲಿರುವಾಗ ಒಂದು ನಗು ನೀಡುವವನು

ನೀವು ಆನಂದದಿಂದಿರುವಾಗ ಒಂದು ಗೀತೆ ಹಾಡುವವನು

## ಸಂಲಗ್ನತೆಗೆ ಅಗತ್ಯ

ಇತರರೊಡನೆ ಇರಬೇಕೆಂಬ ಅಪೇಕ್ಷೆಯನ್ನು ತೋರಿಸುವುದಕ್ಕಾಗಿ ಅದನ್ನು ಸಂಲಗ್ನತೆಗೆ ಅಗತ್ಯವೆಂಬುದನ್ನು ಆಗಾಗ ಉಲ್ಲೇಖಿಸಲಾಗುತ್ತದೆ. ಈ ಸಂಲಗ್ನತೆ ಮಗುವಿಗೆ ಕುತೂಹಲವನ್ನುಂಟು ಮಾಡಿದಾಗ ಹೆಚ್ಚುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಅಲಂಬನೆ ಎರಡು ಪ್ರಕಾರದ ಕಾರ್ಯಗತಿಯಿಂದ ಹುಟ್ಟಿ ಬರುವಂತೆ ಕಾಮುತ್ತದೆ. ಮಗು ಕ್ರಮೇಣ ಎರಡನ್ನು ಕಲಿಯುತ್ತದೆ. ಸಮಾಜೀಕರಣವನ್ನು ಮಾಡುವ ಪ್ರತಿನಿಧಿಯ ಹಾಜರಾತಿ ಮತ್ತು ಅನುಮತಿ ಸಾಮಾನ್ಯವಾಗಿ ಲಾಭದಾಯಕವಾದುದು. ಮತ್ತು ಸಾಮಾಜೀಕರಣವನ್ನು ಮಾಡುವ ಪ್ರತಿನಿಧಿಯ ಗೈರು ಹಾಜರಿ ಅಥವಾ ಅನುಮತಿ ಕುತೂಹಲ ಕೆರಳಿಸುವುದು.

## ಒಳ್ಳೆಯ ಗೆಳೆಯರು

ಒಳ್ಳೆಯ ಗೆಳೆಯರು ಪರಸ್ಪರರ ಮನಸ್ಸನ್ನು ಓದಬಲ್ಲರು. ನಿಮ್ಮ ಗೆಳೆಯ ಹೇಗಿದ್ದಾನೆ ಎಂಬುದಕ್ಕೆ ನೀವು ಸುಲಭವಾಗಿ ಸುಳಿವುಗಳನ್ನು ಆರಿಸಿಕೊಳ್ಳಬಹುದು. ಅವನು ನಗುತ್ತಿದ್ದರೆ

ನೀವು ನೋಡಬೇಕೆಂದಿರುವವನು ಅವನೇ. ಅವನು ನಿಮ್ಮ ಕಡೆಗೆ ನೋಡುತ್ತಿದ್ದಾನೆ ಎಂಬುದನ್ನು ಕಂಡುಕೊಳ್ಳಿರಿ. ಒಳ್ಳೆಯ ಗೆಳೆಯರು ನಿಮಗೆ ಸತ್ಯವನ್ನೇ ಹೇಳುತ್ತಾರೆ. ನೀವು ಕೇಳುತ್ತೀರಿ. ಆನಂದ ನೆಲೆ ತಪ್ಪಿಸಿಕ್ಕಿಕೊಂಡಿದ್ದಕ್ಕೆ ನಾನು ಅವನನ್ನು ಕುರಿತು ಅರಚಿದಾಗ ನಾನು ತುಂಬ ಒರಟ ಎಂದು ನೀನು ಯೋಚಿಸಿದೆಯಾ ? ನಿಮ್ಮ ಮಿತ್ರ ಹೇಳುತ್ತಾನೆ. ಹೌದು ನೀನುಹಾಗೆ ನಡೆದುಕೊಂಡೆ. ಉತ್ತರ ಸ್ವೀಕರಿಸುವುದು ಕಠಿಣತಮವೇನಲ್ಲ, ಏಕೆಂದರೆ ನಿಮ್ಮ ಗೆಳೆಯ ನಿಮಗಾಗಿ ಎಚ್ಚರಿಕೆ ವಹಿಸುತ್ತಾನೆ ಮತ್ತು ನಿಮಗೆ ನೋವುಂಟು ಮಾಡಲು ಇಚ್ಛಿಸುವವನಲ್ಲ ಎಂದು.

## ಗೆಳೆಯರು ನಿಮ್ಮನ್ನು ಸರಿ ದಾರಿಯಲ್ಲಿ ನಡೆಯುವಂತೆ ನೋಡಿಕೊಳ್ಳುತ್ತಾರೆ

ನೀವು ಕೇಳಿದರೆ ಬುದ್ಧಿವಾದ ಹೇಳುತ್ತಾರೆ. ಅಲ್ಲದೆ ಯಾವಾಗ ಮೌನವಾಗಿರಬೇಕು ಎಂಬುದನ್ನು ಅವರು ಬಲ್ಲರು.

ತಾರುಣ್ಯದಲ್ಲಿ ನಿಮ್ಮ ಉತ್ತಮ ಗೆಳೆಯರು ನಿಮ್ಮ ಲಿಂಗ ಜಾತಿಗೆ ಸೇರಿದವರೇ. ಬೇಗನೆಯೇ ನೀವು ನಿಮ್ಮ ವಿರೋಧ ಲಿಂಗ ಜಾತಿಯ ಗೆಳೆಯರನ್ನು ಕೂಡ ಪಡೆಯುತ್ತೀರಿ. ಮತ್ತು ನಿಮ್ಮ ಧ್ಯೇಯಗಳನ್ನು ಮತ್ತು ಭಾವನೆಗಳನ್ನು ಹಂಚಿಕೊಳ್ಳುತ್ತೀರಿ. ಕಾಲೇಜು, ಚಿತ್ರಗಳು ಆಟಗಳು ಮತ್ತು ಸಂಗೀತಗಳಂಥ ಸಾಮಾನ್ಯ ವಿಷಯಗಳನ್ನು ನೀವು ಮಾತನಾಡಿಕೊಳ್ಳುತ್ತೀರಿ. ಆದರೆ, ನಿಮ್ಮ ಹಾಗೆ ಮುಂಚೆ, ಅದೇ ರೀತಿಯಲ್ಲಿ ಅವುಗಳ ಬಗ್ಗೆ ಮತ್ತಾರೂ ಎಂದೂ ಮಾತನಾಡಿರಲಿಲ್ಲವೋ ಎಂಬಂತೆ ಅದು ಇರುತ್ತದೆ.

ನೋವು ಪಡೆಯುವುದು ಬದುಕಿನ ಒಂದು ಭಾಗ, ಮತ್ತು ಯಾವುದೇ ಬಂಧುತ್ವದ ಭಾಗವೂ ಹೌದು. ಸಿಂಪಿ (ಪ್ರಾಣಿ)ಯಂತೆ ಇರು. ಅದಕ್ಕೆ ಪೆಟ್ಟು ಬಿದ್ದಾಗ ತನ್ನ ಗಾಯವನ್ನು ಮತ್ತಿನ ಚಿಪ್ಪಿನಿಂದ ಮುಚ್ಚಿಕೊಳ್ಳುತ್ತದೆ.

ಗೆಳೆಯರ ನಡುವೆ ಶಾರೀರಿಕ ಕ್ರಿಯೆಗಳು ಇರುತ್ತವೆ. ಸಾಮಾನ್ಯವಾಗಿ ಹುಡುಗರಿಗೆ ಭುಜದ ಮೇಲೆ ಒಂದು ಮೊಟಕು ಹಾಕಿದಾಗ ಅಥವಾ ಬೆನ್ನ ಮೇಲೆ ತಟ್ಟಿದಾಗ, ಅಥವಾ ಹುಡುಗಿಯರಿಗೆ ಸೊಂಟದ ಸುತ್ತ ಕೈ ಹಾಕಿದಾಗ ಅಥವಾ ಅನೀರಿಕ್ಷಿತವಾಗಿ ಭೇಟಿಯಲ್ಲಿ ಹಲೋ ಎಂದು ಕಿರುಚಿಕೊಂಡಾಗ. ವಿರುದ್ಧ ಲಿಂಗ ಜಾತಿಯ ನಿಮ್ಮ ಗೆಳೆಯನನ್ನು ಗೆಳತಿಯನ್ನು ಕುರಿತು ಮಾತನಾಡುವಾ ಒಂದು ಹಸ್ತಸ್ಪರ್ಶ ಒಂದು ನೋಟ ಒಂದು ಮುಗುಳ್ನಗು ಅಥವಾ ಕೆಲವೊಮ್ಮೆ ನೀವು ಬೇಕೆನಿಸಿದಾಗ ಅವರ ಅತಿ ಸಮೀಪದಲ್ಲಿರುವುದು ಮೊದಲಾದ ಸಂದರ್ಭಗಳಲ್ಲೂ ಶಾರೀರಿಕ ಕ್ರಿಯಗಳು ಇರುತ್ತವೆ.

ಗೆಳೆಯರ ನಡುವೆ ಈ ಶಾರೀರಿಕ ಸಂಕೇತಗಳು ಎಲ್ಲ ರೀತಿಯ ಸಂದೇಶಗಳನ್ನು ಅರ್ಥಗಳನ್ನು ಒಂದು ಶಬ್ದವನ್ನೂ ಉಚ್ಚರಿಸದೆ ಒಯ್ಯುತ್ತವೆ. ಅವುಗಳೆಲ್ಲಾ ಪುರುಷರಾಗಿ ಮತ್ತು ಸ್ತ್ರೀಯರಾಗಿ ಬೆಳೆಯುತ್ತಿರುವ, ವೃದ್ಧಿ ಹೊಂದುತ್ತಿರುವ ಅಂಶಗಳೇ.

## 3. ಮೋಹ

ವಿರುದ್ಧ ಲಿಂಗ ಜಾತಿಗಳ ಇಬ್ಬರು ವ್ಯಕ್ತಿಗಳ ನಡುವೆ ನಡೆಯುವ ಪರಸ್ಪರ ಶಾರೀರಿಕ ಆಕರ್ಷಣೆ ಹೆಚ್ಚು ಆಳವಾಗಿ ಮತ್ತು ಭಾವಾವೇಶದ ಆಕರ್ಷಣೆಯಾಗಿ ಬೆಳೆಯುವ ಸಾಧ್ಯತೆಯಿದೆ. ಆದರೆ ಇದಕ್ಕೆ ಹೆಚ್ಚು ಕಾಲ ಬೇಕು.

ಪ್ರೇಮ ಎಂದರೆ ಮನುಷ್ಯನನ್ನು ತಿಳಿದುಕೊಳ್ಳುವುದು, ಅವನನ್ನು ಅರ್ಥ ಮಾಡಿಕೊಳ್ಳುವುದು. ಅವಳು ಅವನನ್ನು ಅವನು ಅವಳನ್ನು ಅವರು ಇರುವಂತೆ ಸ್ವೀಕರಿಸುವುದು ಮತ್ತು ಅವನನ್ನು ಅವಳು ಅವಳನ್ನು ಅವನು ಪೂರ್ಣವಾಗಿ ಗೌರವಿಸುವುದು ಎಂದ ಅರ್ಥ.

ಮೋಹ ಅತಿ ಬಲಿಷ್ಠವಾದ ಶಾರೀರಿಕ ಭಾವನೆಯಾಗಿರಬಹುದು ಎಷ್ಟೋ ವೇಳೆ, ಸಾಮಾನ್ಯ ಬುದ್ಧಿ ಏಕವ್ಯಕ್ತಿಯನ್ನು ಅಥವಾ ಜೋಡಿಗಳನ್ನು ಕೈ ಬಿಡಬಹುದು. ಮೋಹ ಏಕ ಪಕ್ಷೀಯವಾಗಿರಬಹುದು ಮತ್ತು ಆ ವ್ಯಕ್ತಿಗೆ ಪ್ರಧಾನ ಸಮಸ್ಯೆಗಳನ್ನು ತಂದೊಡ್ಡಬಹುದು. ಆದರೆ ಪ್ರೇಮ ಪಾರಸ್ಪರಿಕವಾದುದು ಮತ್ತು ಸ್ವಾರ್ಥ ತ್ಯಾಗ ಪೂರ್ಣವಾದುದು.

## 4. ಸಮಾನಸ್ಕಂಥ ತಂಡಗಳು ತಂಡ ಅಥವಾ ಗುಂಪು

ಹದಿ ಹರಿಯದವರು ವಿಶಾಲವಾದ, ಆದರೆ ಅಲ್ಪ ಪರಿಚಯದ ಪ್ರಪಂಚವನ್ನು ಪ್ರವೇಶಿಸಿದಾಗ, ಅವರು ವಿಶಿಷ್ಟ ಗುಂಪಿನ, ತಮ್ಮದೇ ವಯಸ್ಸಿನ ತಮ್ಮದೇ ಲಿಂಗಜಾತಿಯ ತರುಣ ಜನವನ್ನು ಸೇರುವ ಪ್ರವೃತ್ತಿಯನ್ನು ಹೊಂದಿರುತ್ತಾರೆ. ಅವರಿಗೂ ಒಂದೇ ರೀತಿಯ ಆಸಕ್ತಿಗಳು ಮತ್ತು ಅಂಚಿಗೆಳಿರುತ್ತವೆ ಆದರೂ ಅವರದೇ ಭಾಷೆಯನ್ನು ಮಾತನಾಡುವವರಾಗಿರುತ್ತಾರೆ ಮತ್ತು ಪರಸ್ಪರ ಬೆಂಬಲಿಸುತ್ತಾರೆ.

ಮಾನವ ಶಾಸ್ತ್ರಜ್ಞರು ಇಂಥದನ್ನು ಸಮಾನಸ್ಕಂಥ ತಂಡಗಳೆಂದು ಕರೆಯುತ್ತಾರೆ. ವಿಷಯಗಳನ್ನು ಎದುರಿಸುವುದು ಸುಲಭತರ. ಗೋಷ್ಠಿಗಳಿಗೆ, ಸಭೆಗಳಿಗೆ ನಿಮ್ಮ ಸಮಾನಸ್ಕರಂಥವರೊಡನೆ ಹೋಗುವಂಥ ವಿಚಾರ. ಏಕೆಂದರೆ ಆಗ ನೀವು ಸಂಭಾಷಣೆಯನ್ನೆಲ್ಲ ನೀವೊಬ್ಬರೇ ಮುಂದುವರಿಸಬೇಕಾಗಿರುವುದಿಲ್ಲ. ಇತರರು ಸಹಾಯ ಮಾಡುತ್ತಾರೆ. ಇವುಗಳನ್ನು ಮಾಡು, ಇವುಗಳನ್ನು ನಿರ್ಣಯಿಸು ಅಥವಾ ಇವುಗಳನ್ನು ಅನುಮತಿಸುವುದು ಎಂದು ಮಾತನಾಡುವುದು ಸುಲಭತರ.

ಹೀಗೆ ಒಂದು ತಂಪಕ್ಕೆ ಸೇರಿದ್ದು ಮತ್ತು ಒಟ್ಟಾಗಿ ಸೇರಿ ಮಾಡುವುದು ಬೆಳೆಯುವ ಹಂತಗಳಲ್ಲಿ ಒಂದು ಆದಾಗ್ಯೂ ಮಾನಸಿಕವಾಗಿ ಮುಂದೆಗೆ ವಶರಾಗಬೇಡಿ ಅಥವಾ ಇತರರು ಏನು ಮಾಡುತ್ತಿದ್ದಾರೆ ಎಂಬುದನ್ನು ಕುರುಡಾಗಿ ಒಪ್ಪಿಕೊಳ್ಳಬೇಡಿ.ಇ ನೀವು ಏಕೆ ಮಾತ್ರ, ನೀವು ನೀವೆ.

ಬಾಲಾಪರಾಧವನ್ನು ಅಥವಾ ಸಮಾಜ ವಿರೋಧಿ ಸಂಭಾವವನ್ನು ಇಂದಿನ ಸಮಾಜದ ಹದಿಹರೆಯದ ಮಕ್ಕಳ ಅತಿ ಗಂಭೀರ ಸಮಸ್ಯೆಗಳೆಂದು ಪರಿಗಣಿಸಲಾಗಿದೆ. ಹದಿಹರಿಯದ ಮಕ್ಕಳಿಂದ ಆಚರಿಸಲ್ಪಡುವ ಪ್ರಮುಖ ಅಪರಾಧಗಳೆಂದರೆ, ಕದಿಯುವುದು, ಕನ್ನಗಳ್ಳತನ, ಲೈಂಗಿಕ ತಕ್ತೀರು ಮತ್ತು ಶಾಲೆಗಳ್ಳತನ ಹಾಗೂ ಪರೀಕ್ಷೆಗಳಲ್ಲಿ ನಕಲು ಬರೆಯುವುದು, ವಂಚಿಸುವುದು ಮತ್ತು ಟಿಕೆಟ್ಟಿಲ್ಲದೆ ಪ್ರಯಾಣ ಮಾಡುವುದು.

ಕೇಂದ್ರ ತನಿಖಾ ಮಂಡಲಿ (C.B.I.) ಭಾರತದ ತಕ್ತೀರುಗಳ ಬಗೆಗಿನ ವರದಿಗಳು ಮತ್ತು ಭಾರತದ ಪೋಲಿಸರ ಸಂಶೋಧನೆ ಮತ್ತು ಅಭಿವೃದ್ಧಿ ಬ್ಯುರುವಿನ ವರದಿಗಳು 1969 ರಿಂದ 1970ರ ವರೆಗೆ ತರುಣರು ಮಾಡಿದ, ಗಮನಕ್ಕೆ ಬರುವ ತಕ್ತೀರುಗಳಲ್ಲಿ ಶೇಕಡ 25.4ರಷ್ಟು ಒಟ್ಟು ಹೆಚ್ಚಳವನ್ನು ತೋರಿಸುತ್ತದೆ.

## 5. ತರುಣ ಸಾಮಾಜೀಕರಣ ಸಮಸ್ಯೆಗಳು

ತರುಣರಲ್ಲಿ ಅನೇಕರು ವಯಸ್ಕ ಪ್ರಪಂಚಕ್ಕೆ ಪ್ರವೇಶಿಸಿದಾಗ ಸಾಮಾಜೀಕರಣ ಮಾಡುವಲ್ಲಿ ಅನೇಕ ಸಮಸ್ಯೆಗಳನ್ನು ಹೊಂದಿರುತ್ತಾರೆ. ಇವು ಲೈಂಗಿಕ ಚೋದಕೆ ಸ್ರವಾಕ್ಕೆ ಸಂಬಂಧಪಟ್ಟವು. ಇವುಗಳನ್ನು ಅರ್ಥ ಮಾಡಿಕೊಳ್ಳುವ ಅಗತ್ಯತೆಯಿದೆ.

ತಾರುಣ್ಯದ ಅವಧಿಯಲ್ಲಿ ಭೌತಿಕ ಬೆಳವಣಿಗೆ ಮತ್ತು ಅಭಿವೃದ್ಧಿ ಯುವಕನ ಮಾನಸಿಕ ಪ್ರಪಂಚದ ಮೇಲೆ ಅತಿ ಮುಖ್ಯ ಸಂಘಟನೆಯಾಗಿದೆ. ತರುಣ ಹುಡುಗ ಅಥವಾ ಹುಡುಗಿ ಹೊಸ ಭಾವನೆಗಳನ್ನು ಮತ್ತು ಮಾನಸಿಕ ಕಲ್ಪನೆಯನ್ನು ಹೊಂದಿ ಹೊಸ ಶರೀರವನ್ನು ಪಡೆಯುತ್ತಾರೆ. ಅವರ ಯೋಚನೆಯ ಪ್ರಮುಖ ಅಂಶವೆಂದರೆ ವಯಸ್ಕ ಪ್ರಪಂಚದಲ್ಲಿ ತಮಗೆ ಅದು ಅತ್ಯಂತ ಸೂಕ್ತವಾದದ್ದು ಎಂದು ತಮಗೆ ತಾವೇ ತೋರಿಸಿಕೊಳ್ಳುತ್ತಾರೆ.

ಮಾನಸಿಕ ಶಕ್ತಿಗಳಲ್ಲಿ ಈ ಬದಲಾವಣೆಗಳು ಲಿಂಗ ಜಾತಿಯಲ್ಲಿ ಖಂಡಿತವಾಗಿ ಭಿನ್ನವಾಗಿರುತ್ತವೆ, ಕರುಣ ಹುಡುಗಿ ಪ್ರಥಮತಃ ಎಷ್ಟು ಆತ್ಮ ಪ್ರಜ್ಞೆಯನ್ನು ಮತ್ತು ಅಹಂ ಭಾವವನ್ನು ಹೊಂದಿರುತ್ತಾಳೆಂದರೆ ಅವಳು ಹುಡುಗರ ಬಗೆಗೆ ಅತಿಶಯವಾದ ಕುತೂಹಲವನ್ನು ಹೊಂದಿರುವುದಿಲ್ಲ ಬದಲು ಅವರನ್ನು ಅವಳು ಸ್ಪರ್ಧಿಗಳೆಂದು ಸ್ವೀಕರಿಸುತ್ತಾಳೆ, ಅಲ್ಲದೆ ಅವಳು ಗಂಡುಬೀರಿಯ ಮಾದರಿಯಾಗಿ ಬಿಡುತ್ತಾಳೆ.

ಮುಟ್ಟು ಆರಂಭವಾದ ಮೇಲೆ ಅವಳು ಮಣಿಯುವ ಮತ್ತು ಜವಾಬ್ದಾರಿ ಹೊರುವ ಭಾವವನ್ನು ತಳೆದ ನಂತರ ಪ್ರಧಾನ ಮಾನಸಕಿ ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ. ಹುಡುಗಿಯಲ್ಲಿ ಭಾವಾವೇಶ ಕೂಡ ಅವಳ ಶರೀರದಲ್ಲಿ ಅವರ್ತಕ ಅಂತಸ್ರಾವಕದ ಪರಿಸರದ ಮೇಲೆ ಅವಲಂಬಿಸಿರುತ್ತದೆ. ಅಂತಸ್ರಾವದ ಅವರ್ತನೆಯ ಮೊದಲ ಭಾಗದ ಯಾವೊಂದು ಸ್ರಾವದ ಅವಧಿಯಲ್ಲಿ ಆಕೆ ಚುರುಕಾಗಿ, ಹರ್ಷದಿಂದ ಲೈಂಗಿಕ ಪ್ರಜ್ಞೆಯಿಂದ ಇರುತ್ತಾಳೆ. ಅಂತಸ್ರಾವದ ಆವರ್ತನೆಯ ಎರಡನೆಯ ಹಂತದಲ್ಲಿ ಲೈಂಗಿಕ ಅಂತಃಸ್ರಾವದಿಂದ ಪ್ರಭಾವಿತಳಾಗಿ ಅವಳ ಚುರುಕುತನ ಕ್ಷೀಣವಾಗುತ್ತದೆ ಮತ್ತು ಕಡೆಯ ಕೆಲವು ದಿನಗಳ ಅವಧಿಯಲ್ಲಿ ಎರಡೂ ಅಂತಃಸ್ರಾವಗಳ ಮಟ್ಟ ತಗ್ಗಿ ಅವಳು ಕೋಪಿಷ್ಠಳೂ, ಕುತೂಹಕದಾಯಕಿಯೂ, ಆಯಾಸಗೊಂಡವಳೂ ಆತಂಕಿಯೂ ಆಗುತ್ತಾಳೆ.

ಬಹುಸಂಖ್ಯಾತ ತರುಣ ಹುಡುಗರು ಸೊಕ್ಕಿನಿಂದ ಬೆಳೆದ ಶರೀರವುಳ್ಳವರಾಗಿ ದುರಹಂಕಾರಿಗಳಾಗುತ್ತಾರೆ. ಅಧಿಕಾರ ಶಕ್ತಿಯ ಬೆಳಕನ್ನು ಅನುಭವಿಸುವ ಅವಧಿ ಅದು. ಆಗ ಅವನು ಕೊಂಚ ಸೂಚನೆ ಸಿಕ್ಕರೂ ಅತ್ಯಂತವಾಗಿ ಅಸಾಧ್ಯವಾದುದನ್ನು ಕೂಡ ಮಾಡಲು ಸಿದ್ಧವಾಗುತ್ತಾನೆ. ಅವನು ಸ್ವಂತ ವ್ಯಕ್ತಿತ್ವವನ್ನು ಹುಡುಕತೊಡಗುತ್ತಾನೆ. ಹಿರಿಯರ ಬಗ್ಗೆ ಅರಿಕೆಗೊಳಗಾಗದ ಹಠಮಾರಿಯಾಗುತ್ತಾನೆ. ಕಾರಣ ಹಿರಿಯರ ಪ್ರಪಂಚವೂ ಕೂಡ ಅವನು ಇನ್ನೂ ಅಪಕ್ವ ಕೂಸು ಎಂದು ಭಾವಿಸುವುದರಿಂದ, ಹದಿಹರೆಯದವರು ತಮ್ಮ ತಂದೆ ತಾಯಿಗಳು ತಮ್ಮ ಶತ್ರುಗಳೆಂದೇ ಭಾವಿಸುತ್ತಾರೆ. ಅವರು ತಮ್ಮ ಕಾರ್ಯಗಳಿಂದ, ಚಿಂತನೆಗಳಿಂದ ತಮ್ಮ ಸ್ವಾತಂತ್ರ್ಯವನ್ನು ಯಾವಾಗಲೂ ಕಿತ್ತುಕೊಳ್ಳಲು ಪ್ರಯತ್ನಿಸುತ್ತಾರೆ ಎಂದೇ ಭಾವಿಸುತ್ತಾರೆ. ಹೀಗೆ ಈ ರೀತಿಯಲ್ಲಿ ತಲೆಮಾರಿನ ಅಂತರ ವೆಂದು ಹೇಳುವ ಕಲ್ಪನೆ ಎರಡು ವಾತ್ಸಲ್ಯಪೂರ್ಣ ತಲೆಮಾರು ಎರಡರ ನಡುವೆ ಹುಟ್ಟುತ್ತದೆ.

ಗುಂಪಿನಿಂದ ಸಂಚು ಕೂಟದೆಡೆಗೆ ಗುಂಪಿನ ವಿಷಯಗಳಲ್ಲಿ ಒಂದು ಉತ್ತಮ ವಿಷಯವೆಂದರೆ, ಒಳಗುಂಪಿನ ಭಾಗವಾಗಿರುವುದು ಬೇರೆ ಪದಗಳಲ್ಲಿ ಹೇಳುವುದಾದರೆ ಸೇರಿಸಿಕೊಳ್ಳುವುದು, ಅತ್ಯಂತ ಕೆಟ್ಟದ್ದೆಂದರೆ ಗುಂಪು ಸಂಚು ಕೂಟವಾಗಬಹುದು, ದೊಡ್ಡವರ ಬೆನ್ನಾಳಾಗಬಹುದು ಅಥವಾ ತೀವ್ರ ಪ್ರತ್ಯೇಕ ಗುಂಪಾಗಬಹುದು. ನಿರ್ಲಕ್ಷಿಸಲ್ಪಟ್ಟವರೆಂಬ ಭಾವ ಬೆಳೆದು ತಮ್ಮನ್ನು ಕೈಬಿಟ್ಟಿದ್ದಾರೆ ಎಂದು ತಿಳಿದರೆ ಅದು ತುಂಬ ಭಯಂಕರ ಮತ್ತು ಹದಿಹರೆಯದವರಿಗೆ ಪೂರ್ಣ ದುರಂತ.

ನಿಮಗೆ ಅಂಥ ಸ್ಥಿತಿ ಒದಗಿದ್ದು ನಿಮ್ಮ ನೆನಪಿಗೆ ಬರುತ್ತದೆಯೆ ? ನೀವು ಆಗ ಅದೇನು ಮಹಾ ಎಂಬ ಧೋರಣೆಯ ನೆಪದಿಂದ ಅಲಕ್ಷಿಸಿರಬಹುದು. ಆದರೆ ಅದರ ನೋವು ಅಲ್ಲಿ ಇದ್ದೇ ಇರುತ್ತದೆ, ನಿಮ್ಮ ದೊಂಬಿ ಸಂಚು ಕೂಟವಾಗಲು ಬಿಡಬೇಡಿ. ನೀವು ಒಬ್ಬ ಒಳ್ಳೆಯ

ಗೆಳೆಯನ್ನನು ಕಂಡರೆ ಅವನನ್ನು ಉಳಿಸಿಕೊಳ್ಳಿ, ಇನ್ನೊಬ್ಬ ಒಳ್ಳೆಯ ಮಿತ್ರ ದೊರಕಿದರೆ ನಿಮ್ಮ ಗುಂಪನ್ನು ವಿಸ್ತರಿಸಿಕೊಳ್ಳಿ.

## ಕೆಡುಕಿನ ಗೆಳೆತನಗಳು

ನಿಮ್ಮ ಗೆಳೆಯ ಅಷ್ಟು ಒಳ್ಳೆಯವನಲ್ಲ ಎಂದು ನಿಮಗೆ ಕಂಡು ಬಂದಾಗ ಅಥವಾ ನಿಮಗೆ ಸಹಾಯವಾಗುವ ರೀತಿಯಲ್ಲಿಲ್ಲದೆ ಬೇರೆ ರೀತಿಯಲ್ಲಿ ನಡೆಯುವಂತೆ ನಿಮ್ಮನ್ನು ಕರೆದೊಯ್ಯುತ್ತಿರುವ ವ್ಯಕ್ತಿಯೆಂದು ಗೊತ್ತಾದರೆ ಆದರೆ ನಿಮ್ಮ ವೈಯಕ್ತಿಕ ಸ್ವಂತಕ್ಕೆ ನಿಮ್ಮ ಮೌಲ್ಯಗಳಿಗೆ ಅಥವಾ ನಿಮ್ಮ ಅಭ್ಯಾಸಗಳಿಗೆ ಕೆಡಕುಂಟು ಮಾಡುತ್ತಿದ್ದರೆ ನೀವು ಧೈರ್ಯ ವಹಿಸಿ ಆ ಗೆಳೆತನವನ್ನು ಕಡಿದು ಹಾಕಿಬಿಡಿ.

ನಿಷ್ಠೆಗೂ ಗೆಳೆತನಕ್ಕೂ ಭ್ರಾಂತಿಗೊಳ್ಳಬೆಡಿ. ನಿಮ್ಮ ಅಧ್ಯ ಕರ್ತವ್ಯ ನಿಮ್ಮ ಸ್ವಂತ ಆತ್ಮದ ಕಡೆಗೆ ನಿಮ್ಮ ಆತ್ಮಕ್ಕೆ ನೀವು ಸತ್ಯವಂತರಾಗಿರಿ. ಆಗ ನೀವು ಯಾವೊಬ್ಬ ಪುರುಷನಿಗೆ ಸುಳ್ಳಾಗಿರುವುದು ಸಾಧ್ಯವಾಗುವುದೇ ಇಲ್ಲ. ಹೀಗೆ ಹೇಳಿದ್ದು ಷೇಕ್ಸಪಿಯರ್. ಅಂತರ್ವಾಣಿ ಅಥವಾ ಆತ್ಮಪ್ರಜ್ಞೆಯ ಧ್ವನಿ ಯಾವಾಗಲೂ ನಮಗೆ ದಾರಿ ತೋರಿಸುತ್ತದೆ. ಮುಂದೆನಡಿ ಎಂದು ಪ್ರೇರೇಪಿಸುತ್ತದೆ ಅಥವಾ ಹಾಗೆ ಮಾಡಬೇಡ ಎಂದು ಎಚ್ಚರಿಕೆಯ ಗುರುತನ್ನು ಕಾಣಿಸುತ್ತದೆ.

ಸತ್ಯವಾದ ಪರಿಪಕ್ವತೆ ಸ್ವಭಾವವನ್ನು ಅವಲಂಬಿಸುವುದಿಲ್ಲ. ಆದರೆ ಪ್ರಜ್ಞಾಪೂರ್ವಕ ತೀರ್ಮಾನಗಳ ಮೇಲೆ ಮತ್ತು ಸ್ವತಂತ್ರವಾಗಿ ಯೋಚಿಸುವುದರ ಮೇಲೆ ನಿಲ್ಲುತ್ತದೆ, ಸತ್ಯವಾದ ಪರಿಪಕ್ವತೆ ಅಂತರ್ಯದಲ್ಲಿರುವ ಆತ್ಮ ಶಿಸ್ತಿನಿಂದ ಹೊರಬರುತ್ತದೆ. ಯಾವುದೇ ಕೃಷಿ ಕ್ಷೇತ್ರದಲ್ಲಿ ಉತ್ತಮೊತ್ತಮ ಗೊಬ್ಬರವೆಂದರೆ ಮಾಲೀಕನ ಹೆಜ್ಜೆಗಳೇ ಕನಫ್ಯೂಷಿಯಸ್.

## ವಾತ್ಸಲ್ಯದ ಚಿಹ್ನೆಗಳು

ಹೆಚ್ಚಾಗಿ ಪರಸ್ಪರ ಇಷ್ಟಪಡುವ ಒಬ್ಬ ಹುಡುಗ ಒಂದು ಹುಡಿಗಿ ಒಟ್ಟುಗೂಡಿ ಜೊತೆಯಾಗಿದ್ದರೆ ಅವರು ಸ್ವಪ್ರಚೋದಕರಾಗಿ ಕೈ ಕೈ ಹಿಡಿದುಕೊಳ್ಳಲು ಆರಂಭಿಸಬಹುದು. ಇದು ತುಂಬ ಉಲ್ಲಾಸಗೊಳಿಸುವಂಥದ್ದಾಗಿರುತ್ತದೆ. ಏಕೆಂದರೆ ಈ ಸ್ಪರ್ಶದಿಂದ ಒಬ್ಬರಿಗೊಬ್ಬರು ಹೇಳಿ ಕೇಳುತ್ತಾರೆ. ನಾನು ನಿನ್ನನ್ನು ಇಷ್ಟ ಪಡುತ್ತೇನೆ ಎಂದು.

ವಾತ್ಸಲ್ಯದ ಪ್ರೀತಿಯ ಶಾರೀರಿಕ ಅಭಿವ್ಯಕ್ತಿಗಳು ತಬ್ಬಿಕೊಳ್ಳುವುದು ಆಟಕ್ಕಾಗಿ ತಲೆಗೂದಲಲ್ಲಿ ಕೈ ಆಡಿಸುವುದು, ಬೆನ್ನ ಮೇಲೆ ತಟ್ಟುವುದು, ಮುತ್ತಿಡುವುದು ಈ ಕೆಲವನ್ನು ನಾವು ಕುಟುಂಬದಲ್ಲಿ ಸಾಮಾನ್ಯವಾಗಿ ಕಾಣುತ್ತೇವೆ. ನಮಗೆಲ್ಲ ಇದು ಸಾಮಾನ್ಯ. ಆದರೆ ಗಂಡಸು ಮತ್ತು ಹೆಂಗಸಿನ ನಡುವೆ ಇಂಥ ಪ್ರೀತಿಯ ಚಿಹ್ನೆಗಳು ಮತ್ತೊಂದು ಬೇರೆ

ಪ್ರಕಾರಗಳನ್ನು ಹೊಂದಿರಬಹುದು. ಅವು ಕೆಲವು ವೇಳೆ ಸಮೀಪ್ಯದ ಹೆಚ್ಚು ತೀವ್ರತರ ಭಾವನೆಗಳನ್ನು ಉದ್ರೇಕಗೊಳಿಸುತ್ತದೆ. ಮತ್ತು ಅಧಿಕ ಸಂಪರ್ಕಕ್ಕೆ ಮತ್ತು ಹೆಚ್ಚಿನ ಗಾಢಸ್ನೇಹಕ್ಕೆ ಅಪೇಕ್ಷೆ ಹುಟ್ಟಿಸುತ್ತದೆ. ಹೀಗೆ ಕೈಗಳನ್ನು ಹಿಡಿದ ನಂತರ ಮುಂದಿನ ಹೆಜ್ಜೆ ಭುಜಗಳನ್ನು ತಬ್ಬಿಕೊಳ್ಳುವುದು. ಅನಂತರ ಒಂದು ಚುಂಬನ.

## ದಿನ ನಿಶ್ಚಯಿಸುವುದು (Dating)

ಒಂದು ದಿನ ನಿಶ್ಚಯಿಸುವುದು ಅಥವಾ ಏಕಪ್ರಕಾರವಾಗಿ ಮುಂದುವರೆಯುವ ಕಾರ್ಯಕ್ರಮ ನಮ್ಮ ದೇಶಕ್ಕೆ ಹೊಂದಿಕೊಳ್ಳುವಂಥದಲ್ಲ. ಅದು ಶಿಷ್ಟಾಚಾರವೂ ಮತ್ತು ಸಾಧಾರಣವಾಗಿ ತರುಣರು ಬಹುಪ್ರದೇಶಗಳಲ್ಲಿ ಅಲ್ಲ. ಏಕೆಂದರೆ ಹುಡುಗರು ಆರ್ಥಿಕವಾಗಿ ಅವರ ತಂದೆ ತಾಯಿಗಳನ್ನು ಅವಲಂಬಿಸಿರುವುದರಿಂದ ಪಕ್ವವಾಗಿಯೂ ಇಲ್ಲ, ಅಥವಾ ಅಂಥ ಪ್ರತ್ಯೇಕ ಸ್ವಭಾವದ ಮಿತ್ರತ್ವವನ್ನು ನಿರ್ವಹಿಸಲು ಅನುಭವವನ್ನು ಪಡೆದಿರುವುದು ಇಲ್ಲ. ಆದ್ದರಿಂದ ಅತ್ಯಂತ ವಿವೇಕದಿಂದ ಕೂಡಿದ್ದರೆ ಈ ಒಂದು ದಿನ ನಿಶ್ಚಯ ಕ್ರಮ ನಿಶ್ಚಿತಾರ್ಥವಾದ ಜೋಡಿಗಳಿಗೆ ಮಾತ್ರ ಮೀಸಲಾಗಿದೆ.

ತಂಡವಾಗಿ, ಕೂಟಗಳಾಗಿ, ಪ್ರವಾಸ ಹೋಗುವುದು, ಸಾಮಾಜಿಕ ಸಭೆಗಳಲ್ಲಿ ಸೇರುವುದು, ಧಾರ್ಮಿಕ ಮತ್ತು ಸಾಂಸ್ಕೃತಿಕ ಸಮಾರಂಭಗಳಲ್ಲಿ ಭಾಗವಹಿಸುವುದು ಮೊದಲಾದ ಕಡೆಗಳಿಗೆ ಹೋಗುವುದನ್ನು ಎಂದರೆ ತಂಡ ನಿಶ್ಚಿತ ದಿನವನ್ನು ಗೊತ್ತು ಮಾಡುವುದನ್ನು ಪ್ರೋತ್ಸಾಹಿಸಬೇಕು. ತರುಣ / ತರುಣಿಯರು ತಮ್ಮನ್ನು ತಾವೇ ತಿಳಿಯಲು ತಮ್ಮ ಎದುರು ಲಿಂಗಜಾತಿಯನ್ನು ಅರ್ಥ ಮಾಡಿಕೊಳ್ಳಲು ಸಹಾಯ ಮಾಡಬೇಕು.

ಯುವಕ ಹದಿಹರೆಯದವರು ಚುಂಬನ ಮತ್ತು ದಿನನಿಶ್ಚಯದ ಮತ್ತು ಹುಡುಗ ಹುಡುಗಿಯರ ಸಂಬಂಧಗಳ ವಿಷಯ ಬಂದಾಗ, ಅವರಲ್ಲಿ ಗೊಂದಲ ಉಂಟಾಗಬಹುದು. ನಾಚಿಕೆ ಅಥವಾ ಸಂಕೋಚ ಕಂಡು ಬರಬಹುದು ಮತ್ತು ತಕ್ಷಣ ಹೇಗೆ ಪ್ರತಿಕ್ರಿಯಿಸಬಹುದು ಎಂಬುದನ್ನು ತಿಳಿಯುವುದಿಲ್ಲ. ಕೆಲವು ಹುಡುಗರಿಗೆ ಕೋಪ ಬರಬಹುದು. ಆಗ ಹೇಳುತ್ತಾರೆ ಅದಕ್ಕೂ ನನಗೂ ಸಂಬಂಧವಿಲ್ಲ ಎಂದು. ಮತ್ತೆ ಇತರ ಹುಡುಗರು ತಮಾಷೆಯಾಗಿ ಆಡಬಹುದು ಅವರಿಗೆ ಏನು ಗೊತ್ತಿಲ್ಲದಿದ್ದರೂ, ತಿಳಿದಿರದಿದ್ದರೂ ತಮಗೆ ಏನೋ ವಿಶೇಷವಾಗಿ ತಿಳಿದಿದೆ ಎಂದು ನಟಿಸಲೂಬಹುದು ಇನ್ನು ಕೆಲವರು ಸುಮ್ಮನೆ ಹಲ್ಲು ಕಿರಿಯಬಹುದು. ನಗಬಹುದು. ಕುಚೋದ್ಯ ಮಾಡಬಹುದು. ಕಡೆಗೆ ಜೋಕ್ ಕತ್ತರಿಸಬಹುದು. ಈ ಎಲ್ಲ ಕ್ರಿಯೆಗಳು ತುಡಿತದ ವಿಷಯಗಳ ಸುತ್ತ ಸುತ್ತುತ್ತಿರುತ್ತದೆ. ಮತ್ತು ಇವೆಲ್ಲ ಸಾಮಾನ್ಯ. ಅವು ಜೀವನದುದ್ದಕ್ಕೂ ಬೇರೆ ಬೇರೆ ರೀತಿಯಲ್ಲಿ ತಮ್ಮಷ್ಟಕ್ಕೆ ತಾವೆ ವ್ಯಕ್ತವಾಗುತ್ತವೆ.

## ಚುಂಬನದ ವಿಚಾರ ಏನು ?

ಚುಂಬನ ತನ್ನಷ್ಟಕ್ಕೆ ತಾನೇ ಹೇಳುವುದಾದರೆ ಅದೊಂದು ಸೋಜಿಗದ ವಿಷಯ. ಅದು ಪ್ರೇಮದ ಸಂಕೇತವಾಗಿದೆ ಮತ್ತು ಸಾವಿರಾರು ವರ್ಷಗಳಿಂದ ಗೌರವಾನ್ವಿತ ವಿಚಾರವಾಗಿದೆ. ಪೂಜಾ ವಿಧಾನದಲ್ಲಿ ಶಾಂತಿ ಚುಂಬನ ಎಂಬ ಮಾತಿದೆ. ಅದೊಂದು ರೀತಿಯ ಸ್ಪರ್ಶನ. ಅದು ಮೊದಲಿನಿಂದಲೂ ಕ್ರೈಸ್ತರ ಸ್ವಾಗತದ, ಆಶೀರ್ವಾದದ ಪ್ರೀತಿಯ ಸಂಕೇತ. ಹುಟ್ಟಿದ ಹಬ್ಬದ ದಿನ ಅಥವಾ ಹಬ್ಬದ ದಿನದಂದು ವಿಶಿಷ್ಟ ಆಶಯಗಳನ್ನು ತಲುಪಿಸುವುದಕ್ಕೂ ಚುಂಬನ ಸಂಕೇತವನ್ನು ಬಳಸುತ್ತಾರೆ.

ಚುಂಬನ ಒಂದು ರೀತಿಯ ಅಭಿವ್ಯಕ್ತತೆ. ಕೆಲವು ವೇಳೆ ಮಾತುಗಳಿಗಿಂತ ಹೆಚ್ಚು ಶಕ್ತಿಯುತವಾಗಿ ತಿಳಿಸುವ ಒಂದು ಮಾರ್ಗ. ಮಗ ಸಂಚಾರಕ್ಕೆ ಹೊರಟಾಗ ತಾಯಿ ಅವನನ್ನು ಚುಂಬಿಸುತ್ತಾಳೆ, ತಂದೆ ತನ್ನ ಮಗಳನ್ನು ಮದುವೆಗೆ ಮುಂಚೆ ಅವಳನ್ನು ವರನಿಗೆ ಒಪ್ಪಿಸುವಾಗ ಚುಂಬಿಸುತ್ತಾನೆ. ಹದಿಹರೆಯದ ಸೋದರಿ ತನ್ನ ಚಿಕ್ಕ ತಮ್ಮನನ್ನು ಅವನು ಬಿದ್ದಾಗ ಅವನನ್ನು ಸಮಾಧಾನ ಪಡಿಸಲು ಚುಂಬಿಸುತ್ತಾಳೆ. ಹುಡುಗ ಹುಡುಗಿಯನ್ನು ಕುರಿತು ನಾನು ನಿನ್ನೊಡನೆ ಇದ್ದುದಕ್ಕೆ ತುಂಬ ಆನಂದ ಪಟ್ಟಿದ್ದೇನೆ, ನೀನು ನನಗೆ ಇಷ್ಟ, ನಿನ್ನೊಡನೆ ಇರಲು ತುಂಬ ಚೆನ್ನ, ನಾನು ನಿನ್ನನ್ನು ಮತ್ತೊಮ್ಮೆ ಕಾಣಲು ಇಚ್ಛಿಸುತ್ತೇನೆ. ಮುಂತಾದ ಸಂದರ್ಭಗಳಲ್ಲಿನ ಈ ಚುಂಬನ ಅರ್ಥ ನಿನ್ನನ್ನು ನಾನು ಇಷ್ಟಪಡುತ್ತೇನೆ ಎಂಬುದಷ್ಟೇ, ನಿನ್ನ ಬಗ್ಗೆ ನನ್ನ ಭಾವನೆಗಳೆಂದರೆ ಅಥವಾ ಇರಬಹುದಾದುವೆಂದರೆ ಅವು ತುಂಬ ಮುಖ್ಯವಾದವು ಎಂದು ಹೇಳಲು ಚುಂಬಿಸುತ್ತಾನೆ.

## ವಾತ್ಸಲ್ಯ ಮತ್ತು ಉದ್ದೀಪನ

ತರುಣ ಪುರುಷನ ಹೆಂಗಸಿನ ನಡುವೆಯ ಅಥವಾ ಗಂಡ ಹೆಂಡಿರ ನಡುವಣ ಚುಂಬನಕ್ಕೆ ಮತ್ತೊಂದು ಪ್ರಮಾಣವಿದೆ. ಅದು ಪರಸ್ಪರ ಒಳಗೊಂಡ ಇಬ್ಬರು ವ್ಯಕ್ತಿಗಳ ಮನೋವಿಕಾರಗಳನ್ನು, ದೇಹಗಳನ್ನು ಉದ್ದೀಪನಗೊಳಿಸಬಹುದು. ಅದರ ಪರಿಣಾವಾಗಿ, ಪರಸ್ಪರವಾಗಿ ಲೈಂಗಿಕ ಆಸಕ್ತಿಯನ್ನು ಹೊಂದಬಹುದು. ಅವರು ಶಾರೀರಿಕ ಮತ್ತು ಭಾವುಕ ಭೋಗಸುಖ ಬಲಿಯುವಂತೆ ಚುಂಬನವನ್ನು ದೀರ್ಘವಾಗಿ ಬೆಳೆಸಲು ಇಚ್ಛಿಸಬಹುದು. ದೀರ್ಘ ಚುಂಬನ ಸಾಮಾನ್ಯವಾಗಿ ಇನ್ನು ಹೆಚ್ಚಿನ ಸಾಮೀಪ್ಯಕ್ಕೆ ದಾರಿಮಾಡಿಕೊಡಬಹುದು.

ಆದ್ದರಿಂದ ಚುಂಬನ ಕೆಲವು ಸಮಸ್ಯೆಗಳನ್ನು ನಿರ್ಮಿಸಬಹುದು. ಅವುಗಳನ್ನು ಪರಿಶೀಲಿಸಬಹುದಾಗಿದೆ. ಪ್ರಾರಂಭದಲ್ಲಿ ಹುಡುಗರು ಹುಡುಗಿಯರಲ್ಲಿ ಆಸಕ್ತಿಯನ್ನು ಮಾತ್ರ ಹೊಂದಿದವರಾಗಿರುತ್ತಾರೆ. ಎಲ್ಲ ಹುಡುಗಿಯರು ಅಥವಾ ಯಾವೊಂದು ಹುಡುಗಿ ಅವರನ್ನು

ಮಾರುಳಾಗೊಳಿಸಬಹುದು. ಅನಂತರ ಕ್ರಮೇಣ ಆಯ್ಕೆಯ ಕಾರ್ಯಗತಿಯು ಕೆಲಸ ಆರಂಭವಾಗುತ್ತದೆ, ಹುಡುಗರು ಹುಡುಗಿಯರ ಜೊತೆ ಸಮಾರಂಭಗಳ ಗೋಷ್ಠಿಗಳು ಇತ್ಯಾದಿ ಎಡೆಗಳಲ್ಲಿ ಜೋಡಿ ಜೋಡಿಯಾಗಿ ತಿರುಗಾಡಬಹುದು. ಅವರು ಪರಸ್ಪರ ಅರಿತುಕೊಂಡು, ಹೆಚ್ಚು ಹೆಚ್ಚಾಗಿ ಇಷ್ಟಪಡುವಾಗ ಅವರಲ್ಲಿ ಹೆಚ್ಚು ಸಂಪರ್ಕವಾದ, ಗಾಢಸ್ನೇಹದ ಅಪೇಕ್ಷೆ ಹೆಚ್ಚುತ್ತದೆ. ಅದರ ಮುಂದಿನ ಹಂತ ಚುಂಬನ ಅಥವಾ ಆಲಿಂಗನ.

ಅವಿವಾಹಿತ ತರುಣ ತರುಣಿಯರು ವಿವಾಹಕ್ಕೆ ಸಂಬಂಧಿಸಿದ ಪೂರ್ಣ ಪ್ರೇಮದ ಕ್ರಿಯೆಗಳಲ್ಲಿ ಸಿಕ್ಕಿಬೀಳಬಾರದು. ಅವರು ದೀರ್ಘವಾಗಿ ಚುಂಬಿಸುವುದು ತೀವ್ರವಾಗಿ ಮುತ್ತಿಡುವುದು ಅಥವಾ ಶಾರೀರಿಕ ನಿಕಟ ಸಾಮಿಪ್ಯ ಸಂಭವಿಸುವ ಸನ್ನಿವೇಶಗಳನ್ನು ತಪ್ಪಿಸಿಕೊಳ್ಳುವುದು ತುಂಬ ಅಗತ್ಯ.

ಬೆನ್ನು ಚಪ್ಪರಿಸುವುದು, ತಲೆಯ ಕೂದಲಿನಲ್ಲಿ ಕೈ ಆಡಿಸುವುದು ಮತ್ತು ಶರೀರದ ಮರ್ಮಾಂಗಗಳನ್ನು ಸ್ಪರ್ಶಿಸುವುದು, ಇವೆಲ್ಲ ಲೈಂಗಿಕ ಉದ್ದೀಪನದ ಎರಡನೆಯ ಹಂತದ ಕಾರ್ಯ ವಿಧಾನಗಳು ಇವು ವಿವಾಹದ ಹಂತಕ್ಕೆ ಸೇರಿರುವುದು.

ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ಹೇಗೆ ತಿಳಿಯುತ್ತೀರಿ ? ಯಾರಾದರೂ ಸ್ಟಾಪ್‌ವಾಚ್ ಇಟ್ಟುಕೊಂಡು ಎಷ್ಟು ಹೊತ್ತಿನವರೆಗೆ ಮುತ್ತು ಕೊಡುವುದು ಸರಿಯಾಗುವುದು ಎಂದು ಹೇಳಬಲ್ಲರೆ ? ಇಲ್ಲ ಅದು ಅಸಾಧ್ಯ. ಒಳ್ಳೆಯ ನಿಯಮ ಎಂದರೆ ಚುಂಬನ ಏನೋ ಒಂದನ್ನು ಹೇಳುವ ರೀತಿಯ ಕ್ರಮ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳುವುದು. ನಿಮ್ಮ ಗೆಳೆಯ / ಗೆಳತಿಗೆ ಏನು ಹೇಳುವುದಿಲ್ಲದಿದ್ದರೆ, ಹೇಳುವುದು ಸ್ವಲ್ಪವಿದ್ದರೆ ಚುಂಬನ ಅಭಿವ್ಯಕ್ತಪಡಿಸುವ ರೂಪದ ಮಿತಿಯನ್ನು ದಾಟಿ ಮುಂದಕ್ಕೆ, ಉದ್ದಿಪನ ಭಾವಕ್ಕೆ ಹೋಗುತ್ತಿದೆ ಎಂದು ಅನ್ನಿಸಿದಾಗ ಮುತ್ತಿಡಬೇಡಿ. ಅದೇ ನಿಮಗೆ ನಿಲ್ಲಿಸುವ ಖಂಡತುಂಡ ಸಂಕೇತ. ಹೀಗೆ ಹೇಳುವುದರ ಅರ್ಥ ನಿಮ್ಮ ಭಾವಗಳನ್ನು ನೀವು ಕಾವಲು ಕಾಯುತ್ತಿರಬೇಕು. ಮತ್ತು ನಿಮಗೆ ನೀವು ಪ್ರಾಮಾಣಿಕವಾಗಿರಬೇಕು. ಅದೆಂದರೆ ನೀವು ಸಾಕಷ್ಟು ಪಕ್ವವಾಗಿದ್ದೀರಿ. ಆಗ ನೀವು ಹೇಳಬಲ್ಲಿರಿ ನನ್ನ ಸಂಬಂಧವನ್ನು ನಾವು ನಮ್ಮ ಸ್ವಂತ ಅಭಿವೃದ್ಧಿಯ ಮಿತಿಯಲ್ಲಿ ಉಳಿಸಿಕೊಳ್ಳೋಣ ಎಂದು.

## ಸಮಭಾವ

ನಿಮ್ಮ ಭಾವಗಳನ್ನು ವ್ಯವಸ್ಥೆಗೊಳಿಸಿಕೊಳ್ಳುವ ಭಾಗವೇ ಸಮಭಾವಕ್ಕೆ ಸಂಬಂಧಪಟ್ಟದ್ದು. ಅದನ್ನು ನಾವು ಕೆಲವು ವೇಳೆ ಮರ್ಯಾದೆ ಎಂದು ಕರೆಯುತ್ತೇವೆ. ಆದರೆ ಅನೇಕ ಜನರಿಗೆ ಈ ಪದದ ಅರ್ಥವೇ ಬೇರೆ. ಒಪ್ಪದ ಉಡುಪು ಹಾಕಿಕೊಳ್ಳುವುದು, ನಿಮ್ಮನ್ನು

ನೀವು ಸೂಕ್ತವಾಗಿ ನಡೆಸಿಕೊಳ್ಳುವದು, ಮತ್ತು ನಿಮ್ಮ ಮಾತನ್ನು ಎಚ್ಚರದಿಂದ ನೋಡಿಕೊಳ್ಳುವುದು, ಎಂದೇ ಅವರ ಭಾವನೆ. ಎಲ್ಲದಕ್ಕಿಂತ ಮುಖ್ಯವಾದುದೆಂದರೆ ಸಮಭಾವದಿಂದ ಕೂಡಿರುವ ವ್ಯಕ್ತಿ ದುರಹಂಕಾರದಿಂದ ಮುಕ್ತನಾಗಿರುತ್ತಾನೆ. ಅವನ ಸಾಮರ್ಥ್ಯಗಳ ಮೇಲೆ ಅಥವಾ ಯೋಗ್ಯತೆಯ ಮೇಲೆ ಸಾಮಾನ್ಯ ಮನೋಭಾವವನ್ನು ಹೊಂದಿರುತ್ತಾನೆ. ಅವನ ಶಕ್ತಿ ಸಾಮರ್ಥ್ಯಗಳನ್ನು ಅರಿತಿರುತ್ತಾನೆ ಮತ್ತು ಅವುಗಳ ಮಿತಿಗಳನ್ನು ಬಲ್ಲವನಾಗಿರುತ್ತಾನೆ. ತಾನು ಆಡುವ ಮಾತುಗಳಿಂದ, ಬಳಸುವ ಭಾಷೆಯಿಂದ ಜನರನ್ನು ತಲ್ಲಣಗೊಳಿಸುತ್ತಾನೆ ಅಥವಾ ಯಾವುದಾದರೂ ಜಾಗಕ್ಕೆ ಹೋದಾಗ ಅಲ್ಲಿಗೆ ಸೂಕ್ತವಾಗಬಹುದಾದ ಉಡುಪಿನ ಅಥವಾ ಭೂಷಣಗಳ ಮಾದರಿಯನ್ನು ಬಿಟ್ಟು ಬಿಟ್ಟು ಬೇರೊಂದು ನಮೂನೆಯ ವಸ್ತ್ರಾಭರಣಗಳನ್ನು ಧರಿಸುತ್ತಾನೆ.

ಬಹು ಮುಖ್ಯವಾಗಿ ಯಾವಾಗಲೂ ನೆನಪಿನಲ್ಲಿಟ್ಟುಕೊಳ್ಳುವ ವಿಷಯವೆಂದರೆ, ನಿಮ್ಮ ನಡತೆಯ ರೀತಿ, ಮಾತುಗಾರಿಕೆ, ಉಡುಪು ಮತ್ತು ಚರ್ಚೆ ಏನು ಹೇಳುತ್ತದೆ ಎಂಬುದನ್ನು ನಿರ್ಧರಿಸಿಕೊಳ್ಳುವುದು. ಹಾಗೂ ಅದು ಇತರರು ನಿಮ್ಮಲ್ಲಿ ಏನನ್ನು ನೋಡಬಯಸುತ್ತಾರೆ, ನೀವು ಏನನ್ನು ಅಪೇಕ್ಷಿಸುತ್ತೀರಿ ಎಂಬುದೇ ಆಗಿರಬೇಕು ಎಂಬುದನ್ನು ಖಚಿತಪಡಿಸಿಕೊಳ್ಳುವುದು.

## 5. ಸತ್ಯವಾದ ಪ್ರೇಮ

ಒಬ್ಬ ಪುರುಷ ಒಬ್ಬ ಸ್ತ್ರೀ ಇವರ ನಡುವಿನ ಪ್ರೇಮ ದೇವಸೃಷ್ಟಿಯ ನಿಯಮದಲ್ಲಿ ಅತ್ಯಂತ ಮುಖ್ಯವಾದ ಭಾಗ.

ಗಂಡ ಹೆಂಡತಿ ಪರಸ್ಪರವಾಗಿ, ಜೊತೆಗೆ ಆರೈಕೆ ಮತ್ತು ಹಂಬಲವನ್ನುಳ್ಳ ತಮ್ಮ ಮಕ್ಕಳುಗಳಿಂದ ಕೂಡಿದ ವಿವಾಹಗಳು ದೇವರು. ನಮ್ಮ ಬಗ್ಗೆ ಇಟ್ಟಿರುವ ತನ್ನ ಪ್ರೀತಿಯನ್ನು ತಿಳಿದುಕೊಳ್ಳಲು ಸಹಾಯವಾಗುವಂತೆ ಒದಗಿಸಿರುವ ಒಂದು ವಿಶಿಷ್ಟ ರೀತಿಯ ಮಾಧ್ಯಮಗಳು.

ಹೀಗೆ, ಆರಂಭದಿಂದಲೂ ದೇವರು ಪುರುಷ ಒಬ್ಬ ಸ್ತ್ರೀಯನ್ನು ಆರಿಸಿಕೊಳ್ಳಬೇಕು ಎಂಬುದನ್ನು ಖಚಿತಪಡಿಸಿಕೊಳ್ಳುವಂತೆ ನಡೆದುಕೊಂಡಿದ್ದಾನೆ. ಹಾಗೆಯೇ ಸ್ತ್ರೀ ಪುರುಷನನ್ನು ಸ್ವೀಕರಿಸುವಂತೆ ಅವರು ಪರಸ್ಪರವಾಗಿ ಪ್ರೇಮಿಸಬೇಕು, ಒಂದಾಗಿ ಬೆಳೆಯಬೇಕು ಮತ್ತು ಸಾಧ್ಯವಾದರೆ ಕುಟುಂಬವನ್ನು ಹೊಂದಿರಬೇಕು. ತಮ್ಮಿಂದ ಜನಿಸಿದ ಮಕ್ಕಳನ್ನು ಸಂಬಂಧಿಸಿದ ಕಾಲಾವಧಿಯು ಮತ್ತು ಆಳವಟ್ಟ ಸೇವೆಯು ಎಲ್ಲ ಬಂಡವಾಳದಿಂದ ಆರೈಸಬೇಕು. ಪ್ರೇಮದ ಆಳವನ್ನು ಕಾಣುವ ಮತ್ತು ಆತ್ಮ ಪ್ರತ್ಯಯವನ್ನು ಹೊಂದುವ ಮಾನವರಿಗೆ ನಿಧಾನವಾಗಿ ವಿರುದ್ಧ ಲಿಂಗಗಳಲ್ಲಿ ಆಕರ್ಷಣೆಯನ್ನು ತೆರೆದು ತೋರಿಸುವ ಈ ಕಾರ್ಯವಿಧಾನ ಅನೇಕ

ಹಂತಗಳನ್ನು ನೆರವೇರುತ್ತದೆ ಎಂಬುದರ ಬಗ್ಗೆ ದೇವರು ನಮಗೆ ಭರವಸೆ ಕೊಟ್ಟಿದ್ದಾನೆ. ನಾವು ಸಾಮಾನ್ಯವಾಗಿ ಇದನ್ನು ಲೈಂಗಿಕ ಆಕರ್ಷಣೆ ಎಂದು ಕರೆಯುತ್ತೇವೆ. ಇದು ಬಲವತ್ತರವಾದ ಶಾರೀರಿಕ ಪ್ರತಿಕ್ರಿಯೆಗಳನ್ನು ಒಳಗೊಳ್ಳುವುದು ಮಾತ್ರವಲ್ಲದೆ, ಗಂಭೀರ ಮನೋವಿಕಾರದ, ಮಾನಸಿಕ ಮತ್ತು ಆಧ್ಯಾತ್ಮಿಕ ಅಭಿವೃದ್ಧಿಯನ್ನು ಕೂಡ ಒಳಗೊಳ್ಳುತ್ತದೆ.

## ಆತ್ಮ ಜ್ಞಾನದ ಬಾಗಿಲು

ಶಾರೀರಿಕ ಬೆಳವಣಿಗೆಯಲ್ಲಿ, ನಮ್ಮಲ್ಲಿ ಪ್ರತಿಯೊಬ್ಬರೂ ನಮ್ಮದೇ ಆದ ಗತಿಯಲ್ಲಿ ಈ ಎಲ್ಲ ಹಂತಗಳ ಮೂಲಕ ಮುಂದುವರಿಯುವುದನ್ನು ನಾವು ಕಲಿತಿದ್ದೇವೆ.

## ಪ್ರೇಮ

ಪ್ರೇಮ ಎಂಬುದು ಬೆಂಕಿ ಅಂಟದ ಗೆಳೆತನ. ಅದು ವಿಶ್ರಾಂತ ತಿಳುವಳಿಕೆ, ಪರಸ್ಪರ ನಂಬಿಕೆ, ಪಾಲುಗೊಳ್ಳುವಿಕೆ ಮತ್ತು ಕ್ಷಮಿಸುವಿಕೆ. ಅದು ಒಳ್ಳೆಯ ಕಾಲದಲ್ಲಿ ಮತ್ತು ಕೆಟ್ಟ ಸಮಯಗಳಲ್ಲೂ ಇರಬೇಕಾದ ನಿಷ್ಠೆ. ಪರಿಪೂರ್ಣತೆಗಿಂತ ಕಡಿಮೆ ಅವಸ್ಥೆಯಲ್ಲಿ ರಾಜಿ ಮಾಡುತ್ತದೆ, ಮಾನವನ ದೌರ್ಬಲ್ಯಗಳಿಗೆ ರಿಯಾಯಿತಿಗಳನ್ನು ನೀಡುತ್ತದೆ.

ಈಗಿನ ಇರುವಿಕೆಯಲ್ಲಿ ಪ್ರೇಮ ತೃಪ್ತಿ ಹೊಂದುತ್ತದೆ. ಭವಿಷ್ಯಕ್ಕೆ ಆಶೆ ಪಡುತ್ತದೆ ಮತ್ತು ಅದು ಕಳೆದು ಹೋದದ್ದನ್ನು, ಭೂತಕಾಲದ್ದನ್ನು ಕುರಿತು ಚಿಂತಿಸುವುದಿಲ್ಲ. ಸಿಟ್ಟು ಸಿಡುಕುಗಳ, ಸಮಸ್ಯೆಗಳ ಸಮಾಧಾನ ಹೊಂದಾಣಿಕೆಗಳ ಸಣ್ಣಪುಟ್ಟ ನಿರಾಶೆಗಳ ದೊಡ್ಡ ದೊಡ್ಡ ಗೆಲವುಗಳ ಮತ್ತು ಸಮಾನ ಗುರಿಗಳ ಇರುಳು ಹಗಲಿನ ಚರಿತ್ರೆ ಇದು.

ನಿಮ್ಮ ಬದುಕಿನಲ್ಲಿ ನೀವು ಪ್ರೀತಿಯನ್ನು ಹೊಂದಿದ್ದರೆ, ನಿಮಲ್ಲಿರುವ ಅನೇಕ ಲೋಪಗಳನ್ನು ಅದು ತುಂಬಬಲ್ಲದು. ಅದು ನಿಮ್ಮಲ್ಲಿಲ್ಲದಿದ್ದರೆ, ಮತ್ತೇನೆ ಇದ್ದರೂ ಅದು ಮುಖ್ಯವಲ್ಲ. ಅದು ಸಾಲದೂ ಕೂಡ.

## ವರ್ಗ ಚಟುವಟಿಕೆ

1. i) ಮುಂಚಿತವಾಗಿ ವರ್ಗವು ವಿಖ್ಯಾತರಾದ ಐವರು ಭಾರತೀಯ ಪುರುಷರನ್ನು ಮಹಿಳೆಯರನ್ನು ಆರಿಸಿಕೊಳ್ಳುತ್ತದೆ. ತರಗತಿಯಲ್ಲಿ 5 ತಂಡಗಳು ಈ ವಿಶಿಷ್ಟ ಗಣ್ಯ ವ್ಯಕ್ತಿಗಳ ಸ್ನೇಹಿತರ ಪ್ರಭಾವವನ್ನು ಕುರಿತು ಒಳ್ಳೆಯದಕ್ಕಾಗಲಿ ಅಥವಾ ಕೆಟ್ಟದ್ದಕ್ಕಾಗಲಿ ಒಂದು ವರದಿಯನ್ನು ಸಲ್ಲಿಸುತ್ತದೆ.

   ii) ಪುರುಷ / ಸ್ತ್ರೀ ಪ್ರತೀಕಗಳನ್ನು ಮತ್ತು ಅವು ಏನನ್ನು ಪ್ರತಿಬಿಂಬಿಸುತ್ತವೆನ್ನುವುದನ್ನು ಚರ್ಚಿಸಿ.

2. ಪ್ರಶ್ನಾವಳಿ

1. ನೀವು ಒಳ್ಳೆಯ ಸ್ನೇಹಿತರೆ ?

2. ಸಹಭಾಗಿತ್ವದ ಅಪಾಯ ಅಥವಾ ಮೂವರ ಭಾಗೀಕರಣ.

2. 1. ನೀವು ಒಳ್ಳೆಯ ಸ್ನೇಹಿತರೆ?

ನಿಮ್ಮ ಮಿತ್ರರೊಡನೆ ಇತ್ತೀಚೆಗೆ ಏನಾದರೂ ತೊಂದರೆ ಇದೆಯೇ ?

ನೀವು ಏಕಾಂಗ ವ್ಯಕ್ತಿಯಾಗುತ್ತಿದ್ದೀರಾ ?

ಈ ಮುಂದಿನ ಪ್ರಶ್ನೆಗಳನ್ನು ಪ್ರಾಮಾಣಿಕವಾಗಿ ಉತ್ತರಿಸಲು ಪ್ರಯತ್ನಪಡಿ ಅದು ಏಕೆ ಹಾಗೆ ಎಂದು ಕಲಿತುಕೊಳ್ಳುತ್ತೀರಿ.

ಅ ಅಥವಾ ಆ ವನ್ನು ನಿಮ್ಮ ಆಯ್ಕೆಗನುಸಾರವಾಗಿ ಗುರುತು ಹಾಕಿ. ಆನಂತರ ಕೊನೆಯಲ್ಲಿ ನಿಮ್ಮ ಅಂಕಗಳನ್ನು ತಾಳೆ ನೋಡಿ.

1. ಅ. ನಿಮಗೆ ಪರಿಚಯ ಮಾಡಿಕೊಟ್ಟಾಗ ನಿಮ್ಮ ಪರಿಚಯಸ್ಥರನ್ನು ನೀವು ಜ್ಞಾಪಿಸಿಕೊಳ್ಳುತ್ತೀರಾ ?

ಆ. ಅಥವಾ ಒಳ್ಳೆಯ ಪ್ರಭಾವವನ್ನು ಬೀರಲು ಹೆಣಗಾಡುತ್ತೀರಾ ?

2. ಅ. ನಿಮ್ಮೊಡನೆ ಇರಲು ನೀವೊಬ್ಬರು ನಿರಾತಂಕ ವ್ಯಕ್ತಿಯೆ ?

ಆ. ಅಥವಾ ನೀವು ಸುಲಭವಾಗಿ ಜಗಳಗಂಟಿಯೆ ?

3. ಅ. ನೀವು ಅಹಂಕಾರ ಸ್ವಭಾವದವರೇ ಮತ್ತು ನನಗೆ ಎಲ್ಲ ತಿಳಿದಿದೆ ಎಂದು ನಟಿಸುವದರಲ್ಲಿ ನೀವು ಹೆಮ್ಮೆ ಪಟ್ಟುಕೊಳ್ಳುತ್ತೀರಾ ?

ಆ. ಅಥವಾ ನೀವು ಸಾಮಾನ್ಯವಾಗಿ ವಿನೀತರೆ ಮತ್ತು ಸಹಜ ಸ್ವಭಾವದವರೆ ?

4. ಅ. ಇನ್ನೊಬ್ಬರಲ್ಲಿ ಆಸಕ್ತಿಯನ್ನು ಮೂಡಿಸುವ ಕಲೆಯನ್ನು ಅಭ್ಯಾಸ ಮಾಡುತ್ತೀರಾ?

ಆ. ಅಥವಾ ಇತರ ಜನ ನಿಮ್ಮೊಡನೆ ಸಹವಾಸ ಬೆಳೆಸಲು ಇಷ್ಟಪಡುತ್ತಾರೆಯೇ ಅಥವಾ ಇಲ್ಲವೇ ಎಂಬುದರ ಬಗ್ಗೆ ನೀವು ಗಮನಿಸುವುದಿಲ್ಲವೇ ?

5. ಅ. ನೀವು ಮತ್ತೊಬ್ಬರೊಡನೆ ಹೊಂದುವ ಅಥವಾ ಹೊಂದಿದ್ದ ಯಾವುದೇ ನಿಷ್ಠೆಯಿಂದ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಲು ಪ್ರಯತ್ನಿಸುತ್ತೀರಾ ?

ಆ. ಅಥವಾ ಆ ಇನ್ನೊಬ್ಬ ವ್ಯಕ್ತಿ ಮೊದಲೇ ಆರಂಭಿಸುವವರೆಗೆ ನೀವು ಕಾಯುತ್ತೀರಾ?

6. ಅ. ಸತ್ಯವಂತ ಜನರೊಡನೆ ಸುತ್ತಾಡುವುದಕ್ಕೆ ಮಾತ್ರ ಗೆಳೆಯರನ್ನು ಮಾಡಿಕೊಳ್ಳುವುದರಿಂದ ಸಮಾಜದಲ್ಲಿ ಮೇಲಿರುವ ವ್ಯಕ್ತಿಯೇ ನೀವು ?

ಆ. ನೀವು ಶುದ್ಧವಾಗಿ ಅಂಟಿಕೊಳ್ಳುವುದನ್ನು ಕಲಿಯುವವರೆಗೆ ಇತರ ಜನರೊಡನೆ ಸೇರುವುದನ್ನು ನೀವು ಅಭ್ಯಾಸ ಮಾಡುತ್ತೀರಾ ?

7 ಅ. ಇನ್ನಿತರರ ಸಾಧನೆಗಳನ್ನು ಕುರಿತು ನೀವು ಅವರಿಗೆ ಶುಭಾಶಯಗಳನ್ನು ಕೋರುವುದನ್ನು ಮುಖ್ಯಾಂಶವನ್ನಾಗಿ ಮಾಡಿಕೊಳ್ಳುತ್ತೀರಾ ?

ಆ. ಅಥವಾ ನೀವು ಗುಪ್ತವಾಗಿ ಅವರ ಯಶಸ್ಸನ್ನು ದ್ವೇಷಿಸುತ್ತೀರಾ ?

8. ಅ. ನಿಮ್ಮ ಸ್ವಂತ ಭಾವನೆಗಳನ್ನು ಪ್ರಾಮಾಣಿಕವಾಗಿ ಎತ್ತಿ ಹಿಡಿಯುತ್ತೀರಾ ?

ಆ. ಅಥವಾ ನೀವು ಯಾರೊಡನೆ ಇರುತ್ತೀರೋ ಆ ವ್ಯಕ್ತಿಯನ್ನು ಹೊಗಳುವುದಕ್ಕೆ ಮಾತ್ರಸುತ್ತಾಡುತ್ತೀರೋ ?

9 ಅ. ಸ್ನೇಹಿತರನ್ನು ಮಾಡಿಕೊಳ್ಳುವಲ್ಲಿ ಮತ್ತು ಇಟ್ಟುಕೊಳ್ಳುವಲ್ಲಿ ನಿಮ್ಮ ಹವ್ಯಾಸಗಳನ್ನು ಬದಲಾಯಿಸಲು ಸಿದ್ಧವಾಗಿರಬೇಕು ಎಂಬ ವಿಷಯದಲ್ಲಿ ನಿಮಗೆ ನಂಬಿಕೆಯಿದೆಯೇ?

ಆ. ಅಥವಾ ನಿಮ್ಮ ಮಿತ್ರರು ನೀವು ಇರುವಂತೆಯೇ ನಿಮ್ಮನ್ನು ಇಷ್ಟಪಡುವಂತೆ ಇರಬೇಕೆಂದು ಆಶಿಸುತ್ತೀರಾ ?

10 ಅ. ಗೆಳೆತನವನ್ನು ರೂಪಿಸುವಲ್ಲಿ ನೀವೇ ಉಪಕ್ರಮಿಸಬೇಕೆಂದು ನೀವು ಭಾವಿಸುತ್ತೀರಾ?

ಆ. ಅಥವಾ ಇನ್ನೊಬ್ಬರು ನಿಮ್ಮನ್ನು ಕಾಣಲು ಅವರಾಗಿಯೇ ಬರಲಿ ಎಂದು ಕಾಯುತ್ತಿರುತ್ತೀರಾ ?

## ಉತ್ತರಗಳು

ಪ್ರತಿಯೊಂದು ಸರಿಯಾದ ಉತ್ತರಕ್ಕೆ 5 ಅಂಕಗಳನ್ನು ಗುಣಿಸಿ

| | | |
|---|---|---|
| ಪ್ರಶ್ನೆ | 1 | ಅ |
| | 2 | ಅ |
| | 3 | ಆ |
| | 4 | ಅ |
| | 5 | ಅ |
| | 6 | ಆ |
| | 7 | ಅ |
| | 8 | ಅ |
| | 9 | ಅ |
| | 10 | ಅ |

ಗರಿಷ್ಠ ಅಂಕ 50

ನೀವು ನಿಷ್ಕಪಟವಾಗಿ 40-50 ಅಂಕಗಳನ್ನು ಗಳಿಸಿದ್ದರೆ, ನೀವು ನಿಜವಾಗಿ ಬಯಸಲ್ಪಡುವ ಪ್ರಾಮಾಣಿಕ ಗೆಳೆಯರಾಗುತ್ತೀರಿ.

25-35 ಅಂಕಗಳೆಂದರೆ ಅಲ್ಪ ಪ್ರಯತ್ನದಿಂದ ನೀವು ಹೆಚ್ಚು ಜನ ಗೆಳೆಯರನ್ನು ಪಡೆಯಬಹುದು.

20 ಅಥವಾ ಅದಕ್ಕೆ ಕಡಿಮೆ ಅಂಕಗಳು, ನೀವು ನಿಮ್ಮ ಇಂದಿನ ಪ್ರವೃತ್ತಿಯನ್ನು ಬದಲಾಯಿಸಿಕೊಳ್ಳದಿದ್ದರೆ, ನೀವು ನಿಮ್ಮ ಒಬ್ಬ ಒಳ್ಳೆಯ ಗೆಳೆಯನನ್ನು ಕಳೆದುಕೊಳ್ಳುವ ಸೂಚನೆಯನ್ನು ಕೊಡುತ್ತವೆ.

## 2. ಸಹಭಾಗಿತ್ವದ ಅಪಾಯ ಅಥವಾ ಮೂವರ ಭಾಗೀಕರಣ

### ಉದ್ದೇಶ

ಮೌಲ್ಯಮಾಪನದ ಬಹು ವಿಧಾನಗಳಲ್ಲಿ ಒಂದು ಸ್ವಯಂನ್ನು ತೆರೆದಿಡುವುದು, ನಮ್ಮ ಸ್ವಂತ ನಂಬಿಕೆಗಳನ್ನು ಚಟುವಟಿಕೆಗಳನ್ನು ಬಹಿರಂಗವಾಗಿ ಘೋಷಿಸುವುದರ ಮತ್ತು ಅವುಗಳನ್ನು ಎತ್ತಿ ಹಿಡಿಯುವುದರ ಬಗ್ಗೆ ನಮ್ಮ ಸಂಕಲ್ಪ. ಈ ಕಾರ್ಯವಿಧಾನಕ್ಕೆ ಬಹಿರಂಗಗೊಳಿಸುವ ಅಪಾಯವನ್ನು ಎದುರಿಸುವಲ್ಲಿ ನಂಬಿಕೆ ಹುಟ್ಟಿಸುವುದನ್ನು ಕಲಿಯುವುದೇ ಮೂಲಭೂತವಾದದು. ಸಹಭಾಗಿತ್ವದ ಅಪಾಯ ಈ ದಿಸೆಯಲ್ಲಿ ಒಂದು ಹೆಜ್ಜೆ.

### ಕಾರ್ಯವಿಧಾನ

ಉಪಾಧ್ಯಾಯರು ವಿದ್ಯಾರ್ಥಿಗಳನ್ನು ಕೇಳುತ್ತಾರೆ, ತಮಗೆ ಚೆನ್ನಾಗಿ ಪರಿಚಯವಿಲ್ಲದ ಒಬ್ಬರು ಅಥವಾ ಇಬ್ಬರು ಬಾಗಿಗಳನ್ನು ಆರಿಸಿಕೊಳ್ಳಿ ಎಂದು ಐದು ನಿಮಿಷಗಳವರೆಗೆ ಪ್ರತಿಯೊಬ್ಬ ವಿದ್ಯಾರ್ಥಿಯೂ ಅವನ ಸಹಭಾಗಿಯೊಡನೆ ಕಳೆದ ಒಂದು ವಾರದಲ್ಲಿ, ತನ್ನ ಬದುಕಿನ ಒಂದು ಗರಿಷ್ಠ ಅಥವಾ ಒಂದು ಕನಿಷ್ಠ ಅಂಶವನ್ನು ಹಂಚಿಕೊಳ್ಳಬೆಕು ಅದೆಂದರೆ ಅವರು ಆ ವಾರದಲ್ಲಿ ಯಾವುದು ಅತ್ಯಂತ ತೃಪ್ತಿಕರವಾದದ್ದು ಮತ್ತು ಅತ್ಯಂತ ಅತೃಪ್ತಿಕರವಾದದ್ದು ಯಾವುದು ಎಂಬುದನ್ನು ಹೇಳಬೇಕು. ಐದು ನಿಮಿಷಗಳು ಕಳೆದ ನಂತರ ಪ್ರತಿಯೊಬ್ಬ ವಿದ್ಯಾರ್ಥಿಯೂ ಚೆನ್ನಾಗಿ ಪರಿಚಯವಿಲ್ಲದ ಇನ್ನೊಬ್ಬ ಸಹಭಾಗಿಯನ್ನು ಕಂಡುಕೊಳ್ಳಬೇಕು. ಈ ಹೊಸ ಜೋಡಿಗೆ 5 ನಿಮಿಷ ಚರ್ಚಿಸಬಹುದಾದ ಹೊಸ ವಿಷಯವನ್ನು ಕೊಡಲಾಗುವದು. ಈ ಕಾರ್ಯಕ್ರಮವನ್ನು ಅನೇಕ ಸಲ ಪುನರಾವರ್ತಿಸಬಹುದು.

ಒಂದು ಅಥವಾ ಎರಡು ಐದು ನಿಮಿಷದ ಚರ್ಚೆಯ ಅವಧಿಗಳನ್ನು ಅನುಸರಿಸಿ ಉಪಾಧ್ಯಾಯರು ವಿದ್ಯಾರ್ಥಿಗಳನ್ನು ಕಣ್ಣು ಮುಚ್ಚಿಕೊಳ್ಳುವಂತೆ ಹೇಳಿ ಈ ಮುಂದಿನ ಪ್ರಶ್ನೆಗಳನ್ನು ಕುರಿತು ಚಿಂತಿಸುವಂತೆ ಹೇಳಬೇಕು (ಉತ್ತರಗಳನ್ನು ಬರೆಯಲೂಬಹುದು)

1. ನೀವು ಖಂಡಿತವಾಗಿ ಕೇಳಿಸಿಕೊಂಡಿರಾ ? ನಿಮ್ಮ ಸಹಭಾಗಿ [illegible] ಕೇಳಿಸಿಕೊಂಡರೆ ? ನೀನು ಅವಳನ್ನು ಕೇಳಿಸಿಕೊಂಡೆಯಾ ?

2. ನೀನು ನಿನ್ನ ಭಾವನೆಗಳನ್ನು ನಿಜವಾಗಿ ಹಂಚಿಕೊಂಡೆಯಾ ? ಅಥವಾ ಅವುಗಳ ಬಗ್ಗೆ ಮಾತನಾಡುವುದಕ್ಕೆ ಮುಂಚೆ ಅವುಗಳನ್ನು ಪರಿಶೀಲಿಸಿದೆಯಾ ?

3. ನೀವು ಹೆಚ್ಚು ಮಾತನಾಡಿದಿರಿ ಎಂದು ವ್ಯಥೆಪಟ್ಟಿರಾ ? ಅಥವಾ ತುಂಬ ಕಡಿಮೆಯಾಯಿತು ಮಾತನಾಡಿದ್ದು, ಎಂದು ಸಂಕಟಪಟ್ಟುಗೊಂಡಿರಾ ?

4. ನೀನು ವಿಶೇಷವಾಗಿ ಆರಿಸಿಕೊಂಡವನೆ ? (ಸಹಭಾಗಿಗಳ Switch ಸಂಬಂಧರವನ್ನು ಏರ್ಪಡಿಸುವಾಗ ಇನ್ನೊಬ್ಬರಿಂದ ಆರಿಸಲ್ಪಟ್ಟವನು) ಅಥವಾ ಆರಿಸಿಕೊಳ್ಳುವವನೇ (ನೇರವಾಗಿ ಆರಿಸುವವನು)

   ಸಲಹೆ: ಮುಂದಿನ ಸಲ ಪಾತ್ರಗಳನ್ನು ಹಿಂದುಮುಂದಾಗಿ ಮಾಡಿ. ನಿಮ್ಮನ್ನು ಒಬ್ಬ ಆರಿಸಿಕೊಂಡವನಾದರೆ ನೀವು ಆರಿಸಿಕೊಳ್ಳಲ್ಪಡುವವನಾಗಲು ಯತ್ನಿಸಿ ಅದು ನ್ಯಾಯವಾಗಿ ನೀವಾಗುತ್ತೀರಾ ?

5. ನಿಮ್ಮ ಚರ್ಚೆಗೆ ನಿಮಗೆ ಹೆಚ್ಚಿನ ಸಮಯವಿದ್ದರೆ ಚರ್ಚೆಗೆ ಮತ್ತಷ್ಟನ್ನು ಸೇರಿಸುತ್ತಿದ್ದೀರಾ?

6. ನಿಮ್ಮ ಜೊತೆಗಾರ ನಿಮ್ಮನ್ನು ಇಷ್ಟಪಡುತ್ತಾನೆಯೆ ? ಅಥವಾ ನಿಮ್ಮಿಂದ ವಿಭಿನ್ನನಾದವನೆ ? ನೀನು ಅವನನ್ನು ಅವಳನ್ನು ಅರ್ಥ ಮಾಡಿಕೊಳ್ಳಬಲ್ಲೆಯಾ ?

   ನಿಮ್ಮ ಹಾಗೆ ಇರುವ ಜೊತೆಗಾರ / ತಿಯನ್ನು ಹೊಂದಿರಲು ಇಷ್ಟ ಪಡುತ್ತೀರಾ ? ಅಥವಾ ನಿಮಗೆ ವಿಭಿನ್ನವಾಗಿರುವವನ್ನು / ಳನ್ನು ಇಷ್ಟಪಡುತ್ತೀರಾ ?

7. ನಿಮ್ಮ ಜೊತೆಗಾರ / ತಿ ನಿಮ್ಮ ಕೆಲವು ಅನುಭವಗಳನ್ನು ಹೊಂದಿರಲು ನೀವು ಇಷ್ಟಪಡುತ್ತೀರಾ ಅವಳ ಅನುಭವ ಕೆಲವನ್ನು ನೀವು ಇಷ್ಟಪಡುತ್ತೀರಾ ?

## ವಸ್ತು ವಿಷಯಗಳು

1. ನೀವು ಶುದ್ಧಾಂಗವಾಗಿ ಆಧುನಿಕವಾಗಿರುವುದಾಗಿ ಯೋಚಿಸಲು ನೀವು ಮಾಡುವ ಕೆಲವು ವಿಷಯಗಳು ಯಾವವು ?
2. ನಿಮ್ಮ ಬದುಕಿನಲ್ಲಿ ಆದ ಒಂದು ತಿರುವಿನ ಘಟನೆಯನ್ನು ಹೇಳಿ
3. ನಿಮ್ಮ ಅತ್ಯಂತ ಹತಾಶೆಯ ಸಮಯವನ್ನು ವರ್ಣಿಸಿ
4. ನಿಮ್ಮ ಬದುಕಿನ ಮೇಲೆ ಅತ್ಯಂತ ಭೀಕರ ಪ್ರಭಾವವನ್ನುಂಟು ಮಾಡಿದ್ದ ವ್ಯಕ್ತಿಯ ಬಗ್ಗೆ ತಿಳಿಸಿ.
5. ನೀವು ಹೊಂದಿರುವ ಮೂಢನಂಬಿಕೆಯನ್ನು ಪಾಲುಮಾಡಿಕೊಳ್ಳಿ.
6. ನಿಮ್ಮನ್ನು ಆಳವಾಗಿ ತಪ್ಪಾಗಿ ತಿಳಿದುಕೊಂಡ ಸಮಯದ ಬಗ್ಗೆ ತಿಳಿಸಿ.

ಅಧ್ಯಾಯ-೮

# ಮನುಷ್ಯನ ಲೈಂಗಿಕ ಪ್ರವೃತ್ತಿ

## ವ್ಯಾಖ್ಯಾನ

ಮನುಷ್ಯನ ಲೈಂಗಿಕ ಪ್ರವೃತ್ತಿ ಒಬ್ಬನ ಅತ್ಯಂತ ಅಂತ್ಯರದ ನಿಕಟ ವ್ಯಕ್ತಿತ್ವವನ್ನು ಅಭಿವ್ಯಕ್ತಪಡಿಸುವ ಹಕ್ಕಿನ ಒಂದು ಮಾದರಿ ಮತ್ತು ಅದು ಹೆಂಗಸಿನಲ್ಲಿ ಸ್ತ್ರೀತ್ವವನ್ನು ಗಂಡಿನದಲ್ಲಿ ಪುರುಷತ್ವವನ್ನು ಅಭಿವ್ಯಕ್ತಗೊಳಿಸುತ್ತದೆ.

ಮನುಷ್ಯನ ಲೈಂಗಿಕ ಪ್ರವೃತ್ತಿ ಮನುಷ್ಯನ ವ್ಯಕ್ತಿತ್ವದ ಎಲ್ಲ ಪಂಚಮುಖಗಳಲ್ಲೂ ಅಭಿವ್ಯಕ್ತಗೊಳ್ಳುತ್ತದೆ ಎಂದರೆ ಶಾರೀರಕ, ಮಾನಸಿಕ ಅಥವಾ ಬೌದ್ಧಿಕ, ಭಾವುಕ ಅಥವಾ ಮನಶಾಸ್ತ್ರದ ಸಾಮಾಜಿಕ ಮತ್ತು ಆಧ್ಯಾತ್ಮಿಕ.

ಈ ಎಲ್ಲ ದೃಷ್ಟಿಗಳಲ್ಲಿಯೂ ಸ್ತ್ರೀ ಮತ್ತು ಪುರುಷರು ಪರಸ್ಪರ ಮೆಚ್ಚಿಕೊಳ್ಳುತ್ತಾರೆ.

ಮೊದಲಿನ ವರ್ಷಗಳಲ್ಲಿ ಮಗು ಯಾವುದೇ ಲೈಂಗಿಕ ವಿಷಯಕ್ಕೆ ಆದ್ಯತೆಯನ್ನು ತೋರಿಸುವುದಿಲ್ಲ. ಸುಮಾರು ಏಳು ವರ್ಷದವರೆಗೆ ಹುಡುಗರನ್ನು ಮತ್ತು ಹುಡುಗಿಯರು ಪರಸ್ಪರವಾಗಿ ತಮ್ಮದೇ ಸ್ವಂತ ಲಿಂಗದ ವಿಷಯದಲ್ಲಿ ಹೇಗೋ ಹಾಗೆ ಅದೇ ರೀತಿಯ ನಿಷ್ಪಕ್ಷಪಾಕತೆಯನ್ನು ಪ್ರದರ್ಶಿಸುತ್ತಾರೆ. 7 ರಿಂದ 14 ವರ್ಷದ ಅಂತರದಲ್ಲಿ ಈ ಸಂಬಂಧ ಹೆಚ್ಚು ಸ್ವಲಿಂಗೀಯವಾಗಿ ಕಂಡು ಬರುತ್ತದೆ. ಹುಡುಗರಲ್ಲಿ ಇತರ ಹುಡುಗರಿಗೆ ಸಂಬಂಧಿಸಿದಂತೆ ಮಾತ್ರ ಮತ್ತು ಹುಡುಗಿಯರು ತಮ್ಮ ಇತರ ಜೊತೆಯ ಹುಡುಗಿಯರೊಡನೆ ಸ್ನೇಹವನ್ನು ಮೊದಲು ಬಯಸುತ್ತಾರೆ.

ಅದಾದನಂತರ ಪ್ರಾಣದ ವರ್ಷಗಳಲ್ಲಿ ಹುಡುಗರು ಮತ್ತು ಹುಡುಗಿಯರು ತಮ್ಮ ವಿರುದ್ಧದ ಲೈಂಗಿಕ ವಿಷಯಕ್ಕೆ ಆದ್ಯತೆ ಕೊಡುವುದಲ್ಲದೆ ಆಸಕ್ತಿಯನ್ನು ತೋರಿಸಲೂ ಆರಂಭಿಸುತ್ತಾರೆ. ಇದು ಭಿನ್ನ ಲೈಂಗಿಕ ಪ್ರವೃತ್ತಿಯ ಆರೋಗ್ಯದಾಯಕ ಪ್ರವೃತ್ತಿಯ ಕಡೆಗೆ ದಾರಿಮಾಡಿಕೊಡುತ್ತದೆ. ಈ ಮುಂದಿನ ನಕ್ಷೆ ಮನುಷ್ಯನ ಲೈಂಗಿಕ ಪ್ರವೃತ್ತಿಯ ವಿಕಾಸವನ್ನು ವಿವರಿಸುತ್ತದೆ.




## ಲೈಂಗಿಕ ಅನನ್ಯತ್ವದ ನಿರ್ಧಾರಕಗಳು

## ಎರಡು ನಿರ್ಧಾರಕ ಅಂಶಗಳೆಂದರೆ

1. ಸಂಸ್ಕೃತಿ ಮತ್ತು
2. ಜೀವ ವಿಜ್ಞಾನ

ಸಂಸ್ಕೃತಿ : ಸಂಸ್ಕೃತಿ ಕುಟುಂಬದ, ಸಮಾಜದ ಮತ್ತು ಸ್ತ್ರೀತ್ವದ ಮತ್ತು ಪುರುಷತ್ವದ ಬೆಳವಣಿಗೆಯ ಆಳದ ಮತ್ತು ವಿಸ್ತಾರಗಳವರೆಗೆ ನೀಡಿದ ವಿದ್ಯಾಭ್ಯಾಸದ ಮೂಲಕ ಒಂದು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತದೆ. ಇವು ಸುಂದರವಾದ ಮತ್ತು ಅಷ್ಟೇ ಬಲಶಾಲಿಯಾದ ಗುಣಗಳು. ಇವುಗಳನ್ನು ಸ್ತ್ರೀಯರು ಮತ್ತು ಪುರುಷರು ಪಕ್ವವಾಗಿಸಿಕೊಳ್ಳಲು ಪ್ರಯತ್ನಿಸಬೇಕು.

ಜೀವವಿಜ್ಞಾನ : ಇದು ಕೂಡ ಪ್ರತಿಯೊಬ್ಬನ ಸ್ತ್ರೀತ್ವ ಅಥವಾ ಪುರುಷತ್ವಗಳನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತದೆ. ಮೆದುಳು (ಮನಸ್ಸು) ಅತ್ಯಂತ ಪ್ರಮುಖ ಲೈಂಗಿಕ ಅಂಗ. ಅದು ಮೆದುಳಿನ ನಿರ್ನಾಲ ಗ್ರಂಥಿಯ ಅಕ್ಷದ ಮೂಲಕ ದೇಹದ ಸ್ವಣಗಳು ಮತ್ತು ಲೈಂಗಿಕ ಚೋದಕದ್ರವಗಳು ಹೊರಬರುವಂತೆ ನಿರ್ದೇಶಿಸುತ್ತದೆ. ಅಲ್ಲದೆ ಗ್ರಂಥಿಗಳು ಮತ್ತು ಜನನೇಂದ್ರಿಯದ ಅಂಗಗಳು ಕಾರ್ಯತತ್ಪರವಾಗುವಂತೆಯೂ ನಿರ್ದೇಶಿಸುತ್ತದೆ. ಮೆದುಳಿನ ಪ್ರಕಾರ್ಯ ಮಾನವ ಪ್ರಾಣಿಗಳಲ್ಲಿ ಅಪೂರ್ವವಾದುದು.

ವಂಶಪಾರಂಪರಿಕ ಮತ್ತು ಪರಿಸರಾತ್ಮಕ ಅಂಶಗಳು : ಇವು ಕೂಡ ಅಷ್ಟೆ ಮುಖ್ಯವಾದ ಪಾತ್ರವನ್ನು ಮನುಷ್ಯನ ವ್ಯಕ್ತಿತ್ವವನ್ನು ಸೃಷ್ಟಿಸುವಲ್ಲಿ ನಿರ್ವಹಿಸುತ್ತವೆ. ಶಿಶುವನ್ನು ಗರ್ಭದಲ್ಲಿ ಧರಿಸಿದ ಕೂಡಲೆ ಅನುವಂಶೀಯತೆಯನ್ನು ಹತೋಟಿಯಲ್ಲಿಟ್ಟುಕೊಳ್ಳಲು ಸಾಧ್ಯವಾಗುವುದಿಲ್ಲವಾದುದರಿಂದ ಪರಿಸರವನ್ನು ಪ್ರಭಾವಿಸುವ ಪ್ರತಿಯೊಂದು

ಅವಕಾಶವನ್ನು ಒದಗಿಸಿಕೊಳ್ಳಬೇಕು ಮತ್ತು ಉಪಯೋಗಿಸಿಕೊಳ್ಳಬೇಕು. ಒಳ್ಳೆಯ ಅಥವಾ ಸಮತೋಲಿತ ಆಹಾರ, ಸಾಕಾಗುವಷ್ಟು ವಿಶ್ರಾಂತಿ ಮತ್ತು ವ್ಯಾಯಾಮಗಳು ದೇಹಪ್ರಕೃತಿಯನ್ನು ಅಭಿವೃದ್ಧಿಪಡಿಸಬಲ್ಲುದು. ಆದಾಗ್ಯೂ ಭಾವಾವೇಶಗಳ ಪಕ್ವತೆ, ಪ್ರಜ್ಞಾಪೂರ್ವಕವಾಗಿ ಮತ್ತು ಬುದ್ಧಿಪೂರ್ವಕವಾಗಿ ಅಭಿವೃದ್ಧಿಯನ್ನುಂಟು ಮಾಡಲು ಮತ್ತು ಪರಿಪೂರ್ಣ ವ್ಯಕ್ತಿತ್ವವನ್ನು ಪರಿಪಕ್ವಗೊಳಿಸಲು ಅಗತ್ಯವಾಗಿಸುತ್ತದೆ. ಜನನದ ಭಾವಾವೇಶದ ಮತ್ತ ಸಮಾಜದ ಪಕ್ವತೆ ಈ ಕ್ರಮದಲ್ಲಿ ನಡೆಯುತ್ತದೆ.

ಸಂಸ್ಕೃತಿ: ಸ್ತ್ರೀಪುರುಷರ ಪಾತ್ರಗಳನ್ನು ಅಸ್ಪಷ್ಟವಾಗಿ ವ್ಯಾಖ್ಯಾನಿಸುವ ಪ್ರವೃತ್ತಿ ಬೆಳೆಯುತ್ತಿದೆ. ಪರಂಪರಾಗತ ತಲೆಬಾಗುವಿಕೆ, ಸ್ಥೈರ್ಯಭಾವನೆ ಮತ್ತು ಅನಾಸಕ್ತತೆ ಇವುಗಳು ಹೆಂಗಸಿನಲ್ಲಿ ಅಪೇಕ್ಷಣೀಯ ಗುಣಗಳೆಂದು ಇನ್ನು ಮುಂದೆ ಒಪ್ಪಿಕೊಳ್ಳಲಾಗುವುದಿಲ್ಲ. ಹಾಗೇಯೇ ನಿಜವಾದ ಸ್ತ್ರೀತ್ವವನ್ನು ಪ್ರದರ್ಶಿಸುವುದು ಅವಶ್ಯವಾಗಿದೆಯೇ ಹೊರತು ಸ್ತ್ರೀಯ ಸ್ವತಂತ್ರ ದೃಷ್ಟಿಕೋನಗಳನಲ್ಲ.

ತಂದೆ ತಾಯಿಗಳ ಪಾತ್ರ ಮತ್ತು ತಂದೆ ಮಕ್ಕಳ ಬಂಧುತ್ವದ ಶಕ್ತಿ ಮಗು ತನ್ನ ತಂದೆ ಅಥವಾ ತಾಯಿಯೊಡನೇ ಗುರುತಿಸಿಕೊಳ್ಳುತ್ತದೆ ಎಂಬುದನ್ನು ನಿರ್ಧರಿಸುವಲ್ಲಿ ಅತಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ತಾಯಿ ಮತ್ತು ತಂದೆ, ಮಗ ಇವರ ಸಂಬಂಧ ಆಗುತ್ತದೆ ಈ ಹಿಂದೆ ತಾಯಿತಂದೆಗಳ ಮಕ್ಕಳ ಬಾಂಧವ್ಯ ಅಧಿಕಾರ ಮತ್ತು ವಿಧೇಯತೆಯ ಸ್ವಭಾವದ್ದಾಗಿತ್ತು ಅದರಲ್ಲೂ ವಿಶೇಷವಾಗಿ ತಂದೆ ಮತ್ತು ಮಗುವಿನ ಬಾಂಧವ್ಯವು.

ತಂದೆತಾಯಿಗಳು ಸುಗಮ್ಯವಾಗಿರಬೇಕು ಮತ್ತು ಸಮೀಪಿಸುವಂತಿರಬೇಕು.

ಸಮಕಾಲಿನ ವೈಜ್ಞಾನಿಕ ಸಂಶೋಧನೆ ಮನುಷ್ಯ ಪ್ರಾಣಿ ಲೈಂಗಿಕ ಪ್ರವೃತ್ತಿಯಿಂದ ಎಷ್ಟರ ಮಟ್ಟಿಗೆ ಗಾಢವಾಗಿ ಪ್ರಭಾವಿತವಾಗಿದೆಯೆಂದರೆ, ಪ್ರತಿಯೊಬ್ಬ ವ್ಯಕ್ತಿಯ ಬದುಕಿಗೂ ಅದನ್ನು ವ್ಯತ್ಯಾಸಪಡಿಸುವ ಗುಣಗಳನ್ನು ನೀಡುವ ಅತಿಮುಖ್ಯ ಅಂಶಗಳಲ್ಲಿ ಒಂದನ್ನಾಗಿ ಪರಿಶೀಲಿಸಬೇಕಾದುದೇ ಆಗಿದೆ. ಈ ಲೈಂಗಿಕ ಪ್ರವೃತ್ತಿಯಿಂದಲೇ ಪ್ರತಿಯೊಬ್ಬ ಮನುಷ್ಯನೂ ಸ್ವಭಾವ ಲಕ್ಷಣಗಳನ್ನು ಪಡೆಯುತ್ತಾನೆ. ಈ ಲಕ್ಷಣಗಳು ವ್ಯಕ್ತಿಯನ್ನು ಪುರುಷನನ್ನಾಗಿ ಅಥವಾ ಸ್ತ್ರೀಯನ್ನಾಗಿ ರೂಪಿಸುತ್ತದೆ. ಆ ಮೂಲಕ ಸಮಾಜದಲ್ಲಿ ಅವನ ಅಥವಾ ಅವಳ ಪಾತ್ರ ಮತ್ತು ಪ್ರಗತಿಯ ಸ್ಥಿತಿಯನ್ನು ವಿಸ್ತಾರವಾಗಿ ಸ್ವೀಕರಿಸಲು ಕಾರಣವಾಗುತ್ತವೆ. ನಾವು ಮಗುತನದಿಂದ ಮುದಿವಯಸ್ಸಿನವರೆಗೆ ಲೈಂಗಿಕ ಜೀವಿಗಳೇ.

ಹೀಗಿದ್ದರೂ ಇನ್ನೊಂದು ಮಾನವಜೀವಿಯನ್ನು ಸೃಜಿಸುವ ಸಾಮರ್ಥ್ಯದ ಫಲಶಕ್ತಿ, ಯಾವಾಗ ಆಂತರಿಕ ಪರಿಸರವನ್ನು ಮೂಲಸ್ವರೂಪದಲ್ಲಿ ಪುನರ್ರೂಪಿಸುವ ಸ್ಥಿತಿ ಸಂಭವಿಸುತ್ತದೆಯೋ ಆಗ ತಾರುಣ್ಯದ ಅವಧಿಯಲ್ಲಿ ಚಾಲಕ ಶಕ್ತಿಯು ಒತ್ತಡವಾಗಿ ಹೊರಹೊಮ್ಮಿ ಬರುತ್ತದೆ.

ಮೊಣೆಗಾರಿಕೆಯ ಪ್ರಶ್ನೆಯಾಗಿ ಬಿಡುತ್ತದೆ. ಆದರೆ ಆಯ್ಕೆಯನ್ನು ಶಕ್ತಿ ಹೊಣೆಗಾರಿಕೆಯ ಭಾವನೆ ಇನ್ನು ಸಾಕಷ್ಟು ಬಂದಿಲ್ಲ ಎಂಬ ಅರಿವು ಇದ್ದಕ್ಕಿದ್ದಂತೆ ಕಂಡುಬಂದಿದೆ. ಈ ಹೊಸ ತಿಳುವಳಿಕೆ ಪುರಾತನ ಸಂಪ್ರದಾಯಗಳನ್ನು ಮಿತಿಮೂರಿ ದುಡಿಸುತ್ತಿದೆ. ಬೇರೆ ರೀತಿಯಲ್ಲಿ ಹೇಳುವುದಾದರೆ ಅದು ನೈತಿಕ ಸಮಸ್ಯೆಯನ್ನು ಒಳಗೊಳ್ಳುತ್ತದೆ.

ಲೈಂಗಿಕ ಪ್ರವೃತ್ತಿ ಎಂದರೆ ಏನು ಎಂಬುದರ ಬಗ್ಗೆ ನಿಜವಾದ ಜ್ಞಾನವನ್ನು ಅರಿತುಕೊಳ್ಳುವುದಕ್ಕೆ ಮುಂಚೆಯೇ ಯುವಕ ಜನಾಂಗವನ್ನು ಲೈಂಗಿಕ ಕ್ರಿಯೆಗಳಲ್ಲಿ ಭಾಗವಹಿಸುವಂತೆ ಬಯಲಿಗೆಳೆಯಲು ಮತ್ತು ಪ್ರೋತ್ಸಾಹಿಸಲು ಆರಂಭಿಸಿದ್ದಾರೆ. ಯುವಕರು ತಮ್ಮ ಚಟುವಟಿಕೆಗಳ ಹೊಣೆಗಾರಿಕೆಯನ್ನು ಮತ್ತು ಅವುಗಳ ಪರಿಣಾಮಗಳನ್ನು ಸ್ವೀಕರಿಸುವುದಕ್ಕೆ ಮೊದಲು ಅವರು ಅದರಲ್ಲಿ ಒಳಪಡುವುದು ಸರಿಯಲ್ಲ ಎಂಬ ಆಯ್ಕೆಯ ಬುದ್ಧಿಯನ್ನು ಹೊಂದಿದ್ದಾರೆ ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಸಹಾಯಕವಾಗುವಂಥ ಯುಕ್ತ ಮಾಹಿತಿಯನ್ನು ಆರೋಗ್ಯಕರ ವಾತಾವರಣದಲ್ಲಿ ಅವರಿಗೆ ಕೊಡುವುದು ತುಂಬ ಅವಶ್ಯಕ.

ಈ ಪರಿಸ್ಥಿತಿಯಿಂದ ಎಚ್ಚರಗೊಂಡ ಕೆಲವು ವ್ಯಕ್ತಿಗಳು ಈ ಜ್ಞಾನದ ಬಹಿಷ್ಕಾರವನ್ನು ಬೇಡುತ್ತಾರೆ. ಆದರೆ ಸಮಸ್ಯೆಯನ್ನು ಹಾಗೆ ಅವಸರದಲ್ಲಿ ವ್ಯವಹರಿಸಲಾಗುವುದಿಲ್ಲ. ಆದ್ದರಿಂದ ಹೀಗೆ 'ಜ್ಞಾನ'ವನ್ನು ಸ್ವೀಕರಿಸುವುದು ಯುಕ್ತವಾಗಿದೆ. ಅಲ್ಲದೆ ನಮ್ಮ ಯುವ ಜನಾಂಗಕ್ಕೆ ಬೋಧನೆ ಮತ್ತು ಮಾರ್ಗದರ್ಶನ ನೀಡಲು ಹೊಸಹೊಸ ಗುಣಮಟ್ಟಗಳನ್ನು ಸಿದ್ಧಪಡಿಸುವಲ್ಲಿ ನಮ್ಮ ಪ್ರಯತ್ನಗಳನ್ನು ಮಣಿಸಬೇಕಾಗುತ್ತದೆ.

ಲೈಂಗಿಕ ಶಿಕ್ಷಣ ಚುಚ್ಚುಮದ್ದು ಹಾಕುವ ಹಾಗೆ. ಅದು ಕೆಡಕಿನ ಮಾಧ್ಯಮದಿಂದ ಯುವಕ ಜನಾಂಗವನ್ನು ರಕ್ಷಿಸುತ್ತದೆ. ಸ್ಪಷ್ಟವಾದ ಮಾಹಿತಿಯಲ್ಲಿ ಆಧರಿತವಾದ ಗಟ್ಟಿ ಮೌಲ್ಯಗಳನ್ನು ಉತ್ತೇಜಿಸುತ್ತದೆ.

ಈ ಮಧ್ಯೆ ಬದುಕಿನ ಗುಣಮಟ್ಟದ ಅಪಾಯದ ಹಂತದಲ್ಲಿರುವ ಸಂಕ್ರಮಣಕಾಲ. ಕಡಿಮೆ ವಿಷಯಾವಸ್ಥೆಯದೇನೂ ಅಲ್ಲ. ಹೆಚ್ಚಿನ ಅಘಾತವಿಲ್ಲದೆ ಮರು ಹೊಂದಾಣಿಕೆಯನ್ನೇನಾದರೂ ಸಾಧಿಸಬೇಕಾದರೆ, ಬದುಕಿನ ಕಾರ್ಯಗತಿಯನ್ನು ಜಾಣತನದಿಂದ ಮತ್ತು ಸಮತೋಲನದಿಂದ ತಿಳಿದುಕೊಳ್ಳುವಂತೆ ಮಾಡಬೇಕು. ಅಷ್ಟೇ ಅಲ್ಲ. ಅತಿ ವೇಗವಾಗಿ ಮತ್ತು ಅಷ್ಟೆ ವಿಸ್ತಾರವಾಗಿ ಹೊಣೆಗಾರಿಕೆಯ ಮರುಹೊಂದಾಣಿಕೆಯ ಭಾವನೆಯ ಪರಿಹಾರಕ ಪ್ರಭಾವವನ್ನು ಅನುಭವದಿಂದ ತಮ್ಮೊಡನೆ ತರುವುದರಿಂದ ಕೂಡ ತಿಳಿದುಕೊಳ್ಳುವಂತೆ ಮಾಡಬೇಕು. ಭಾರತದ ತರುಣನ ಬದುಕಿನಲ್ಲಿ 3 ಪ್ರಧಾನ ಪ್ರಭಾವಗಳಿವೆ. 1 ಕುಟುಂಬ, 2 ಸಾಮಾನ್ಯಸ್ಕಂಧರ ಗುಂಪು, 3 ಮಾಧ್ಯಮಗಳು. ತಂದೆ ತಾಯಿಗಳು ಹೆಚ್ಚು ಹೊಣೆಗಾರಿಕೆಯನ್ನು ತಾಳುವಂತೆ ಆದರಲ್ಲೂ ವಿಶೇಷವಾಗಿ

ಮಾನವಲೈಂಗಿಕ ಪ್ರವೃತ್ತಿಯ ಕ್ಷೇತ್ರದಲ್ಲಿ ನೆರವುನೀಡುವುದಾದರೆ ಕುಟುಂಬದ ಪ್ರಭಾವವನ್ನು ಬಲಪಡಿಸಬಹುದು.

## ಲೈಂಗಿಕ ಶಿಕ್ಷಣಕ್ಕೆ ಆದರ್ಶಮೂಲ

ತನ್ನ ಲೈಂಗಿಕ ಪಾತ್ರವನ್ನು ಕಂಡುಕೊಳ್ಳುವುದು ಮತ್ತು ತನ್ನ ಪಾತ್ರದಲ್ಲಿ ತನ್ನನ್ನು ತಾನು ಅನ್ವಯಿಸಿಕೊಳ್ಳುವುದು, ತರುಣನಿಗೆ ಪ್ರಧಾನವಾಗಿ ಮುಖ್ಯವಾದುದು. ಆಗ, ಇಲ್ಲಿ ತಂದೆ ತಾಯಿಗಳಿಂದ ಲೈಂಗಿಕ ಶಿಕ್ಷಣ ಪ್ರಮುಖ ಪ್ರಕಾರವಾಗಿ ಸೇವೆ ಸಲ್ಲಿಸುತ್ತದೆ. ತನ್ನ ವಿರುದ್ಧದ ಲಿಂಗದ ಬಗ್ಗೆ ಆಸಕ್ತಿ ಆಸಕ್ತಿಯ ಹೊಸ ಅಂಶವಾಗಿ ಹೊರಹೊಮ್ಮ ಸಮಯದಲ್ಲಿ ಲೈಂಗಿಕ ಶಿಕ್ಷಣವನ್ನು ತರುಣಜನ ಮತ್ತು ಅಂಥ ತಿಳುವಳಿಕೆಯನ್ನು ಮತ್ತು ಪ್ರವೃತ್ತಿಗಳನ್ನು ಪಡೆದುಕೊಳ್ಳಲು ಸಹಾಯ ಮಾಡುತ್ತದೆ,. ಇದರಿಂದ ಅವರಿಗೆ ತಮ್ಮ ವಿರುದ್ಧ ಲಿಂಗ ಜಾತಿಯ ಇತರ ಸದಸ್ಯರೊಡನೆ, ಆರೋಗ್ಯಕರ ಗೆಳೆತನಗಳನ್ನು ರೂಢಿಸಿಕೊಳ್ಳುವಲ್ಲಿ ಅನುಕೂಲವುಂಟಾಗುತ್ತದೆ. ತಾರುಣ್ಯದಲ್ಲಿನ ಶಾರೀರಕ ಶಕ್ತಿಯ ಹೆಚ್ಚಳವನ್ನು ಆಟಗಳ ಮತ್ತು ಅಭ್ಯಾಸಗಳ ಕಡೆಗೆ ತಿರುಗಿಸಬೇಕು.

## ಮನೆ-ಪ್ರೇಮ ಮತ್ತು ಲೈಂಗಿಕ ಶಿಕ್ಷಣದ ಪ್ರಯೋಗಾಲಯ

ಮನೆಯೇ ಬದುಕಿನ ಕಥೆಯನ್ನು ಹೇಳುವುದಕ್ಕೆ ಆದರ್ಶ ಸ್ಥಳ. ಏಕೆಂದರೆ ತಂದೆತಾಯಿಗಳು ತಮ್ಮ ಮಕ್ಕಳೊಡನೆ, ಆ ವಿಷಯಕ್ಕೆ ಸಂಬಂಧಿಸಿದಂತೆ ನಿರಂತರವಾದ ಸಂಬಂಧವನ್ನು ಹೊಂದಿರುವುದರಿಂದ.

ಅವರೇ ತಮ್ಮ ಮಕ್ಕಳ ಬಗ್ಗೆ ವಿಶೇಷವಾದ ಎಚ್ಚರಿಕೆ ವಹಿಸುವವರು ಮತ್ತು ತಮ್ಮ ಮಕ್ಕಳ ಮತ್ತು ಹೊಸ ಪ್ರಪಂಚದ ನಡುವೆ ಕಾಪು ತಡೆಯನ್ನು ಒದಗಿಸುವವರು. ಮಗುವು ಪ್ರಶ್ನೆಯನ್ನು ಕೇಳಬೇಕೆಂದು ಬಯಸಿದಾಗ ತಾಯಿತಂದೆಗಳು ಸುಲಭವಾಗಿ ದೊರಕುತ್ತಾರೆ. ಕೌಟುಂಬಿಕ ಜೀವನವೂ ಕೂಡ ಬದುಕಿನಲ್ಲಿ 'ಲಿಂಗ'ದ ಸಾಧಾರಣ ಸ್ಥಾನವೇನೆಂಬುದನ್ನು ಮಗುವು ನಿಧಾನ ಕ್ರಮದಿಂದ ಅರಿತು ಕೊಳ್ಳುವುದಕ್ಕೆ ಮತ್ತು ಜ್ಞಾನವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಅನೇಕ ನೈಸರ್ಗಿಕ ಅವಕಾಶಗಳನ್ನು ಒದಗಿಸುತ್ತದೆ.

ತಂದೆ ತಾಯಿಗಳು ತಮ್ಮ ಚಿಕ್ಕ ಮಗುವಿಗೆ ಲೈಂಗಿಕ ಶಿಕ್ಷಣವನ್ನು ಅವನಿಗೆ/ಅವಳಿಗೆ ಲೈಂಗಿಕ ಮಾಹಿತಿಯನ್ನು ಆರಂಭಿಸುವುದಕ್ಕೆ ಅನೇಕ ವರ್ಷ ಮುಂಚೆಯೇ ಕೊಡುತ್ತಾರೆ, ಹೇಗೆಂದರೆ ಅವರು ಅದನ್ನು ಅರಿತಿದ್ದಾರೆಯೇ ಇಲ್ಲವೋ ತಂದೆತಾಯಿಗಳು ತಮ್ಮ ಮಕ್ಕಳಿಗೆ ಅವು ಹುಟ್ಟಿದ ಕ್ಷಣದಿಂದಲೇ ಅವುಗಳೊಡನೆ ವ್ಯವಹರಿಸುವ ಕ್ರಮದಲ್ಲಿಯೇ ಲೈಂಗಿಕ ಶಿಕ್ಷಣವನ್ನು ಕೊಡುತ್ತಿರುತ್ತಾರೆ ಮತ್ತು ತಮ್ಮನ್ನು ಸುತ್ತುವರಿದಿರುವ ಗೃಹವಾತಾವರಣದಿಂದಲೇ ಈ ಶಿಕ್ಷಣ ನೀಡಲ್ಪಡುತ್ತದೆ. ವೈಯಕ್ತಿಕ ನಡೆತೆಯ ಪ್ರಮಾಣಕಗಳನ್ನು ಮಗು ವೃದ್ಧಿಪಡಿಸಿಕೊಳ್ಳಲು ತಂದೆತಾಯಿಗಳು ಸಹಾಯ ಮಾಡಬಲ್ಲರು.

ಅಷ್ಟೇ ಅಲ್ಲ ಅವು ತಮ್ಮನ್ನು ತಾವು ನಿರ್ವಹಿಸಿಕೊಳ್ಳುವ ನಡೆತೆಯ ಬಲವನ್ನು ರೂಢಿಸಿಕೊಳ್ಳಲೂ ಸಹಾಯ ಮಾಡಬಹುದು. ಅವರು ಮಗುವ ಮೌಲ್ಯಗಳನ್ನು ರೂಪಿಸಿಕೊಳ್ಳುವುದಕ್ಕೆ ಸಹಾಯಮಾಡಬಲ್ಲರು. ಆದ್ದರಿಂದ ಮಕ್ಕಳು ವಿವೇಕಯುಕ್ತ ಆಯ್ಕೆಗಳನ್ನು ಅವುಗಳ ಮಗುವಿಗೆ ಅಗತ್ಯ ಅವನು ತನ್ನ ಸ್ವಂತ ಜೈವಿಕ ಪ್ರೇರಣೆಗಳನ್ನು ವಿವೇಕದಿಂದ ನಿರ್ದೇಶಿಸಿಕೊಳ್ಳಲು ಮತ್ತು ತನ್ನ ಸಮಾನಸ್ಕಂಧ ತಂಡಗಳ ತೊಳಲಾಟದ ಭಾವನೆಗಳನ್ನು ಎದುರಿಸಲು ಮಾಡಲು ಸಮರ್ಥರಾಗುತ್ತಾರೆ.

ಡಾ. ಸಿ. ಬ್ರೋಡರಿಕ್ ಹೇಳುತ್ತಾರೆ ''ಮಕ್ಕಳು ಜವಾಬ್ದಾರಿಯುತ ಲೈಂಗಿಕ ನೀತಿಸಂಹಿತೆಯನ್ನು ಒಳಗೊಳ್ಳಿಸಿಕೊಳ್ಳುವುದಕ್ಕೆ ಮಕ್ಕಳನ್ನು ಸಿದ್ಧಪಡಿಸುವುದು ತುಂಬ ಕಷ್ಟ. ಆದರೆ ಅದು ತರುಣ ಬಾಲಕರನ್ನು ಲೈಂಗಿಕ ಒಳಪಡುವಿಕೆಗಿಂತ ಮತ್ತು ಸಾಧ್ಯವಾಗಬಹುದಾದ ಶೋಷಣೆಗಿಂತ ವಿಶೇಷವಾಗಿ ಕಷ್ಟವಾಗುವುದಿಲ್ಲ.

## ಮಾತಾಪಿತೃಗಳ ಹೊಣೆಗಾರಿಕೆ

ತಂದೆತಾಯಿಗಳು ಈ ಮುಂದಿನ ಹೊಣೆಗಾರಿಕೆಗಳನ್ನು ಹೊಂದಿರುತ್ತಾರೆ.

1) ತಮ್ಮ ಮಕ್ಕಳು ತಮ್ಮನ್ನು ಪ್ರೀತಿಸುತ್ತಾರೆ, ತಾವು ಬೇಕಾಗಿದ್ದೇವೆ, ನಮ್ಮನ್ನು ಸ್ವೀಕರಿಸುತ್ತಾರೆ ಎಂಬುದನ್ನು ಅವರು ತಿಳಿದುಕೊಳ್ಳುವಂತೆ ಮಾಡುವುದು.

2) ಅವರಲ್ಲಿ ಕಂಡುಬರುತ್ತಿರುವ ಬೆಳವಣಿಗೆಯ ಬದಲಾವಣೆಗಳನ್ನು ಮತ್ತು ಬೆಳವಣಿಗೆಯನ್ನು ಅರ್ಥಮಾಡಿಕೊಳ್ಳುವುದು.

3) ಲೈಂಗಿಕ ವಿಷಯಕ್ಕೆ ಸಂಬಂಧಿಸಿದಂತೆ ತಮ್ಮಷ್ಟಕ್ಕೆ ತಾವೇ ತಮ್ಮ ಭಾವನೆಗಳನ್ನು ಅಭಿವ್ಯಕ್ತಿಸುವಲ್ಲಿ ಅಕ್ಲಿಷ್ಟವಾಗಿ ಮಾತನಾಡಲು ಬೇಕಾದ ವೈಜ್ಞಾನಿಕ ಮಾಹಿತಿಯನ್ನು ಮತ್ತು ಶಬ್ದ ಸಂಪತ್ತನ್ನು ಸ್ವಾಧೀನಪಡಿಸಿಕೊಳ್ಳುವುದು.

4) ಲೈಂಗಿಕ ವಿಷಯಕ್ಕೆ ಸಂಬಂಧಿದಂತೆ ಪ್ರಶ್ನೆಗಳಿಗೆ ನೇರವಾಗಿ ಮತ್ತು ಸಾಧಾರಣವಾಗಿ ಉತ್ತರ ಕೊಡುವುದನ್ನು ಕಲಿಯುವುದು.

5) ಮಗುವು ತಾನು ಪ್ರೌಢನಾಗಿ ಬೆಳೆದಂತೆಲ್ಲ ತನಗೆ ಸಂಬಂಧಪಟ್ಟ ವಿಷಯುಗಳ ಬಗ್ಗೆ ಪ್ರಶ್ನೆಗಳನ್ನು ತಾನು ಸ್ವತಂತ್ರ ಎಂಬ ಭಾವನೆಯನ್ನು ತಳೆಯುವಂತೆ ಮಗುವಿನೊಡನೆ ನಿರಂತರವಾದ ಬಾಂಧವ್ಯವನ್ನೆ ಸ್ಥಾಪಿಸುವುದು.

6) ತನ್ನ ತಾರುಣ್ಯದ ಶಕ್ತಿಯನ್ನು ಪೂರ್ತಿಯಾಗಿ ಮತ್ತು ರಚನಾತ್ಮಕ ಕಾಲುವೆಗಳಲ್ಲಿ ಹರಿಯುವಂತೆ ನಿರ್ದೇಶಿಸುವುದು.

7) ಲೈಂಗಿಕ ವಿಷಯದ ಬಗ್ಗೆ ಗಟ್ಟಿಯಾದ ಪ್ರವೃತ್ತಿಗಳನ್ನು ಮತ್ತು ನಡತೆಯ ಉನ್ನತ ಪ್ರಮಾಣಿಕಗಳನ್ನು ನಿರ್ಮಿಸುವುದು.

8) ಮಕ್ಕಳು ಸ್ವತಂತ್ರವಾದ ಮತ್ತು ಜವಾಬ್ದಾರಿಯ ವ್ಯಕ್ತಿಗಳಾಗಿರಲು ಸಹಾಯಮಾಡುವುದು ಮತ್ತು ಅವರ ಬದುಕುಗಳನ್ನು ದಿನದಿನವೂ ಸರಿಯಾಗಿ ಹೊಂದಿಕೊಂಡ ವಯಸ್ಕ ಲೈಂಗಿಕದ ಪೂರ್ಣ ವಿಷಯವನ್ನು ದೃಷ್ಟಿಸುತ್ತಾನೆ ಮತ್ತು ಅದನ್ನು ಬದುಕಿನ ಸಾಧಾರಣ ಕಾರ್ಯಯೋಜನೆಯಲ್ಲಿ ಸೂಕ್ತ ಸ್ಥಳದಲ್ಲಿ ಸೇರಿಸುತ್ತಾನೆ ಎಂಬುದನ್ನು ತೋರಿಸಿ ಕೊಡುವುದು, ತರುಣ ದಂಪತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಈ ಹೊಣೆಗಾರಿಕೆಗಳನ್ನು ವಹಿಸಿಕೊಳ್ಳುತ್ತಿದ್ದಾರೆ. ಅವರು ಮೊದಲಿನ ತಾಯಿತಂದೆಗಳ ತಲೆಮಾರು ಜನಕ್ಕಿಂತ, ಹಾಗೆ ಮಾಡಲು ಹೆಚ್ಚು ಸಿದ್ಧವಾಗಿದ್ದಾರೆ. ಅದೇ ಕಾಲದಲ್ಲಿ ಅವರು ಬಲಿಷ್ಠತರ ಮತ್ತು ಕೆಲವೊಮ್ಮೆ ಕೆಡುಕಿನ ವಾತಾವರಣದೊಡನೆ ಸ್ಪರ್ಧಿಸಬೇಕಾಗುತ್ತದೆ.

## 5. ಮಾತಾಪಿತೃ ಶಿಕ್ಷಣ

ಲೈಂಗಿಕ ಶಿಕ್ಷಣಕ್ಕೆ ಒಂದು ಗಟ್ಟಿಯಾದ ಪ್ರವೇಶವನ್ನು ಹುಡುಕುತ್ತಿರುವ ತಂದೆತಾಯಿಗಳು ಮತ್ತು ಇತರ ವಯಸ್ಕರು ಎಲ್ಲ ಮಕ್ಕಳಿಗೆ ಯಾವ ಕಾಲಕ್ಕೂ ಸರಿಯಾದ ಒಂದು ಪ್ರವೇಶ ಅಥವಾ ಪದ್ಧತಿ ಇಲ್ಲ ಎಂಬುದನ್ನು ಅವರು ಅಗತ್ಯವಾಗಿ ಅರಿತುಕೊಳ್ಳಬೇಕು. ಆದರೂ ಲೈಂಗಿಕ ಶಿಕ್ಷಣಕ್ಕೆ ಮೂಲ ಭೂತ ಸತ್ವ ಬಂದಿದೆ. ಅದೆಂದರೆ ನಿರಂತರವಾಗಿ ಪುನಃಪುನಃ ಭರವಸೆಕೊಡುವ ಗೆಳೆತನದ ಪ್ರೇಮ. ಅದು ತಂದೆತಾಯಿಗಳು, ಶಿಕ್ಷಕರು ಮತ್ತು ಯುವ ನಾಯಕರು ಮಕ್ಕಳಿಗೆ ಮತ್ತು ಯುವಕರಿಗೆ ತಮ್ಮ ಮಾರ್ಗದರ್ಶನದಲ್ಲಿ ಕೊಡುವುದು ಆಗಿದೆ.

ಮಕ್ಕಳು ಲೈಂಗಿಕ ವಿಷಯದ ಬಗ್ಗೆ ಗಟ್ಟಿಯಾದ ಭಾವನೆಗಳನ್ನು ರೂಪಿಸಿಕೊಳ್ಳಲು, ಸಹಾಯಮಾಡಲು ಇಚ್ಛಿಸುವ ಅನೇಕ ಜನ ಪ್ರೌಢರು ಅದನ್ನು ಕುರಿತು ಹೇಗೆ ಮುಂದುವರಿಯಬೇಕು ಎನ್ನುವಲ್ಲಿ ಖಚಿತವಾದ ಅಭಿಪ್ರಾಯವನ್ನು ಹೊಂದಿರುವುದಿಲ್ಲ. ದಿನನಿತ್ಯದ ಬದುಕು ಲೈಂಗಿಕ ಶಿಕ್ಷಣಕ್ಕೆ ಬೇಕಾಗುವ ನೈಸರ್ಗಿಕ ಅವಕಾಶಗಳಿಂದ ತುಂಬಿವೆ ಎಂಬ ಅಂಶದ ತಿಳಿವಳಿಕೆ ಅವರ ಕೆಲಸವನ್ನು ಸುಲಭಗೊಳಿಸುತ್ತದೆ. ಇಂಥ ಅನೇಕ ಅವಕಾಶಗಳು ಮನೆಯಲ್ಲೇ ಸಂಭವಿಸುತ್ತವೆ. ಮತ್ತೆ ಕೆಲವು ಶಾಲೆಗಳಲ್ಲಿ ಮಕ್ಕಳ ಸ್ವಂತ ಅನುಭವಗಳಿಂದ ಹುಟ್ಟುತ್ತವೆ ಅಥವಾ ಸಮಾಜದಿಂದ ಅಥವಾ ಸುದ್ದಿಗಳಲ್ಲಿ ಬರುವ ಘಟನೆಗಳಿಂದ ಉದ್ಭವಿಸುತ್ತವೆ. ಜನ ಪ್ರೌಢ ವಯಸ್ಸಿನಲ್ಲಿ ವರ್ತಿಸುವ ಅಥವಾ ಪುನರ್ ವರ್ತಿಸುವ ರೀತಿಯೇ ತರುಣರ ಮೇಲೆ ಶಕ್ತಿಪೂರ್ಣ ಪ್ರಭಾವವನ್ನು ಬೀರುತ್ತದೆ. ಪರಿಣತನಾದ ವ್ಯಕ್ತಿಯಾಗಿ, ಪ್ರೀತಿಸುವ ಸಾಮರ್ಥ್ಯದ ಬೆಳವಣಿಗೆ ಬಹುವಾಗಿ ಮಗುವಿನ ಬಂಧುತ್ವ ತಂದೆತಾಯಿಗಳಿಬ್ಬರ ಮತ್ತು ಅವರಿಬ್ಬರಲ್ಲಿನ ಪರಸ್ಪರ ಸಂಬಂಧವನ್ನು ಅವಲಂಬಿಸುತ್ತದೆ.

ಗಂಡ ಹೆಂಡಿರ ಪರಸ್ಪರ ಪ್ರೇಮ ಮತ್ತು ಅವರ ಮಕ್ಕಳ ಮೇಲಿನ ಪ್ರೀತಿಯೇ ಒಳ್ಳೆಯ ಲೈಂಗಿಕ ಶಿಕ್ಷಣದ ಮುಖ್ಯ ಜೀವಾಳ. ಏಕೆಂದರೆ ಗಂಡಹೆಂಡತಿಯರ ಬಂಧನದಲ್ಲಿನ ಪಾತ್ರಗಳು, ಅಲ್ಲಿ ವಿವಾಹದಿಂದ ಉಂಟಾದ ಪ್ರೇಮ ಮತ್ತು ಲೈಂಗಿಕ ವಿಷಯದ

ಹೊಣೆಗಾರಿಕೆಯು ಪಿತೃಮಾತೃತ್ವಕ್ಕೆ ಹೆಜ್ಜೆ ಹಾಕುವುದನ್ನು ಸ್ಪಷ್ಟವಾಗಿ ಕಾಣುತ್ತದೆ ಎಂದು ಹೇಳಲಾಗಿದೆ. 'ಅಪ್ಪ' ನೀನು ನಿನ್ನ ಮಗುವನ್ನು ಪ್ರೀತಿಸಲು ಇಷ್ಟಪಡುವುದಾದರೆ ಅದರ ತಾಯಿಯನ್ನು ಮೊದಲು ಪ್ರೀತಿಸು ? ಎಂಬುದು ಗಾದೆಮಾತು.

ತಂದೆತಾಯಿಗಳನ್ನು ಲೈಂಗಿಕ ವಿಷಯವಾಗಿ ಪ್ರಶ್ನೆ ಕೇಳಿದಾಗ ಅವರ ಪ್ರತಿಕ್ರಿಯೆ, ಎಷ್ಟೋ ವೇಳೆ, ಎಲ್ಲೋ ಎನೋ! ಯಾವುದೂ ಸ್ಪಷ್ಟವಾಗಿ ಸರಿಯಾಗಿಲ್ಲ ಎಂದು ಮಗು ಭಾವಿಸುವಂತೆ ಮಾಡುತ್ತದೆ. ಮಕ್ಕಳು 'ಲಿಂಗದ ಬಗ್ಗೆ ಮೊದಲ ಪ್ರಶ್ನೆಗಳನ್ನು ಕೇಳಿದಾಗ, ಯಾವುದೇ ಭಾವವಿಕಾರವುವುದಿಲ್ಲ ಪ್ರೌಢರು ತಿಳಿದುಕೊಳ್ಳುವುದು ಅಗತ್ಯ. ಮಕ್ಕಳನ್ನು ಈ ಸಂದರ್ಭದಲ್ಲಿ ದೂರವಿಡಬಾರದು. ಪ್ರಶ್ನೆಗಳನ್ನು ಕೇಳುವಾಗ ಮಕ್ಕಳು ಹಿತಕರವಾದ ಭಾವನೆಯನ್ನು ಹೊಂದಿರಬೇಕು. ಹಾಗೆಯೇ ತಂದತಾಯಿಗಳು ಆ ಪ್ರಶ್ನೆಗಳನ್ನು ಉತ್ತರಿಸುವಾಗ ಅದೇ ರೀತಿ ಸಮಾಧಾನಕರವಾಗಿರಬೇಕು. ಅವರು ಉತ್ತರಗಳನ್ನು ಪ್ರಾಮಾಣಿಕವಾಗಿ ಮಕ್ಕಳ ವಯಸ್ಸು ಮತ್ತು ಪರಿಸ್ಥಿತಿ ಬಯಸುವಷ್ಟು ಸ್ವಲ್ಪ ಅಥವಾ ಹೆಚ್ಚಿನ ವಿವರದಿಂದ ಕೂಡಿರುವಂತೆ ನೀಡಬೇಕು.

ತಂದೆತಾಯಿಗಳು ತಮ್ಮ ಮಕ್ಕಳಿಗೆ ಶಿಕ್ಷಣಕೊಡಲು ಅವರಿಗೂ ಸಹಾಯ ಮತ್ತು ಮಾರ್ಗದರ್ಶನದ ಅಗತ್ಯತೆ ಇದೆ. ತಂದೆತಾಯಿಗಳು ದುರದೃಷ್ಟದಿಂದ ಈ ಕಾರ್ಯವನ್ನು ಹೊಣೆಗಾರಿಕೆಯಿಂದ ನೆರವೇರಿಸುವುದಿಲ್ಲ. ಕೆಲವರು ಅವುಗಳ ಧ್ವನಿತಾರ್ಥಗಳಿಂದ ಪರವಶಗೊಳ್ಳುತ್ತಾರೆ. ಮತ್ತು ಹೆಚ್ಚಿನವರು ಯುವಕರೊಡನೆ ಇಂಥ ಸೂಕ್ಷ್ಮ ವಿಷಯದಲ್ಲಿ ವ್ಯವಹರಿಸುವ ತಮ್ಮ ಸಾಮರ್ಥ್ಯದ ಬಗ್ಗೆ ಭರವಸೆಯನ್ನೇ ಕಳೆದುಕೊಂಡಿರುತ್ತಾರೆ. ಹಾಗಿದ್ದರೂ ಅವರು ಅದನ್ನು ಇತರರು ತಮ್ಮ ಮಕ್ಕಳದೇ ವಯಸ್ಸಿನ ಸ್ನೇಹಿತರಿಗೆ, ಕೆಲವೊಮ್ಮೆ ಶಿಕ್ಷಕರಿಗೆ, ಆದರೆ ಎಷ್ಟೋ ವೇಳೆ, ಹೊಂದಾಣಿಕೆಯಾಗದ ಆದರೆ ಆಗಾಗ ತಪ್ಪು ಕೇಂದ್ರವನ್ನು ಹೊಂದಿರುವುದಲ್ಲದೆ ಮೌಲ್ಯಗಳನ್ನು ಕಳೆದುಕೊಂಡಿರುವ ಮಾಧ್ಯಮಗಳಿಗೆ ಮಾಡುವಂತೆ ಬಿಟ್ಟುಬಿಡುತ್ತಾರೆ.

## 6. ಕೌಟುಂಬಿಕ ಜೀವನ ಶಿಕ್ಷಣ-ಶಾಲೆಯಲ್ಲಿ-ಕಾಲೇಜಿನಲ್ಲಿ

ಆದರ್ಶದ ದೃಷ್ಟಿಯಿಂದ ಶಾಲಾ ಕಾಲೇಜುಗಳನ್ನು ಮನೆಗಳಲ್ಲಿ ಈಗಾಗಲೇ ತಳಪಾಯ ಹಾಕಿದ 'ಲೈಂಗಿಕ ವಿಷಯ'ದ ಗಟ್ಟಿ ತಳಪಾಯದ ಮೇಲೆ ಕಟ್ಟಬೇಕು ಮತ್ತು ಪೂರೈಸಬೇಕು. ಲೈಂಗಿಕ ಶಿಕ್ಷಣವು ಪ್ರೇಮ, ಲಿಂಗ, ಮದುವೆ ಮತ್ತು ಕೌಟುಂಬಿಕ ಜೀವನಗಳ ಲಕ್ಷಣಗಳನ್ನು ತುಂಬ ನೈಪುಣ್ಯದಿಂದ ಜೊತೆಕೂಡಿಸಬೇಕು, ಹಾಗೂ ಸ್ತ್ರೀಪುರುಷರ ಸಮಗ್ರ ವ್ಯಕ್ತಿತ್ವವನ್ನು ಹೊಸದೃಷ್ಟಿಯಿಂದ ಕೂಡಿದ ವ್ಯಾಸಂಗ ಕ್ರಮದೊಡನೆ ಬೆಳೆಸಬೇಕು. ಪದವಿ ಪಡೆಯುವುದಕ್ಕೆ ಮುಂಚೆ, ಮತ್ತು ಶಾಲೆಯಿಂದ ನೇರವಾಗಿ ಉದ್ಯೋಗಕ್ಕೆ ಹೋಗುವ ವಿದ್ಯಾರ್ಥಿಗಳಿಗೆ ವ್ಯಾಸಂಗದ ಅಧ್ಯಯನವನ್ನು ಒದಗಿಸಲು ವಿಶೇಷ ಎಚ್ಚರಿಕೆಯನ್ನು ವಹಿಸಬೇಕು. ಸಂಜೆಯ

ತರಗತಿಗಳೆಲ್ಲ ಮತ್ತೊಂದು ವಿಷಯವನ್ನು ಸೇರಿಸಲು ಪಠ್ಯಕ್ರಮಗಳು ಈಗಾಗಲೇ ತುಂಬಿ ಹೋಗಿವೆ. ಆದ್ದರಿಂದ ಸೇರಿಸಲಾಗುವುದಿಲ್ಲ ಎಂದು ಆಗಾಗ ಕೇಳಿಬರುವ ಆರೋಪಣೆಗೆ ಸಂಜೆಯ ತರಗತಿಗಳು ಪರಿಹಾರ ನೀಡಬಲ್ಲದು, ಇವುಗಳನ್ನು ಸಾಮಾನ್ಯವಾಗಿ ಹಗಲಿನ ತರಗತಿಗಳ ಜೊತೆಗೇ ನಡೆಸಬಹುದು. ಆದರೆ ಈ ವಿಷಯವನ್ನು ಅವುಗಳೊಡನೆ ಜೊತೆಗೂಡಿಸುವ ಪ್ರಯತ್ನಗಳು ಅದರ ಪ್ರಮುಖತೆಯ ದೃಷ್ಟಿಯಿಂದ ಮತ್ತು ವಿಷಯದ ಪ್ರಾಮುಖ್ಯ ಸುಸಂಗತತೆಯಿಂದ ಬಹು ಗಂಭೀರದ್ದಾಗಿರಬೇಕು. ಕಾಲೇಜು ಮಟ್ಟದಲ್ಲಿನ ಅಧ್ಯಾಸದಲ್ಲಿ ಈ ಮುಂದಿನ ವಸ್ತು ವಿಷಯಗಳನ್ನು ಸೇರಿಸಲು ಸೂಚಿಸಲಾಗಿದೆ.

## ಶಿಕ್ಷಕರಿಗೆ ಸಲಹೆಗಳು

ನೇರವಾಗಿ ಲೈಂಗಿಕ ವಿಷಯಗಳ ಸೂಚನೆಗಳಿಗೆ ಸಂಬಂಧಿಸಿದಂತೆ ಶಿಕ್ಷಕರಿಗೆ ಸಲಹೆಗಳು

1. ವಿದ್ಯಾರ್ಥಿಗಳು ತಮಗೆ ಸಂಬಂಧಿಸಿದ ಸಮಸ್ಯೆಗಳನ್ನು ಮುಕ್ತವಾಗಿ ಚರ್ಚಿಸಲು ಅನುಕೂಲವಾಗುವಂಥ ಪ್ರೀತಿಯ, ಸ್ನೇಹಮಯ, ತೆರೆದ ಮನಸ್ಸಿನ ಸಂಕೋಚದಿಂದ ಮುಕ್ತವಾದ ಮತ್ತು ಆತ್ಮ ಪ್ರಜ್ಞೆಯನ್ನು ಹೊಂದಿರುವಂಥ ತರಗತಿ ವಾತಾವರಣವನ್ನು ಸ್ಥಾಪಿಸಿರಿ.
2. ಲೈಂಗಿಕ ವಿಷಯಕ್ಕೆ ಸಂಬಂಧಿಸಿದ ವಿಚಾರಗಳನ್ನು ನೇರವಾಗಿ ಭಾವೋದ್ರೇಕವಿಲ್ಲದ ಮತ್ತು ಸಂಕೋಚವಿಲ್ಲದ ರೀತಿಯಲ್ಲಿ ಚರ್ಚಿಸಿ ಒಂದೇ ರೀತಿಯ ಗುರಿಯಿಂದ, ವಿಷಯದ ಸ್ಪಷ್ಟತೆಯಿಂದ ಕೂಡಿ ಇದ್ದುದ್ದು ಇರುವಂತೆ, ಇತರ ವಿಷಯಗಳನ್ನು ಕುರಿತು ಹೇಗೋ ಹಾಗೆ ಆದರೆ, ಹೆಚ್ಚಿಗೆ ಗೌರವದಿಂದ ಕೂಡಿರುವಂತೆ ಮಾತನಾಡಿ.
3. ವೈಜ್ಞಾನಿಕ ಪದಭಂಡಾರವನ್ನು ಸಾಕಷ್ಟು ಸ್ವಾಧೀನಪಡಿಸಿಕೊಳ್ಳಿರಿ
4. ಲಿಂಗದ ಸಾಧಾರಣ ದೃಷ್ಟಿ ಅಂಶಗಳಿಗೆ ಒತ್ತುಕೊಡಿ
5. ದೇಹದ ಬಗ್ಗೆ ಮೆಚ್ಚಿಗೆಯನ್ನು ವೃದಿಧಪಡಿಸಿಕೊಳ್ಳಿ
6. ವಿದ್ಯಾರ್ಥಿಗಳ ವಿವೇಕಪೂರ್ಣ ಆಯ್ಕೆಗಳನ್ನು ಆಯ್ದುಕೊಳ್ಳಲು ಸಮರ್ಥರಾಗುವಂತೆ ಸೊಗಸಾದ ಪ್ರವೃತ್ತಿಗಳನ್ನು ಮತ್ತು ತಿಳಿವಳಿಕೆಗಳನ್ನು ರಚಿಸಿಕೊಳ್ಳುವ ಬಗ್ಗೆ ಕಂಡುಹಿಡಿರಿ
7. ವಿದ್ಯಾಥಿಗಳೊಡನೆ ಸಮಸ್ಯೆಗಳನ್ನು ಕುರಿತು ಆಲೋಚಿಸಿ ಮತ್ತೆ ಅವರು ತಮ್ಮ ಸ್ವಂತ ತೀರ್ಮಾನಗಳನ್ನು ಕೈಗೊಳ್ಳುವಂತೆ ಅವರಿಗೆ ಬಿಟ್ಟುಬಿಡಿ.
8. ತಿಳಿವಳಿಕೆ ಅತಿಕುತೂಹಲವನ್ನು ತೊರೆದುಹಾಕಲು ಸಹಾಯಮಾಡುವುದರಿಂದ ಅವರಿಗೆ ಸಮಂಜಸವಾದ ವಿಷಯಾಂಶಗಳನ್ನು ಕೊಡಿ.
9. ತರಗತಿಗಳನ್ನು ಯೋಜಿಸುವಲ್ಲಿ ವಿದ್ಯಾರ್ಥಿಗಳು ಭಾಗವಹಿಸಲಿ

10. ಪ್ರಶ್ನೆಗಳನ್ನು ಬರೆದು ಹಾಕಲು ಒಂದು ಪೆಟ್ಟಿಗೆಯನ್ನು ಬಳಸಿ. ವಿದ್ಯಾರ್ಥಿಗಳು ಅದರಲ್ಲಿ ತಮ್ಮ ಹೆಸರುಗಳನ್ನು ಬಹಿರಂಗಪಡಿಸಿದೆ, ಎಂದರೆ ತರಗತಿಯಲ್ಲಿ ಪ್ರಶ್ನೆಗಳನ್ನು ಕೇಳುವಷ್ಟು ಮುಕ್ತರಾಗಿಲ್ಲವೆಂದು ಭಾವಿಸಿದಾಗ-ಅದರಲ್ಲಿ ಹಾಕಲಿ. ತರಗತಿಯಲ್ಲಿ ಚರ್ಚಿಸುವುದು ಉತ್ತಮ. ಆದರೆ ಈ ವಿಧಾನ ಮುಕತ ಚರ್ಚೆಗೆ ದಾರಿ ಮಾಡಿಕೊಡುವ ದಿಸೆಯಲ್ಲಿ ತರಗತಿಯನ್ನು ತೆರೆಯುವುದಕ್ಕೆ ಇದೊಂದು ತಂತ್ರ.

11. ಸ್ಪಷ್ಟೀಕರಿಸಲು ಸಹಾಯವಾಗುವಂತೆ ಚಿತ್ರಗಳನ್ನು ದರ್ಶನ ಉಪಕರಣಗಳನ್ನು ಬಳಸಿ.

12. ಈ ಕ್ಷೇತ್ರದಲ್ಲಿನ, ಬಹು ಎಚ್ಚರಿಕೆಯಿಂದ ಆರಿಸಿದ ಸಾಕಷ್ಟು ಫುಸ್ತಕಗಳು ಪುಸ್ತಕ ಭಂಡಾರದಲ್ಲಿ ತೆರೆದ ಷೆಲ್ಫಗಳಲ್ಲಿರುವಂತೆ ನೋಡಿಕೊಳ್ಳಿ, ''ಲೈಂಗಿಕ ಶಿಕ್ಷಣ ಕೆಲವೊಮ್ಮೆ ದೊಡ್ಡಪ್ರಮಾಣದ ಚಾಜತ್ವಕ್ಕೆ ಮತ್ತು ಗರ್ಭಪಾತದ ಹೆಚ್ಚಿನ ಪ್ರಮಾಣಕ್ಕೆ ಜವಾಬ್ದಾರವಾಗುತ್ತದೆ.'' ಎಂಬ ನಂಬಿಕೆಯಲ್ಲಿ ಯಾವ ಸತ್ಯವೂ ಇಲ್ಲ. ಗರ್ಭಸ್ರಾವವನ್ನು ಪಡೆದಿರುವ ಅವಿವಾಹಿತ ತಾಯಂದಿರು ಮತ್ತು ಹುಡುಗಿಯರು ಮನೆಯಲ್ಲಿ ಅಥವಾ ಶಾಲೆಯಲ್ಲಿ ಸ್ವಲ್ಪ ಅಥವಾ ಯಾವುದೇ ಲೈಂಗಿಕ ಶಿಕ್ಷಣವನ್ನು ಹೊಂದಿರಲಿಲ್ಲ ಎಂಬುದು ಸ್ಪಷ್ಟ.

ಅಜ್ಞಾನ ಲೈಂಗಿಕ ಚಟುವಟಿಕೆಯನ್ನು ತಡೆಯುತ್ತದೆ ಎಂದೇನು ಕಂಡು ಬರುವುದಿಲ್ಲ ಆದರೆ ನಿಜವಾಗಿ ಲೈಂಗಿಕ ಪ್ರವೃತ್ತಿಯ ಅನಪೇಕ್ಷಣೀಯ ಪರಿಣಾಮಗಳನ್ನು, ಬೇಕಾಗಿಲ್ಲದ ಗರ್ಭಧಾರಣೆಯನ್ನು, ಬೇಕಾಗಿಲ್ಲದ ಪ್ರಸವವನ್ನು ಮತ್ತು ಎಸ್‌ಟಿಡಿಯನ್ನು ಉತ್ತೇಜಿಸುತ್ತದೆ. ಯುವ ಜನಾಂಗ ಇವೆಲ್ಲವನ್ನು ತಿಳಿದುಕೊಂಡಿರುವವರಾಗಿರಬೇಕು ಮತ್ತು ತಮ್ಮ ನಿರಪರಾಧತೆಯನ್ನು ಉಳಿಸಿಕೊಳ್ಳಲು ಉದ್ದೇಶ ಹೊಂದಿರಬೇಕು.

## 7. ಆದರ್ಶ ಶಿಕ್ಷಕ

ತಂದೆತಾಯಿಗಳು ಅವರವರ ಕರ್ತವ್ಯಗಳನ್ನು ಪೂರ್ಣಗೊಳಿಸುವಲ್ಲಿ ಸಹಾಯ ಮಾಡುವ ಮತ್ತು ಶಾಲಾಶಿಕ್ಷಕನ ಪಾತ್ರವನ್ನು ಕೈಕೊಂಡು ಮಾನವ ಸಮಾಜವನ್ನು ಕೂಡ ಪ್ರತಿನಿಧಿಸುವವರೆಲ್ಲರ ವೃತ್ತಿ ಸುಂದರವಾದದ್ದು. ಮತ್ತು ನಿಜವಾಗಿ ಉದಾತ್ತವಾದದ್ದು. ಈ ಕರೆ ಮನಸ್ಸು ಹೃದಯಗಳ ಅಸಾಧಾರಣ ಗುಣಗಳನ್ನು ಅಗತ್ಯಪಡಿಸುವುದಲ್ಲದೆ, ಎಚ್ಚರಿಕೆಯ ಸಿದ್ಧತೆಯನ್ನು ಮತ್ತೆ ಹೊಸದಾಗಿಸಲು ಮತ್ತು ಅಳವಡಿಸಲು ಸತತ ಸಿದ್ಧತೆಯನ್ನು ಅಪೇಕ್ಷಿಸುತ್ತದೆ.

ಸಾಧ್ಯವಾದಷ್ಟು ಉನ್ನತಮಟ್ಟಕ್ಕೆ ಕಾಲೇಜು ತನ್ನ ಗುರಿ ತಲುಪುವರೆಗೆ ಮತ್ತು ತನ್ನ ಉದ್ಯಮ ಫಲ ಕೊಡುವವರೆಗೆ ತರಬಲ್ಲುದೋ ಎಂಬುದನ್ನು ಅವರು ನಿರ್ಧರಿಸಬೇಕು ಎಂಬುದನ್ನು ಶಿಕ್ಷಕರು ಜ್ಞಾನ ಇವೆರಡರಿಂದಲೂ ಅವರು ಶ್ರೀಮಂತರಾಗಿರುವಂತೆ ಅವರಿಗೆ ಶಿಕ್ಷಣಕೊಡಬೇಕು ಮತ್ತು ಮೆಚ್ಚಿಕೆಯಿಂದ ಪ್ರಮಾಣೀಕರಿಸಬೇಕು. ಹಾಗೂ ಆಧುನಿಕ ದಿನಗಳ

ವಿಚಾರಣಾ ಫಲಗಳನ್ನು ಪ್ರತಿಬಿಂಬಿಸುವ ಶೈಕ್ಷಣಿಕ ನೈಪುಣ್ಯದಿಂದ ಅವರನ್ನು ಸಜ್ಜುಗೊಳಿಸಲೂಬಹುದು.

ಪರಸ್ಪರ ಧರ್ಮಕಾರ್ಯದಿಂದ ಮತ್ತು ತಮ್ಮ ವಿದ್ಯಾರ್ಥಿಗಳೊಡನೆ ಬಂಧಿತರಾಗಿ ಮತ್ತು ದೇವಪ್ರೇರೇಪಿತ ಮನೋಭಾವದಿಂದ ತುಂಬಿಕೊಂಡು, ಅವರು, ದೇವರಿಗೆ, ಅಪೂರ್ವ ಶಿಕ್ಷಕನಿಗೆ ತಮ್ಮ ತಮ್ಮ ಬದುಕುಗಳಿಂದ ಹಾಗೂ ತಮ್ಮ ಬೋಧನೆಗಳಿಂದ ಸಾಕ್ಷಿ ಕೊಡಲಿ.

ಎಲ್ಲಕ್ಕಿಂತ ಮಿಗಿಲಾಗಿ ಅವರು ತಂದೆತಾಯಿಗಳ ಪಾಲುದಾರರಂತೆ ತಮ್ಮ ಸೇವೆಗಳನ್ನು ನಡೆಸಿಕೊಡಲಿ, ಅವರೊಡನೆ ಸೇರಿಕೊಂಡು ಅವರು ಲೈಂಗಿಕ ಭೇದಗಳಿಗೆ ಸಂಬಂಧಿಸಿದ ಪ್ರತಿಯೊಂದು ಶೈಕ್ಷಣಿಕ ಚಟುವಟಿಕೆಗೂ ತಕ್ಕ ಮರ್ಯಾದೆಯನ್ನು ನೀಡಬೇಕು ಹಾಗೂ ದೈವಿಕ ದೂರದೃಷ್ಟಿಯನ್ನು ಹಂಚಿಕೊಟ್ಟಿರುವ ಕೌಟುಂಬಿಕ ಜೀವನದಲ್ಲಿನ ಮತ್ತು ಸಮಾಜದಲ್ಲಿನ ಪ್ರತಿಯೊಂದು ಲಿಂಗಜಾತಿಗೆ ಸಂಬಂಧಿಸಿದ ವಿಶಿಷ್ಟ ಪಾತ್ರಕ್ಕೂ ಯೋಗ್ಯ ಮರ್ಯಾದೆಯನ್ನು ಕೊಡಬೇಕು. ತಮ್ಮ ವಿದ್ಯಾರ್ಥಿಗಳ ಪರವಾಗಿ ವೈಯಕ್ತಿಕ ದೀಕ್ಷೆಯನ್ನು ಪ್ರೇರೇಪಿಸಲು ಅವರು ಕಠಿಣ ಶ್ರಮದಿಂದ ಕೆಲಸಮಾಡಲಿ. ವಿದ್ಯಾರ್ಥಿಗಳು ಪದವಿಪಡೆದನಂತರವೂ, ಅವರ ಶಿಕ್ಷಕರು ಅವರಿಗೆ ಬುದ್ಧಿವಾದ ಹೇಳುವುದರಿಂದ, ಗೆಳೆತನವನ್ನು ಉಳಿಸಿಕೊಳ್ಳುವುದರಿಂದ ಮತ್ತು ದೇವಾಲಯದ (ಎರಡನೆಯ ವ್ಯಾಟಿಕನ್ ಪರಿಷತ್) ಸ್ಫೂರ್ತಿಯಿಂದ ಶುದ್ಧವಾಗಿ ಉತ್ತೇಜನಕೊಡುವುದರಿಂದ ವಿಶಿಷ್ಟ ತಂಡಗಳನ್ನು ಸ್ಥಾಪಿಸುವುದರ ಮೂಲಕ, ಸತತವಾಗಿ ನೆರವನ್ನು ನೀಡುತ್ತಲೆ ಬರಬೇಕು.

ಇವೆಲ್ಲವುಗಳ ಅರ್ಥವೆಂದರೆ ನಾವು ಶಿಕ್ಷಕರಾಗಿ ಬೆಳೆಸಿಕೊಂಡ ನಮ್ಮ ಕಾರ್ಯದ ಹೊಸದೃಷ್ಟಿ ಹತೋಟಗೊಳಪಡದ ವಿದ್ಯಾರ್ಥಿಗಳಂತೆ, ಪರೀಕ್ಷಣೆಗಳು ಮತ್ತು ತಿದ್ದುವ ಉತ್ತರ ಪತ್ರಿಕೆಗಳ ರಾಶಿ ಮತ್ತು ಸಂತೋಷಪಡಿಸಲಾಗದ ಪ್ರಾಂಶುಪಾಲರು ಮತ್ತು ಬಹು ಕೆಳಮಟ್ಟದ ಸಂಬಳಗಳು ಇವುಗಳು ಮಾತ್ರವಲ್ಲದೆ ಇದಕ್ಕೂ ಹೆಚ್ಚಿನದಾಗಿ ನಮ್ಮ ನಮ್ಮ ಸಣ್ಣ ದಾರಿಯಲ್ಲಿ, ಸೃಷ್ಟಿಯ ಕಾರ್ಯದಲ್ಲಿ, ಮತ್ತು ವಿಮೋಚನೆಯಲ್ಲಿ ನಿಜವಾಗಿ ಪಾಲ್ಗೊಳ್ಳುವ ನಮ್ಮ ವಿದ್ಯಾರ್ಥಿಗಳು ಸಮಾಜದಲ್ಲಿ ಹೊಣೆಹೊತ್ತ ನಾಗರಿಕರಾಗಿ ತಮ್ಮ ಸ್ಥಾನವನ್ನು ಪಡೆಯಲು ಮತ್ತು ಈ ಆಧುನಿಕ ಪ್ರಪಂಚವನ್ನು ಕಟ್ಟುವಲ್ಲಿ ಅವರಿಗೆ ತರಬೇತಿ ಕೊಡುವುದರಿಂದ ನಾವು ಕೂಡ ಹೊಸದಾದ ಮತ್ತು ಉತ್ತಮವಾದ ಪ್ರಪಂಚವನ್ನು ನಿರ್ಮಿಸುವಲ್ಲಿ ಅಲ್ಪಸಲ್ಪ ಪಾಲಿನ ಹಕ್ಕನ್ನು ಕೇಳಬಹುದು.

## 8. ಸಾಂಸ್ಕೃತಿಕ ನಮೂನೆಗಳು

ಮಾನವ ಸಂಬಂಧಗಳನ್ನು ಪ್ರಭಾವಿಸುವ ಶೈಕ್ಷಣಿಕ ಹೊಸ ಶೋಧನೆಗಳು ಅವರವರ ಜನದ ಬದಲಾಗುತ್ತಿರುವ ಸಾಂಸ್ಕೃತಿಕ ಪರಂಪರೆಗಳನ್ನು ಹಾಗೆಯೇ ಅವರು ಬದುಕುತ್ತಿರುವ

ಜೀವನಸ್ಥಿತಿಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕೆಂಬುದು ಸ್ವಯಂ ಸೃಷ್ಟಿ. ದೇಶಕ್ಕೆ ಇದು ಚಿತ್ತಾಕರ್ಷಕವೂ ಭಯಾನಕವೂ ಅದು ಒಂದುಸವಾಲು. ಏಕೆಂದರೆ 800 ಕೋಟಿ ಜನಸಂಖ್ಯೆ ಇರುವ ಒಂದು ರಾಷ್ಟ್ರದಲ್ಲಿ ಧಾರ್ಮಿಕ ನಂಬಿಕೆಗಳಿಂದ ಕುಲಸಂಬಂಧವಾದ, ಭೌಗೋಳಿಕ ಆರ್ಥಿಕ ಮತ್ತು ಇತರ ಅಂಶಗಳಿಂದ ಪ್ರಭಾವಿತವಾದ ಅತಿ ಅಂತರಗಳ ವೈವಿಧ್ಯಗಳಿಂದ ಕೂಡಿದ ಸಾಮಾಜಿಕ ಮತ್ತು ಸಾಂಸ್ಕೃತಿಕ ಮಾದರಿಗಳು ಇದ್ದೇ ಇರಬೇಕು. ಭಾರತ ಒಂದು ಜಾತ್ಯತೀತ ರಾಜ್ಯ. ಅಲ್ಲಿ ಯಾವುದೇ ಮತಧರ್ಮಕ್ಕೆ ಸ್ಥಾಪಿತ ಮಟ್ಟವನ್ನು ಕೊಟ್ಟಿಲ್ಲ. ಆದರೆ ಹಿಂದುಗಳು ಒಟ್ಟು ಜನಸಂಖ್ಯೆಯಲ್ಲಿ ಶೇಕಡ 82.5ರಷ್ಟು ಪ್ರಮಾಣವನ್ನು ಹೊಂದಿದೆ. 12.7 % ಮಹಮ್ಮದೀಯರೂ 3% ಕ್ರೈಸ್ತರು 1.7% ಸಿಕ್ಕರು ಮತ್ತು ಅವರಿಗಿಂದ ಕಡಿಮೆ ಅಲ್ಪಾಸಂಖ್ಯಾತರಾದ ಬೌದ್ಧರು, ಯಹೂದ್ಯರು ಪಾರ್ಸಿಗಳು ಮತ್ತು ಇತರರು ಇದ್ದಾರೆ.

## ಹಿಂದೂ ಪ್ರವೃತ್ತಿಗಳು

ಲೈಂಗಿಕ ಮತ್ತು ವೈವಾಹಿಕ ವಿಷಯಕ್ಕೆ ಹಿಂದೂ ಪ್ರವೃತ್ತಿಗಳ ಮೂಲವೇ ಪುರಾತನವಾಗಿ ವೈದಿಕಕಾಲದಿಂದ ಅಡ್ಡಕಟ್ಟಿಹಾಕಿದೆ. ಶತಮಾನಗಳಿಂದ ಈ ಸಂಪ್ರದಾಯಗಳ ರೂಪುಗೊಂಡಿವೆ. ಮತ್ತು ರೂಪಾಂತರಗೊಂಡಿವೆ ಮತ್ತು ಆಶ್ಚರ್ಯಕರವಾದ ವೈವಿಧ್ಯವಾದ ಅಭಿವ್ಯಕ್ತಿಗಳಿಂದ ಅಭಿವೃದ್ಧಿಯಾಗುತ್ತಲೇ ಇದೆ. ಆದರೆ, ಏನಾದರೂ ಮೂಲತಃ ಒಟ್ಟುಗೂಡಿಸುವ ಪ್ರಭಾವವನ್ನು ಹೊಂದಿ ಅವುಗಳೆಲ್ಲವನ್ನು ವ್ಯಾಪಿಸಿಕೊಂಡಿದೆ ಮತ್ತು ಪ್ರತ್ಯಕ್ಷವಾಗಿ ಕಂಡುಬರುವ ಸಂಸ್ಕೃತಿಯಾಗಿ ಮತ್ತು ಜೀವಂತ ಪರಂಪರೆಯಾಗಿ ವೃದ್ಧಿಹೊಂದಿದೆ.

ಪ್ರಾಚೀನ ಸಂಸ್ಕೃತ ಉತ್ತಗ್ರಂಥಗಳು ಮಾನವ ಚಟುವಟಿಕೆಗಳ ಮತ್ತು ಮಹತ್ವಾಕಾಂಕ್ಷೆಗಳ ವಿಸ್ತಾರವಾದ ವಲಯವನ್ನು ಆಶ್ಚರ್ಯಕರವಾದ ರೀತಿಯಲ್ಲಿ ಭರಿಸಿಕೊಂಡಿವೆ. ದಿನನಿತ್ಯದ ಬದುಕಿನ ರಾಜ್ಯದಲ್ಲಿ ಶಾಸ್ತ್ರಗಳು ಮಾರ್ಗದರ್ಶನಗಳನ್ನು ಒದಗಿಸಿದವು. ಅವು ಇಂದಿಗೂ ಹಿರಿಯ ಜನರ ಮೇಲೆ ತಮ್ಮ ಪ್ರಭಾವವನ್ನು ಒತ್ತುತ್ತಲೇ ಇವೇ. ಧರ್ಮಶಾಸ್ತ್ರ ಧಾರ್ಮಿಕ ಮತ್ತು ವೇದಾಂತಿಕ ಜೀವನವನ್ನು ಕುರಿತು ಮತ್ತು ಅಭ್ಯುದಯವನ್ನು ತಿಳಿಸುತ್ತದೆ. ಅರ್ಥಶಾಸ್ತ್ರ ಲೌಕಿದ ಸಂಪತ್ತನ್ನು ಸ್ವಾಧೀನ ಪಡಿಸಿಕೊಳ್ಳುವುದನ್ನು ಕಾಮಶಾಸ್ತ್ರ ಪ್ರೇಮವು ಮತ್ತು ಲೈಂಗಿಕ ಜ್ಞಾನವನ್ನು ಒಳಗೊಂಡು ವಿವರಗಳನ್ನು ನೀಡುತ್ತವೆ. ವಾತ್ಸ್ಯಾಯನ ತನ್ನ ಕಾಮಸೂತ್ರದಲ್ಲಿ (1 ಮತ್ತು 4ನೆಯ ಶತಮಾನದ ಅಂತರದಲ್ಲಿ ಇದನ್ನು ರಚಿಸಿರಬಹುದೆಂದು ಹೇಳಲಾಗಿದೆ) ಮನುಷ್ಯ ಧರ್ಮ, ಅರ್ಥ, ಕಾಮ, ವಿಚಾರಗಳನ್ನು ಏಕತಾಳವಾಗಿರುವಂತೆ ಅಭ್ಯಾಸಮಾಡಬೇಕು ಎಂದು ಹೇಳಿದ್ದಾನೆ. 'ಕಾಮ' ಕಲಿಯಬೇಕಾದ ವಿಷಯ. ಅದನ್ನು ಅಭ್ಯಾಸಮಾಡದೆ ಬಿಡಬಾರದೂ ಎಂದು ಒತ್ತಾಯ ಪಡಿಸಿದ್ದಾನೆ. ಇಲ್ಲಿ ಮುಖ್ಯವಾದ ಅಂಶ ಎಂದರೆ ಗಂಡಸರು ಹೆಂಗಸರು ಇಬ್ಬರಿಗೂ ಈ ವಿಷಯ ಅನ್ವಯಿಸುತ್ತದೆ ಎಂದು ದೃಢೀಕರಿಸುತ್ತಾನೆ.

ಕ್ರಿಸ್ತಧರ್ಮೀಯರಿಗೂ ಲೈಂಗಿಕ ಪ್ರವೃತ್ತಿ ದೇವರಿಂದ ಕೊಡಲ್ಪಟ್ಟ ವರ. ಮಾನವ ಜಾತಿಗೆ ದೇವರು ನೀಡಿದ ಈ ವರವನ್ನು ಇಬ್ಬರು ವ್ಯಕ್ತಿಗಳೂ ಜೊತೆಗೂಡಿ ಏಕತಾನವನ್ನು ಮತ್ತು ಪಾಲನೆಯನ್ನು ತರುವುದಕ್ಕಾಗಿಯೇ ರೂಪಿಸಿರುವ ವರ ಇದು.

## 9. ಸ್ತ್ರೀತ್ವ

ಹೆಂಗಸು ಗಂಡಸರನ್ನು ಆಕರ್ಷಿಸಿದರೆ ಅವಳಲ್ಲಿ ಲೈಂಗಿಕ ರಂಜನೆಯಿದೆ.

ಅವಳು ಹೆಂಗಸರನ್ನು ಆಕರ್ಷಿಸಿದರೆ ಅವಳಲ್ಲಿ ಸೊಗಸುಗಾರಿಕೆ ಇದೆ.

ಅವಳು ಎಲ್ಲರನ್ನು ಆಕರ್ಷಿಸಿದರೆ ಅವಳಲ್ಲಿ ಮೋಚಕ ಶಕ್ತಿ ಇದೆ.

ಲೈಂಗಿಕ ರಂಜನೆ ಮತ್ತು ಸೊಗಸುಗಾರಿಕೆಗಳು ಹಂಗಾಮಿ ಆಕರ್ಷಣೆಗಳು. ಬಾಹ್ಯ ಸೌಂದರ್ಯದ ಮೇಲೆ ಅವಲಂಬಿಸಿದಿಲ್ಲದಿರುವ ಸ್ತ್ರೀತ್ವ ಸಹನೀಯವಾದುದು.

ಸಾಧರಣ ಹುಡುಗಿಯರೆಲ್ಲ ತಾವು ಹೆಂಗಸಾಗಿರಬೇಕು, ಮೋಹಕವಾಗಿರಬೇಕು ಎಂದು ಬಯಸುತ್ತಾರೆ. ಅವರು ತಮ್ಮ ಸ್ತ್ರೀತ್ವವನ್ನು ಹೇಗೆ ವೃದ್ಧಿಪಡಿಸಿಕೊಳ್ಳಬೇಕು ಎಂಬ ಬಗ್ಗೆ ಸರಿಯಾದ, ಸ್ಪಷ್ಟವಾದ ತಿಳಿವಳಿಕೆ ಹೊಂದಲು ಕಾತರರಾಗಿರುತ್ತಾರೆ. ಮಾಧ್ಯಮಗಳು ಸಾಮಾನ್ಯವಾಗಿ ಒದಗಿಸುವುದೆಂದರೆ ರೂಪ ಮತ್ತು ಸ್ತ್ರೀತ್ವದ ಉಪದೇಶ. ಗಂಡಸರು ತಮ್ಮನ್ನು ಮರ್ಯಾದೆಯಿಂದ ಮತ್ತು ಪರ್ಯಾಲೋಚನೆಯಿಂದ ಗಣನೆಗೆ ತೆಗೆದುಕೊಳ್ಳಬೇಕೆಂದರೆ ಮಹಿಳೆಯರು ಧನಾತ್ಮಕವಾದ ಸ್ವಯಂಪ್ರತಿಮೆಯನ್ನು ಹೊಂದಿರಬೇಕು.

ಸ್ತ್ರೀಯರು ಭಾವಾವೇಶದಿಂದ ಬಲಿಷ್ಠರಾಗಿರುತ್ತಾರೆ. ಆದರೆ ಅವರ ಪ್ರತಿಭೆ, ಅದಕ್ಕೆ ಅರ್ಹವಾದ ಗೌರವದಿಂದ ಅದನ್ನು ಗಣಿಸಬೇಕಾಗುವ ಒಂದು ವರ.

ಸ್ತ್ರೀಯರು 1 ಸಂಬಂಧಗಳನ್ನು ಬಿಗಿಯುವ ಸಂಯೋಜನೆಯ ಶಕ್ತಿಯುತ ಭಾವನೆಯನ್ನು ಹೊಂದಿರುತ್ತಾರೆ. 2 ಅನುಭೂತಿ ಶಕ್ತಿ - ಅದು ಅವರಲ್ಲಿ ಗಂಡಸಿಗಿಂತ ಹೆಚ್ಚು ಬಾಹ್ಯಪ್ರವೃತ್ತವಾಗಿರುವಂತೆ ಮಾಡುತ್ತದೆ. ಈ ಗುಣಗಳುಸ್ವಂತ ಹೆಚ್ಚಳಕ್ಕಿಂತ ಮೇಲಾದ ಮೌಲ್ಯವನ್ನು ಪಡೆಯುತ್ತವೆ ಮತ್ತು ಆಕೆ ಸಾಮಾನ್ಯವಾಗಿ ಶಾರೀರಿಕ ಮತ್ತು ಮಾನಸಿಕ, ಈ ಎರಡೂ ಒತ್ತಡಗಳನ್ನು ಗಂಡಸರಿಗಿಂತ ಹೆಚ್ಚಾಗಿ ಸಹಿಸಬಲ್ಲಳು, ಇದಕ್ಕೆ ಕಾರಣ ಅವಳ ಮಾಹೆಯಾನ ಮುಟ್ಟು. ಆಗ ನೋವು ಮತ್ತು ರಕ್ತಸ್ರಾವ ಅವಳಿಗೆ ಪರಿಚಯವಾದ ಕ್ರಿಯೆಯಾಗಿಬಿಡುತ್ತದೆ.

ನಗರಗಳಲ್ಲಿ 5 ಜನ ಹೆಂಗಸರಿಗೆ ಒಬ್ಬರಂತೆ ತಮ್ಮ ಮನೆಯಿಂದ ಹೊರಗಡೆ ಕೆಲಸಮಾಡುತ್ತಾರೆ. ವಿಶೇಷ ಸಂಖ್ಯೆಯಲ್ಲಿ ಹೆಂಗಸರು ಇದುವರೆಗೆ ಗಂಡಸರಿಗೆ ಮೀಸಲಾಗಿದ್ದ ವೃತ್ತಿಗಳಲ್ಲಿ ಉದ್ಯೋಗವನ್ನೇ ಕೆಲಸವನ್ನೊ ಮಾಡುತ್ತಾರೆ.

ಉದ್ಯೋಗಸ್ಥ ಮಹಿಳೆ ಅಬಲೆಯಾಗಿರಬಲ್ಲಳೆ ? ಗಂಡಸರು ಅವಳನ್ನು ಅಬಲೆಯಾಗಿರಬೇಕೆಂದು ಬಯಸುತ್ತಾರೆಯೇ ? ಅಬಲೆಯಾಗಿರುವುದೇ ಸ್ತ್ರೀಯಾಗಿರುವುದು.

ಅದು ದುರ್ಬಲವಾಗಿರುವುದರಲ್ಲಿ ಮತ್ತು ಅವಲಂಬಿತವಾಗಿರುವುದಲ್ಲ. ಈ ಪುಸ್ತಕದಲ್ಲಿ ಹೆಂಗುಸರ ಬಗ್ಗೆ ಬಹಳಷ್ಟು ಹೇಳಲಾಗಿದೆ. ಆದರೆ ಇತರ ಎಲ್ಲ ವೈಯಕ್ತಿಕ ಗುಣಗಳಂತೆ, ಸ್ತ್ರೀತ್ವ ಅಥವಾ ಹೆಂಗಸುತನ ಒಂದು ವಿಶಿಷ್ಟ ಸ್ವಭಾವ ಅದನ್ನು ಶ್ರಮಪೂರ್ವಕವಾಗಿ ವೃದ್ಧಿಪಡಿಸಬೇಕು.

ಎಲೆ ಹೆಂಗಸೇ ! ಪ್ರೀತಿಯ ಹೆಂಗಸೇ ! ಪ್ರಕೃತಿ ನಿನ್ನನ್ನು ಸೃಷ್ಟಿಸಿದೆ ಗಂಡಸನ್ನು ಹದಗೊಳಿಸಲು, ನಾವು ನೀನಿಲ್ಲದೆ ಪಶುಗಳಾಗಿದ್ದೇವೆ

-ಒಟಿವೆ

ಸ್ತ್ರೀ ಗುಣಗಳಿಂದ ತುಂಬಿರುವ ಒಂದು ವ್ಯಕ್ತಿತ್ವ ಸ್ತ್ರೀತ್ವದ ಗುಣಗಳನ್ನು ಬೆಳಸಿಕೊಳ್ಳಬೇಕು. ಮಿತ್ರನಾಗಿರುವುದು, ಬಾಹ್ಯಪ್ರವೃತ್ತವಾಗಿರುವುದು, ಕರುಣಾಮಯಿಯಾಗಿರುವುದು ಮತ್ತು ಎಲ್ಲಕ್ಕಿಂತ ವಿಶೇಷವಾಗ ಅನುಭೂತ ಶಕ್ತಿ ಪಡೆದಿರುವುದು ಮೂಲತಃ ಮತ್ತು ನಿಜವಾಗಿ ಸ್ತ್ರೀ ಆಗಿರುವುದೇ.

ಹೆಂಗಸರು ಮೂರು ಹಂತಗಳಲ್ಲಿ ಕಾರ್ಯಕ್ಕೆಗೊಳ್ಳಭೇಕು, ಮೊದಲಿಗೆ ತಲೆಯ ಮಟ್ಟದಲ್ಲಿ ಅಲ್ಲಿ ಬೌದ್ಧಿಕ ತಿಳಿವಳಿಕೆ ರೂಪತಳೆಯುತ್ತದೆ. ಎರಡನೆಯದಾಗಿ ಹೃದಯದ ಮಟ್ಟದಲ್ಲಿ ಅದು ಕರುಣೆಯನ್ನು ಅನುಭವಿಸುವುದು ಮತ್ತು ಮೂರನೆಯದಾಗಿ ಕೈಚಳಕ ತೋರಿಸುವ(ಅನುಭೂತಿ ಶಕ್ತಿ) ಮಟ್ಟದಲ್ಲಿ.

ಭಾರತದ ಹೆಂಗಸರು ಸ್ತ್ರೀಯಾಗಿರುವುದಕ್ಕೆ ಹೆಮ್ಮೆಪಡಬೇಕು. ಆಗ ಮಾತ್ರ ಇಂದಿನ ಪಕ್ಷಪಾತದ ಪ್ರವಾಹವನ್ನು ಮತ್ತು ಶೋಷಣೆಯನ್ನು ಬಂಧಿಸಿಡಬಹುದು.

ಸ್ತ್ರೀ ಮತ್ತೆ ಸ್ತ್ರೀಯಾಗಿಯೇ ಹುಟ್ಟಲು ಆಯ್ಕೆಮಾಡಿಕೊಳ್ಳುವುದಾದರೆ, ಅವಳಿಗೆ ಒಂದು ಅವಕಾಶವಿದ್ದರೆ, ಆಗ ನಾವು ಹೇಳಬಹುದು. ಅವಳು ತನ್ನ ಸ್ತ್ರೀತ್ವದಲ್ಲಿ ನಲಿದಾಡುತ್ತಾಳೆ.

ಸ್ತ್ರೀಯರು ರಕ್ತದ ಒತ್ತಡದ ಬದಲಾವಣೆಗೆ ಕಡಿಮೆ ಪ್ರಣತರು ಮತ್ತು ಸಹಾನುಭೂತಿಯ ನರಗಳ ಕ್ರಮ, ಗಂಡಸಿಗಿಂತ ಅವಳಲ್ಲಿ ಹೆಚ್ಚು ಶಕ್ತಿಯಿಂದ ಕೂಡಿದ್ದು. ಅವಳ ಮಾಂಸಖಂಡಗಳ ಬಲಪಡಿಸುವ ಪಾತ್ರವನ್ನುವಹಿಸುತ್ತದೆ. ಪುರುಷ ಚೋದಕಸ್ರಾವವನ್ನು ಹೆಂಗಸಿಗೆ ಸೂಜಿಮದ್ದು ಕೊಡುವುದರಿಂದ ಅವಳಲ್ಲಿ ಪುರುಷ ಲಕ್ಷಣಗಳನ್ನು ಹೊರಹೊಮ್ಮಿಸುತ್ತದೆ.

ಗಂಡಸರು ಹೆಂಗಸರನ್ನು ಅಪೇಕ್ಷಿಸುತ್ತಾರೆ. ಕಾರಣ ಅಧಿಕಾರನಡೆಸುವ ಅಥವಾ ಕಾಲುಹಿಡಿಯುವ ಪ್ರವೃತ್ತಿಯಿಲ್ಲದೆ ಇರುವ ವ್ಯಕ್ತಿತ್ವನ್ನು ಹೊಂದಿರುವುದರಿಂದ, ತಮ್ಮ ಬೆಂಬಲಕ್ಕೆ ನಿಲ್ಲುವ ಮತ್ತು ಹಾಗೂ ಅರ್ಥಮಾಡಿಕೊಳ್ಳುವ ಮತ್ತು ತಪ್ಪುಗಳಿಗೆ ಅವಕಾಶ ನೀಡುವ ಹಾಗೂ ತಮ್ಮ ದೃಷ್ಟಿಕೋನದಿಂದ ರಚನಾತ್ಮಕ ಸಲಹೆ ನೀಡುವುದರಿಂದ ಹೆಂಗಸರನ್ನು ಗಂಡಸರು ಮೆಚ್ಚಿಕೊಳ್ಳುತ್ತಾರೆ.

ಸ್ತ್ರೀತ್ವ ಒಂದು ಅತ್ಯಂತ ಶಕ್ತಿಯ ಆಯುಧ. ಅದನ್ನು ನಾಶಪಡಿಸಲು ಬಳಸಬಹುದು ಅಥವಾ ಸೃಷ್ಟಿಯ ಒಂದು ಉಪಕರಣವಾಗಿಯೂ ಬಳಸಬಹುದು. ಗಂಡಸರನ್ನು ವಶಪಡಿಸಿಕೊಳ್ಳುವ ವಂಚಿಸುವ ಅಥವಾ ಉದ್ದೇಶಪೂರ್ವಕ ನೋವುಂಟುಮಾಡುವ ಹೆಂಗಸರು ಸ್ತ್ರೀಸ್ವಭಾವದವರಲ್ಲ.

ನೆನಪಿಡಿ ''ನಿಮಗೆ ಮೋಹಕ ಶಕ್ತಿ ಇದ್ದರೆ, ನಿಮಗೆ ಮತ್ತೇನೂ ಬೇಕಾಗಿಲ್ಲ'' ನಿಮಗೆ ಮೋಹಕ ಶಕ್ತಿ ಇಲ್ಲದಿದ್ದರೆ ನಿಮಗೆ ಮತ್ತೇನು ಇದ್ದರೂ ಏನು ಪ್ರಯೋಜನವಿಲ್ಲ. ಠಾಕೂರರ 'ಚಿತ್ರ' ನಾಟಕದಲ್ಲಿ, ನಾಯಕಿ ತನ್ನ ಗಂಡನಿಗೆ ಹೇಳುತ್ತಾಳೆ 'ನಾನು ಪೂಜೆ ಮಾಡಿಸಿಕೊಳ್ಳುವ ದೇವತೆ ಅಲ್ಲ ಇಲ್ಲವೆ ಸಾಧಾರವಣವಾಗಿ ಅನುಕಂಪ ತೋರಿಸುವ ಸಾಮಾನ್ಯ ವಸ್ತುವೂ- ನಿರ್ಲಕ್ಷ್ಯದಿಂದ ಆಚೆಗೆ ತಳ್ಳುವ ಮಿಡತೆಯಂತೆಯೂ ಅಲ್ಲ.

ನೀವು ನನ್ನನ್ನು ಅಪಾಯದ ಮತ್ತು ಸಾಹಸದ ದಾರಿಯಲ್ಲಿ, ನಿಮ್ಮ ಪಾರ್ಶ್ವದಲ್ಲಿ ಇಟ್ಟುಕೊಳ್ಳಲು ಅಪೇಕ್ಷೆ ಪಟ್ಟರೆ, ನಿಮ್ಮ ಬದುಕಿನ ಉತ್ತಮ ಕರ್ತವ್ಯಗಳಲ್ಲಿ ಪಾಲ್ಗೊಳ್ಳಲು ಅವಕಾಶ ಕೊಡುವುದಾದರೆ, ಆಗ ನೀವು ನನ್ನ ನಿಜವಾದ ಸ್ವಂತಿಕೆಯನ್ನು ಅರ್ಥಮಾಡಿಕೊಳ್ಳಬಲ್ಲಿರಿ.

## 10. ಹೆಣ್ಣಿನ ಪುನರ್‌ಸೃಷ್ಟಿಯ (ಸಂತಾನೋತ್ಪತ್ತಿಯ) ವ್ಯವಸ್ಥೆ

ಹೆಂಗಸಿನ ಮುಂಭಾಗದಲ್ಲಿ ಒಂದು ದ್ವಾರವಿದೆ. ಅದು ಪುನರಾತ್ಪಾದನಾ ಅಂಗಗಳಿಗೆ ಕರೆದೊಯ್ಯುವ ದಾರಿ. ಇದೊಂದು ಮಾಂಸಖಂಡದ ಕೊಳವೆ. ಅದರ ಹೆಸರು ವಜೀನಾ, ಯೋನಿನಾಳ. ಅದು ಗರ್ಭಕ್ಕೆ ಅಥವಾ ಗರ್ಭಕೋಶಕ್ಕೆ ಹೋಗುತ್ತದೆ. ಅದರ ಉದ್ದೇಶ ಲೈಂಗಿಕ ಸಂಘಟನೆಯಲ್ಲಿ ಭಾಗವಹಿಸುವುದು. ಅದರ ಫಲವಾಗಿ ಪುರುಷ ಬೀಜವನ್ನು ಸ್ವೀಕರಿಸುವುದು. ಯೋನಿನಾಳದ ತೆರೆಪು ಭಾಗಶಃ 'ಹೀಮನ್' (ಯೋನಿಚ್ಛದ) ಯೋನಿಯಪೊರೆ) ಯಿಂದ ಮುಚ್ಚಿರುತ್ತದೆ. 'ಹಿಮನಾ' ಎಂಬ ಗ್ರೀಕ್ ವಿವಾಹ ದೇವತೆಯ ಹೆಸರಿನಿಂದ ಈ ಹೆಸರುಬಂದಿದೆ. ಅದನ್ನು ಸಾಹಸದ ವ್ಯಾಯಾಮದಿಂದ ಒಡೆಯಬಹುದು ಅಥವಾ ಹೆಣ್ಣುಗಂಡು ಕೂಟದ ಮೊದಲ ಕ್ರಿಯೆಯಿಂದ ಕತ್ತರಿಸಬಹುದು.

ಗರ್ಭ ಅಥವಾ ಗರ್ಭಕೋಶ ಒಂದು ಸಣ್ಣ ಪೊಳ್ಳಾದ ಅವಯವ. ಅದರ ಭಿತ್ತಿಗಳು ಬಲಿಷ್ಠವಾದ ಮಾಂಸಖಂಡದ ಅಂಗಾಂಶಗಳಿಂದ ರೂಪುಗೊಂಡಿವೆ ಮತ್ತು ಆಂತರಿಕವಾಗಿ

ದೇಹದ ಲೋಳೆಯ ತ್ವಕ್ಕಿನಿಂದ ಸಾಲುಗಟ್ಟಿದೆ. ಅದೊಂದು ಕೊಠಡಿ. ಅದರಲ್ಲಿ ಶಿಶು 9 ತಿಂಗಳವರೆಗೆ ಭೂಮಿಯಲ್ಲಿ ಹುಟ್ಟುವುದಕ್ಕೆ ಮುಂಚೆ ಬದುಕಲು ವಿಧಿಯಿಂದ ನಿರ್ದೇಶಿಸಲ್ಪಟ್ಟಿದೆ. ಆದ್ದರಿಂದ ಬಸುರಾದಾಗ, ಗರ್ಭಕೋಶ ಬಹುದೊಡ್ಡ ಗಾತ್ರಕ್ಕೆ ಬೆಳೆಯುತ್ತದೆ. ಮತ್ತು ಶಿಶು ಜನನದ ನಂತರ ಗರ್ಭಕೋಶ ತನ್ನ ಮೊದಲಿನ ಗಾತ್ರಕ್ಕೆ ಹಿಂದಿರುಗುತ್ತದೆ. ಗರ್ಭಕೋಶದ ಪಕ್ಕದಲ್ಲಿ ಚಿಕ್ಕದಾದ ಬಾದಾಮಿ ಆಕಾರದ ಅಂಡಾಶಯ ಎಂದು ಹೇಳುವ ಎರಡು ಅವಯಗಳು ಇರುತ್ತವೆ. ಇವೇ ಹೆಣ್ಣು ಮೊಟ್ಟೆ ಜೀವಕೋಶಗಳನ್ನು ಉತ್ಪತ್ತಿ ಮಾಡುವುವು. ಅವು ಮುಖ್ಯವಾದ ಆಂತರಿಕ ಸ್ರಾವವನ್ನು ಅಥವಾ ಚೋದಕ ಸ್ರಾವವನ್ನು ಕೂಡ ಉತ್ಪತ್ತಿ ಮಾಡುತ್ತವೆ. 'ಒಸ್ಟ್ರೆಜಿನ್' ಎಂಬುದೇ ಲೈಂಗಿಕ ಚೋದಕ ಸ್ರಾವ. ಅದು ಎರಡನೆಯ ಲೈಂಗಿಕ ಲಕ್ಷಣಗಳಿಗೆ ಜವಾಬ್ದಾರಿಯಾಗಿರುತ್ತದೆ.

## Ovulation

ಮೈ ನೆರೆಯುವುದು ಆರಂಭವಾದಾಗ, ಅಂಡಾಶಯಗಳ ಚಟುವಟಿಕೆಯೂ ಪ್ರಾರಂಭವಾಗುತ್ತದೆ. ಪ್ರತಿ 28 ಅಥವಾ 30 ದಿನಗಳ ಪ್ರತಿಯೊಂದು ಮಾಸಿಕ ಅವರ್ತನದೊಂದಿಗೆ ಒಂದು ಹೆಣ್ಣು ಮೊಟ್ಟೆ ಅಥವಾ ಅಂಡಾಣು ದೊಡ್ಡದಾಗುತ್ತದೆ. ಪಕ್ವವಾಗುತ್ತದೆ. ಮತ್ತೆ 14ದಿನಗಳ ನಂತರ ಅದರ ಸಣ್ಣ ಕುಹರದ ಸಣ್ಣ ಚೀಲ ಸಿಡಿಯುತ್ತದೆ. ಆಗ ಮೊಟ್ಟೆ ಬಿಡುಗಡೆ ಹೊಂದುತ್ತದೆ. ಇದಕ್ಕೆ ಓವ್ಯುಲೇಷನ್ ಎಂದು ಹೆಸರು. ಈ ಮೊಟ್ಟೆ ಈಗ ಫಲವತ್ತಾಗಲು ಸಿದ್ಧವಾಗುತ್ತದೆ. ಆಮೇಲೆ ಕೊಳವೆಯ ಕಡೆಗೆ ಹರಿಯುತ್ತದೆ.

ಈ ಸಮಯದಲ್ಲಿ ಪುರುಷಬೀಜ ಅಥವಾ ವೀರ್ಯವು ಹೆಣ್ಣು ಅಂಡವನ್ನು ಕೂಡಿಕೊಳ್ಳುತ್ತದೆ. ಅನಂತರ ಹೊಸ ಮಾನವ ಪ್ರಾಣಿ ರೂಪುಗೊಳ್ಳತೊಡಗುತ್ತದೆ ಮತ್ತು ಈ ಭ್ರೂಣ ಗರ್ಭಕೋಶದ ಗೋಡೆಯಲ್ಲಿ ನೆಡಲಾಗುತ್ತದೆ. ಆ ವೇಳೆಗೆ ಅದು ಭ್ರೂಣದ ಸಿದ್ಧತೆಯಾಗುವಗ ದಪ್ಪವಾಗಿರುತ್ತದೆ. ಎಲ್ಲ ಭ್ರೂಣ ನಿಧಾನವಾಗಿ 9 ತಿಂಗಳವರೆಗೆ ಬೆಳೆಯುತ್ತದೆ ಅದಾದ ನಂತರ ಹುಟ್ಟಿಬರಲು ಸಿದ್ಧವಾಗಿರುತ್ತವೆ.

## ರಜಸ್ವಲೆಯಾಗುವುದು

ವೀರ್ಯಾಣು ಲಭ್ಯವಾಗದಿರುವಾಗ, ಅಂಡವನ್ನು ಅಂಶಾಶಯದಿಂದ ಬಿಡುಗಡೆ ಮಾಡಿದರೆ ಆಗ ಈ ಸ್ತ್ರೀಯ ಅಂಡಾಣು ಉದುರಿಹೋಗುತ್ತದೆ, 24ಗಂಟೆಗಳಲ್ಲಿ ಸತ್ತುಹೋಗುತ್ತದೆ. ಅದೇ ಕಾಲದಲ್ಲಿ ಭ್ರೂಣದ ಅಸ್ತರಿಯು, ಫಲವತ್ತಾದ ಈ ಸ್ತ್ರೀ ಅಂಡಾಣುವನ್ನು ಸ್ವೀಕರಿಸಲು ಸಿದ್ಧವಾಗಿರುತ್ತದೆ ಮತ್ತು ಚೇರ್ಪಡಿಸುತ್ತದೆ ಕೂಡ ಮತ್ತು ಗರ್ಭಕೋಶದ ಭಿತ್ತಿಯಿಂದ ಬಂದ ಸ್ವಲ್ಪ ರಕ್ತದ ಜೊತೆ ಪ್ರತಿತಿಂಗಳೂ ಗರ್ಭದಿಂದ ಯೊನಿನಾಳದ ಮೂಲಕ ಹೊರಹಾಕಲ್ಪಡುತ್ತದೆ. ಇದನ್ನು ಮುಟ್ಟಿನ ರಕ್ತಸ್ರಾವ ಎಂದು ತಿಳಿಯಲಾಗುತ್ತದೆ. ರಜಸ್ವಲೆ ಅಥವಾ ಮುಟ್ಟು ಆಗುವುದು ಎಂಬುದನ್ನು ಸುಲಭವಾಗಿ

ಹೇಳುವುದಾದರೆ ಲೈಂಗಿಕ ಅಂಗಗಳು ತಮ್ಮ ವಿಶಿಷ್ಟ ಕಾರ್ಯವನ್ನು ಸಾಧಿಸಲು ಸಾಕಷ್ಟು ವೃದ್ಧಿಯಾಗಿವೆ ಎಂದೆಷ್ಟೇ ಅರ್ಥ. ಮುಟ್ಟಾಗುವುದು ಏನಾದರೂ ಗರ್ಭಧರಿಸಿದ ಅವಧಿಯಲ್ಲಿ ತಟಸ್ಥವಾಗಿರುತ್ತದೆ. ಇದಕ್ಕೆ ಕಾರಣ ಭ್ರೂಣಕೋಶದ ಅಸ್ಥಿರಿಯ ಮತ್ತು ರಕ್ತದ ಅವಶ್ಯಕತೆಯಿರುತ್ತದೆ, ಮುಟ್ಟಾಗುವುದಕ್ಕೆ ಮುಂಚಿನ ಜಿಗಿತವನ್ನು ಕೆಲವು ಸ್ತ್ರೀಯರು ಅನುಭವಿಸುತ್ತಾರೆ. ಅದು ತೀವ್ರವಾದರೆ ವೈದ್ಯರನ್ನು ಕಾಣಬೇಕಾಗುತ್ತದೆ, ಅವರೊಡನೆ ಸಮಾಲೋಚಿಸಬೇಕಾಗುತ್ತದೆ.

ಸಾಮಾನ್ಯವಾಗಿ ರಜಸ್ವಲಾ ಪ್ರವಾಹ 4 ದಿನಗಳವರೆಗೆ ಇರುತ್ತದೆ. ಪೂರ್ಣ ಆವರ್ತನ 23-25 ದಿನಗಳವರೆಗೆ ಹೆಚ್ಚು ಕಡಿಮೆ ಆಗಿರುತ್ತದೆ. ಕಳೆದುಹೋದ ರಕ್ತದ ಪ್ರಮಾಣ ಒಂದು ಅಥವಾ ಎರಡು ಬಟ್ಟಲಷ್ಟಾಗಬಹುದು. ಆವರ್ತನೆಯ ಆಕ್ರಮ ವಿಶೇಷವಾದ ವಿಚಾರವೇನಲ್ಲ, ಹೆಂಗಸು ಒಳ್ಳೆಯ ಆರೋಗ್ಯದಿಂದಿರುವವರೆಗೆ.

ರಜಸ್ವಲೆಯಾಗುವಿಕೆ-ಮುಟ್ಟಾಗುವಿಕೆಯ ಆವರ್ತನೆಯ ನಿಂತುಬಿಟ್ಟರೆ ಅದಕ್ಕೆ ಮುಟ್ಟು ನಿಂತಿದೆ ಎಂದು ಹೆಸರು, ಇದು ಸಾಮಾನ್ಯವಾಗಿ, ಹಿಂದಿನ ಮುಟ್ಟಾದ ದಿನದಿಂದ ಆರು ಅಥವಾ ಹೆಚ್ಚು ತಿಂಗಳು ಕಳೆದ ಮೇಲೆ ಸಂಭವಿಸುತ್ತದೆ. 48 ಅಥವಾ ಹೆಚ್ಚಿನ ವಯಸ್ಸಾನ ಹೆಂಗಸರಲ್ಲಿ ಇದು ಉಂಟಾಗುತ್ತದೆ.

ಗಂಡಸರಲ್ಲಿ ರೇತ್ರಾಣುಜನನ ಕಾರ್ಯಾನುಗತಿಯೂ ಹಾಗೆಯೇ ನಿಂತು ಹೋಗುತ್ತದೆ. ಈ ಘಟನೆಗೆ ಪುರಪತ್ವಸ್ಥಗಿತ ಎಂದು ಹೆಸರು. ಇದರ ಜೊತೆಗೆ ಪ್ರೊಸ್ಟೇಟ್ ಗ್ರಂಥಿಗಳು ವಿಸ್ತಾರಗೊಳ್ಳುವುದು, ಮಾನಸಿಕ ಚಿಹ್ನೆಗಳೂ ಸೇರಿಕೊಳ್ಳುತ್ತವೆ.

ಮುಟ್ಟು ನಿಂತ ಮೇಲೆ ಗಂಡಸರು ಹೆಂಗಸರು ಸಂಭೋಗಿಸುವುದು ಸಾಮಾನ್ಯ ಹೆಂಗಸಿಗೆ ಗರ್ಭಧರಿಸುವ ಭಯವಿಲ್ಲ. ಅವರ್ತನೆಗಳು ಕಡಮೆಯಾದರೂ ಆನಂದ ಹಾಗೆಯೇ ಉಳಿಯುತ್ತದೆ. ಏಕೆಂದರೆ ಅವರ ಲೈಂಗಿಕ ಪ್ರವೃತ್ತಿ ಎಂದರೆ ಸ್ತ್ರೀತ್ವಕ್ಕೆ ಯಾವುದೇ ಹಾನಿಯಾಗಿರುವುದಿಲ್ಲ.

## ಪುರುಷತ್ವ

ದೇಹದಲ್ಲಿ ಸಾಕಷ್ಟು ಬಲವಿದ್ದರೂ, ಯಾವಾಗಲೂ ಅಷ್ಟೇ ಸಮಸಮವಾಗಿ ಮನಸ್ಸಿನಲ್ಲಿ ಬಲವಿಲ್ಲದಾಗಿರುವುದು. ನಂಬಲಾಗದ ಗುಣವುಳ್ಳ ನಾಯಕ ಹೆಂಗಸ್ಸಿನ ವಿಷಯದಲ್ಲಿ ಚಲಾಯಿಸುತ್ತಾ ಮತ್ತು ಹೆಂಗಸು ತನಗೆ ಸಮಾನಗಳು ಎಂಬುದರ ಬಗ್ಗೆ ಅಲಕ್ಷದಿಂದ ವರ್ತಿಸುವುದು.

ಇಂದಿನ ಭಾರತೀಯ ಗಂಡಸಿನ ಸ್ಥಾನ ಇದು. ಹುಟ್ಟಿದಾಗಲಿನಿಂದ ಕೆಡಸಲ್ಪಟ್ಟವನು ಅವನು ತನ್ನ ತಾಯಿ ಮತ್ತು ಸ್ತ್ರೀಬಂಧುಗಳಿಂದ ಬಹಿರಂಗವಾಗಿ ಮುದ್ದಿಸಲ್ಪಡುತ್ತಾನೆ.

ವಯಸ್ಸಾಗುತ್ತಿರುವ ತಂದೆತಾಯಂದಿರು ತಮ್ಮ ರಕ್ಷಕನೆಂದು ಕಾಣುತ್ತಾನೆ. ಆದರೂ ತನ್ನ ಹೆಂಡತಿಯ ಅಥವಾ ಮಕ್ಕಳ ಸವಾಲನ್ನು ಎದುರಿಸಲು ಅಸಮಾನನೆಂದು ತನ್ನನ್ನು ತಾನು ಭಾವಿಸಿಕೊಳ್ಳುವವನು ಇಂಥ ಭಾರತೀಯ ಗಂಡಸನ್ನು ಅನುಕಂಪಿಸಬೇಕಾಗುತ್ತದೆ ಮತ್ತು ಅವನಿಗೆ ಸಹಾಯಮಾಡಬೇಕಾಗುತ್ತದೆ.

ಈ ಪರಿಸ್ಥಿತಿಯಲ್ಲಿ ಕೂಡ ನಾವು ಏನಾದರೂ, ಆಶ್ಚರ್ಯಕರವಾಗಿ ಸಮರ್ಥನಾದ, ಮೃದುವಾದ ಮತ್ತು ಭಾವಾವೇಶದಲ್ಲಿ ಪಕ್ವವಾದ ಗಂಡಸರನ್ನು ಇನ್ನೂ ಕಾಣುತ್ತೇವೆ. ಅವರು ಹೇಗೋ ಏನೋ ಅನಾರೋಗ್ಯವಾಗಿ ಬೇಳಸಲ್ಪಟ್ಟಿದ್ದರೂ ಉಳಿದುಕೊಂಡು ಬಂದಿದ್ದಾರೆ.

'ಬಲಿಷ್ಟವಾದ ಪುರುಷ ಮಾತ್ರ ಮೃದುವಾಗಿಯೂ ಇರಲು ಸಾಧ್ಯ. ಶೌರ್ಯತಮನಾದವನೇ ಅಳಲೂ ಬಲ್ಲ'

ನಿರ್ಬಲನಾದವನ್ನು ಹೆಣ್ಣನ್ನು ಚುಡಾಯಿಸಲು ತೊಡಗುತ್ತಾನೆ. ಕಪಟ ಧೈರ್ಯವನ್ನು ಹೊಂದಿರುತ್ತಾನೆ. ಅರಕ್ಷಿತ ಮಹಿಳೆಯರ ವಿರುದ್ಧ ಹಿಂಸೆ ಮತ್ತು ಬಲಾತ್ಕಾರ ಮಾಡಲು ಇಚ್ಛಿಸುತ್ತಾನೆ. ವಧುವನ್ನು ಸುಡುವುದು ಆ ಕಾರ್ಯದಲ್ಲಿ ಅವನ ಕುಟುಂಬ ಅವನಿಗೆ ಸಹಾಯಮಾಡುತ್ತದೆ. ಈ ಮೊದಲಾದವು ಗಂಡಸಿನ ಬಗ್ಗೆ ಈ ಭಯಂಕರ ಭಾವಚಿತ್ರವನ್ನು ಪೂರ್ಣಗೊಳಿಸುತ್ತದೆ. ಭಾರತದಲ್ಲಿ ಒಂದು ಸಾವಿರ ಪ್ರಕರಣಗಳು ದಿನವೂ ವರದಿಯಾಗುತ್ತಿವೆ. 'ನನ್ನ ತಾಯಿ ನಿನ್ನ ತಾಯಿಯಂತೆಯೇ ಹೆಂಗಸು, ನೀನು ಅವಕಾಶಕೊಡು'' ಗಂಡಸರು ಎಲ್ಲ ಹೆಂಗಸರನ್ನು ಗೌರವದಿಂದ ಕಾಣುವುದನ್ನು ನಡೆಸಿಕೊಳ್ಳುವುದನ್ನು ಕಲಿಯಬೇಕು. ಪ್ರತಿಯೊಬ್ಬ ಹೆಂಗಸೂ ಯಾರೊಬ್ಬರ ತಾಯಿ ಅಥವಾ ಸೋದರಿ

## ಸಂಯುಕ್ತ ಪ್ರಯತ್ನ

ಸ್ತ್ರೀ ಪುರುಷರು ಹೆಂಗಸರನ್ನು ಕಳಂಕಿಸುವ ಶತಮಾನದ ಹಳೆಯ ಸಂಪ್ರದಾಯಗಳಿಂದ ಹೊರಬರದ ಹೊರತು ಮತ್ತು ಗಟ್ಟಿಯಾಗಿ ಯೋಚಿಸಲು ಆರಂಭಿಸುವವರೆಗೆ ಮತ್ತು ಸ್ತ್ರೀಪುರುಷರನ್ನು ಸಮಾನ ಮರ್ಯಾದೆಯುಳ್ಳವರು ಮತ್ತು ದೈಹಿಕ ಭಾವನೆಯಿಂದ ಅರ್ಹರಾದವರು ಎಂಬ ನಂಬಿಕೆಯನ್ನು ತಾಳುವವರೆ, ಹೆಂಗಸರ ಮತ್ತು ಗಂಡಸರ ಸ್ಥಾನ ನಮ್ಮದೇಶದಲ್ಲಿ ಕ್ಷೀಣಿಸುತ್ತಾ ಹೋಗುತ್ತದೆ.

ತಾನು ಮಗಳಾಗಿದ್ದಾಗ (ಅವಳ ಸೋದರನೊಡನೆ ಹೋಲಿಸಿದಾಗ) ತನ್ನನ್ನು ನೋಡಿ ಕೊಳ್ಳುತ್ತಿದ್ದ ರೀತಿಯನ್ನು ಚಿರಸ್ಥಾಯಿಯನ್ನಾಗಿ ಮಾಡುವುದಿಲ್ಲವೆಂದು ನಿರ್ಣಯಿಸಬೇಕು. ಪ್ರತಿಯೊಬ್ಬ ವ್ಯಕ್ತಿಯ ಮತ್ತು ಸಮಾಜದ ಮನಸ್ಸುಗಳಲ್ಲಿ ಹೊಸದಾದ ನೂತನ ಆರಂಭವನ್ನು ಮಾಡಲೇಬೇಕು.

ಪುರುಷತ್ವ ಗಂಡಸಿನ ಲೈಂಗಿಕ ಅವಯವಗಳನ್ನು ಹೊಂದಿರುವ ಗಂಡಸು ಮಾತ್ರವಲ್ಲ. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಸಕಾರಣವಾದ, ಸ್ವತಂತ್ರವಾದ ಸ್ವಲ್ಪಟ್ಟಿಗೆ ಆಕ್ರಮಣಕಾರಿಯಾದ ಸ್ವಭಾವವನ್ನು ಮತ್ತು ಹೀಗಿದ್ದರೂ ತನಗಿಂದ ದುರ್ಬಲರಾದವರ ವಿಷಯದಲ್ಲಿ ದೀನರಕ್ಷಾರ್ಯಯುತವಾಗಿ, ಹೊಂದಿರಬೇಕು. ವಿಯಪೂರ್ವಕವಾಗಿ, ಸಹಾಯಕನಾಗಿ ನಡೆದುಕೊಳ್ಳುವವನು ಆಗಿರಬೇಕು. ಇಂಥ ನೀಚ ಕ್ರಿಯೆಗೆ ಹೊಣೆಗಾರನಾದಂಥ ಸ್ವಭಾವದ 'ಗಂಡಸು' ಅಥವಾ 'ದುಷ್ಟತಂಡ'ವನ್ನು ಕೀಳರಿಮೆಯ ನೈಚ್ಯಭಾವದ ಅಭದ್ರತೆಯ ಮತ್ತು ಉದ್ರಿಕ್ತ ಮನಸ್ಸಿನ ಕೊಂಕು ಸ್ವಭಾವದ್ದೆಂದು ಪರಿಗಣಿಸಲಾಗುತ್ತದೆ. ನಮ್ಮ ರಾಷ್ಟ್ರದಲ್ಲಿ ಕಾನೂನನ್ನು ಜಾರಿಗೊಳಿಸುವುದು ಮತ್ತು ತಡೆಗಟ್ಟು ಕ್ರಮಗಳನ್ನು ಕೈಕೊಳ್ಳುವುದು ತುಂಬ ಅಲಕ್ಷ್ಯದಿಂದ ಕೂಡಿದೆ. ಶಿಕ್ಷಣ ತುಂಬ ಮುಖ್ಯವಾದುದು ಜಪಾನಿನ ಒಂದು ಪದ್ಯ ಹೀಗೆ ಹೇಳುತ್ತದೆ. ''ಚಿಹ್ನೆಯ ಮೇಲೆ ಹೀಗೆ ಬರೆದಿದ್ದರೂ - ಈ ಅರಳು ಮೊಗ್ಗುಗಳನ್ನು ಚಿವುಟ ಹಾಕಬೇಡ- ಅದು ಗಾಳಿಗೆ ವಿರುದ್ಧ ನಿಷ್ಪ್ರಯೋಜಕ ಅದನ್ನು ಓದಲಾಗುವುದಿಲ್ಲ ''ನಾವು ಅದಕ್ಕೆ ಸೇರಿಸಬಹುದೆ ? ''ನಿಯಮಗಳನ್ನು ''ಗೌರವಿಸಲಾರೆವು''

ದುರದೃಷ್ಟವಶಾತ್. ಹೆಂಗಸಿನ ಗೌರವದ ಸಂದೇಶವನ್ನು ಹೆಂಗಸು ಮನುಷ್ಯಳಲ್ಲ ಅವಳೆಂದು ವಸ್ತ್ರವ್ಯಾಪಾರದ ಸರಕು, ಮನುಷ್ಯನ ಅವನ ಹಿತದ ಮತ್ತು ಬರಿಯ ಸುಖದ ಸೇವೆಯಲ್ಲಿರತಕ್ಕವಳು ಎಂಬ ಸತತ ಮನೋಭಾವವನ್ನು ವಿರೋಧಿಸುತ್ತಲೇ ಬಂದಿದ್ದೇವೆ.

ಈ ಮನೋಭಾವನೆ ಅತ್ಯಂತ ಕಹಿ ಹಣ್ಣುಗಳನ್ನು ಉತ್ಪತ್ತಿ ಮಾಡುತ್ತವೆ.

ಉದಾ : ಪುರುಷ, ಸ್ತ್ರೀಯರ, ಗುಲಾಮತನ, ದುರ್ಬಲರ ತುಳಿತ, ಲಂಪಟಸಾಹಿತ್ಯ, ವ್ಯಭಿಚಾರ ಅದೂ ವಿಶೇಷವಾಗಿ ವ್ಯವಸ್ಥಿತರೂಪದಲ್ಲಿ ತಿರಸ್ಕಾರ ಮತ್ತು ಅಷ್ಟೇ ಅಲ್ಲ ಶಿಕ್ಷಣ ಉದ್ಯೋಗ ಮಜೂರಿ ಇತ್ಯಾದಿ ಕ್ಷೇತ್ರಗಳಲ್ಲಿ ಹಾಲಿ ಇರುವ ವಿವಿಧ ತಾರತಮ್ಯಗಳ ಹಲವಾರು ರೂಪಗಳನ್ನು ಖಂಡಿಸುತ್ತದೆ.

ಇಷ್ಟೇ ಅಲ್ಲದೆ. ವಿವೇಚನೆಯನ್ನು ಕೀಳಮಟ್ಟಕ್ಕೆ ತರುವ ಅನೇಕ ನಮೂನೆಗಳು ಇಂದೂ ನಮ್ಮ ಸಮಾಜದ ಹೆಚ್ಚಿನ ಭಾಗದಲ್ಲಿ ಗಟ್ಟಿಯಾಗಿ ನಿಂತೇ ಇದೆ. ಅದು ವಿಶೇಷವಾಗಿ ಒಂದು ವಿಶಿಷ್ಟ ವರ್ಗದ ಮಹಿಳೆಯರಿಗೆ, ಉದಾಹರಣೆಗೆ, ಮಕ್ಕಳಿಲ್ಲದ ಹೆಂಡತಿಯರು, ವಿಧವೆಯರು ಬಿಟ್ಟು ಅಥವಾ ವಿವಾಹ ವಿಚ್ಛೇದನಗೊಂಡ ಹೆಂಗಸರು ಮತ್ತು ಮದುವೆಯಾಗದ ತಾಯಂದಿರು ಇವರನ್ನು ಗಂಭೀರವಾಗಿ ಹಾನಿಗೊಳಗ ಮಾಡುವುದೇ ಅಲ್ಲದೇ ಅವರ ಮೇಲೆ ಪರಿಣಾಮವನ್ನು ಬೀರುತ್ತದೆ.

## 12. ಮಹಿಳೆಯ ಘನತೆಯ ಮಾನಅಪರಾಧ

## ವಿರುದ್ಧದ ಅಪರಾಧಗಳು

ಭಾರತದಲ್ಲಿ ಮಾನಭಂಗ ಸಮಸ್ಯೆ ಒಂದು ಪ್ರಧಾನ ಸಮಸ್ಯೆಯಾಗಿಯೇ ಮುಂದುವರಿಯುತ್ತಿದೆ. ಈ ಭಯಂಕರ,ಹಿಂಸಾತ್ಮಕ ಮತ್ತು ನೀತಿಭ್ರಷ್ಟತೆಯ ಕ್ರಿಯೆಯಲ್ಲಿ ಬಲಾತ್ಕಾರದಿಂದ ಮಾನಾಪಹಾರ ಮಾಡಿದ ಬಗ್ಗೆ ಸಲ್ಪವಾಗಿಯೂ ಯಾವ ಕ್ರಮವನ್ನು ಕೈಗೊಳ್ಳದೆ ಬಿಟ್ಟುಬಿಡುವುದರಿಂದ ನಮ್ಮ ದೇಶದಲ್ಲಿ ಯುವ ಹುಡುಗಿಯರು, ಮುದುಕಿಯರೂ ಕೂಡ ಅನೇಕವೇಳೆ ಉಲ್ಲಂಘಿಸಲ್ಪಟ್ಟಿದ್ದಾರೆ. ಹೆಂಗಸರು ಹೆಚ್ಚಾಗಿ ಅಗತ್ಯವಾಗಿ ಬೇಕಾದ ಸಲಕರಣೆಗಳನ್ನು ಹೊಂದದೇ ಇರುವುದರಿಂದ ಪುರುಷರು ಇಂಥ ಬಲಾತ್ಕಾರದ ಮಾನಭಂಗಗಳನ್ನು ಮತ್ತು ಬಲಿಘಶುವಾದ ಸ್ತ್ರೀಗೆ ಅಂಟಿದ ಸಾಮಾಜಿಕ ಕಳಂಕದ ಭಯದಿಂದ ಮೌನವಾಗಿರುವುದನ್ನು ತಡೆಯಲು ಸಂಘಟಿಯುತರಾಗಬೇಕು. ಬಲಾತ್ಕರ ಸಂಭೋಗಕ್ಕೆ ಸಂಬಂಧಿಸಿದ ಕಾನೂನು ಸದ್ಯದಲ್ಲಿ ತುಂಬ ಅತೃಪ್ತಿಕರವಾಗಿದೆ.

ಬಲಾತ್ಕಾರ ಸಂಭೋಗ ಹೆಂಗಸಿನ ವಿರುದ್ಧ ಗಂಡಸಿನ ಅಂತಿಮ ಹಿಂಸೆಯಾಗಿ ಸ್ಥಾಪನೆಯಾಗಿದೆ. ಅಮಾನವೀಯರಾದ ಗಂಡಸರಿಗೆ ನಮ್ಮ ಕಾನೂನು ನಿಷ್ಪ್ರಯೋಜಕವಾಗಿದೆ.

## ಗಂಡಸಿನ ಪುನರುತ್ಪಾದಕ ವ್ಯವಸ್ಥೆ

ಗಂಡಸಿನ ಮುಖ್ಯ ಲೈಂಗಿಕ ಅವಯವಗಳೆಂದರೆ ಒಂದು ಜೊತೆ 'ಗಟ್ಟಿಹೊದಿಕೆ'ಗಳು ಅಥವಾ ವೃಷಣಗಳು ಮತ್ತು ಶಿಶ್ನ. ಮೇಲುಹೊದಿಕೆಗಳು ಪುರುಷನ ಲೈಂಗಿಕ ಗ್ರಂಥಿಗಳು. ಹುಡುಗನ ವೃಷಣಗಳು 'ಟಿಸ್ಟ್ರೈರಾನ್' ಎಂಬ ಚೋದಕದ್ರವವನ್ನು ಉತ್ಪತ್ತಿ ಮಾಡುತ್ತವೆ. ಅದು ಅವನ ಬೆಳವಣಿಗೆಯ ಮೇಲೆ ಮತ್ತು ಲೈಂಗಿಕ ವೃದ್ಧಿಯ ಮೇಲ ಪರಿಣಾಮ ಬೀರುತ್ತದೆ. ಈ ವೃಷಣಗಳು ವೀರ್ಯಾಣುವನ್ನು ಅಥವಾ ಪುರುಷನ ಲೈಂಗಿಕ ಕೋಶಗಳನ್ನು ಹುಡುಗ ವಯಸ್ಸಿಗೆ ಬಂದಾಗಲಿನಿಂದ ಕಾಲಕಾಲಕ್ಕೆ ಉತ್ಪತ್ತಿ ಮಾಡುತ್ತಾನೇ ಹೋಗುತ್ತದೆ.

ಪುರುಷನ ಲೈಂಗಿಕ ಅವಯವಗಳು ವೀರ್ಯಾಣು ಜೀವಕೋಶಗಳ ವೃದ್ಧಿಗೆ, ಸಂಗ್ರಹಕ್ಕೆ ಮತ್ತು ವಿಸರ್ಜನೆಗೆ ಸೂಕ್ಷ್ಮವಾಗಿ ಹೊಂದಾಣಿಸಿಕೊಂಡ ಅವಕಾಶಗಳನ್ನು ಸಂಕೀರ್ಣಗೊಳಿಸುತ್ತವೆ. ಎರಡು ವೃಷಣಗಳು ಎರಡು ತೊಡೆಗಳ ಮಧ್ಯೆ ಚರ್ಮದ ಜೋಬಿನಲ್ಲಿ ಅಥವಾ ಚೀಲದಲ್ಲಿ ತೂಗು ಹಾಕಲ್ಪಟ್ಟಿವೆ. ಈ ಚೀಲವನ್ನು 'ವೃಷಣಕೋಶ' ಎಂದು ಕರೆಯುತ್ತಾರೆ. ಪ್ರತಿಯೊಂದು ವೃಷಣವೂ ಒಂದು ಅಂಗುಲ ದಪ್ಪವಿದ್ದು 1 3 4 ಅಂಗುಲ ದಪ್ಪವಿರುತ್ತದೆ. ಈ ವೃಷಣಗಳು ಸಣ್ಣ ಕೊಳವೆಗಳಂಥ ನೂರಾರು ನಾಜೂಕಾದ ದಾರಗಳಿಂದ ತುಂಬಿಕೊಂಡಿವೆ, ಲಭ್ಯವಿರುವ ಸಣ್ಣ ಜಾಗದಲ್ಲಿ ಬಿಗಿಯಾಗಿ ಸುತ್ತಿಕೊಂಡಿವೆ. ವೀರ್ಯಾಣುಕೋಶಗಳು ಹುಟ್ಟುವುದು ಇಲ್ಲಿಯೇ. ವೀರ್ಯಾಣುಜೀವಕೋಶ (Spermatogy) ಅತಿ ಸೂಕ್ಷ್ಮವಾದುವು ದೇಹದಿಂದ ವಿಸರ್ಜಿತವಾದ ಒಂದು ಚಮಚ

ರೇತಸ್ಸಿನಲ್ಲಿ 400 ರಿಂದ 500 ಕೋಟಿ ವೀರ್ಯಾಣು ಕೋಶಗಳು ತುಂಬಿರಬಹುದು. ಸೂಕ್ಷ್ಮವಾದ ಸೂಕ್ಷ್ಮದರ್ಶನದಲ್ಲಿ ನೋಡಿದಾಗ ಒಂದು ಅಣುಜೀವಕೋಶ ದೊಡ್ಡದಾದ ತಲೆಯೊಂದನ್ನು ದೇಹದ ಒಂದು ಭಾಗದಲ್ಲಿ ಉಳ್ಳದ್ದಾಗಿದ್ದು, ಚುರುಕಾದ ಬಾಲವನ್ನು ಇನ್ನೊಂದು ತುದಿಯಲ್ಲಿ ಹೊಂದಿರುತ್ತದೆ. ಅದು ವೀರ್ಯದ್ರವದಲ್ಲಿ ಈಜಾಡಲು ಸಹಾಯ ಮಾಡುತ್ತದೆ.

ಶಿಶ್ನ ಗಂಡಸಿನ ಲೈಂಗಿಕ ಅಂಗ. ಅದು ವೃಷಣದ ಚೀಲದ ಮುಂದೆ ನೇತಾಡುತ್ತಿರುತ್ತದೆ. ಅದು ಹೆಬ್ಬೆಟ್ಟಿನ ಆಕಾರದಲ್ಲಿರುವುದಲ್ಲದೆ ಅದಕ್ಕಿಂತ ಸಾಮಾನ್ಯವಾಗಿ ದೊಡ್ಡದಾಗಿರುತ್ತದೆ. ಆಕಾರದಲ್ಲಿ ಭಿನ್ನ ಭಿನ್ನವಾಗಿರುತ್ತದೆ, ಆದರೆ ಅದರ ಆಕಾರ ಲೈಂಗಿಕ ಪುರುಷತ್ವಕ್ಕೂ ಅಥವಾ ಫಲವಂತಿಕೆಗೂ ಸಂಬಂಧವಿಲ್ಲ. ಶಿಶ್ನ ಮೂತ್ರವಿಸರ್ಜನ ನಾಳ (ಯಂತ್ರ) ಎಂಬ ಹೆಸರಿನ ಒಂದು ಕೊಳವೆ ಹಾದು ಹೋಗುವ ರಕ್ತಸ್ಥಳಗಳಿಂದ ವಿಶೇಷವಾಗಿ ತುಂಬಿಕೊಂಡಿರುತ್ತದೆ.

ಮೂತ್ರ ವಿಸರ್ಜನ ನಾಳ ಶಿಶ್ನದ ಉದ್ದಕ್ಕೂ ಪೂರ್ಣವಾಗಿ ಇರುತ್ತದೆ. ಮತ್ತು ವೀರ್ಯಾಣು ಕೋಶಗಳು ದೇಹವನ್ನು ಬಿಟ್ಟು ಹೋಗುವುದಕ್ಕೆ ಒಂದು ಕಾಲುವೆಯನ್ನು ಒದಗಿಸುತ್ತದೆ. ವೀರ್ಯ ಮತ್ತು ಮೂತ್ರ ಅದರ ಮೂಲಕ ಏಕ ಕಾಲದಲ್ಲಿ ಹಾದು ಹೋಗುವುದಿಲ್ಲ, ವೀರ್ಯಾಣು ಕೋಶಗಳು ಮೂತ್ರ ವಿಸರ್ಜನ ನಾಳವನ್ನು ಸಂಕೀರ್ಣ ಪ್ರಯಾಣದ ನಂತರ ತಲುಪುತ್ತದೆ, ಸುತ್ತಿಕೊಂಡ ಚಿಕ್ಕ ಕೊಳವೆಗಳು ಒಂದು ವೃಷಣದಲ್ಲಿ ದೊಡ್ಡ ಕೊಳವೆಯಲ್ಲಿ (Vasdeferens) ತೆರೆದಿರುತ್ತದೆ. ವೃಷಣಕೋಶ (Scorotu) ದಲ್ಲಿ ಅದರ ಮೂಲಕ ಜೀವಾಣುಕೋಶಗಳು ವೃಷಣಗಳನ್ನು ತೊರೆಯುತ್ತವೆ. ಪ್ರತಿ ವೃಷಣದ ಹಿಂಭಾಗದಲ್ಲಿ ವೀರ್ಯಾಣು ಕೋಶಗಳ ಹಂಗಾಮಿ ಸಂಗ್ರಹಣಕ್ಕೆ ಅವಕಾಶ ಇರುತ್ತದೆ. ಈ ಅವಯವದ ಹೆಸರು 'ಎಪಿಡಿಡಿಮಿಸ್' ಮತ್ತು ಪ್ರತಿಯೊಂದು ಎಪಿಡಿಡಿಮಿಸ್‌ನ ಕೆಳಗಡೆಯ ಕೊನೆಯು ಒಂದು ಕೊಳವೆಗೆ ಸೇರಿ ಕೊಂಡಿರುತ್ತದೆ. ಆ ಕೊಳವೆ ವೀರ್ಯಕೊಳವೆ (duct) ಅಥವಾ ದೊಡ್ಡ ಕೊಳವೆಗೆ (Vasoleferens) ಸೇರಿರುತ್ತದೆ. ಪ್ರತಿಯೊಂದು ಕೊಳವೆಯೂ ಊರುಸಂಧಿಯಲ್ಲಿ ಮೇಲೇಳುತ್ತದೆ ಮತ್ತು ಕೊನೆಯದಾಗಿ ಯಂತ್ರ ಮೂತ್ರ ವಿರ್ಜನಾಳದಲ್ಲಿ ತೆರೆಯುತ್ತದೆ.

ವೀರ್ಯ ವೀರ್ಯಾಣು ಜೀವಕೋಶಗಳನ್ನು ಒಳಗೊಂಡಿರುತ್ತದೆ. ಅದು ವೃಷಾಣುವಿನಿಂದ ಮತ್ತು ಮೂತ್ರ ಕೋಶಗ್ರಂಥಿಯಿಂದ ಹರಿದು ಬರುವ ದ್ರವವನ್ನು ಮುಂದೊಗಲು ಶಿಶ್ನವನ್ನು ಮುಚ್ಚಿಕೊಂಡಿರುವ ಅಸ್ಥಿಕವಾದ ಚರ್ಮ. ಅದನ್ನು ಕೆಲವೊಮ್ಮೆ ಶಸ್ತ್ರ ಚಿಕಿತ್ಸಕರನ್ನು ಚಿಕಿತ್ಸೆಯಿಂದ ತೆಗೆದುಬಿಡುತ್ತಾನೆ. ಅದಕ್ಕೆ 'ಪರಿಕರ್ತನ' ಅಥವಾ 'ಸುನತಿ' ಎಂದು ಹೆಸರು. ಇದೊಂದು ಆರೋಗ್ಯಕರ ಕಾರ್ಯವಿಧಾನ. ಮತ್ತು ಎಲ್ಲ ಗಂಡಸರು ಮಗುವಾಗಿದ್ದಾಗ ಈ ಚಿಕಿತ್ಸೆಗೆ ಒಳಗಾಗುವುದು ಒಳ್ಳೆಯದು. ಅದು ಶಿಶ್ನಮಲವನ್ನು (Smegm) ಅಥವಾ ಅದರ ವಿಸರ್ಜನೆ ಸಂಗ್ರಹವಾಗಿ ಬಿಡಲು ತಡೆಯುತ್ತದೆ.

ಮುಂದೊಗಲನ್ನು ತೆಗೆಸಿಕೊಂಡ ಗಂಡಸರು ಶಿಶ್ನದ ಕ್ಯಾನ್ಸರ್ ರೋಗಕ್ಕೆ ಸುಲಭವಾಗಿ ಬಲಿಯಾಗುವುದಿಲ್ಲ. ಅವರ ಪತ್ನಿಯರು ಕೂಡ ಈ ಅಂಟುರೋಗಗಳ ದಾಳಿಗೆ ಕಡಿಮೆ ಪ್ರಮಾಣದಲ್ಲಿ ಒಳಗಾಗುತ್ತಾರೆ. ಏಕೆಂದರೆ ಶಿಶ್ನಮಲ (ವಿಸರ್ಜನೆ) ಚರ್ಮದ ಪದರಗಳಲ್ಲಿ ಸಂಗ್ರಹವಾಗುವುದು ಸಾಧ್ಯವಾಗುವುದಿಲ್ಲವಾದ್ದರಿಂದ.

ಶಿಶ್ನ ಸಾಮಾನ್ಯವಾಗಿ ಮೃದುವಾಗಿ, ಬಿರುಸಾಗಿದ್ದರೂ ಅದು ಹೆಚ್ಚಾಗಿ ನರಗಳಿಂದ ಮತ್ತು ರಕ್ತನಾಳಗಳಿಂದ ಸರಬರಾಜಾಗಿರುತ್ತದೆ. ಲೈಂಗೀಕ ಉದ್ರೇಕ ಸಂಭವಿಸಿದಾಗ ರಕ್ತ ಸ್ಥಳಗಳನ್ನು ತುಂಬಿಕೊಳ್ಳುತ್ತದೆ ಮತ್ತು ಶಿಶ್ನ ಗಟ್ಟಿಯಾಗಿ, ಬೇಗಿ ದೊಡ್ಡದಾಗಿ ನೇರವಾಗುತ್ತದೆ. ಪುರುಷನಲ್ಲಿ ಅಥವಾ ಲೈಂಗಿಕ ಅವಯನ ಪಕ್ವವಾದ ಹುಡುಗನಲ್ಲಿ ಉದ್ದೀಪನ ಮುಂದುವರಿದರೆ ಸಂಗ್ರಹವಾಗಿರುವ ಅಥವಾ ನಿಗರಿದ ಶಿಶ್ನದ ವಿಸರ್ಜಿತವಾದ ಪುರುಷ ಬೀಜ ಅಥವಾ ವೀರ್ಯಾಣುಗಳು ಶಿಶ್ನದಿಂದ ಹೊರ ಚೆಲ್ಲುತ್ತವೆ. ಇದನ್ನೆ ವೀರ್ಯಸ್ಕಲನ ಎನ್ನುತ್ತೇವೆ. ಪುನಃ ಶಿಶ್ನ ಬಿಗುವಿಲ್ಲದುದಾಗುತ್ತದೆ.

ಒಬ್ಬ ಪ್ರಖ್ಯಾತ ನಟನನ್ನು ದೂರದರ್ಶನ ಕಾರ್ಯಕ್ರಮದಲ್ಲಿ ಪ್ರಶ್ನಿಸಲಾಯಿತು. "ಒಬ್ಬನನ್ನು ಅತಿ ಶ್ರೇಷ್ಠ ಪ್ರೇಮಿಯಾಗಿ ಮಾಡುವುದು ಹೇಗೆ?" ಎಂದು ಅವನು ಹೇಳಿದ. "ಪ್ರಖ್ಯಾತ ಪ್ರೇಮಿ ಎಂದರೆ ಯಾವನು ಒಬ್ಬ ಹೆಂಗಸನ್ನು ಜೀವನಾದ್ಯಂತ ತೃಪ್ತಿಪಡಿಸುತ್ತಾನೊ ಮತ್ತು ಯಾವನು ಒಬ್ಬ ಹೆಂಗಸಿನಿಂದ ಜೀವನಾದ್ಯಂತ ತೃಪ್ತನಾಗುತ್ತಾನೆ ಅವನು" ಹೆಂಗಸಿನಿಂದ ಹೆಂಗಸಿಗೆ ಹೋಗುವವವನು ಅತಿ ಶ್ರೇಷ್ಠ ಪ್ರೇಮಿ ಅಲ್ಲ. ಅದನ್ನು ನಾಯಿಯೂ ಮಾಡಬಲ್ಲದು.

ಹೆಂಗಸನ್ನು ತೃಪ್ತಿಪಡಿಸುವುದೇ ಪ್ರೇಮಿಯ ಚೊಕ್ಕ ಮುದ್ರೆ. ಮತ್ತು ಒಬ್ಬನ ಪುರುಷತ್ವವನ್ನು ಆಳವಾಗಿ ಸಮರ್ಥಿಸಿಕೊಳ್ಳವುದು. ಇದು ಶಾರೀರಕ ತೃಪ್ತಿಗೆ ಎಳೆದೊಯ್ಯುವ ಭಾವಾವೇಶಗಳ ತೃಪ್ತಿ. ಎರಡನೇಯದನ್ನು ನಿಜವಾದ ಪ್ರೇಮ ಮತ್ತು ವಾತ್ಸಲ್ಯಗಳಿಂದ ಮಾತ್ರ ಸಾಧಿಸಬಹುದು.

## ವರ್ಗ ಚಟುವಟಿಕೆ

1. ಚರ್ಚಿಸಿ

   1. 'ಲಿಂಗ'ವನ್ನು ದೇವರು ಸೃಜಿಸಿದ. ಅದು ಪವಿತ್ರವಾದದ್ದು 'ಸಮಾಜ' ಲಿಂಗಕ್ಕೆ ಯುಕ್ತ ಗೌರವವನ್ನು ಕೊಡುತ್ತದೆಯೆ ?

   2. ಇವುಗಳ ದುಷ್ಟ ಪರಿಣಾಮಗಳು ಯಾವುವು ?

      ಅ) ಲಂಪಟ ಸಾಹಿತ್ಯ

      ಆ) ಅಶ್ಲೀಲ ಭಾಷೆ

ಇ) ಚಲಚಿತ್ರಗಳು

3. ಭಾರತದಲ್ಲಿ ವಿದ್ಯಾರ್ಥಿಗೆ ಅಥವಾ ಯುಕವನಿಗೆ ಹುಡುಗ ಹುಡುಗಿಯರ ಸಂಬಂಧದ ಗುಣಮಟ್ಟ ಯಾವ ರೀತಿಯದಾಗಿರಬೇಕು.

4. ಪುರುಷತ್ವ ಮತ್ತು ಸ್ತ್ರೀತ್ವ ಎನ್ನುವುದು ಏನು? ಭೇದಗಳನ್ನು ಚರ್ಚಿಸಿ.

## 2. ಚಲಚಿತ್ರಗಳು ಮತ್ತು ಚಿತ್ರಫಲಕಗಳು

ಚಲಚಿತ್ರ - ಬಾಳಿನ ಆರಂಭ

ಮಾನವ ಸಂತಾನೋತ್ಪತ್ತೀಯ ಫಲಕಗಳು

ನಾನು, ನನ್ನ ಮತ್ತು ನನ್ನ ವಿರುದ್ಧಲಿಂಗದ ಶರೀರವನ್ನು ಎಷ್ಟರಮಟ್ಟಿಗೆ ಪೋಷಿಸಿ ಕೊಳ್ಳಬೇಕು ಮತ್ತು ಗೌರವಿಸಬೇಕು.



ಅಧ್ಯಾಯ ೯

# ಲೈಂಗಿಕ ಪ್ರವೃತ್ತಿಯ ತಿರುವು

**ವಾಖ್ಯಾನ :**

ಲೈಂಗಿಕ ವಿಷಯದ ಬಗ್ಗೆ ತಪ್ಪಾಗಿ ಯೋಚಿಸುವುದು, ಅದರ ಅಪಸರಣ ಅಥವಾ ದುರ್ಬಳಕೆಗಳು, ಜನನೇಂದ್ರಿಯಗಳ ಸಂತೃಪ್ತಿಯನ್ನು ಸಾಧಿಸುವ ಮಾರ್ಗಗಳೆಂದು ಕೆಲವು ಜನ ತಿಳಿದಿದ್ದಾರೆ. ಎಂದರೆ ಅವರು ಗಂಡುಹೆಣ್ಣಿನ ಮಧ್ಯದ ಸಾಧಾರಣ ಲೈಂಗಿಕ ಸಂಭೋಗ ಕ್ರಿಯೆಯಿಂದ ಅಥವಾ ಸಾಧಾರಣ, ಭಿನ್ನರೀತಿಯ ಸ್ವಾಭಾವದಿಂದ ತಪ್ಪಾಗಿ ವರ್ತಿಸುತ್ತಾರೆ.

ವ್ಯಕ್ತಿತ್ವದ ಅವ್ಯವಸ್ಥೆ ಅಥವಾ ಭಾವಾವೇಶದಲ್ಲಿ ಅಪಕ್ವತೆ ಇದ್ದಾಗ ಸಾಮಾನ್ಯವಾಗಿ ಲೈಂಗಿಕ ಅಪಮಾರ್ಗಗಳು ಅವರಿಗೆ ಕಂಡುಬರುತ್ತವೆ ಮತ್ತು ಸರಿಯಾಗಿ ಅರ್ಥಮಾಡಿಕೊಂಡಿಲ್ಲದ ಅಥವಾ ಸರಿಮಾರ್ಗದಲ್ಲಿ ನಡೆಯದ ಶಕ್ತಲೈಂಗಿಕ ಚಾಲನೆ ಅಂಥವರಲ್ಲಿ ಕಂಡು ಬರುತ್ತದೆ.

ಇಂಥ ಒಂದು ಭಾವ ಬಹುಕಾಲ ನೆಲೆನಿಂತ ಅಸುಖಿ ತಂದೆತಾಯಿ ಮಕ್ಕಳ ಸಂಬಂಧದಲ್ಲಿ ಸಾವೂನ್ಯವಾಗಿ ಜೊತೆಗೂಡಿಬಿಟ್ಟಿದೆ. ಇಂಥ ಅನೇಕ ಲೈಂಗಿಕ ಅಪಾಮಾರ್ಗಗಳು ಕಂಡುಬರುತ್ತವೆ. ಅವುಗಳಲ್ಲಿ ಕೆಲವುದರ ವಿವರಣೆಯನ್ನು ಇಲ್ಲಿ ಕೊಡಲು ಪ್ರಯತ್ನಸಿದೆ.

**ಹಿಂಸಾಮೈಥುನ (Sadism)**

ಇದೊಂದು ವಿಕೃತಲೈಂಗಿಕ ಕ್ರಿಯೆ. ಈ ಮೂಲಕ ವ್ಯಕ್ತಿ ತನ್ನ ವಿರೋಧಿ ಲಿಂಗಕ್ಕೆ ಸಂಬಂಧಿಸಿದಂತೆ ತನ್ನ ಪಾಲುಗಾರ/ತಿ ಯೊಡನೆ ಸಂಭೋಗಿಸುವಾಗ ಶಾರೀರಿಕ ಅಥವಾ ಮಾನಸಿಕ ಹಿಂಸೆಯನ್ನಿತ್ತು ಲೈಂಗಿಕ ತೃಪ್ತಿಯನ್ನು ಅಥವಾ ಕಡೆಯ ಪಕ್ಷ ಲೈಂಗಿಕ ಭೋಗ ಸುಖವನ್ನು ಹೆಚ್ಚಿಸಿಕೊಳ್ಳುತ್ತಾನೆ/ಳೆ. ಈ ಎದುರು ಬೀಳುವ, ಕೆಲವೊಮ್ಮೆ ನೋವುಂಟುಮಾಡುವ ಅಥವಾ ಘಾತಕ ಘಾಯುಂಟು ಮಾಡುವ ಸಂಬಂಧಗಳು ಲೈಂಗಿಕ ತೃಪ್ತಿಯ ಮೂಲದಿಂದ ಉಂಟಾದ ಹಿಂಸೆಯನ್ನು ಬಿಟ್ಟು ಬೇರೆ ಯಾವುದೇ ಉದ್ದೇಶವನ್ನು ಹೊಂದಿರುವದಿಲ್ಲ.

## ನೋವಿನಿಂದ ಸುಖ

ಇದು ಹಿಂಸಾಮೈಥುನದ ಕನ್ನಡಿಯ ಪ್ರತಿಬಿಂಬ ತಲ್ಲಣಗೊಂಡ ವ್ಯಕ್ತಿ ಲೈಂಗಿಕ ಸುಖವನ್ನು ಅಥವಾ ತೃಪ್ತಿಯನ್ನು ತನ್ನ ಲೈಂಗಿಕ ಪಾಲುದಾರನಿಂದ ನೋವುಂಟುಮಾಡಿಸಿ ಕೊಳ್ಳುವುದರಿಂದ ಶಾರೀರಿಕವಾಗಿಯಾಗಲಿ ಮಾನಸಿಕವಾಗಿಯಾಗಲಿ ಪಡೆಯಬಹುದು.

## ಪ್ರದರ್ಶನತ್ವ

ಇದೊಂದು ಅಪಗತಿ. ಈ ಮಾರ್ಗದಿಂದ ಲೈಂಗಿಕ ತೃಪ್ತಿಯನ್ನು ಬೇಹುಷಾರಿನ ಲೈಂಗಿಕ ಬಲಿಗೆ ಜನನಾಂಗಗಳನ್ನು ಪ್ರದರ್ಶಿಸುವುದರಿಂದ ಹೊಂದುವುದು. ಇದನ್ನು ನಾವು ಸಾಮಾನ್ಯವಾಗಿ ಹೆಣ್ಣು ಶಾಲೆಗಳಲ್ಲಿನ ಅಥವಾ ಗುಂಪು ಕೂಡಿದ ಗಂಡಸರು ಈ ರೀತಿ ನಡೆದುಕೊಳ್ಳುವುದನ್ನು ಕಾಣುತ್ತೇವೆ.

## ದರ್ಶನಸುರುತ

ಇವು ಒಂದು ರೀತಿಯ ಗೊಂದಲಗಳು. ಈ ಮೂಲಕ ಲೈಂಗಿಕ ಕ್ರಿಯೆಗಳನ್ನು ಮತ್ತು ಕಾಮಸಂಬಂಧಿ ವಿಷಯಗಳನ್ನು ನೋಡಿ ಸುಖಪಡುವ ದರ್ಶಕನು ಲೈಂಗಿಕ ಅಸಾಧರಣ ಆನಂದವನ್ನು ತೃಪ್ತಿಯನ್ನು ಪಡೆಯುತ್ತಾನೆ. ಇಂಥ ಸಂದಂರ್ಭದಲ್ಲಿ ಈ ದರ್ಶಕನು ಹೀಗೆ ವರ್ತಿಸುವುದು ಸಾಮಾನ್ಯವಾಗಿ ಕದ್ದು ನೋಡುವುದೇ ಆಗಿರುತ್ತದೆ. ಇತರರ ಲೈಂಗಿಕ ಕ್ರಿಯೆಯನ್ನು ನೋಡುವ ತನ್ನ ಪ್ರಯತ್ನಗಳಲ್ಲಿ ಅವನು ಅನೇ ವೇಳೆ ಕಿಟಕಿಯ ಮೂಲಕವಾಗಲಿ ಅಥವಾ ಸ್ನಾನಗೃಹದ, ವಸ್ತ್ರಗೃಹದ ಅಥವಾ ಇತರ ಸ್ತ್ರೀ ಏಕಾಂಗಸ್ಥಳದ ಬಾಗಿಲುಗಳಲ್ಲಿ ಕಂಡಿಕೆರೆಯುವಷ್ಟರ ಮಟ್ಟಿಗೆ ಹೋಗಿ ನೋಡುತ್ತಾಗಿ ಅವನನ್ನು ಪೀಪಿಂಗ್ ಟಾಮ ಕಾಮಕಂಡಿಕಳ್ಳ ಎಂದು ಹೇಳಬಹುದು.

## ಕಾಮವೇಷ್ಟಿತನ (Transvastrsm)

ಈ ಮಾತು ವಿರುದ್ಧ ಲಿಂಗಗಳ ವೇಷಗಳನ್ನು ಧರಿಸಿ ವಸ್ತ್ರಭೂಷಣಲ್ಲಿಗಳ ಧಾರಣೆಯಿಂದ ಲೈಂಗಿಕ ಉದ್ದೀಪನೆಗೆ ಅಥವಾ ತೃಪ್ತಿಗೆ ಸಂಬಂಧಿಸಿದಂತೆ ಬರುತ್ತದೆ. ಕೆಲವು ಪ್ರಕರಣಗಳಲ್ಲಿ ಆ ವ್ಯಕ್ತಿ ವಾಸ್ತವಿಕವಾಗಿ ತನ್ನ ಜನನಾಂಗವನ್ನು ವಿರುದ್ಧಲಿಂಗವಾಗಿ ಪರಿವರ್ತಿಸಿಕೊಳ್ಳಲು ಶಸ್ತ್ರ ಚಿಕಿತ್ಸೆಯನ್ನು ಬಯಸಿದರೂ ಆಶ್ಚರ್ಯವಿಲ್ಲ. ಇಂಥ ಜನ ಹೇಗಾದರೂ ಸಾಮಾನ್ಯವಾಗಿ, ಆಳವಾಗಿ ನೆಲೆನಿಂತ ಮತ್ತು ಗಂಭೀರವಾದ ಮನೋರೋಗದ ಸಮಸ್ಯೆಗಳನ್ನು ಹೊಂದಿರುತ್ತಾರೆ, ಮತ್ತು ಸ್ಪಷ್ಟವಾಗಿ ಹೇಳಬೇಕೆಂದರೆ ಇವರು ಲಿಂಗಪರಿವರ್ತಕರು. ಶಸ್ತ್ರಚಿಕಿತ್ಸೆ ದೀರ್ಘಕಾಲದ ಪರಿಹಾರವನ್ನು ಸಾಧಾರಣವಾಗಿ ನೀಡುವುದಿಲ್ಲ.

## ವಸ್ತು ಪೂಜೆ

ಒಬ್ಬ ವ್ಯಕ್ತಿಯ ಲೈಂಗಿಕ ಪ್ರೇರಣೆಗಳು ಪ್ರೇಮದ ಮೂಲವಸ್ತುವಿಗೆ ಬದಲಾಗಿ ಯಾವುದೋ ಒಂದು ಲೈಂಗಿಕ ಬದಲಿಯಲ್ಲಿ ಅಂಟಿಕೊಂಡಿರುತ್ತದೆ. ಆ ವಿಶಿಷ್ಟ ಅಂಧಶ್ರದ್ಧೆಯ ವಸ್ತುವು ಹೇಗೊ ಎನೋ ಲೈಂಗಿಕ ಕೆರಳಿಕೆಗೆ ಹೊಂದಿಕೊಂಡುಬಿಟ್ಟಿರುತ್ತದೆ. ಅಥವಾ ಈ ಅಂಧಶ್ರದ್ಧ ತನ್ನ ತಾಯಿಯಿಂದ ಒಮ್ಮೆ ಪ್ರೀತಿಯಿಂದ ಮತ್ತು ಸಮ್ಮತಿಯಿಂದ ಸ್ವೀಕರಿಸಿದ ವಸ್ತುವಿನಿಂದ ಬಂದು ಬಿಟ್ಟಿರುತ್ತದೆ.

## ಮುಷ್ಟಿ ಮೈಥುನ

ಮುಷ್ಟಿಮೈಥುನ ಲೈಂಗಿಕ ಆನಂದವನ್ನು ಅಥವಾ ವೀರ್ಯವಿಸರ್ಜನೆಯನ್ನು ತನ್ನ ಜನನಾಂಗದ ಸ್ವಂತ ಪ್ರಚೋದನೆಯಿಂದಲೇ ಉಂಟಾಗುವಂತೆ ಮಾಡುವುದು. ತರುಣಗಂಡಸಿಗೆ ಮುಷ್ಟಿ ಮೈಥುನ ಒಂದು ಸಾಮಾನ್ಯ ಲೈಂಗಿಕ ಮಾರ್ಗ. ಮದುವೈ ಆಗುವವರೆಗೆ, ಕೆಲವು ವ್ಯಾಸಂಗಗಳಿಂದ ಕಂಡು ಬಂದಿರುವ ಅಂಶವೆಂದರೆ, ಸುಮಾರು ಶೇಕಡಾ ೬೦ ಜನಕ್ಕೂ ಹೆಚ್ಚು ಪುರುಷರು ಅರಿವಿದ್ದೇ ಅಥವಾ ಅರಿವಿಲ್ಲದೆಯೋ ತಮ್ಮ ೧೬ನೆಯ ವಯಸ್ಸನ್ನು ತಲುಪುವದಕ್ಕೆ ಮೊದಲು ಮುಷ್ಟಿ ಮೈಥುನವನ್ನು ಅನುಭವಿಸಿರುತ್ತಾರೆ, ಎಂಬುದು. ಇದರಲ್ಲಿ ಅರ್ಧದಷ್ಟು ಸಂಖ್ಯೆಯಲ್ಲಿ ತರುಣಿಯರು ಕೂಡ ಮುಷ್ಟಿ ಮೈಥುನವನ್ನು ಅನುಭವಿಸಿರುತ್ತಾರೆ ಎಂದು ಅಂದಾಜುಮಾಡಲಾಗಿದೆ. ಆದರೆ ಈ ಅಭ್ಯಾಸದ ಪುನಾರಾವರ್ತನೆ ಹೆಣ್ಣು ಹುಡುಗಿಯರಲ್ಲಿ ಎಷ್ಟೊ ಕಡಿಮೆ.

ಮುಷ್ಟಿ ಮೈಥುನ ಉಂಟುಮಾಡುವ ಮಾನಸಿಕ ಗೊಂದಲದ ಬಗ್ಗೆ ಅತಿ ಹೆಚ್ಚಿನ ಕಳಕಳಿಯಿಂದೆ. ಅದು ಒಂದು ರೀತಿ ಪೀಡೆಯಾಗಿ ವ್ಯಕ್ತಿಗತ ಬದಲಾವಣೆಯಿಂದ ಜೊತೆಗೂಡಿದ್ದರೆ, ಆಗ ನಿಜವಾಗಿ ಅದು ಕಳಕಳಿಗೆ ಕಾರಣವಾಗುತ್ತದೆ ಅಂಥ ಸಂದರ್ಭಗಳಲ್ಲಿ ಅದೊಂದು ಸಮಾಧಾನದ ಮೂಲವನ್ನಾಗಿ ಬಳಸಿಕೊಂಡರೆ, ಅದು ಅನಾರೋಗ್ಯದ ಮತ್ತು ಅನಾರೋಗ್ಯದ ಪ್ರವೃತ್ತಿಗಳನ್ನು ಪ್ರತಿ ಬಿಂಬಿಸುತ್ತದೆ, ತೀವ್ರತರ ಸಂದರ್ಭಗಳಲ್ಲಿ ತರುಣಬಾಲಕ ಸತತವಾಗಿ ಅಥವಾ ಪದೇಪದೇ ಮುಷ್ಟಿ ಮೈಥುನ ಮಾಡಿಕೊಳ್ಳುತ್ತಿದ್ದರೆ, ವೈದ್ಯನ ಅಥವಾ ಬಾಲಕ ಮಾರ್ಗದರ್ಶಿ ಪರಿಣತನ ಸಲಹೆಯನ್ನು ಪಡೆಯಬೇಕು. ಕಾರಣ ತಂದೆತಾಯಿಗಳ ಕುತೂಹಲ ಸಮಸ್ಯೆಯನ್ನು ಗಂಭೀರವಾಗಿಸಬಹುದು.

## ಮುಷ್ಟಿ ಮೈಥುನ ಸಲಹೆ

ಈ ಸಮಸ್ಯೆಯನ್ನು ಎದುರಿಸುವ ತಂದೆತಾಯಿಗಳು ಮಕ್ಕಳಿಗೆ ಸುಖಮಯವಾದ, ಉದಾರವಾದ, ಪ್ರೀತಿಯ ವಾತಾವರಣದಲ್ಲಿ ದಿನವೂ ಮಗುವಿಗೆ ಆಸಕ್ತಿ ಹುಟ್ಟಿಸುವ ಮತ್ತು

ತಲ್ಲೀನವಾಗುವ ವಿಷಯಗಳನ್ನು ಒದಗಿಸಿದರೆ ಒಳ್ಳೆಯದು. ಇದರಿಂದ ಮುಷ್ಟಿಮೈಥುನಕ್ಕೆ ಪ್ರೋತ್ಸಾಹ ನೀಡುವ ಸನ್ನಿವೇಶಗಳನ್ನು ದೂರೀಕರಿಸಿದಂತಾಗುತ್ತದೆ. ತರುಣ ಬಾಲಕರಿಗೆ ಅವರು ತಮ್ಮ ಲೈಂಗಿಕ ಶಕ್ತಿಯನ್ನು ವಿಶಿಷ್ಟವಾಗಿ, ಕ್ರೀಡೆಗಳಲ್ಲಿ, ವ್ಯಾಯಾಮಗಳಲ್ಲಿ ಇರುವಂತೆ ತೊಡಗಿಸಿಕೊಳ್ಳಲು ಆರಂಭಿಸಿಸುವದು ಅವಶ್ಯಕ. ವಸ್ತ್ರಧರಿಸುವಾಗ, ತೊಳೆಯುವಾಗ ಅಥವಾ ಸ್ನಾನಮಾಡುವಾಗ ಅಥವಾ ಸೂಕ್ಷ್ಮಭಾವನೆಯ ನರಗಳನ್ನುಳ್ಳ ಕಾಮಜನನಾಂಗಗಳ ವಲಯಗಳನ್ನು ಸ್ಪರ್ಶಿಸುವಾಗ ಸಂಭಿಸುವ ಸಾಂದರ್ಭಿಕ ಮುಷ್ಟಿಮೈಥುನವನ್ನು ಪ್ರತ್ಯೇಕಿಸಬೇಕು.

**ಮುಷ್ಟಿಮೈಥುನದ ಅಪಾಯಗಳು**

ಆದಾಗ್ಯೂ ಕೆಲವು ತರುಣರು ಪದೇ ಪದೇ ಮುಷ್ಟಿ ಮೈಥುನ ಮಾಡಿಕೊಳ್ಳುವ ಪರಿಣಾಮವಾಗಿ ತಮ್ಮ ವ್ಯಕ್ತಿತ್ವದಲ್ಲಿ ಬದಲಾವಣೆಯನ್ನು ಹೊಂದುತ್ತಾರೆ. ಏಕೆಂದರೆ ಅವನು ಮುಷ್ಟಿಮೈಥುನವನ್ನು ರಹಸ್ಯದಲ್ಲಿ ಮಾಡಿಕೊಳ್ಳಬೇಕು. ಆದ್ದರಿಂದ ಅವನು ಏಕಾಂಗಿಯಾಗುತ್ತಾನೆ. ಅದು ಹೆಚ್ಚುತ್ತಾ ಹೋದಂತೆ ಮುಷ್ಟಿಮೈಥುನ ಅವನಿಗೆ ಯಾವುದೋ ಒಂದು ಸಂದರ್ಭದಲ್ಲಿ ತೃಪ್ತಿನೀಡುವುದರಿಂದ ವಿಫಲವಾಗುತ್ತದೆ. ಆದ ಅವನು ಹತಾಶನಾಗಿ ಬಿಡುತ್ತಾನೆ.

ಅವನು ತನ್ನ ಸ್ವಂತ ಕಾಮಾಂಗದಿಂದ ಆನಂದವನ್ನು ಪಡೆಯುವ ಹವ್ಯಾಸವನ್ನು ಬೆಳೆಸಿಕೊಳ್ಳುವುದರಿಂದ ಅವನು ಇತರ ಬಾಲಕರ ಬಳಿಕೆ ಹೋಗಲು ಆಕರ್ಷಿಸಲ್ಪಡಬಹುದು. ಇತರ ಪರಿಸ್ಥಿತಿಗಳು ಅನುಕೂಲವಾಗಿಲ್ಲದಿದ್ದರೆ ಅವನು ಸಲಿಂಗಕಾಮಿಯಾಗಬಹುದು.

ಮುಷ್ಟಿಮೈಥುನಕ್ಕೆ ವ್ಯಸನಿಯಾದ ವ್ಯಕ್ತಿ ಅಕಾಲಿಕ ವಿಸರ್ಜನೆಯನ್ನು ಬೆಳೆಸಿಕೊಳ್ಳುವ ಸಂಭವ ಹೆಚ್ಚು ವಿವಾಹಗಳಲ್ಲಿ ಪದೇ ಪದೇ ಕಂಡುಬರುವ ದೂರುಗಳಲ್ಲಿ ಇದೊಂದು ಇದರಿಂದ ಗಂಡಹೆಂಡಿರು ವೈವಾಹಿಕ ಕ್ರಿಯೆಯಲ್ಲಿ ಹತಾಶರಾಗುತ್ತಾರೆ. ಎಂಬುದನ್ನು ಹೀಗೆ ಅರಿತುಕೊಳ್ಳುತ್ತಾನೆ. ಅದಕ್ಕೆ ವಿರುದ್ಧವಾಗಿ ಅವನು ಜೀವನದಲ್ಲೂ ಹತಾಶನಾಗಿ ಬಿಡುತ್ತಾನೆ. ಅಂಥವನಿಗೆ ಅಂಥ ಹವ್ಯಾಸವನ್ನು ತ್ಯಜಿಸಬೇಕೆಂದು ಒಳ್ಳೆಯ ಬುದ್ಧಿವಾದ ಹೇಳಬೇಕು, ಸಲಹೆ ನೀಡಬೇಕು.

ಈ ಪ್ರಚೋದನೆಯ ಒತ್ತಡವನ್ನು ಅವನು/ಳು ಬಹುಶ್ರಮಪೂರ್ಣ ಕ್ರೀಡೆಗಳನ್ನು ವ್ಯಾಯಾಮದ ಅಭ್ಯಾಸಗಳನ್ನು ಕೈಗೊಳ್ಳುವುದರಿಂದ ಮತ್ತು ಹುಡುಗರ ಮತ್ತು ಹುಡಗಿಯರ ಜೊತೆ ಬೆರೆಯುವದರಿಂದ ಪರಿಹರಿಸಿಕೊಳ್ಳಬಹುದು.

## ಒದ್ದೆ ಕನಸುಗಳು

ಅನೇಕ ವೇಳೆ ಹುಡುಗರು ಮುಷ್ಟಿ ಮೈಥುನ ಅಥವಾ ಲೈಂಗಿಕ ಸಂಭೋಗ, ಕೂಡಿಟ್ಟ ವೀರ್ಯದ ಬಿಗಿತವನ್ನು ಬಿಡುಗಡೆ ಮಾಡಿಕೊಳ್ಳುವುದು ಅವಶ್ಯಕ ಎಂಬ ತಪ್ಪು ಭಾವನೆಗಳನ್ನು ಹೊಂದಿರುತ್ತಾರೆ. ವೈಜ್ಞಾನಿಕವಾಗಿ ಇದು ತಪ್ಪು. ಏಕೆಂದರೆ ಪ್ರಕೃತಿಯೇ ಈ ಕಾರ್ಯವನ್ನು ಒದ್ದೆ ಕನಸುಗಳಿಂದ ಮತ್ತು ನಿದ್ರೆ ಅಥವಾ ಕ್ರೀಡೆಗಳಲ್ಲಿರುವಾಗ ಉಂಟಾಗುವ ವಿಸರ್ಜನೆಯಿಂದ, ಅಗತ್ಯಬಿದ್ದಾಗಲೆಲ್ಲ ವೀರ್ಯವನ್ನು ಬಿಡುಗಡೆ ಮಾಡುತ್ತದೆ. ಅದು ಹೇಗೆಂದರೆ, ತೋಟದಲ್ಲಿನ ನಳಿಕೆಯಂತೆ ಒತ್ತಡ ಹೆಚ್ಚಾದಾಗ ನೀರು ತನ್ನಷ್ಟಕ್ಕೆ ತಾನೆ ಹೊರಬರುವಂತೆ.

ಹುಡುಗರಿಗೆ ಶಾರೀರಿಕ ರಚನೆಗೆ ಅಗತ್ಯವಾಗ ಪುಷ್ಟಿಕಾಂಶಗಳಿಂಗ (ಸಸಾರಾಜನಕ) ಕೂಡಿದ ಆಹಾರಗಳು ತುಂಬ ಅಗತ್ಯವಾಗಿ ಬೇಕಾಗುತ್ತದೆ. ಅವರಲ್ಲಿ ಅನೇಕ ಅಂಜಿಕೆಗಳು ಶಾತರಗಳೂ ತುಂಬಿ ಕೊಂಡಿರುತ್ತವೆ. ಇವುಗಳನ್ನು ಪರಿಹರಿಸಿಕೊಳ್ಳಲು ಯಾರಾದರೂ ವಿವರಿಸಬೇಕು ಮತ್ತು ಸಹಾಯ ಮಾಡಬೇಕು. ಅವರಿಗೆ ಇದನ್ನು ಕೇಳಲು ನಾಚಿಕೆ. ವ್ಯಕ್ತಿಗಳಲ್ಲಿ ಅಥವಾ ಶಿಕ್ಷಕರಲ್ಲಿ (ಅವರು ಅವರ ತಂದೆ ತಾಯಿಗಳಾದರೆ ಉತ್ತಮ) ತೀವ್ರ ನಾಚಿಕೆಯಿದ್ದ ಹೊರತು ಅವರಲ್ಲಿ ಮೂಡಿದ ನಾಚಿಕೆ ಮರೆಯಾಗುವುದಿಲ್ಲ.

ಮುಷ್ಟಿ ಮೈಥುನ ಒಂದು ಸಾಮಾನ್ಯ ಕ್ರಿಯೆ ಆಗಿರುವುದರಿಂದ ಪ್ರಕೃತಿ ಸಹಜವಾದುದು, ಅಥವಾ ವಾಡಿಕೆಯಾದದ್ದು ಎಂಬ ಭಾವನೆಯೆಂದು ಅವರು ಅರ್ಥ ಮಾಡಿಕೊಳ್ಳುವಂತೆ ಮಾಡುತ್ತಾರೆ. ಸಾಮಾನ್ಯವಾಗಿ ಬರುವ ಶೀತ, ಅದು ಸಾಧಾರಣವೇ ಆದರೆ ಅದು ಸಾಮಾನ್ಯ ಅಲ್ಲ, ಸ್ವಾಭಾವಿಕವೂ ಅಲ್ಲ. ಒಂದು ರೀತಿಯ ವೈರಸ್ಸಿನ (ನಂಜಿನ) (೩೦೦ ಬಗೆಯ ವೈರಸ್ಸುಗಳಿಗೆ) ಕಾರಣದಿಂದ ಉಂಟಾಗುವ ರೋಗ ಸೋಂಕು. ಅದನ್ನು ಸಕಾಲದಲ್ಲಿ ತಡೆಹಿಡಿಯದಿದ್ದರೆ ತಡೆದುಕೊಳ್ಳುವುದು ತುಂಬ ಕಷ್ಟ. ಮರಕಳಿಸುವ ಮುಷ್ಟಿಮೈಥುನವನ್ನು ಸಲಹೆಗಳಿಂದ ಜಯಿಸಬೇಕು. ಅದು ಸಾಮಾನ್ಯ ಎಂಬ ಮಾತ್ರದಿಂದ ಅದನ್ನು ಅಲಕ್ಷಿಸಬಾರದು, ಏಕೆಂದರೆ, ಮೇಲೆ ಹೇಳಿದಂತೆ ಅದು ಅನೇಕ ಸಮಸ್ಯೆಗಳನ್ನು ಉಂಟುಮಾಡಬಹುದು.

## ಸಲಿಂಗಕಾಮ

ಸಲಿಂಗರತಿ ಒಂದು ಲೈಂಗಿಕ ಮತ್ತು ಒಂದೇ ಲಿಂಗಜಾತಿಯ ಇಬ್ಬರು ವ್ಯಕ್ತಿಗಳ ಜನನಾಂಗಗಳ ಸಂಬಂಧ ದ್ವಿಲಿಂಗಿಗಳೆಂದರೆ ಎರಡೂ ಪ್ರಕಾರದ ಲಿಂಗಗಳಲ್ಲಿ ಸಂಬಂಧವುಳ್ಳವರು.

## ಕಾರಣಗಳು ಮತ್ತು ಪ್ರಕಟನೆಗಳು

ವಿಭಿನ್ನ ಲೈಂಗಿಕ ಮಿತ್ರತ್ವವನ್ನು ಸ್ವೀಕರಿಸುವ ಸ್ಥಿತಿಯವರೆಗೆ, ವ್ಯಕ್ತಿ ಮಾನಸಿಕವಾಗಿ ಮತ್ತು ಭಾವುಕವಾಗಿ ಪೂರ್ಣ ಬೆಳೆಯದೇ ಇರುವಾಗ ಮಾನಸಿಕ ಪೂರ್ಣ ಅಭಿವೃದ್ಧಿ ವಿಫಲವಾದದ್ದು ಎಂಬ ಅಂಶದಿಂದ ಸಲಿಂಗರತಿಯನ್ನು ಅರ್ಥಮಾಡಿಕೊಳ್ಳಲಾಗಿದೆ.

ಇಬ್ಬರು ಹುಡುಗರು ಅಥವಾ ಹುಡುಗಿರಯರು ಇವರ ನಡುವಿನ ಆಳವಾದ ಮಿತ್ರತ್ವ ಸಲಿಂಗಕಾಮದ ಸೂಚನೆಯಲ್ಲ. ಎಳೆತನದ ತಾರುಣ್ಯದಲ್ಲಿ ಅಂಥಗೆಳೆತನ ಅತ್ಯಂತ ಸಾಧಾರಣವಾಗಿರುವಂಥ ಕಾಲವಿದೆ. ಹಾಗೂ ಅದು ಭಿನ್ನಲಿಂಗದಲ್ಲಿ ಆಸಕ್ತಿಯನ್ನು ಹೊಂದಲು ಬೇಕಾಗುವ ಗಟ್ಟಿಯಾದ ಮಾನಸಿಕ ತಳಪಾಯವಾಗಿ ಅದು ಸಹಾಯಮಾಡಲು ಸಾಕಷ್ಟು ಸಮಯವನ್ನು ಕೊಡುತ್ತದೆ.

ಏಕ ಸಲಿಂಗಕಾಮದ ಮಾದರಿ ಎಂಬಂಥ ವಿಷಯವೇನು ಇಲ್ಲ. ಮೃದುವಾದ ತೋರಿಕೆ, ದೊಡ್ಡಗಂಟಲಿನ ಧ್ವನಿ, ಹೆಣ್ಣಿನಂತಹ ವಿಲಕ್ಷಣತೆಗಳು ಇವೆಲ್ಲ ಪುರುಷನ ಸಲಿಂಗಕಾಮದ ಸೂಚನೆಗಳಾಗುವುದು ಅವಶ್ಯಕವೆಂದೇನೂ ಅಲ್ಲ. ಮೃದುತ್ವವಾಗಲಿ ತರುಣ ವ್ಯಕ್ತಿ ಮುಂತೋರಿಸುವ ಸೂಕ್ಷ್ಮಭಾವೇಶವಾಗಲಿ ಸಲಿಂಕಮದ ಪ್ರಖರತೆಗಳಲ್ಲ. ಅವು ಸ್ವಂತಭರವಸೆಯ ಪುರುಷತ್ವವನ್ನು ಸ್ವಾಭಾವಿಕವಾಗಿ ಸೂಚಿಸುವಂಥದು. ಏಕೆಂದರೆ ತನ್ನ ಆಂತರಿಕ ಭಾವನೆಗಳನ್ನು ಮತ್ತು ಶಕ್ತಿಯನ್ನು ಪ್ರದರ್ಶಿಸುವ ತನ್ನ ಸ್ವಂತ ಅನಿಸಿಕೆಗಳು ಅವು. ಹುಡುಗಿಯರ ಮತ್ತು ಹೆಂಗಸರ ದೊಡ್ಡ ಗಟ್ಟಿಯಾದ ಆಳವಾದ ಧ್ವನಿ ಮತ್ತು ಪುರುಷತ್ವದ ಒರಟುತನ ಇವು ಕೂಡ ಸಲಿಂಗಕಾಮದ ನಿಜವಾದ ಸೂಚನೆಗಳೂ ಅಲ್ಲ. ಅನೇಕ ಜನ ಹುಡುಗಿಯರು ಕಾಮನ ಕಳ್ಳೆ ಕಿಂಡಿ ಅವಸ್ಥೆಯ ಮೂಲಕ ಹಾದು ಬಂದಿರುತ್ತಾರೆ.

ಪುರುಷನ ಸಲಿಂಗಕಾಮ ಪ್ರವೃತ್ತಿಯ ನಿರ್ದಿಷ್ಟ ಕಾರಣಗಳು, ಬಹುಸಂಖ್ಯೆಯದಾಗಿಯೂ ವಿವಿಧತೆಯಿಂದ ಕೂಡಿರುವುದಾಗಿಯೂ ಇರುವುದರಿಂದ ಇಲ್ಲಿ ಅವುಗಳನ್ನು ಪಟ್ಟಿಮಾಡುವುದು ಕಷ್ಟ ಅದು ಎಷ್ಟೋ ವೇಳೆ ಪರಿಸರದ ಒತ್ತಡಗಳಿಂದ ಮತ್ತು ಅದು ವಿಶಿಷ್ಟವಾಗಿ ತಂದೆ ತಾಯಿಗಳ ಪ್ರಭಾವಗಳಂಥ ಒತ್ತಡ ತರುತ್ತಿರುವ ಸಮಾಜದಲ್ಲಿ ಲೈಂಗಿಕಕಾರ್ಯ ಮತ್ತು ಆಕರ್ಷಣೆಗಳಿಂದ ಕೆಲವು ಹುಡುಗರು ಅಂಜಬಹುದಾದ, ಹತಾಶರಾಗಬಹುದಾದ ಸಾಧ್ಯತೆಗಳಿವೆ. ತಾವು ಸಾಧಿಸಬೇಕಾದ ಕ್ರಿಯೆಯಲ್ಲಿ ತಮ್ಮ ವಿಫಲತೆಯಿಂದ ಸೋಲುವ ಸಾಧ್ಯತೆಯೂ ಉಂಟು.

ಭಯ ಮತ್ತು ಸೋಲಿನ ಒಂದು ಭಾವನೆ ಬೆಳೆದೆ ದೊಡ್ಡವರಾಗಬೇಕೆಂಬ ಸವಾಲಿನಿಂದ ಅವರನ್ನು ವಿಮುಖರನ್ನಾಗಿ ಮಾಡಬಹುದು ಮತ್ತು ಸ್ವಲೋಲುಪತೆಯ ಕಡೆಗೆ ಸ್ವಂತವಾಗಿ ಭಾವಿಸುವ ಬಾಲಕತನದ ಪೂರ್ವ ಪ್ರಪಂಚದ ಕಡೆಗೆ ಹಿಂದಿರುಗಿಸಬಹುದು.

ಅವರು ತಮ್ಮನ್ನು ತಾವೇ ವಿಫಲಪ್ರಯತ್ನಿಗಳೆಂದು ನಿಂದಿಸಿಕೊಳ್ಳುತ್ತಾರೆ, ಪರಿಶುದ್ಧವಾದ ಸಂಬಂಧಗಳನ್ನು ವಿಶೇಷವಾಗಿ ಹುಡುಗಿಯರೊಡನೆ ಅಲ್ಲಿ ಅಪರಿಚಿತ ಅಂಜಿಕೆಯಿರುವುದರಿಂದ ಮತ್ತೆ ನೋವಿನ ಸಾಧ್ಯತೆಯಿರುವುದರಿಂದ ಮತ್ತು ತಿರಸ್ಕಾರದ ಅಂಶ ಅಸಿತ್ವದಲ್ಲಿರುವುದರಿಂದ ಬೆಳೆಸಿಕೊಳ್ಳುವಲ್ಲಿ ಪ್ರಯತ್ನಗಳನ್ನು ಮಾಡಲು ಹಿಂಜರಿಯುತ್ತಾರೆ.

ಈ ಪರಿಸ್ಥಿತಿಯನ್ನು ಇಂದಿನ `ಗೊಂದಲದ ಲೈಂಗಿಕ ಪಾತ್ರದಿಂದ, ಸ್ತ್ರೀ ಪುರುಷರ ನಡುವಿನ ಸ್ಪರ್ಧಾತ್ಮಕತೆಗಳಿಂದ ಮತ್ತು ಸ್ತ್ರೀ ಪುರುಷ ಕರ್ತವ್ಯಗಳನ್ನು ಸ್ಪಷ್ಟವಾಗಿ ವ್ಯಾಖ್ಯಾ ಅಭಾವದಿಂದ ಇನ್ನು ಉತ್ಪ್ರೇಕ್ಷೆಗೊಳಿಸಿ ಹೇಳಬಹುದು. ಎಲ್ಲಿ ಅಧಿಕಾರ ಚಲಾಯಿಸುವ ಅಥವಾ ಅತಿಶಯವಾಗಿ ರಕ್ಷಣೆನೀಡುವ ತಾಯಿ, ಶತ್ರುವಿನಂತಿರುವ, ಅನಾಸಕ್ತನಾದ ಮತ್ತು ನಿರಾಕೃತನಾದ ತಂದೆ ಇವರೊಡನೆ ಜೊತೆಗೂಡಿದಾಗ ನಡೆಸುವ ಸಂಸಾರದಲ್ಲಿದ್ದಾಗ ಕೆಲವು ವೇಳೆ ಗಂಡು ಸಲಿಂಗಕಾಮಿ, ಒಂದು ಕುಟುಂಬದ ಸನ್ನಿವೇಶದ ಉತ್ಪತ್ತಿಯಾಗಿರಬಹುದು.

ಅಂಥ ಸನ್ನಿವೇಶದಲ್ಲಿ ಹುಡುಗ ಗಂಡಸರ ಬಗ್ಗೆ ಮತ್ತು ಪುರುಷತ್ವದ ಬಗ್ಗೆ ಅಗೌರವ ಮತ್ತು ತಿರಸ್ಕಾರಗಳಿಂದ ಹೆಂಗಸರ ಬಗ್ಗೆ ಭಯ ಮತ್ತು ಕೋಪದಿಂದ ಜೊತೆಗೂಡಿ ಬೆಳೆಯಬಹುದು.

ಪುರುಷ ಮತ್ತು ಸ್ತ್ರೀ ಸಲಿಂಗರಾಮವನ್ನು ಪೋಷಿಸುವುದಕ್ಕೆ ಮುಖ್ಯವಾದ ಕಾಣಿಕೆಯೆಂದರೆ, ಕೆಲವರು ಹೇಳುವ ಒಂದು ಮುಖ್ಯಾಂಶವೆಂದರೆ ತಂದೆ ತಾಯಿಯರಲ್ಲಿ ಪ್ರದರ್ಶನಗೊಳ್ಳುವ ಪ್ರೀತಿಯ ಶೆರತೆ.. ಸ್ತ್ರೀಪುರುಷರ ಸಂಬಂಧ ಒಂದು ಅನುರೂಪ ಮತ್ತು ವರ್ಧಿತವಾದುದೇ ಹೊರತು ನಾಶಕಾರಕವಾದದ್ದಲ್ಲ ಎಂಬುದನ್ನು ಮಕ್ಕಳು ಕಲಿಯಬೇಕು.

ತರುಣರನ್ನು ಅನಾಸಕ್ತರನ್ನಾಗಿ ಮತ್ತು ಅವಲಂಬಿತರನ್ನಾಗಿ ಇಟ್ಟುಕೊಳ್ಳುವ ಪ್ರವೃತ್ತಿ ಕೆಲವೊಮ್ಮೆ ಕೆಡಕುಂಟುಮಾಡುವಂಥದು ಹದಿದರಿಯದ ವ್ಯಕ್ತಿ ಎಷ್ಟು ಬೇಗ ಸ್ತ್ರೀತ್ವದ ಮತ್ತು ಪುರುಷತ್ವದ ಬಲರಕ್ತವಾದ ವ್ಯಕ್ತಿತ್ವವನ್ನು ಪಡೆಯುತ್ತಾನೋ ಅಷ್ಟೋ ಒಳ್ಳೆಯದು.

ತರುಣನ ಆತ್ಮ ಭರವಸೆಯನ್ನು ಪ್ರೋತ್ಸಾಹಿಸಬೇಕು. ಅವನ ಅವಳ ತೋಜೋವಧೆಯನ್ನು ಎಂದಿಗೂ ಮಾಡಬಾರದು. ಯಾವುದೋ ಒಂದು ಸ್ಥಳಕ್ಕಿಂತ ಮೀರಿದ ಹಂತದಲ್ಲಿ ಮಾನವ ಪ್ರಾಣಿ. ತೇಜೋವಧೆ ಮಾಡಿದರೆ ಅವನಲ್ಲಿರುವ ಯಾವುದೋ ಒಂದು ಮೌಲ್ಯವನ್ನು ದುರಸ್ತಿ ಮಾಡಲಾಗದಷ್ಟು ನಾಶಪಡಿಸಿದಂತಾಗುತ್ತದೆ. ಗಾಂಧಿ.

ಸಲಿಂಗಕಾಮ ಪ್ರವೃತ್ತಿ. ಕಾರಣದ ಬಗ್ಗೆ ಅನೇಕ ಮಾರ್ಗಗಳಿಂದ ಹೆಚ್ಚಿನ ಸಂಶೋಧನೆಯನ್ನು ನಡೆಸಲಾಗಿದೆ. ಹಾಗಿದ್ದರೂ ಇದುವರೆಗೂ ನಿಜವಾದ ಅವಯವ ಅಥವಾ ವಂಶಪರಂಪರದ ಕಾರಣವನ್ನು ನೀಡುವ ಮನವೊಪ್ಪುವ ಸಾಕ್ಷವನ್ನು ಸ್ಥಾಪಿಸಲಾಗಿಲ್ಲ.

ಸಲಿಂಗಕಾಮದ ಪ್ರವೃತ್ತಿಗಳನ್ನು ಸಲಹೆ ಬುದ್ಧಿವಾದಗಳಿಂದ ಹಿಂದಿರಕುಗಿಸಬಹುದು.

ಆರಂಭದಲ್ಲಿ ಲೈಂಗಿಕ ಪ್ರಚೋದನೆ ವಿರೋಧಲಿಂಗದ ಪರವಾಗಿ ಕೂಡಲೆ ಉದಯಿಸುವದಿಲ್ಲ, ಎಂಬುದನ್ನು ಪ್ರತಿಯೊಬ್ಬನೂ ಅರ್ಥಮಾಡಿಕೊಳ್ಳಬೇಕು. ಮೊದಲಿಗೆ ಅದು ಕಾಣಿಸಿಕೊಳ್ಳುವುದು ಇನ್ನೊಬ್ಬ ವ್ಯಕ್ತಿಯ ಜೊತೆ ಭಾವುಕ ಸಂಪರ್ಕವನ್ನು ಬಯಸುವಾಗ. ಮತ್ತು ಸನ್ನಿವೇಶಗಳು ಆ ಇನ್ನೊಬ್ಬ ವ್ಯಕ್ತಿ ತನ್ನದೇ ಲಿಂಗಜಾತಿಯವನೆಂದು ನಿರ್ಧರಿಸಬಹುದು.

ಅದುಮಿಡುವುದು, ನಾಯಕ ವ್ಯಕ್ತಿಪೂಜೆ ಮತ್ತು ಸೂಕ್ಷ್ಮಭಾವದ ಗೆಳೆತನ ಇವೆಲ್ಲ ತಾರುಣ್ಯಪೂರ್ವದ ಸ್ವಾಭಾವಿಕವಾಗಿ ಇಂದ್ರಿಯ ಗೋಚರ ಸ್ಥಿತಿಗಳು, ಆದರೆ ಅವು ತಾತ್ಕಾಲಿಕ ಸ್ವಭಾವದವು, ಅಷ್ಟೇ ಹೊರತು ಲೈಂಗಿಕ ಸಂಬಂಧಗಳವರೆಗೆ ಅಥವಾ ಪ್ರಯೋಗ ಮಾಡುವುದವರೆಗೆ ಮುಂದುವರಿಯುವುದಿಲ್ಲ.

ಸಲಿಂಗಕಾಮಿಗಳು ಮತ್ತು ಲೆಸ್ಬಿಯನ್ನರು (ಸ್ತ್ರೀ ಸಲಿಂಗಕಾಯಿಗಳು). ಅವರನ್ನು ಹಾಗೆ ಕರೆಯುವದಕ್ಕೆ ಕಾರಣ ಗ್ರೀಕರು ಇಂಥ ಹೆಂಗಸರನ್ನು ಲೆಸ್ಬೊಸ್ ಎಂಬ ದ್ವೀಪಕ್ಕೆ ಗಡೀ ಪಾರು ಮಾಡಿದ್ದರು. ಅನಂತರ ಭಿನ್ನಲಿಂಗ ವಿವಾಹಗಳನ್ನು ಕೈಗೊಳ್ಳಲು ಆರಂಭಿಸಿದರು. ಇದು ಭಾರತದಲ್ಲೂ ಚಿಕಿತ್ಸೆ ಅಥವಾ ಬುದ್ಧಿವಾದ ಪಡೆಯದ ಕಡೆ ನಡೆಯುತ್ತದೆ. ಅವರು ಹಾಗೆ ಮಾಡಬಹುದು, ಏಕೆಂದರೆ ಅವರು ಸಮಾಜದ ಬೇಡಿಕೆಗಳೊಡನೆ ಹೊಂದಿಕೊಳ್ಳಲು ಅಪೇಕ್ಷಿಸಬಹುದು. ಆದರೆ ಅದಕ್ಕಿಂತ ಹೆಚ್ಚಾಗಿ ಅನೇಕವೇಳೆ ಮಕ್ಕಳನ್ನು ಪಡೆಯುವ ಮತ್ತು ಬೆಳೆಸುವ ಆಕಾಂಕ್ಷೆಗಳನ್ನು ಹೊಂದಿರುವುದರಿಂದ ಕೆಲವು ಸಲಿಂಗಕಾಮಿಗಳು, ತಾವು ಹೆಂಗಸರ ಮುಂದೆ ಅಥವಾ ಅವರ ಬಗ್ಗೆ ನಪುಂಸಕರಾಗಿ ಬಿಡುತ್ತೇವೆಯೋ ಎಂಬ ಹೆದರಿಕೆಯಿಂದ ಭಯಗೊಳ್ಳಬಹುದು ಅಥವಾ ಅದರ ಬಗ್ಗೆ ಶತ್ರು ಭಾವವನ್ನು ತಳೆಯಬಹುದು. ಆದ್ದರಿಂದ ಅವರು ವಿವಾಹಕ್ಕೆ ಸಮ್ಮತಿಸದೇ ಇಲ್ಲವೆ ಮದುವೆ ಮಾಡಿಕೊಳ್ಳದೇ ಇರುವುದು ಲೇಸೆಂದು ಭಾವಿಸುತ್ತಾರೆ, ಹಾಗೆ ಮಾಡುವವರು ತಮಗಾಗಿ ಮತ್ತು ತಮ್ಮ ಹೆಂಡಂದಿರಿಗಾಗಿ ಅತಿಭೀಕರ ಪರಿಣಾಮಗಳಿಗೆ ಒಳಗಾಗಬಹುದು.

ಸಲಿಂಗಕಾಮಿಗಳ ರೋಗಪರಿಹಾರದ ಅವಕಾಶಗಳು ನೇರವಾಗಿ ಆತನ ಬದಲಾವಣೆಯ ಆಪೇಕ್ಷೆಯ ಒತ್ತಡಕ್ಕೆ ಸಂಬಂಧಿಸಿರುತ್ತದೆ.

ಈ ಸ್ಥಿತಿಯಿಂದ, ತೊಂದರೆಯಿಂದ ನರಳುವ ವ್ಯಕ್ತಿಗೆ ಮನಾಶಾಸ್ತ್ರದ ಥೆರಪಿ ನೀಡುವುದು ಬಹಳಷ್ಟಿದೆ. ಅದು ಅವನಿಗೆ ಉತ್ತಮ ಸ್ವಸ್ವಿಕೃತಿಯನ್ನು, ಅನಾರೋಗ್ಯಕರ ಸಮರ್ಥತೆಯನ್ನು ಕಂಡುಕೊಳ್ಳಲು ಸಹಾಯಮಾಡುತ್ತದೆ ಮತ್ತು ಆಂತರಿಕೆ ವ್ಯಕ್ತಿತ್ವ ಚುರುಕಾಗಿ ಕೆಲಸ ಮಾಡಲು ನೆರವು ನೀಡುತ್ತದೆ.

ಇದಕ್ಕೆ ನ್ಯಾಯಸಮ್ಮತವಾದ ಒಂದೇ ಮಾರ್ಗವೆಂದರೆ ಸಿಕ್ಕಿಹಾಕಿಕೊಂಡಿರುವ ವ್ಯಕ್ತಿಯ ಸಮಸ್ಯೆಯನ್ನು ಅರ್ಥಮಾಡಿಕೊಳ್ಳಲು ಯತ್ನಿಸುವುದು. ಇದಕ್ಕೆ ಬಹಳಷ್ಟು ಕಾಲಬೇಕು, ತಿಳಿವಳಿಕೆಬೇಕು, ಪ್ರೋತ್ಸಾಹ ಬೇಕು. ಸಹಾಯಕನ ವತಿಯಿಂದ ಮೂಳೆಗಂಟು, ಆಸನದ್ವಾರದ ಸುತ್ತ ಕೀಮ ಹುಣ್ಣು, ಮೂತ್ರನಾಳದ ಉರಿಯೂತ ಮತ್ತು ಮೂತ್ರದ ಪ್ರದೇಶದಲ್ಲಿನ ಇತರ ಊರಿಯುತಗಳು ಇತ್ಯಾದಿಗಳಂಥ ಗುದನಾಳದ ಕೆರೆಕೆಗಳು, ರೋಗಾಂಗಗಳು ಪುರುಷ ಸಲಿಂಗಕಾಮಿಗಳಲ್ಲಿ ಸಾಮಾನ್ಯ ಪುರುಷ ಸಲಿಂಗ ಕಾಮಿಗಳಲ್ಲಿ ಮೇಹರೋಗ ಪಾರಸ್ಪರಿಕವಾಗಿ ಅತಿ ಹೆಚ್ಚಿನ ಪ್ರಭಾವ ವ್ಯಾಪಿಯನ್ನುಳದ್ದಾಗಿರುವಂತೆ ಕಾಣುತ್ತದೆ. ಸಲಿಂಗಕಾಮಿಗಳಲ್ಲಿ ಒಬ್ಬರು ಒಬ್ಬರನ್ನು ತ್ಯಜಿಸಿದಾಗ ಕ್ರಾರ್ಕ ಮತ್ತು ಕೊಲೆಗಳು ಹೆಚ್ಚು ಸಾಮಾನ್ಯ.

ಸ್ತ್ರೀ ಸಲಿಂಗ ಕಾಮಿಗಳಲ್ಲಿ ಯೋನಿಯ ರೋಗಾಂಗ ಮತ್ತು ಜನನೇಂದ್ರಿಯಗಳ ಬಾಹ್ಯ ಸಂಭವಿಸಬಹುದು, ಬಾಯಿಯಲ್ಲಿ ಮತ್ತು ಜನನಾಂಗಗಳಲ್ಲಿ ಕೇಶರೋಗಗಳ ಮತ್ತು ಮೋನಿಲಿಯಲ ಅಂಟುರೋಗಗಳು ಸಲಿಂಗಕಾಮಿರೋಗಿಗಳಲ್ಲಿ ಸಾಮಾನ್ಯವಾಗಿರುತ್ತವೆ. ಇವುಗಳಿಗೆಲ್ಲ ವೈದ್ಯರ ಚಿಕಿತ್ಸೆ ಸೇವೆ ಅಗತ್ಯ.

## ಕುಟುಂಬದ ಮತ್ತು ಸಮಾಜದ ಪಾತ್ರ

ಸಲಿಂಗಕಾಮ ಪ್ರವೃತ್ತಿಯು ಪ್ರಾರಂಭದಲ್ಲಿಯೇ ಬೆಳೆಯುವುದರ ಚಿಹ್ನೆಗಳನ್ನು ಮುಂಚಿತವಾಗಿಯೇ ತಂದೆ ತಾಯಿಗಳು ಕೆಲವೊಮ್ಮೆ ಗುರುತಿಸಬಹುದು. ಆದರೆ ದುರದೃಷ್ಟದಿಂದ ತಂದೆತಾಯಿಗಳು, ಶಿಕ್ಷಕರು ಅಥವಾ ವಿದ್ಯಾರ್ಥಿನಿಲಯದ ಪೋಷಕರು ಅಂಥ ಸಮಸ್ಯೆ ಇದೆ ಎಂಬುದನ್ನೇ ಅಲ್ಲಗಳೆಯುವ ಪ್ರವೃತ್ತಿಯನ್ನು ಆಗಾಗಾ ಹೊಂದಿರುತ್ತಾರೆ. ತಂದೆ ತಾಯಿಗಳು ಮತ್ತು ಶಿಕ್ಷಕರು ಇಂಥ, ಅಭ್ಯಾಸವನ್ನು ನಿರುತ್ಸಾಹಗೊಳಿಸಬೇಕು.

ಅದು ಶಾಶ್ವತವಾದರೆ ಅದನ್ನು ಲಭ್ಯವಾಗುವ ಪ್ರತಿಯೊಂದು ಮಾರ್ಗದಿಂದ ಚಿಕಿತ್ಸೆ ನಡೆಸಬೇಕು. ಅನೇಕಕಾರಣಗಳಿಂದ ಅದನ್ನು ಬದುಕಿನ ತಾರಣ್ಯದ ಹಂತದಲ್ಲಿ ವಾಸಿಮಾಡಲಾಗದಿದ್ದರೆ ಉದ್ದಕ್ಕೂ ಆ ಅಭ್ಯಾಸದಿಂದಲೇ ಬದಕುತ್ತಾನೆ. ಕಡೆಗೆ ಅವನು ವಿವಾಹ ಮತ್ತು ಸಂತಾನೋತ್ಪತ್ತಿಯ ಪವಿತ್ರ ಯೋಜನೆಯಲ್ಲಿ ಭಾಗವಹಿಸಲು ಅಸಮರ್ಥನಾಗುತ್ತಾನೆ. ಮತ್ತು ಪೂರ್ಣ ವಿಫಲನಾಗುತ್ತಾನೆ. ಅಂತಲ್ಲದೆ ಭಿನ್ನ ಲೈಂಗಿಕ ಜೀವನದಲ್ಲಿ ಸಾಮಾನ್ಯವಾಗಿ ಜೀವಿಸುತ್ತಾನೆ.

ಒಬ್ಬನನ್ನು ಭಿನ್ನಲೈಂಗಿಕ ಮತ್ತು ಸಾಮಾಜಿಕ ಸಂಪರ್ಕಗಳಿಂದ ಬದುಕಲು ಪ್ರಯತ್ನಿಸುವದಕ್ಕೆ ಪ್ರೋತ್ಸಾಹಕೊಡಬೇಕು. ಎದುರು ಲಿಂಗ ಜಾತಿಯ ಸಹಾನುಭೂತಿ

ವ್ಯಕ್ತಿಗಳೊಡನೆ ನಿರಂತರ ಸಂಪರ್ಕದ ಜೊತೆಗೆ ಪ್ರೋತ್ಸಾಹವೂ ದೊರಕಿದರೆ ಅವನಲ್ಲಿ ಸ್ವಲ್ಪವಾದರೂ ಬದಲಾವಣೆ ತರಲು ಸಹಾಯವಾಗುತ್ತದೆ.

ವ್ಯಕ್ತಿಬದುಕಿನ ಲೈಂಗಿಕ ದೃಷ್ಟಿಗಳನ್ನು ಬಿಟ್ಟು ಇತರ ಪ್ರದೇಶಗಳನ್ನು ಪರಿಶೋಧಿಸಲು ಸೂಕ್ತವಾದ ಸೃಜನಶೀಲ ಕಾರ್ಯಗಳಲ್ಲಿ ಮತ್ತು ತನ್ನ ಶಕ್ತಿಯನ್ನು ಹೊಸ ಸೃಷ್ಟಿಗಳ ಕಡೆಗೆ ತಿರುಗಿಸಲು ಪ್ರೋತ್ಸಾಹಿಸಬೇಕು. ಆ ಮೂಲಕ ಅವನ ವ್ಯಕ್ತಿತ್ವವನ್ನು ವಿಶೇಷವಾಗಿ ಮಹತ್ವದ್ದನ್ನಾಗಿ ಬೆಳೆಸಿಕೊಳ್ಳಲು ಮನಶಕ್ತಿಯನ್ನು ಬಲಪಡಿಸಿಕೊಳ್ಳಲು ಮತ್ತು ಶಕ್ತಿಯ ದೇಹವನ್ನು ಪ್ರೋತ್ಸಾಹಿಸಬೇಕು.

ತಿಳುವಳಿಕೆಯನ್ನು ಬಯಸಬೇಕು ಹೊರತು ನಿಂದನೆಯನ್ನು ಆಹ್ವಾನಿಸುವುದಿಲ್ಲ.

ಸ್ತ್ರೀಪುರುಷರಲ್ಲಿ ಬಹುಜನ ಸಲಿಂಗ ಕಾಮಿಗಳು ಸಾಮಾನ್ಯವಾಗಿ ಏಕಾಂಗಿಯಾಗಿಯೇ ಇರುತ್ತಾರೆ, ಭ್ರಮಿತರಾಗಿರುತ್ತಾರೆ ಮತ್ತು ಅಂಜುಬುರುಕರಾಗಿರುತ್ತಾರೆ ಮತ್ತು ತಮ್ಮ ಸ್ವಂತ ನಿರ್ಮಾಣದ ಹಿನ್ನೆಲೆಯ ಬಲಿಪಶುಗಳಾಗಿರುತ್ತಾರೆ. ಅವರ ಬದಲಾವಣೆಗೆ ಅವರಲ್ಲೂ ಪಡೆದ ವ್ಯಕ್ತಿಗಳು ಪ್ರಯತ್ನಮಾಡಿದರೆ ಅವರು ಅದನ್ನು ವಿಶೇಷವಾಗಿ ಮೆಚ್ಚಿಕೊಳ್ಳುತ್ತಾರೆ.

ಅವರು ಹೊರಗಿನ ಇತರರಿಂದ ಸಹಾಯಕ್ಕಾಗಿ ನೋಡುತ್ತಿರುತ್ತಾರೆ, ಭಿನ್ನ ಲಿಂಗಜಾತಿಯ ಇತರ ಜೀವಂತ ವ್ಯಕ್ತಿಗಳೊಡನೆ ಯಾವುದೇ ರೀತಿಯ ಸಂಬಂಧವನ್ನು ತಮಗೆ ಬೇಕಾಗಿರುವಂತೆ ಬಯಸುವವರ ಹಾಗೆ ಕಂಡು ಬರುತ್ತಾರೆ.

ಲೈಂಗಿಕವಾಗಿ ವರ್ಗಾಯಿಸಲ್ಪಡುವ ರೋಗಗಳು

ಎಸ್.ಟಿ.ಡಿ. ಅಥವಾ ಗುಹ್ಯರೋಗ ವಿ.ಡಿ.

ಎಸ್.ಟಿ.ಡಿ. ರೋಗಗಳು ತಮ್ಮ ವರ್ಗಾವಣೆಗೆ ಲೈಂಗಿಕ ಸಂಭೋಗವನ್ನು ಅವಲಂಬಿಸುತ್ತವೆ.

ಗುಹ್ಯರೋಗಗಳಲ್ಲೆಲ್ಲ ಮೋಹರೋಗ ಬಹುಸಾಮಾನ್ಯವಾದದು ಆದರಿಂದ ಸಿಫಿಲೀಸ್ ಮೊಹರೋಗ ಆರಂಭವಾಗುತ್ತದೆ. ಮೂರು ಗುಹ್ಯರೋಗಗಳೆಂದರೆ, ಮೋಹವ್ರಣ, ಗ್ರಾನ್ಯುಲೋಮ ಇಂಗ್ಯುನೇಲ್ ಮತ್ತು ಲಿಂಫೋಗ್ರಾನ್ಯುಲೋಮ ವೆನೆರಿಯಮ್. ಗೋನೊರಿಯ (ಮೇಹರೋಗ) ಮತ್ತು ಸಿಫಿಲೀಸ್ ರೋಗಗಳು ಹದಿಹರಯದವರಲ್ಲಿ ಮತ್ತು ತರುಣ ವಯಸ್ಕರಲ್ಲಿ ಅತಿಹೆಚ್ಚಾಗಿ ಬಳಕೆಯಲ್ಲಿದೆ, ಗುಹ್ಯರೋಗಗಳು ಇತರ ರೋಗಗಳಿಂದ ಭಿನ್ನವಾದವು. ಮಾನವ ಸ್ವಭಾವಕ್ಕೆ ಅತಿಸಮೀಪದ ಸಂಬಂಧವನ್ನು ಹೊಂದಿರುವುದರಿಂದ ಅವು ತಮ್ಮದೇ ಆದ ಸಮಸ್ಯೆಗಳನ್ನು ಸಮಾಜದಲ್ಲಿ ಸೃಷ್ಟಿಸುತ್ತವೆ, ನಮ್ಮನ್ನು ಅನೇಕ ವೇಳೆ

ಕೇಳಲಾಗುತ್ತದೆ. ಅವು ನಮ್ಮ ನಾಡಿನಲ್ಲಿ ನಿಜವಾಗಿ ಹೆಚ್ಚಾಗಿ ಜಾರಿಯಲ್ಲಿವೆಯೇ ಈ ರೋಗಗಳು ಹೆಚ್ಚು ಅಥವಾ ಕಡಿಮೆ ಪಾಶ್ಚಾತ್ಯ ದೇಶಗಳಿಗೆ ಮಾತ್ರ ಮೀಸಲಾಗಿಲ್ಲವೆ ಎಂದು.

ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ ಆ ಸಮಯದಲ್ಲಿ ಪ್ರಪಂಚದ ವಿಶೇಷವಾಗಿ ಪೀಡಿತ ನಗರಗಳಲ್ಲಿ ಮುಂಬಯಿಯೂ ಒಂದು ಸ್ಥಾನವನ್ನು ಗಳಿಸಿದೆ. ಚಾಲ್ತಿಯಲ್ಲಿರುವ ಸಿಫಿಲಿಸ ಖಾಯಿಲೆಯ ಪ್ರಮಾಣ ಒಟ್ಟು ರಾಷ್ಟ್ರಕ್ಕಾಗಿ ಶೇಕಡ ೫ಕ್ಕಿಂದ ಕಡಿಮೆ ಇರಲಾರದು ಮತ್ತು ಬಹುಶಃ ಶೇಕಡ ೧೦ ರ ಸಮೀಪವಿರಬಹುದು, ಸಂಯುಕ್ತ ರಾಜ್ಯ, ಫ್ರಾನ್ಸ್, ಅಮೇರಿಕ ಸಂಯುಕ್ತ ರಾಜ್ಯಗಳು ಮತ್ತು ಸ್ಕ್ಯಾಂಡಿನೇವಿಯ ದೇಶಗಳಿಗೆ ಹೋಲಿಸಿದರೆ, ಸಂವಾದಿಯಾದ ಪ್ರಮಾಣ ಇದು ಶೇಕಡಾ ಒಂದಕ್ಕಿಂತ ಕಡಿಮೆ.

ಗೊನೋರಿಯ ಸಿಫಿಲಿಸ್‌ಗಿಂತ ಅತಿಹೆಚ್ಚಿನ ಪ್ರಮಾಣದಲ್ಲಿ ರೂಢಿಯಲ್ಲಿದೆ.

೧೫-೨೫ ವರ್ಷ ವಯಸ್ಸಿನ ತಂಡವು ಹೊಸದಾಗಿ ಅರ್ಜಿಸಿದ ಮೆಹರೋಗ ಸಂಪರ್ಕಗಳು ಒಟ್ಟು ಸಂಖ್ಯೆಯಲ್ಲಿ ಅರ್ಧ ಹೆಚ್ಚಿನ ಪ್ರಮಾಣ ಲೆಕ್ಕವನ್ನು ತೋರಿಸುತ್ತದೆ.

ಭಾರತದಲ್ಲಿ ೨೦ ಕೋಟಿಗೂ ಹೆಚ್ಚು ಜನ ಪ್ರತಿ ವರ್ಷವೂ ಮೇಹರೋಗದಿಂದ ಪೀಡಿತರಾಗುತ್ತಾರೆ. ೧೯೭೩ರಲ್ಲಿ ಸಂಶೋಧನೆ ನಡೆಸಿದ ಚ್ಯಾಂಟ್ ಎಂಬುವದು ಹೊರಗೆಡಹಿರುವ ಅಂಶಗಮನೀಯವಾಗಿದೆ. ೧೫ ವರ್ಷದ ಕೆಳಗಿನ ವಯಸ್ಸಿನ ಗುಂಪಿನಲ್ಲಿ ಶೇಕಡ ೪ ರಷ್ಟು, ಶೇಕಡ ೧೬-೨೦ ವರ್ಷ ವಯಸ್ಸಿನ ಗುಂಪಿನಲ್ಲಿ ಶೇಕಡಾ ೫೪ರಷ್ಟು ಹುಡುಗರು ಲೈಂಗಿಕ ವರ್ಗಾವಣೆ ರೋಗದಿಂದ ನರಳುತ್ತಿದ್ದಾರು ಎಂದು ಹೇಳಿದ್ದಾನೆ.

**ಸಿಫಿಲಿಸ್**

ಈ ರೋಗ ಟ್ರೆಪೊನಿಮ ಪಲ್ಲಿಡ ಎಂಬುದರಿಂದ ಉಂಟಾಗುತ್ತದೆ. ಅದು ಆರೋಗದಿಂದ ನರಳುತ್ತಿರುವ ವ್ಯಕ್ತಿಯೊಡನೆ ಲೈಂಗಿಕ ಸಂಭೋಗವನ್ನು ಕೈಕೊಳ್ಳುವುದರಿಂದ ನೇರವಾಗಿ ವರ್ಗಾವಣೆಯಾಗುತ್ತದೆ. ಬಾಯಿಯ ರೋಗಾಂಗದಿಂದ ಕೂಡಿದ ವ್ಯಕ್ತಿಯನ್ನು ಚುಂಬಿಸಿದಾಗ ಕೂಡ ಈ ರೋಗ ವರ್ಗಾಯಿಸಬಹುದು, ವಿರಳವಾಗಿ, ರಕ್ತವರ್ಗಾವಣೆಯ ಮೂಲಕವೂ ಈ ವರ್ಗಾವಣೆ ಸಂಭವಿಸುತ್ತದೆ ಎಂದೂ ತಿಳಿದು ಬಂದಿದೆ.

**ಲೈಂಗಿಕ ಶಿಕ್ಷಣ ಯೂರ ಜವಾಬ್ದಾರಿ**

ಲೈಂಗಿಕ ಶಿಕ್ಷಣ ನೀಡುವುದು ತಂದೆತಾಯಿಗಳಿಗೆ ಮತ್ತು ಶಿಕ್ಷಕರಿಗೆ ತರುಣನಿಗೆ ಮೌಲ್ಯಗಳ ಅರ್ಥವನ್ನು ಬೋಧಿಸುವುದಕ್ಕೆ ಒಂದು ಉತ್ತಮ ಅವಕಾಶವನ್ನು ಒದಗಿಸುತ್ತದೆ. ಅದು ಎಂಥ ಮೌಲ್ಯ ಲಿಂಗದ ಪ್ರಾಮುಖ್ಯ ಮತ್ತು ಗೌರವ ಮತ್ತು ಅದರ ವಾಸ್ತವಿಕತೆ,

ಮತ್ತು ತಾರುಣ್ಯದಲ್ಲಿ ಶಾರೀರಿಕ ಕ್ರೀಡೆಗಳಲ್ಲಿ ಮತ್ತು ಮುಂದೆ ವಿವಾಹದಲ್ಲಿ ಯೋಗ್ಯ ಹರವಿನ ಮಾರ್ಗ.

ಕುಟುಂಬ ಎಂಬ ವಿದ್ಯಾ ಸಂಸ್ಥೆ ಮತ್ತು ಶಾಲೆ, ಸಮಾಜದ ಶ್ಯೂವನ್ನು ಪ್ರತಿಬಿಂಬಿಸುವುದಿಪಲ್ಲ. ಅದಕ್ಕೆ ಪ್ರತಿಯಾಗಿ ಅವು ತಮ್ಮ ತರುಣರನ್ನು ಸಮಾಜದ ಪೌಷ್ಟ್ಯಗಳನ್ನು ಎದುರುತ್ತವೆ ಎಂಬುದನ್ನು ಕಾಣಿಸುವುದು ತಂದೆತಾಯಿಗಳ ಮತ್ತು ಶಿಕ್ಷಕರ ಹೊಣೆಗಾರಿಕೆ.

ಭಾರತೀಯ ತರುಣಜನಾಂಗ, ಪಾಶ್ಚಿಮಾತ್ಯ ತರುಣರ ತೃಪ್ತಿಯ ಬಿಂದುವನ್ನು ತಲಪಿಲ್ಲ. ಆದರೆ ನಮ್ಮ ಗುರಿಗಳು ಅಭಿವೃದ್ಧಿ ದೇಶಗಳ ಗುರಿಗಳಂತಿವೆ: ಕಾರ್ಯಗಳು ಇರಲಿ ಮತ್ತು ಇನ್ನು ಹೆಚ್ಚು ಕಾರ್ಯಗಳು ಇರಲಿ, ವಿದ್ಯಾಭ್ಯಾಸದಲ್ಲಿ ಶ್ರೇಷ್ಠತರ ಅನುಕೂಲತೆಗಳನ್ನು ಹೆಚ್ಚು ಹೆಚ್ಚಾಗಿ ಒದಗಿಸಲಾಗುತ್ತಿದೆ ಮತ್ತು ಕಲೆ ಮತ್ತು ವಿಜ್ಞಾನ ವಿಷಯಗಳ ಹೆಚ್ಚು ಹೆಚ್ಚು ಶಾಖೆಗಳನ್ನು ತೆರೆಯಲಾಗುತ್ತಿವೆ. ಆದರೆ ಬೇರುಗಳನ್ನೇ ಅಲಕ್ಷ ಮಾಡಲಾಗುತ್ತಿದೆ. ಸ್ವೇಚ್ಛಾ ಸಂಪರ್ಕ ಮತ್ತು ಹೆಚ್ಚಿನ ಲೈಂಗಿಕ ಅವಕಾಶದ ಒದಗಣೆ ಭಾರತದ ಪಟ್ಟಣ ಮತ್ತು ನಗರಗಳಲ್ಲಿ ಸಾಮಾನ್ಯ ಸ್ಥಳಗಳಾಗಿವೆ. (ಫ್‌ಸ್ಟೋನ್.ನ. Shipstone ಪ್ರಕಾರ ೧೯೭೧).

ರೋಗ ಅಂಟಿದ ತಾಯಿಯ ಹೆರಿಗೆಯ ಸೆತ್ತೆಯಿಂದ ಬರುವ ಯುಟಿರೆ ದಿಂದಲೂ ಶಿಶುಗಳು ಪರಿಣಾಮ ಹೊಂದಬಹುದು. ಅವಳಿಗೆ ಸರಿಯಾದ ಚಿಕಿತ್ಸೆ ಕೊಡಿಸದಿದ್ದರೆ, ಮಗುವಿಗೆ ಅನೇಕ ಬಗೆಯ ಅಂಗ ನ್ಯೂನತೆಗಳು ಕಂಡುಬರಬಹುದು. ಕಡೆಗೆ ಮರಣಸಂಭವಿಸಿದರೂ ಆಶ್ಚರ್ಯವಿಲ್ಲ.

ಮದುವೆಗೆ ಮುಂಚೆ ಪ್ರತಿಯೊಬ್ಬ ದಂಪತಿಗಳೂ ಎಸ್.ಟಿ.ಡಿ. (ಗುಹ್ಯರೋಗ) ಯ ಸಂಭಾರ್ಸತೆಯನ್ನು ತೆಗೆದು ಹಾಕಲು ಮತ್ತು ರಕ್ತ ವರ್ಗಗಗಳನ್ನು ಖಚಿತಪಡಿಸಿಕೊಳ್ಳಲು ರಕ್ತ ಪರಿಕ್ಷೆ ಮಾಡಿಕಕೊಳ್ಳುವದು ಅವಶ್ಯಕ. ಜೀವಾಣು ಪರಿಪಾಕ ಹೊಂದುವ ಅವಧಿ ಸಾಮಾನ್ಯವಾಗಿ ೪ ೬ ತಿಂಗಳು ಚರಿತ್ರೆ, ರೋಗಿಯ ಶಾರೀರಿಕ ಮತ್ತು ವಿರ್ಯಾಣುಶಾಸ್ತ್ರದ ಪರೀಕ್ಷೆ ಸಿಫಿಲೀಸ ಕಾಯಿಲೆಯ ಗುರುತನ್ನು ಸ್ಥಾಪಿಸುವುದಕ್ಕೆ ಬಹುಮುಖ್ಯವಾದುದು ಹೇಗಾದರೂ ಶಿಫಲಿಸ್ ಖಾಯಿಲೆಯಿರುವ ಮನುಷ್ಯ ತನ್ನ ಅಂಗದ ಮೇಲೆ ಮೇಹವ್ರಣವನ್ನು ರತಿರೋಗದ ಹುಣ್ಣನ್ನು ಸ್ಪಷ್ಟವಾಗಿ ಕಾಣಬಹುದು.

ಗೊನ್ಸೋರಿಯ, ನಿಸೀರಿಯಾ ಗೊನೊಕೊಕಿ ಯ ಕಾರಣದಿಂದ ಸೂಕ್ಷ್ಮವಾಗಿ ಅಂಟಿರುವ ಗುಹ್ಯರೋಗ. ಜೀವಾಣುಪರಿಪಾಕದ ಅವಧಿ ೩ ರಿಂದ ೬ ದಿನಗಳು. ಅದು ಸಂಭೋಗ ಕ್ರಿಯೆಯಲ್ಲಿ ಅಂಟು ರೋಗದ ವ್ಯಕ್ತಿಯಿಂದ ವರ್ಗಾಯಿಸಲ್ಪಡುತ್ತದೆ. ಹೊಸದಾಗಿ ಹುಟ್ಟಿದ

ಮಕ್ಕಳು ಕಣ್ಣುಗಳ ಅತಿಗಂಭೀರ ಅಂಟುಜಾಡ್ಯವನ್ನು ಪಡೆಯುವ ಸಾಧ್ಯತೆಯಿದೆ. ಆ ರೋಗಕ್ಕೆ ಆಪಾಲ್ಮಿಯಾ ನಿಯೊಸೇಟೊರಂ ಎಂದು ಹೆಸರು. ಅದು ತಾಯಿಯಿಂದ ಬರುತ್ತದೆ. ಹಾಗೆಯೇ ಚಿಕಿತ್ಸೆ ಮಾಡದೆ ಬಿಟ್ಟರೆ ಅಂಧತ್ವದಲ್ಲಿ ಕೊನೆಗೊಳ್ಳಬಹುದು, ಗೊನೋರಿಯ ರೋಗದಲ್ಲಿ ಕೀವನಿ ಸ್ರಾವಗಳು ದೊರಕುವ ಕಡೆಗಳಲ್ಲಿ ಅದರ ಹಚುವಿಕೆ ರೋಗವನ್ನು ಪತ್ತೆ ಹಚ್ಚಲು ಪರಿಣಾಮಕಾರಿ ಮಾರ್ಗ. ಅನೇಕ ವೇಳೆ ಸ್ಥಿತಿ ಸ್ತ್ರೀಯರಲ್ಲಿ ಪತ್ತೆಯಾಗದೇ ಹೋಗಬಹುದು ಏಕೆಂದರೆ ಅದನು ಸಾಮಾನ್ಯ ಯೋನಿ ಸ್ಖಲವನೆಂದು ತಪ್ಪಾಗಿ ತಿಳಿಯುವ ಸಾಧ್ಯತೆಯಿದೆ.

ಸ್ಪಷ್ಟವಾದ ದತ್ತ ಅಂಕಿ ಅಂಶಗಳ ವಿವರ ಲಭ್ಯವಾಗದಿದ್ದರೂ ಈ ಎರಡೂ ಸಾಮಾನ್ಯ ಗುಹ್ಯ ರೋಗಗಳ ನಿರಂತರತೆಗೆ ಹೊಣೆಯಾದ ಅಂಶಗಳೆಂದರೆಃ

೧. ಹೆಚ್ಚು ಪ್ರಕರಣಗಳನ್ನು ಖಾಸಗಿ ವೈದ್ಯರಿಂದ ಚಿಕಿತ್ಸೆ ಮಾಡಿಸುವದು.

ಅದ್ದರಿಂದ ಯುಕ್ತ ದಾಖಲೆಯ ನಿರ್ವಹಣೆ ಆಗದೆ ಇರುವುದು.

೨. ಇತ್ತೀಚಿನ ವರ್ಷಗಳಲ್ಲಿ ದೊಡ್ಡ ಪ್ರಮಾಣದಲ್ಲಿ ನೈತಿಕ ಸಡಲಿಕೆ ಮತ್ತು ಸ್ವೇಚ್ಛಾ ಸಂಪರ್ಕ ಹೆಚ್ಚುತ್ತಿರುವದು.

೩. ಈ ಸ್ಥಿತಿಗಳನ್ನು ತಡೆಹಿಡಿಯಲು ರೋಗನಿರೋಧ ಔಷಧಗಳು ಮುಕ್ತವಾಗಿ ದೊರಕುತ್ತಿರುವುದು.

೪. ಅನೈತಿಕ ಸಂಭೋಗದಲ್ಲಿ ಗರ್ಭನಿರೋಧಕಗಳನ್ನು ಹೆಚ್ಚು ಹೆಚ್ಚಾಗಿ ಬಳಸುತ್ತಿರುವುದು, ಗರ್ಭಧಾರಣೆಯನ್ನು ತಡೆಯಬಹುದುದೇ ಹೊರತು ಗುಹ್ಯರೋಗ ವನ್ನಲ್ಲ (ಎಸ್.ಟಿ.ಡಿ.)

೫. ಸಂಪರ್ಕವನ್ನು ಗುರುತಿಸುವುದರ ಅಭಾಸ ಎಂದರೆ, ರೋಗ ಅಂಟಿದ ವ್ಯಕ್ತಿ. ಸಂಪರ್ಕಗಳಲ್ಲಿ ರೋಗ ದ ಮೂಲ

ಏಡ್ಸ್ಃ

(AIDS = Acquired Immuno Deficiency Syndrome = ಸಂಪಾದಿಸಿದ, ರಕ್ಷಿತ, ಕೊರತೆಯ ಚಿಹ್ನೆಗಳು

ಈ ಖಾಯಿಲೆ ವಿಶ್ವದ ಆಸಕ್ತಿಯನ್ನೇ ಕೆರಳಿಸಿದೆ. ಆದರಿಂದ ಅನೇಕ ದೇಶಗಳು ಅದರ ಸಂಭವತೆಯನ್ನು ವರದಿ ಮಾಡುತ್ತಿವೆ.

ವೈದ್ಯ ವಿಜ್ಞಾನಿಗಳು ಈ ರೋಗಕ್ಕೆ ಕಾರಣವಾದ ರನಿಸಿಕೆಗಳನ್ನು ಪತ್ತೆಮಾಡುವಲ್ಲಿ

ಕಾರ್ಯನಿರತರಾಗಿದ್ದಾರೆ ಮತ್ತು ಹೊಸದಾಗಿ ಕಂಡು ಬರುತ್ತಿರುವ ಈ ರೋಗದ ರಹಸ್ಯಗಳನ್ನು ಬಿಡಿಸುವುದರಲ್ಲಿ ಮಗನ್ನರಾಗಿದ್ದಾರೆ. ಅಮೇರಿಕ ಸಂಯುಕ್ತ ಸಂಸ್ಥಾನಗಳ ಸರ್ಕಾರದ ಅಧಿಕಾರಗಳು ವರದಿ ಮಾಡಿವೆ. ಅತಿ ಹೆಚ್ಚಿನ ಸಂಖ್ಯೆಯ ಪ್ರಕರಣಗಳು ಅದರ ಹರಡುವಿಕೆಯನ್ನು ಅಡಗಿಸುವ ಪ್ರಯತ್ನದಲ್ಲಿ ತೊಡಗಿವೆ ಎಂದು ಸಲಿಂಗಕಾಮಿಗಳಲ್ಲಿ ಮತ್ತು ಲೈಂಗಿಕ ಸ್ವೇತ್ಛಾಸಂಪರ್ಕದಿಂದ ಕೂಡಿದ ಅತಿಹೆಚ್ಚಿನ ಅಪಾಯಗಳುಳ್ಳ ವರ್ಗಗಳಲ್ಲಿ ಇರುವುದನ್ನು ದಾಟಿ ಮುಂದಕ್ಕೆ ಹರಡುವುದನ್ನು ತಡೆಗಟ್ಟುವ ದಿಸೆಯಲ್ಲಿ ಮತ್ತು ರಕ್ತಸಂಯೋಜನೆಯಿಂದ ಅಂಟಿದ ಏಡ್ಸ್ ಲಸಿಕೆಯನ್ನು ಕಳಚಿಹಾಕುವ ಪ್ರಯತ್ನದಲ್ಲಿ ತಕ್ಕಮಟ್ಟಿನ ಯಶಸ್ಸನ್ನು ಸಂಪಾದಿಸಿದೆ.

ಇದ್ದಕ್ಕಿದ್ದಂತೆ ಬಂದ ಈ ಕಾಯಿಲೆ ೩ ರಿಂದ ೧೪ ದಿನಗಳವರೆಗೆ ಇರುತ್ತದೆ. ಅದು ಜ್ವರ, ಬೆವರುವುದು, ಸೋಮಾರಿತನ, ಹಸಿವಿಲ್ಲದಿರುವಿಕೆ, ಉಬ್ಬಳಿಕೆ, ನೋವುಗಳು ಮತ್ತು ಯಾತನೆಗಳು, ತಲೆನೋವು, ಭೇದಿ, ಗಂಟಲು ಕೆರೆತ, ಗುಳ್ಳೆ, ಗುಲ್ಮರೋಗ ಸಂಬಹಂಧಿ ದುಗ್ಧರಸಗಂಟುಗಳ ಸರ್ವೇಸಾಧಾರಣ ಉತಗಳು ಮತ್ತು ರಕ್ತಘನೀಭವನ ಗಂಟುಗಳಲ್ಲಿ ಕಡಿತ ಇವುಗಳಿಂದ ಜೊತೆಗೊಂಡಿರುತ್ತದೆ. ತೂಕದ ನಷ್ಟ ನಾಟಕೀಯವಾಗಿರುತ್ತದೆ.

ಪೂರ್ಣ ಅರಳಿದ ಕಾಯಿಲೆಯನ್ನು ಬೆಳಸಿಕೊಂಡವರಲ್ಲಿ ಶೇಕಡಾ ೯೦ ರಷ್ಟು ಜನ ರೋಗವನ್ನು ಪತ್ತೇ ಹಚ್ಚಿನ ೨ ವರ್ಷಗಳ ಒಳಗೆ ಸತ್ತಿದ್ದಾರೆ ಅತಿಕಿರಿಯ ವಯಸ್ಸಿನಲ್ಲಿ ಮುದಿವಯಸ್ಸಿನವರಲ್ಲಿ ಬದುಕಿನ ಕಾಲ ಇನ್ನೂ ಕಡಿಮೆ.

ಒಂದು ಅಧ್ಯಯನದ ಪ್ರಕಾರ ನರಳುವವರಲ್ಲಿ ಶೇಕಡಾ ೭ ರಷ್ಟು ಗಂಡು ಸಲಿಂಗ ಕಾಮಿಗಳು ಅಥವಾ ಭಿನ್ನಲಿಂಗಿಗಳು, ಅವರ ಸರಾಸರಿ ಆಯಸ್ಸು ೩೫ ವರ್ಷಗಳು ಅಭಿಧಮನಿಯ ಔಷಧಗಳನ್ನು ತಪ್ಪಾಗಿ ಬಳಸುವವರ ಸಂಖ್ಯೆ ಶೇಕಡಾ ೧೪ರಷ್ಟು ಸೇರುತ್ತದೆ. ಉಳಿದ ಸಂಖ್ಯೆ ರಕ್ತಸಂಯೋಜನೆಯನ್ನು ಸ್ವೀಕರಿಸುವವರಿಂದ ಕೂಡಿರುತ್ತದೆ.

ಶೇಕಡ ಅಲ್ಪ ಪ್ರಮಾಣದ ಪ್ರಕರಣಗಳಲ್ಲಿ ರೋಗನಿದಾನ ತಿಳಿದು ಬಂದಿಲ್ಲ.

ಈ ಮರಣಾಂತಕ ರೋಗವನ್ನು ತಡೆಯಲು ಅವಶ್ಯಕ ಕ್ರಮಗಳಿಂದ ರಕ್ಷಿತರಾಗಿ

## ಗುಹ್ಯರೋಗಗಳ ಎಸ್.ಟಿ.ಡಿ. ವರ್ಗೀಕರಣ

| ಪ್ರಾಣಿಜೀವಿ | ರೋಗದ ಹೆಸರು | ಪ್ರಧಾನ ರೋಗಾಂಗಗಳು |
|---|---|---|
| ೧. ಸ್ಪಿಲೊಚಿಟೆಸ್ | ಸಿಫಿಲೀಸ್ ಅರಳಿದ ಪ್ರಥಮ ಎರಡನೆಯ ದರ್ಜೆ ತಡವಾಗಿ | ಹುಣ್ಣು |
| ೨. ಬ್ಯಾಕ್ಟೀರಿಯಾ ಏಕಾಣುಜೀವಿ | ಗೊನೊರಿಯಂ ಕ್ಯಾಸಿಕ್ರೊಯಿಡ್ ಗ್ರಾನುಲೋಮ ಇಂಗುಲೇನ ಅಸ್ಪಷ್ಟ ಮೂತ್ರನಾಳದ ಊರಿಯೂತ | ಪುಸ್ಟುಲಾಸ್ ವಿಸರ್ಜನೆ ಹುಣ್ಣುಗಳು ಬೆಬ್ಬೆ ಹುಣ್ಣು ಜಲದಂಥದರ ಸ್ಖಲನ, ವಸಲನ. |
| ೩. ವೈರಸ್ | ಹರ್ಪ್ಸ್ ಜನನೇಂದ್ರಿಯಗಳು ಮೂಳೆಗಂಟು ಅಕ್ಯುಮಿನೆಟ ಮೊಲ್ಯುಸ್ಕಂ ಕಂಟೇಯಗೇ ಸಂಹೆಪಾಟಿಟೀಸ್ ಬಿ. | ಹುಣ್ಣುಗಳು ಪುನಃ ಪ್ರಾಪ್ತ ಬೆಳವಣಿಗೆಗಳು. ಕಾಮಾಲೆ. |
| ೪. ಕ್ಲಮಿಡಿಯಾ | ಅನಿರ್ದಿಷ್ಟ ಉರಿಯೂತ ದುಗ್ಧ ರಸ ಗ್ರಾನ್ಯುಲೋಮ. ವೆನೆರಂ. | ಜಲದಂಥ ದ್ರವದ ವಿಸರ್ಜನೆ |
| ೫. ಪ್ರೊಟೊಜೆಲಿ | ಕೇಶರೊಗಗಳು ಅಮಿಯೇಬಯಾಸಿಸ್ ಬಹುಅಪರೂಪ | ಬೇಬ್ಬೆಉರಿಯೂತ ಮತ್ತು ಕೆರೆತ ಜೊತೆಗೆ ಘ್ರಾತಿ ವಿಸರ್ಜನೆ. ಹುಣ್ಣು. |
| ೬. ಬೂಸ್ಟು | ಕ್ಯಾಂಡಿಡಿಯಾಸಿಸ್ | ಅಕ್ಷತ ವಲಯಗಳು ಮೊಸರಿನಂಥ ಕ್ರಸ್ಟಾ ಮತ್ತು ಕೆರೆತ ಗರಣೆ |
| ೭. ಪರಾಲವಂಬಿಗಳು | ತುರಿಕೆ ಪೆಡಿಕ್ಯೂಲುಸಿಸ್ ಪ್ಯುಬಿಸ್ ಗುಂಡುಸೂಜಿ ಅಂಟಿಕೆ. | ಸಾಧಾರಣೇಯ ಕೆರೆತ ಮತ್ತು ಕೆರೆತ ಮತ್ತು ಅಲೆರ್ಜಿಕ್ ರ್‍ಯಾಷ್ ಕೆರೆತ ಅನಲ್ ಹೆಣ್ಣು ಜನನೇಂದ್ರಿಯದ ಕೆರೆತ. |
| ೮. ನಂಜು | ಏಡ್ಸ್ | ಪಠ್ಯ ಭಾಗ ನೋಡಿ |

**ವಿವಾಹ ಪೂರ್ವ ಲಿಂಗ.**

ತರೂಣರೂ ಅವಿವಾಹಿತರೂ ಆದ ಜನ ಲೈಂಗಿಕ ಸಂಬಂಧವನ್ನು ಹೊಂದಿರುವಲ್ಲಿ ಯಾವುದು ನಿರ್ದಿಷ್ಟವಾದ ತಪ್ಪು ಎನ್ನಬಹುದು ಅದರಲ್ಲಿ ಏನಾದರೂ ತಪ್ಪಿದೆಯೆ ಏನಾದರೂ

ಕೆಡಕು ಫಲಿತಾಂಶಗಳುಂಟಾಗುತ್ತವೆಯೆ.

ಲೈಂಗಿಕ ಸಂಬಂಧಗಳು ವಿವಾಹಕ್ಕೆ ಮೀಸಲಾದವು. ಕಾರಣ ಅವನ್ನು ದೇವರು ಗಂಡಸರಿಗೆ ಹೆಂಗಸರಿಗೆ, ಅವರಿಬ್ಬರಿಗೆ, ಒಟ್ಟಿಗೆ ಅರ್ಪಿತವಾದ, ಕಾಯಂ ಆದ ಪರಸ್ಪರ ಪ್ರೇಮದ ಸಂಕೇತವಾಗಿ ನೀಡಿದ್ದಾನೆ. ಅವು ನಮ್ಮ ಅತ್ಯಂತ ಆಳವಾದ ತೀರ್ಮಾನಗಳನ್ನು ಭಾವಾವೇಶಗಳನ್ನು ಒಳಗೊಂಡಿವೆ.

ಮದುವೆ ಎಂಬುದರ ಅರ್ಥ ಒಂದು ಗಂಡು ಮತ್ತು ಒಂದು ಹೆಣ್ಣು ಪರಸ್ಪರ ನಂತರ, ಕೆಲವು ಸಮಯದ ಅನಂತರ ಮತ್ತು ಪುನಃ ಪುನಃ ಅಲೋಚನೆಯ ನಂತರ ಒಬ್ಬರನ್ನೊಬ್ಬರು ಆರಿಸಿಕೊಂಡು ಜೀವನಾಂತದವರೆಗೆ ಒಟ್ಟಾಗಿ ಬದುಕಬೇಕು ಎಂಬುದು. ೨೧ ವರ್ಷದವರೆಗೆ ಅನೇಕ ಜನ ತರುಣರು ಭಾರತದಲ್ಲಿ ಈ ತೀರ್ಮಾನವನ್ನು ಕೈಕೊಳ್ಳುವದರಲ್ಲಿ ಸಿದ್ಧರಾಗಿರುವುದಿಲ್ಲ.

**ನಿವೊಬ್ಬ ಹೊಣೆಗಾರ ಯಜಮಾನ (ತಂದೆ : ತಾಯಿ) ಆಗುವವರೆಗೆ ಲಿಂಗ ವಿಚಾರವನ್ನು ಮುಂದೂಡಿಬಿಡಿ.**

ವಿವಾಹಕ್ಕೆ ಮತ್ತು ಲೈಂಗಿಕ ಸಂಬಂಧಗಳಿಗೆ ಮುಂಚೆ ಮಾನಸಿಕ, ಶಾರೀರಿಕ ಮತ್ತು ಹದಿಹರೆಯದವರ ನಡತೆಯನ್ನು ರೂಪಿಸುವ ಭಾವವೇಶದ ಅಭಿವೃದ್ಧಿಗಳೆಲ್ಲದರ ಒಟ್ಟು ಶ್ರೇಣಿಯ ವಿಚಾರ ಮಂಥನ ಆಗಬೇಕು. ಈಗಿರುವ ನಿಮ್ಮ ವೈಯಕ್ತಿಕತೆ, ಅನೇಕ ರೀತಿಗಳಲ್ಲಿ ಇನ್ನು ಮುಂದಿನ ಹತ್ತು ವರ್ಷಗಳಲ್ಲಿ, ಅರ್ಥಗರ್ಭಿತವಾಗಿ ಬದಲಾವಣೆ ಹೊಂದಿಬಿಡುತ್ತದೆ. ಬಹುಶಃ ಆಗ ನೀವು ವಿವಾಹಕ್ಕೆ ಸಿದ್ಧವಾಗಬಹುದು.

ಆ ಸಮಯದಲ್ಲಿ ನೀವು ಶಾರೀರಿಕವಾಗಿ ಅಲ್ಲದೆ, ಮಾನಸಿಕವಾಗಿ, ಭಾವುಕವಾಗಿ ಸಿದ್ಧವಾದಂಥ ಹೆಜ್ಜೆ ಇಡಲು ಸಿದ್ಧವಾಗಿರುತ್ತೀರಿ. ಆದರೆ ಆ ವೇಳೆಗೆ ನಿಮ್ಮ ಶಿಕ್ಷಣದ ತಯಾರಿಕೆ ಬಹುಮಟ್ಟಿಗೆ ಮುಗಿದಿರಬಹುದು ಮತ್ತು ನಿಮ್ಮ ಜೀವಿತದ ಅಥವಾ ಆಯ್ದ ಜೀವಿತ ಕಾರ್ಯದ ಆಯ್ಕೆ ಪೂರ್ಣಗೊಂಡಿರಬಹುದು. ಅನಂತರ ನೀವು ಮದುವೆಗೆ ಸಂಬಂಧಪಟ್ಟ ಎಲ್ಲ ಹೊಣೆಗಳನ್ನು ಕೈಗೊಳ್ಳಲು ಸಮರ್ಥರಾಗುತ್ತೀರಿ. ಏಕೆಂದರೆ ಆ ವೇಳೆಗೆ ನೀವು ನಿಮ್ಮ ಗಟ್ಟಿಯಾದ ಜ್ಞಾನ, ಅನುಭವ ಮತ್ತು ಸಾಮಾರ್ಥ್ಯಗಳನ್ನು ಅರಿತವರಾಗಿರುತ್ತೀರಿ. ಲೈಂಗಿಕ ಆಸಕ್ತಿಗಳ ಬಗ್ಗೆ ಎಚ್ಚರಿಕೆ: ಹುಡುಗರು ಕ್ರಮೇಣ ಹುಡುಗಿಯರು ಆಕರ್ಷಿಕರಾಗಿರುತ್ತಾರೆಂದು ಮತ್ತು ಮೋಹಗೊಳಿಸುತ್ತಾರೆಂದು ಅರಿತು ಕೊಳ್ಳುತ್ತಾರೆ. ಹುಡುಗಿಯರು ಹುಡುಗರು ತಾವು ಪರಸ್ಪರ ಭಿನ್ನ ಆದರೆ ಅಪೇಕ್ಷಣೀಯರು ಎಂದು ತಿಳಿದುಕೊಳ್ಳುತ್ತಾರೆ. ಈ ಪ್ರೇರಣೆಗಳು ಎಷ್ಟು ಹೊಸತು. ಅಷ್ಟೇ ಅಲ್ಲ ಶಾರೀರಿಕವಾದದ್ದು ಮತ್ತು ಶಕ್ತಿ ಪೂರ್ಣವಾದದ್ದು. ಎಂದರೆ ಹದಿಹರೆಯದವರು

ಈ ಎಲ್ಲವುಗಳಿಂದ ಮರುಳಾಗುವ ಪ್ರವೃತ್ತಿಯನ್ನು ಹೊಂದಿರುತ್ತಾರೆ. ಅಲ್ಲಿ ಅತಿ ಕೂತೂಹಲವಿರುತ್ತದೆ. ತನ್ನತನದ ಬಗ್ಗೆ ಇತರರ ಬಗ್ಗೆ ಆಶ್ಚರ್ಯ ಪ್ರವೃತ್ತಿ ಇರುತ್ತದೆ. ಅನೇಕ ತರುಣ ಬಾಲಕರು ಮತ್ತು ಬಾಲಕಿಯರು ತಮ್ಮಗಳ ಬಗ್ಗೆಯೇ ಅನಿಶ್ಚಿತವಾಗಿರುತ್ತಾರೆ. ಅದೂ ವಿಶೇಷವಾಗಿ ವಿರೋಧ ಲಿಂಗದ ವಿಷಯದಲ್ಲಿ. ಅವರಿಗೆ ಒಂದು ಮಟ್ಟದ ಭರವಸೆ ಬರುವವರೆಗೆ, ಇನ್ನೊಂದು ಲಿಂಗ ಜಾತಿಯ ವಿಚಾರಕ್ಕೆ ಸಂಬಂಧಿಸಿದಂತೆ ವೈಯಕ್ತಿಕ ಪ್ರೀತಿಯ ಸ್ವಭಾವದ ಮತ್ತು ವಾತ್ಸಲ್ಯದ ಭಾವನೆಗಳನ್ನು ಹೊಂದುವುದು ತುಂಬ ಕಷ್ಟ ಸಾಧ್ಯವಾಗುತ್ತದೆ. ಭಿನ್ನಲಿಂಗದ ಬಗ್ಗೆ ಪಕ್ವತೆ ಮತ್ತು ತಿಳುವಳಿಕೆ ಕ್ರಮೇಣ ಅನುಭವದಿಂದ ಬರುತ್ತದೆ.

**ತರುಣರಿಗೆ ಶಾರೀರಿಕ ಸಲಿಗೆಯ ಅಪಾಯಗಳು**

ಹೆಣ್ಣಿನ ಆಕರ್ಷಣೆಯ ಬಗೆಗೆ ಪುರುಷನ ಸ್ವಭಾವ ಜನ್ಯ ಪ್ರತಿಕ್ರಿಯೆ ಪ್ರಮುಖವಾಗಿ ಶಾರೀರಿಕವಾದದ್ದು. ಆದರೆ ಗಂಡಿನ ಆಕರ್ಷಣೆ ಬಗ್ಗೆ ಹೆಣ್ಣಿನ ಸಹಜ ಪ್ರತಿಕ್ರಿಯೆ ಪ್ರಮುಖವಾಗಿ ಭಾವಾವೇಶದಿಂದ ಕೂಡಿದ್ದು. ಹೆಂಗಸು ಸಾಮಾನ್ಯವಾಗಿ ಪ್ರೀತಿಯ ಭಾವಾವೇಶದ ಪ್ರದರ್ಶನಗಳನ್ನು ಕೊಡಲು ಮತ್ತು ಸ್ವೀಕರಿಸಲು ಅಪೇಕ್ಷಿಸುತ್ತಾಳೆ. ಆದರೆ ಗಂಡಸು ಇದಕ್ಕಿಂತ ಇನ್ನು ಮುಂದಕ್ಕೆ ಹೋಗಿ ತನ್ನ ಪ್ರೀತಿಯನ್ನು ಶಾರೀರಿಕವಾಗಿ, ಕಡೆಗೆ ಲೈಂಗಿಕ ಸಂಭೋಗ ಕ್ರಿಯೆಯಾಗಿ ಪ್ರದರ್ಶಿಸುತ್ತಾನೆ. ಪೆದ್ದು ಹುಡುಗಿ ತನ್ನ ತರುಣ ಗೆಳೆಯನನ್ನು ಸ್ವಾಗತಿಸಿದಾಗ ಶಬ್ದ ಗಳ ಮೂಲಕ ಅಥವಾ ಸಂಕೇತವಾಗಿ, ತನ್ನ ಪ್ರೀತಿಯನ್ನು ಚುಂಬನದಿಂದ ಅಥವಾ ಕೆನ್ನೆ ತಟ್ಟುವುದರಿಂದ, ಅವಳು ಉದ್ದೀಪನೆಗೆಲಾಳಿಸಿದೆನೆಂಬುದನ್ನು ತನ್ನ ಎಲ್ಲ ನಿರ್ದೋಷತ್ವದಿಂದ ತಾನು ಅವನಲ್ಲಿ ಬಲವತ್ತರವಾದ ಕಾಮನೆಗಳನ್ನು ಬಹುಶಃ ಅವನು ತನ್ನ ಆತ್ಮ ನಿಯಂತ್ರಣವನ್ನು ಕಳೆದುಕೊಳ್ಳಲು ಕಾರಣವನ್ನುಂಟು ಮಾಡಿದೆನೆಂದು ತಿಳಿದರೂ, ಅವಳು ಅದಕ್ಕೆ ಸಂವಾದಿಯಾಗಿ ಯಾವದೇ ತೊಡಕಿಗೆ ಸಿಲುಕದೆ ತಾಳ್ಮೆಯಿಂದ ಉಳಿದುಕೊಂಡಿದ್ದರೂ, ಗಾಬರಿಯಿಂದ ಅರ್ಥಮಾಡಿ ಕೊಳ್ಳುತ್ತಾಳೆ. ಆದರೆ ಒಬ್ಬೊಬ್ಬರೂ ತಮ್ಮ ತಮ್ಮ ಲೈಂಗಿಕ ಭಾವನೆಗಳಲ್ಲಿನ ನರಗಳಲ್ಲಿ ಹೆಚ್ಚಾಗಿ ವ್ಯತ್ಯಾಸವನ್ನು ಪಡೆದಿರುತ್ತಾರೆ. ಹಾಗೂ ಕೆಲವು ಹುಡುಗಿಯರು ಪ್ರೀತಿಗೆ ಪ್ರತಿ ಕ್ರಿಯಿಸಲು ತಮ್ಮ ಸ್ವಾಭಾವಿಕ ಆಕಾಂಕ್ಷೆಯಿಂದ ಕೊಚ್ಚಿ ಹೋಗಲೂಬಹುದು. ಅಷ್ಟೇ ಅಲ್ಲದೆ, ಇನ್ನೂ ಮುಂದಕ್ಕೆ ಹೋಗುವುದಾದರೆ, ಏನೂ ವಿಷಯ ತಿಳಿಯದ ಹುಡುಗ, ಹುಡುಗಿಯರ ಪ್ರತಿಕ್ರಿಯೆಗಳು ತನ್ನದರಂತೆಯೇ ಇವೆ ಎಂದೂ ಕಲ್ಪಿಸಿಕೊಳ್ಳಬಹುದು. ಆಗ ಅವಳ ಪ್ರೀತಿಯ ಪ್ರದರ್ಶನವನ್ನು ಹೆಚ್ಚು ಸಲಿಗೆಗೆ ಆಹ್ವಾನವೆಂದು ಹುಡುಗ ಭಾವಿಸಲೂಬಹುದು. ಲಿಂಗಗಳ ನಡುವಿನ ಮೂಲ ವ್ಯತ್ಯಾಸವನ್ನು ತಿಳಿದುಕೊಳ್ಳುವುದು ಹುಡುಗಿಗೆ ಅತಿಮಹತ್ವದ ಪ್ರಮುಖ ಅಂಶವಾಗಿದೆ. ಆದ್ದರಿಂದ ಅವಳು ತರುಣ ವ್ಯಕ್ತಿಯ ಕಾಮನೆಯನ್ನು ಉದ್ರೇಕಿಸುವ ಯಾವುದೇ ಕ್ರಿಯೆಯನ್ನು ಕೂಡಿಟ್ಟುಕೊಳ್ಳಲು ಕೈಕೊಳ್ಳಬಾರದು.

ಆದರೆ ಅವನು ತನ್ನ ಸಂಯಮವನ್ನು ಎಲ್ಲ ವಿಧದಲ್ಲಿ ಅವನಿಗೆ ಸಹಾಯಮಾಡಬೇಕು.

ಪುರುಷನ ಜನನೇಂದ್ರಿಯಗಳು ಬಾಹ್ಯ ಸ್ವರೂಪದವುಗಳಾದುದರಿಂದ ಲೈಂಗಿಕ ಭಾವನೆಗಳು ಹೆಚ್ಚು ನೇರವಾಗಿ, ಜನನಾಂಗಗಳಲ್ಲಿ ಕೇಂದ್ರೀಕರಿಸುತ್ತವೆ. ಪುರುಷ ಬಹು ಸುಲಭವಾಗಿ ಮತ್ತು ಅತಿ ತ್ವರೆಯಾಗಿ ಕೆರಳುತ್ತಾನೆ. ಪುರುಷನಲ್ಲಿ ಬಲವತ್ತರವಾದ ಲೈಂಗಿಕ ಉದ್ದೀಪನೆ ಕೆಲವು ಕ್ಷಣಗಳಲ್ಲೇ ಸಂಭವಿಸಬಹುದು. ಅದು ಇನ್ನೂ ಸುಲಭವಾಗಿ ಲೈಂಗಿಕ ಸಂಬಂಧಗಳ ಬಗ್ಗೆ ಯೋಚಿಸಿದ ಫಲವಾಗಿ ಕೂಡ ತಕ್ಷಣದಲ್ಲಿಯೇ ಸಂಭವಿಸಬಹುದು. ಹುಡಿಗಿಯರು ಖಚಿತವಾಗಿ ಅರ್ಥ ಮಾಡಿಕೊಳ್ಳಬೇಕುಃ ಅವರು ಅನಾವಶ್ಯಕವಾಗಿ ಹುಡುಗರನ್ನು ತಮ್ಮ ಉಡುಪಿನ ಅಥವಾ ಸ್ವಭಾವದ ಸೂಚಿತ ರೀತಿಯಿಂದ ಉದ್ರೇಕಿಸಬಹುದು ಎಂಬುದನ್ನು ತಮ್ಮ ಚುರುಕು ಕ್ರಿಯೆಗಳಿಂದ ಈ ಹುಡುಗಿಯರು ಹುಡುಗರಲ್ಲಿ ಅಪೇಕ್ಷೆಗಳನ್ನು ಮತ್ತು ಎಳೆತಗಳನ್ನು ನಿರ್ಮಿಸಬಲ್ಲರು. ಹುಡುಗಿಯರು ಕೆಲವು ಹುಡುಗರ ತತ್‌ಕ್ಷಣದ ಉದ್ರೇಕ ಭಾವನೆಗಳ ಸ್ವರೂಪವನ್ನು ಅರ್ಥಮಾಡಿಕೊಳ್ಳದಿರಬಹುದು. ಆದ್ದರಿಂದ ಅವರು ತಮ್ಮ ಸ್ವಂತ ಉದ್ರೇಕತ್ವದ ಪರಿಣಾಮವನ್ನು ಅರ್ಥ ಮಾಡಿಕೊಳ್ಳಲು ವಿಫಲರಾಗುತ್ತಾರೆ.

ಇದಕ್ಕೆ ಪ್ರತಿವಿರೋಧವಾಗಿ ಹುಡುಗರು ಕೂಡ, ಹುಡುಗಿಯರ ಎಷ್ಟರಮಟ್ಟಿಗೆ ಲೈಂಗಿಕ ಉದ್ರೇಕಕ್ಕೆ ಹೊಂದಿಕೊಳ್ಳುತ್ತಾರೆ, ಭಾವೋದ್ರೇಕ ಸಂಪರ್ಕದ ಅನುಭವವನ್ನು ಪಡೆಯುತ್ತಾರೆ ಮತ್ತು ಪ್ರೀತಿಯನ್ನು ಬಯಸುತ್ತಾರೆ ಎಂಬುದನ್ನು ಅರ್ಥಮಾಡಿಕೊಳ್ಳುವುದಿಲ್ಲ. ಒಬ್ಬ ಹುಡುಗ ಒಬ್ಬ ಹುಡುಗಿಯೊಡನೆ ಶಾರೀರಿಕ ತೃಪ್ತಿಗೋಸ್ಕರ ಮಾತ್ರ ಲೈಂಗಿಕ ಸಂಬಂಧವನ್ನು ಹೊಂದಬಹುದು. ಆದರೆ ಅನಂತರ ಅವನು ಆಶ್ಚರ್ಯಚಕಿತನಾಗಿ ಅರ್ಥಮಾಡಿಕೊಳ್ಳಬಹುದು, ಹುಡುಗಿಯ ಪರವಾಗಿ ಅದು ಪ್ರೇಮದ ಸಂಬಂಧಕ್ಕೆ ತಿರುಗಿದೆ ಎಂಬುದನ್ನು. ಹುಡುಗನಿಗೆ ಅದು ಶಾರೀರಿಕ ಅನುಭವ ಮಾತ್ರವಾಗಿ ಉಳಿದಿದೆಯೆಂದೇ ಅವನು ತಿಳಿಯಬಹುದು. ಹುಡುಗಿ ನಿಜವಾಗಿ ಹುಡುಗನೊಡನೆ ಪ್ರೇಮವನ್ನು ಉಳ್ಳವಳಾಗಿದ್ದರೆ, ಅಂಥ ಏಕಪಕ್ಷೀಯವಾದ ಪರಿಸ್ಥಿತಿ ಅಸುಖಕರವಾದ ಫಲಿತಾಂಶಗಳನ್ನು ಪಡೆಯಬಹುದು. ಹುಡುಗಿಯರು ಕಟುವಾಗಬಹುದು, ಭ್ರಮನಿರಸನಗೊಳ್ಳಬಹುದು ಮತ್ತು ಹೃದಯ ಭಂಗಿತರಾಗಬಹುದು ಮತ್ತೆ ಕೆಲವೊಮ್ಮೆ ತಮ್ಮ ಯಾತನೆಯ ಭಾವುಕ ಸ್ಥಿತಿಯ ಕಾರಣ ತಪ್ಪಾಗಿ ಅವರ ಮದುವೆ ನಿಲ್ಲಬಹುದು ಅಥವಾ ಆ ಸ್ಥಿತಿಯನ್ನು ಎದುರಿಸುವಲ್ಲಿ ಅನಪೇಕ್ಷಿತ ಮಾರ್ಗಗಳಿಗೆ ಆಶ್ರಯಿಸಲೂಬಹುದು.

## ವಿವಾಹ ಪೂರ್ವ ಲೈಂಗಿಕ ವಿಚಾರದ ಬಗ್ಗೆ ಯುವಕರಿಗೆ ಬುದ್ಧಿವಾದ

ಸತ್ಯ ಏನು ಲೈಂಗಿಕ ಅವ್ಯವಸ್ಥೆಯು ಅಥವಾ ವಿವಾಹದ ನಂತರದ ಸಮಸ್ಯೆಗಳು ಶೇಕಡಾ ೯೯ ಭಾಗ ಮಾನಸಿಕವಾದುದು, ಆದ್ದರಿಂದ ಅದನ್ನು ವಾಸಿಮಾಡುವುದು ತುಂಬಕಷ್ಟ.

ಅದನ್ನು ತಡೆಹಿಡಿಯುವಂತೆ ಬುದ್ಧಿ ಹೇಳಬಹುದು. ಇಬ್ಬರೂ ಅತ್ಯಂತ ಸಮೀಪದ ಲೈಂಗಿಕ ಸಂಪರ್ಕದಲ್ಲಿ ಪೂರ್ಣ ಒಳ ಪ್ರವೇಶವಿಲ್ಲದಿರುವ ಜನನೇಂದ್ರಿಯಗಳ ಅತಿ ಸಾಮೀಪ್ಯ ಮತ್ತು ಲೈಂಗಿಕ ಸಂಭೋಗದಲ್ಲಿ ತೊಡಗುವುದರ ನಿಜವಾದ ಅಪಾಯಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ಕೊಡಬಹುದು.

**ಮಾನಸಿಕ ಅಪಾಯ**

ಲೈಂಗಿಕ ಸಂಭೋಗ ಅತ್ಯಂತ ತೊಡಕಿನ ಕ್ರಿಯಾ ವಿಧಾನ. ಅದರಲ್ಲಿ ಮಾನವನ ವ್ಯಕ್ತಿತ್ವದ ಅನೇಕ ಅಂಶಗಳು ಅಡಗಿವೆ. ವಿವಾಹಪೂರ್ವ ಲೈಂಗಿಕ ಸಂಬಂಧ ಸಂತಾನೋತ್ಪತ್ತಿಯೇ ಮೂಲತಃ ಮೃಗೀಯ ಅಥವಾ ಜೈವಿಕ ಹೊರತು ಮಾನವ ಲೈಂಗಿಕ ಪ್ರವೃತ್ತಿ ಅಲ್ಲ.

**ಲೈಂಗಿಕ ಪ್ರವೃತ್ತಿ ಜನನೇಂದ್ರಿಯಗಳ ಪ್ರವೃತ್ತಿಯಲ್ಲ**

ಅನೇಕ ಜನ ಜನನೇಂದ್ರಿಯಗಳ ಕ್ರಿಯೆಯನ್ನು ಲೈಂಗಿಕ ಕ್ರಿಯೆಯೆಂದು ಭ್ರಮಿಸುತ್ತಾರೆ, ಲೈಂಗಿಕ ಪ್ರವೃತ್ತಿಯೆಂದರೆ ಸ್ತ್ರೀತ್ವ ಅಥವಾ ಪುರುಷತ್ವ. ಲೈಂಗಿಕ ಬಲ ಹೊಸ ಜೀವನವನ್ನು ಹೊರತರುವ ಸೃಷ್ಟಿ ಶಕ್ತಿ. ನಮ್ಮಲ್ಲಿ ಅನೇಕರಂತೆ ನಾವು ಮದುವೆಗೆ ಮುಂಚೆ ಬ್ರಹ್ಮಚಾರಿಗಳಾಗಿರುವಾಗ, ಮದುವೆಯಾದ ಕಾಲದಲ್ಲಿ ಆಗಾಗಿನ ಕೆಲವು ಅವಧಿಗಳಲ್ಲಿ ಮತ್ತು ಒಬ್ಬ ಸಹಭಾಗಿ ಸತ್ತಾಗ, ಲೈಂಗಿಕ ಚಟುವಟಿಕೆ ಕೆಲಸದಲ್ಲಿ ಕಲೆಯ ಮತ್ತು ಅದರ ಪೂರ್ಣ ಅರ್ಥದಲ್ಲಿ ಬದುಕುವ ಮೂಲಕ ಸೃಜನಾತ್ಮಕವಾಗಿಟ್ಟುಕೊಳ್ಳಬಹುದು.

ಜನನೇಂದ್ರಿಯಗಳ ಕ್ರಿಯೆ ತನ್ನಷ್ಟಕ್ಕೆ ತಾನೆ ವ್ಯಕ್ತಿತ್ವವನ್ನು ಒಳಗೊಳ್ಳುವುದಿಲ್ಲ. ಆದ್ದರಿಂದಲೇ ಒಬ್ಬ ವೇಶ್ಯೆ ತಾನು ಸಾಗಿಸಿಕೊಂಡು ಹೋಗುವ ಶಾರೀರಿಕ ಕ್ರಿಯೆಗಳಿಂದ ಸಂಭವಿಸುವ ತನ ಭಾವನೆಗಳನ್ನು ಪ್ರತ್ಯೇಕವಾಗಿ ಇಟ್ಟುಕೊಂಡಿರುತ್ತಾಳೆ. ಅವಳು ಜನನೇಂದ್ರಿಯದಿಂದ ಕ್ರಿಯಾತ್ಮಕವಾಗಿರಬಹುದು. ಆದರೆ ಅವಳು ಲೈಂಗಿಕವಾಗಿ ಕ್ರಿಯಾ ಪೂರ್ಣಳಾಗಿರುವುದಿಲ್ಲ ಮತ್ತು ಸ್ತ್ರೀ ಅಥವಾ ಪುರುಷ ಲೈಂಗಿಕವಾಗಿ ಜೀವಂತವಾಗಿದ್ದರೂ ಚಟುವಟಿಕೆಯಿಂದ ಕೂಡಿದ್ದರೂ ಜನನೇಂದ್ರಿಯಗಳ ಚಟುವಟಿಕೆಯಲ್ಲಿ ತೊಡಗಿಲ್ಲದಿರುವಾಗ ಅವನು ಅಥವಾ ಅವಳು ಪೂರ್ಣವಾಗಿ ಹೆಂಗಸು ಅಥವಾ ಗಂಡಸು ಆದ್ದರಿಂದ ಲೈಂಗಿಕ ಚಟುವಟಿಕೆ ಜನನೇಂದ್ರಿಯಗಳ ಚಟುವಟಿಕೆಯಲ್ಲ.

**ವಿವಾಹ ಪೂರ್ವ ಲಿಂಗ ಕ್ರಿಯೆಯ ಅಪಾಯಗಳು**

ವಿವಾಹ ಪೂರ್ವ ಲಿಂಗ ಕ್ರಿಯೆಯನ್ನು ಹೊಂದಿರುವಾಗ ಭಾವಾವೇಶಗಳ ಪೂರ್ಣ ಶ್ರೇಣಿಗಳೇ ಒಳಗೊಂಡಿರುತ್ತವೆ. ಮೊದಲು ಒಂದು ಅತಿ ಮುಖ್ಯ ಲೈಂಗಿಕ ಅವಯವ

ಮೃಗದಲ್ಲಿರುವುದಕ್ಕಿಂತ ಪ್ರತ್ಯೇಕವಾಗಿ ಮನುಷ್ಯನಲ್ಲಿರುವುದು. ಮೆದುಳು ಮನುಷ್ಯ ವ್ಯಕ್ತಿಯ ಪೂರ್ಣ ಹತೋಟಿಯಲ್ಲಿರುವ ಚಟುವಟಿಕೆಗಳ ಸಮಸ್ತ ಸರಣಗಳನ್ನು ಉಪಕ್ರಮಿಸುತ್ತದೆ.

ಭಾವವೇಶಗಳು ಮತ್ತು ಚಟುವಟಿಕೆಗಳು ತದನಂತರ ಮನುಷ್ಯನ ಶರೀರದಲ್ಲಿ ಮತ್ತು ಲೈಂಗಿಕ ಸಂಭೋಗದ ಕಡೆ ಮುಂದುವರಿಯುವ ಅವಯವಗಳಲ್ಲಿ ಬದಲಾವಣೆಗಳನ್ನು ಪ್ರೇರೇಪಿಸುತ್ತವೆ.

ವಿವಾಹಪೂರ್ವ ಲೈಂಗಿಕ ಕ್ರಿಯೆಯಲ್ಲಿ ಮುಳುಗಿದ್ದೇ ಆದರೆ ಅದು ಸಾಮಾನ್ಯವಾಗಿ ಮದುವೆ ಆಗುವ ನೆಪದಲ್ಲಿರುತ್ತದೆ ಅಥವಾ ಇಬ್ಬರೂ ಅಪರಿಚಿತವಾದ ಸ್ಥಳಗಳಲ್ಲಿ ಅಥವಾ ಪರಸ್ಪರ ಪ್ರೀತಿಸುವ ಆದರೆ, ನಿಶ್ಚಿತಾರ್ಥವಾಗುವ ಅಥವಾ ಮದುವೆ ಆಗದ ಜೋಡಿಯಲ್ಲಿ.

೧. ಸನ್ನಿವೇಶಗಳಾಗಲಿ ಅಥವಾ ಪರಿಸರಗಳಾಗಲಿ ಬದಲಾಯಿಸಿದಾಗ, ಅದೇ ಪಾಲುದಾರರು ಹೊಂದಾಣಿಕೆ ಮಾಡಿಕೊಳ್ಳಲು ಕಷ್ಟಪಡಬೇಕಾಗುತ್ತದೆ. ಅವರು ಪರಸ್ಪರ ವಿವಾಹವಾದರೆ, ವಿವಾಹದ ಅನಂತರ ಅವರು ತಾವು ಪರಸ್ಪರ ವಂಚಿತರಾದೆವು ಎಂದು ಭಾವಿಸುತ್ತಾರೆ ಮತ್ತು ಆಗಾಗ್ಗೆ ಬಹಿರಂಗವಾಗಿ ಅಥವಾ ರಹಸ್ಯವಾಗಿ ತಾವು ತಾವೇ ನಿಂದಿಸಿ ಕೊಳ್ಳುತ್ತಾರೆ. ಆ ಹೆಣ್ಣು ತನ್ನನ್ನು ತಡೆಯಬೇಕಾಗಿತ್ತು, ಪ್ರೋತ್ಸಾಹಿಸಬಾರದಿತ್ತು ಎಂದು ಗಂಡು, ತನ್ನನ್ನು ಒಪ್ಪಿಕೊಳ್ಳುವಂತೆ ಪುಸಲಾಯಿಸಿ ಬಿಟ್ಟ ಎಂದು ಹೆಣ್ಣು ಮುನಿದುಕೊಳ್ಳುತ್ತಾಳೆ.

ಅವರು ಪರಸ್ಪರ ವಿವಾಹವಾಗಿದ್ದರೆ, ಅವರ ಹೊಸ ಪಾಲುದಾರರೊಡನೆ ಸಮಸ್ಯೆಗಳು ಖಂಡಿತವಾಗಿ ನಿಜವಾದ ತೊಂದರೆಗಳಾಗಿ ಪರಿಣಮಿಸುತ್ತವೆ.

ಮುಂಚಿತವಾಗಿ ಪಾಲುಗೊಂಡಿದ್ದ ಹಳೆಯ, ಇತರ ಅನುಭವಗಳನ್ನು ಮನಸ್ಸಿನ ಬರಮಾಡಿಕೊಳ್ಳುವುದರಿಂದ, ನೆನಪಿಸಿಕೊಳ್ಳುವುದರಿಂದ ಮತ್ತು ಹೊಸ ಸನ್ನಿವೇಶಗಳಿಗೆ ಮತ್ತು ಪರಿಸರಗಳಿಗೆ ಹೊಂದಿಸಿಕೊಳ್ಳುವಲ್ಲಿ ಲೈಂಗಿಕ ಚೋದನೆಯನ್ನು ಲಿಬಿಡೆ ತಲೆಕೆಳಗು ಮಾಡುತ್ತದೆ.

ಕೆಲವು ವೇಳೆ ಪಾರ್ಶ್ವಿಕ ನಪುಂಸಕತ್ವದ ಅಥವಾ ಜಡತ್ವದ ಸಮಸ್ಯೆಗಳಲ್ಲಿ ಪರ್ಯವಾಸನ ಹೊಂದುತ್ತದೆ. ಆಮೇಲೆ ಇವುಗಳನ್ನು ವಾಸಿ ಮಾಡುವುದು ಬಹು ಕಷ್ಟವಾಗುತ್ತದೆ.

೨. ವಿವಾಹಿತ ಸ್ತ್ರೀಗೆ ಗರ್ಭಧಾರಣೆ ಒಂದು ಸಾಮಾನ್ಯ ದೈಹಿಕ ಘಟನೆ. ಅವಿವಾಹಿತ ಸ್ತ್ರೀ ಗರ್ಭಧರಿಸಿದರೆ ಅವಳು ಅಂಸಖ್ಯಾತ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅಲ್ಲದೆ ಭಾರತದಲ್ಲಿ ಅಂಥ ಸ್ತ್ರೀಯರಿಗೆ ನೆರವು ನೀಡುವುದು ನಿಜವಾಗಿ ಬಹು ಕಷ್ಟವಾದ ಕೆಲಸ.

ಯಾವುದೇ ಕುಟುಂಬ ಯೋಜನೆ ಪದ್ಧತಿ ಶೇಕಡಾ ೧೦೦ ಕ್ಕೆ ೧೦೦ ಪರಿಣಾಮಕಾರಿಯಾಗುವುದಿಲ್ಲ. ಹೆಂಗಸು ತನ್ನ ಸಹಭಾಗಿ ತನಗೆ ಭಾವುಕವಾಗಿ ಅಥವಾ

ಆರ್ಥಿಕವಾಗಿಯೂ ಕೂಡ ಬೆಂಬಲ ನೀಡುವುದಿಲ್ಲ ಎಂಬುದನ್ನು ಕಂಡುಕೊಳ್ಳುತ್ತಾಳೆ.

ಅವಳು ಗರ್ಭಧಾರಣೆಯ ಅವಧಿಯನ್ನು ಮುಗಿಸಲೇಬೇಕು. ಕಾರಣ ಗರ್ಭಪಾತ ತನ್ನಲ್ಲಿ ಆಗಲೇ ಬೆಳೆಯುತ್ತಿರುವ ಒಂದು ಜೀವದ ಜೀವವನ್ನು ನಾಶಮಾಡುವುದೇ ಅಲ್ಲದೆ ಅನೇಕ ಮಾನಸಿಕ ಮತ್ತು ಶಾರೀರಿಕ ಕಳಂಕಗಳನ್ನು ಉಳಿಸಿಬಿಡುತ್ತದೆ.

೩. ಮೂರನೆಯ ಅಪಾಯ ಎಂದರೆ ಲೈಂಗಿಕವಾಗಿ ವರ್ಗಾವಣೆಯಾದ ಖಾಯಿಲೆಯನ್ನು ಗುಹ್ಯರೋಗ ಅಂಟಿಕೊಳ್ಳುವುದು ಏಕೆಂದರೆ ವಿವಾಹಪೂರ್ವದಲ್ಲಿ ಅಥವಾ ವಿವಾಹಾನಂತರ ಹೊರಗಿನ ಸಂಬಂಧಗಳಲ್ಲಿ ತೊಡಗಿರುವವರಲ್ಲಿ ಈ ಭಯಂಕರ ರೋಗಗಳು ಬಹುಸಾಮಾನ್ಯ.

ಇತೀಚಿನ ಲಂಡನ್ ವಿಶ್ವವಿದ್ಯಾನಿಲಯದ ಸರ್ವೇಕ್ಷಣೆಯಲ್ಲಿ ಹುಡುಗರು ಉತ್ತರಿಸಿದ್ದೇನೆಂದರೆ, ವಿವಾಹಪೂರ್ವ ಲಿಂಗಕ್ರಿಯೆ ಅವಶ್ಯಕವೂ ಅಲ್ಲ, ಸಹಾಯಕವೂ ಅಲ್ಲ ಎಂಬ ಭಾವನೆ ತಮಗೆ ಬರಲಿಲ್ಲ ಎಂದು. ಆದರೆ, ಅವರು ಹೆದರುತ್ತಾರೆ, ಎಂದು ಹುಡುಗಿಯರ ಉತ್ತರ ಇನ್ನೊಂದು ರೀತಿಯದು. ತಾವು ಒಪ್ಪಿದುದಕ್ಕೆ ಕಾರಣವೆಂದರೆ ತಾವು ಸಂಪ್ರದಾಯಬದ್ಧರು ಅಥಟಾ ಸಮಾನ ಸ್ಕಂದರು ಅಲ್ಲ ಎಂದು ಎಲ್ಯಲಿ ಭಾವಿಸಿ ಬಿಡುತ್ತಾರೋ ಎಂಬುದು. ಈ ತಿಳಿವಳಿಕೆಯಲ್ಲಿ ಎಂಥ ಅಂತರ.

**ಮಿಥ್ಯೆ:**

ಲಿಂಗ ಎಂದರೆ ನಿಗುರುವುದು, ಸಂಭೋಗ ಮತ್ತು ತೀವ್ರೋದ್ರೇಕ ಮತ್ತಾವುದೇ ನಮೂನೆ ಅಲ್ಲ ಎಂಬುದೇ ನಿಜವಾದ ವಿಷಯ ಎಂಬುದು ಮಿಥ್ಯೆ. ಮನುಷ್ಯರ ಮೇಲೆ ಈ ಒತ್ತಡ ಅದರಲ್ಲೂ ವಿಶೇಷವಾಗಿ ಹೆಚ್ಚು ಆಳವಾದ ಭಾವವೇಶದ ತಪ್ಪು ಹೊಂದಾಣಿಕೆಯೂ ಸೇರಿದಂತೆ, ಕೆಲವು ಮನುಷ್ಯರ ಅನುಭವ ಲೈಂಗಿಕ ಅಸುಖವನ್ನು ವಿವರಿಸುತ್ತದೆ. ಜುಗ್‌ಬರ್ಗೆಲ್ಡ್ ಎಂಬುವವನ್ನು ಸ್ಪಷ್ಟವಾಗಿ ವಿವರಿಸುತ್ತಾನೆ. ಕನ್ಯತ್ವಗಳು ಮತ್ತು ವರ್ಜನೆಗಳು ಸಮಸ್ಯೆಗಳಲ್ಲ, ಆದರೆ ಅವು ನ್ಯಾಯಯುಕ್ತ ಆಯ್ಕೆಗಳು.

ಈ, ಅನುಸರಿಸುವಿಕೆಯ ಅಥವಾ ಬಿಟ್ಟುಬಿಡುವ ಈ ಭಯ ತರುಣನ ಬೆಳವಣಿಗೆಯ ಮೂಲದಲ್ಲಿಯೇ ಇರುತ್ತದೆ. ಅನುವತಿಸುವಿಕೆ ಮತ್ತು ಸಂಪರ್ಕಿಸುವಿಕೆಗಳು ರೋಗ ಪರಿಹಾರಗಳಲ್ಲ ದುರದೃಷ್ಟದಿಂದ ತರುಣರು ಇದನ್ನು ಸಕಾಲದಲ್ಲಿ ಕೆಲವೊಮ್ಮೆ ಅರ್ಥಮಾಡಿಕೊಳ್ಳುವುದಿಲ್ಲ. ಇನ್ನು ದುರದೃಷ್ಟವೆಂದರೆ, ತೃಪ್ತಿಕರ ಮತ್ತು ಪೂರ್ಣ ಮೇಲುಪಂಕ್ತಗಳನ್ನು ಒದಗಿಸಿದ ಅವರು ಹಿರಿಯರು.

ಲಿಂಗ ವಿಷಯ ಒಬ್ಬನ ಅತ್ಯಂತ ಆಂತರಿಕ ಭಾವನೆಗಳ ಪವಿತ್ರ ಅಭಿವ್ಯಕ್ತಿ.

**ಐತಿಹ್ಯಗಳು:**

ವಿವಾಹ ಪೂರ್ವ ಲೈಂಗಿಕ ಅನುಭವ ಅನಂತರದ ವಿವಾಹ ಜೀವನದಲ್ಲಿ ಹೊಂದಾಣಿಕೆಗಳನ್ನು ಮಾಡಿಕೊಳ್ಳುವುದು ಸುಲಭವಾಗುತ್ತದೆ ಎಂಬ ವಾದ ಕೇಳಿ ಬರುತ್ತಿರುವುದು ಒಂದು ಸಾಮಾಯ ಅನುಭವ. ಇದು ಅವಶ್ಯಕವಾಗಿ ಸತ್ಯವೆಂಬುದರಿಂದ ಬಹುದೂರ. ಯಶಸ್ವಿ ವಿವಾಹ ಬರಿಯ ಲೈಂಗಿಕ ಆಕರ್ಷಣೆ ಮತ್ತು ಶಾರೀರಿಕ ಉಪಯುಕ್ತತೆಗಳಿಂದ ಹೆಚ್ಚಿನ ವಿಷಯಗಳನ್ನು ಒಳಗೊಂಡಿರುತ್ತದೆ. ಭಾವಾವೇಶದ ಮಟ್ಟದಲ್ಲಿ ಅಗತ್ಯವಾದ ಸ್ವಾರ್ಥಪರತ್ವ ಮತ್ತು ಸಾಂದರ್ಭಿಕ ಲೈಂಗಿಕ ಅಕ್ಕರೆಗಳ ಸುಖೀವಾದ ಮದುವೆಯ ಮೂಲ ತಳಪಾಯವಾದ ಪರಸ್ಪರ ತಾಳುವಿಕೆಯನ್ನು ಕಲಿತು ಕೊಳ್ಳುವುದು ಹೆಚ್ಚು ಕಷ್ಟವಾಗುವಂತೆ ಮಾಡುತ್ತದೆ.

ದೈಹಿಕ ಮಟ್ಟದಲ್ಲಿ ಕೂಡ ಒಂದು ಗುಂಪಿನ ಸನ್ನಿವೇಶಗಳ ಅನುಭವ. ಪರಿಸ್ಥಿತಿಗಳು ಬದಲಾವಣೆ ಆದಾಗ ಅದು ಮುಂದಕ್ಕೆ ಅಗತ್ಯವಾಗಿ ಮುಂಬರಿಯುತ್ತವೆ ಎಂದೇನೂ ಹೇಳುವಂತಿಲ್ಲ. ಪುರಷನಲ್ಲಿನ ಲೈಂಗಿಕ ಸಾಮರ್ಥ್ಯ ಅತಿ ಹೆಚ್ಚಿನ, ತೊಡಕಾದ, ಪರಿತ್ತಿಗೊಳಪಟ್ಟ ಪ್ರತಿಕ್ರಿಯೆ, ಆತುರದ ಸನ್ನಿವೇಶಗಳಲ್ಲಿ ಕಳ್ಳತನದಿಂದ, ಉದ್ರೇಕ ಸ್ಥಿತಿಯಲ್ಲಿ ಮತ್ತು ನಿಷಿದ್ಧ ಸಂಭೋಗದೊಡನೆ ಕೂಡಿದ ಮಾದಕ ದ್ರವ್ಯಸೇವನೆಯಿಂದ ಉದ್ರೇಕಗೊಂಡು ಸಂದರ್ಭದಲ್ಲಿ ಅದನ್ನು ಸಂಪಾದಿಸಿದ ಅದು ಸುಲಭವಾಗಿ ಈ ಸನ್ನಿವೇಶಗಳಿಗೆ ಪ್ರತ್ಯೇಕವಾಗಿ ಸಾಪೇಕ್ಷವಾಗುತ್ತದೆ ಮತ್ತು ಪ್ರಸ್ತದ ಮಂಚದ ಉನ್ನತ ಪ್ರಶಾಂತ ಪರಿಸ್ಥಿತಿಯಲ್ಲಿ ಅವು ವಿಶೇಷವಾಗಿ ಗೈರು ಹಾಜರಾಗಿರುತ್ತವೆ. ಮತ್ತು ಇಂಥ ಸನ್ನಿವೇಶದಿಂದ ನಪುಂಸಕತ್ವದ ಫಲಿತಾಂಶದಲ್ಲಿ ಅದನ್ನು ಕಾಣುವುದು ಯಾವುದೇ ರೀತಿಯಲ್ಲಿ ಅಸಾಮಾನ್ಯವಾದುದೇನೂ ಅಲ್ಲ.

ಈ ಎಲ್ಲ ಪರ್ಯಾಲೋಚನೆಗಳು ಸಾಂದರ್ಭಿಕ ಅಥವಾ ಸ್ವೈರ ಲೈಂಗಿಕ ಸಂಭೋಗಕ್ಕೆ ವಿರುದ್ಧವಾದ ಒಂದು ಒತ್ತಾಯದ ಪ್ರಕರಣವನ್ನು ಸೃಷ್ಟಿಸುತ್ತದೆ. ಅವುಗಳನ್ನು ಸ್ಪಷ್ಟವಾಗಿ ಮತ್ತು ನಿರ್ದೋಷ ಪೂರ್ಣವಾಗಿ ತರುಣರ ಮುಂದೆ ಇಟ್ಟರೆ ಬಹಳ ಜನ ಅವುಗಳ ಬಗೆಗೆ ತಮ್ಮ ಸಮಂಜಸತೆಯನ್ನು ಒಪ್ಪಿಕೊಳ್ಳಬಹುದು ಮತ್ತು ತಮ್ಮ ಜೀವನವನ್ನು ತದನುಸಾರ ವ್ಯವಸ್ಥೆ ಗೊಳಿಸಿಕೊಳ್ಳಲೂ ಬಹುದು. ಹಾಗಿದ್ದರೂ ಅವರಲ್ಲಿ ಸ್ಪಷ್ಟವಾಗಿ ಇನ್ನು ಸ್ವಲ್ಪ ಶಕ್ತಿಯಿದ್ದರೆ, ನಿಶ್ಚಿತಾರ್ಥವಾಗಿರುವ ಅಥವಾ ಕಡೆಯ ಪಕ್ಷ ಪ್ರಾಮಾಣಿಕವಾಗಿ ನಿಧಾನವಾಗಿ ಮುಂದುವರಿಯುತ್ತಿರುವ ದಂಪತಿಗಳ ನಡುವಿನ ಸಂಭೋಗದ ಸಂದರ್ಭದಲ್ಲಿ ಅವರು ಪ್ರತಿ ಹೇಳಲಾರದಂತೆ ಅವರೊಡನೆ ವಾದಮಾಡುವುದು ಕಷ್ಟವಾಗಲಾರದು, ಬದಲಿಗೆ ಸುಲಭವೇ ಆಗುತ್ತದೆ. ಅವರು ಬಣ್ಣ ಬಣ್ಣದ ಮಾತುಗಳಿಂದ ಕೇಳಬಹುದು, ಚರ್ಚಿನಲ್ಲಿನ ಅಥವಾ ನೊಂದಣಿ ಕಚೇರಿಯಲ್ಲಿ ಕೆಲವೇ ಪದಗಳ ಘೋಷಣೆ ಖಚಿತವಾಗಿ ತಿಳಿದಿರುವೆನೆಂದು ಗೌರವಿಸುವ ಮಾತುಗಳ ಬಗ್ಗೆ ವ್ಯತ್ಯಾಸವನ್ನೇಕೆ ಮಾಡಬೇಕು ಎಂದು.

ಇದಕ್ಕೆ ಉತ್ತರವೆಂದರೆ, ವಿವಾಹವು ಒಂದು ಪೂರ್ಣ ಕಟ್ಟುಪಾಡನ್ನು ಒಳಗೊಂಡಿರುತ್ತದೆ ಅಥವಾ ಒಳಗೊಳ್ಳಬೇಕು. ಈ ಕಟ್ಟುಪಾಡನ್ನು ಬಹಳ ಲಘುವಾಗಿ ಪರಿಗಣಿಸಬಾರದು ಮತ್ತು ಅದು ವಿವಾಹದ ಔಪಚಾರಿಕ ಹಬ್ಬ ಅಥವಾ ಉತ್ಸವದ ಅಥವಾ ಸಮಾರಂಭದಿಂದ ಅದನ್ನು ಪವಿತ್ರೀಕರಿಸಿದ ಹೊರತು ಅದು ಪೂರ್ಣಗೊಳ್ಳುವುದೇ ಇಲ್ಲ. ನಿಶ್ಚಿತಾರ್ಥಗಳು ಅನೇಕ ವೇಳೆ ಮದುವೆ ಒಪ್ಪಂದದ ಸ್ಥಿತಿಯ ಹೆಚ್ಚಿನ ನಿಕಟತ್ವಕ್ಕೆ ನಿಲ್ಲಲಾರದು. ಅದಕ್ಕೂ ವಿಶೇಷವಾಗಿ ನಿಧಾನವಾಗಿ ಮುಂದುವರಿಯುವುದು ಎಂಬ ಪದಸಮೂಹ ಅತಿ ಸಂಬಂಧಿಕ ವೂ ಆಗಬಹುದು ಒಡನಾಟವು ಲೈಂಗಿಕ ಸಂಭೋಗವನ್ನೊಳಗೊಂಡಿದ್ದರೆ, ಅದರ ತಡೆಹಿಡಿಯುವಿಕೆ ತುಂಬ ಸಂಕಟಮಯವಾದ ಮತ್ತು ನಷ್ಟದ ವ್ಯಾಪಾರವಾಗಬಹುದು. ಇದಂತೂ ಸ್ತ್ರೀ ಸಹಭಾಗಿಯ ಸಂಬಂಧದಲ್ಲಿ ವಿಶೇಷವಾಗಿ ಸತ್ಯವಾದದ್ದು.

ಜೀವ ವಿಜ್ಞಾನದ ದೃಷ್ಟಿಯಿಂದ ಹೇಳುವುದಾದರೆ, ಪುನರುತ್ಪತ್ತಿ ಸ್ತ್ರೀಯ ಬದುಕಿನಲ್ಲಿ ಅತಿ ಮುಖ್ಯವಾದಂಥ ಭಾಗವೇ ಆಗಿದೆ, ಅವಳು ವಿವೇಚನೆಯಿಂದಲೇ ಲೈಂಗಿಕ ಸಂಬಂಧವನ್ನು ಪ್ರವೇಶಿಸಿದ್ದಿರಬಹುದಾದರೂ ಅದು ಅವಳ ಬದುಕಿನ ಭಾಗವೇ ಸರಿ. ಒಮ್ಮೇ ಸಂಪೂರ್ಣ ಕ್ರಿಯೆಗೆ ಆರಂಭಿಸಿದರೆ ಸಾಕು ಅವಳು ತನ್ನ ಪದ್ಧತಿಯಿಂದ ಕಳುಚಿಕೊಳ್ಳುವುದಕ್ಕೆ ತುಂಬ ಕಷ್ಟಪಡಬೇಕಾಗುತ್ತದೆ, ತರುಣಿಯರು ಇಷ್ಟವಿಲ್ಲದೆ ಪ್ರೇಮಿಯನ್ನು ಪರಸ್ಪರವಾದ ಪೇಚಾಟದ ಸ್ಥಿತಿಯವರೆಗೆ ಹಿಂಬಾಲಿಸಿಕೊಂಡು ಹೋಗುವುದು ಅಥವಾ ಹತಾಶೆಯಿಂದ ಬಿಟ್ಟು ಬಿಡುವುದು ಮತ್ತು ನಿರಾಶಗ್ರಸ್ತ ಅದಮ್ಯ ಕಾಯಮದ ಬದುಕಿಗೆ ಬೀಳುವುದು ಅಸಾಮಾನ್ಯವಾದುದೇನೂ ಅಲ್ಲ. ಒಮ್ಮೆ ಅವರು ಗಂಡು ಹೆಣ್ಣಿನ ನಡುವಿನ ಮಾನಸಿಕವಾದ ಅನಿವಾರ್ಯ ವ್ಯತ್ಯಾಸವನ್ನು ಅರ್ಥ ಮಾಡಿಕೊಂಡರೆ, ಆಗ ಅತಿ ಸ್ವಾರ್ಥಪೂರ್ಣ ಗಂಡಸರು ಮಾತ್ರ ತಮ್ಮ ಸ್ವಂತ ಹೆಚ್ಚಿನ ಅಸ್ಥಾಯಿ ಬೇಡಿಕೆಗಳನ್ನು ಹಿಡಿತುದಿಯವರೆಗೆ ಒತ್ತಾಯಿಸುತ್ತಾರೆ.

### ಪರಸ್ಪರ ನಂಬಿಕೆ ಮತ್ತು ಪಕ್ವತೆ

ಇಲ್ಲಿ ಇನ್ನೊಂದು ಅಂಶವಿದೆ. ವಿವಾಹ ಪರಸ್ಪರ ನಂಬಿಕೆ ಮೇಲೆ ಮತ್ತು ಪರಸ್ಪರ ನಿಷ್ಠೆಯ ಮೇಲೆ ಅವಲಂಬಿತವಾಗಿದೆ. ಎಲ್ಲ ವಿವಾಹಗಳೂ ಒಂದು ರೀತಿಯ ಒತ್ತಡದ ಅವಧಿಯ ಮೂಲಕವೇ ಮುಂದಡಿಯಿಡುತ್ತವೆ. ಅಂಥ ಸಮಯಗಳಲ್ಲಿ ಗಂಡು ಅಥವಾ ಹೆಣ್ಣು ತಮ್ಮ ತಮ್ಮ ಪಾಲುಗಾರರ ನಿಷ್ಠೆಯನ್ನು ಸಂದೇಹಿಸುವುದು, ಅದೂ, ತಾನು ಅಥವಾ ಅವಳು ಮೊದಲಿಗೆ, ಮುಂಚಿತವಾಗಿ ಅಪರಿಶುದ್ಧವಾಗಿದ್ದೆವು, ತಿಳಿದಿದ್ದಾಗಲೂ ಅಪರಿಶುದ್ಧತೆ ಎಂಬುದು ಪಾಲುಗೊಂಡ ಅನುಭವವೆಂದೇ ಸಿದ್ಧವಾಗಿದ್ದರೂ ಕೂಡ ತುಂಬ ಸುಲಭವಾದ ವಿಚಾರವೇ ಪ್ರತಿಯೊಬ್ಬರಿಗೂ, ಅಸೂಯಾಪರನಾದ ಪುರುಷನಾಗಲಿ ಸ್ತ್ರೀಯಾಗಲಿ ಅವರು ಎಂದೂ ವಿಚಾರವಾದಿಗಳಾಗಲಾರರು ಮತ್ತು ಪ್ರತಿಯೊಂದು ಸಹವಾಸವನ್ನು ಅದು ಎಷ್ಟೇ

ನಿಷ್ಕಳಂಕವಾಗಿದ್ದರೂ ಅಥವಾ ವ್ಯಭಿಚಾರದ್ದಾಗಿದ್ದರೂ ಮಾನಿಸುತ್ತಾರೆ. ಹೀಗೆ ವಿವಾಹವನ್ನು ಸುಲಭವಾಗಿ ನಾಶಪಡಿಸುವಂಥದಕ್ಕಿಂತ ಬೇರೆ ಯಾವುದೂ ಇಲ್ಲ.

ಇಬ್ಬರು ನಿಜವಾಗಿ ಪರಸ್ಪರ ಪ್ರೀತಿಸುವುದಾದರೆ ಮತ್ತು ಮದುವೆ ಮಾಡಿಕೊಳ್ಳಲು ಯೋಚಿಸಿರುವುದಾದರೆ, ಅದು ಸರಿ, ಅಂದಮೇಲೆ ಮದುವೆ ಆಗುವವರೆಗೆ ಏಕೆ ಕಾಯಬೇಕು.

ಏಕೆ ಕಾಯಬೇಕು ಎಂಬ ಪ್ರಶ್ನೆ ನಿಜವಾಗಿ ಒಳ್ಳೆಯ ಪ್ರಶ್ನೆಯೆ. ನೀವು ಕಾಯಬೇಕು ಎಂಬಷ್ಟು ಲೈಂಗಿಕಕ್ರಿಯೆ ಅಷ್ಟು ಕೆಟ್ಟದ್ದೆ ಅಲ್ಲ. ನೀವು ಏಕೆ ಕಾಯುತ್ತೀರಿ, ಗೊತ್ತೆ ಲೈಂಗಿಕ ಕ್ರಿಯೆ ಅಷ್ಟು ಒಳ್ಳೆಯದಾಗಿರುವುದರಿಂದ. ಅಷ್ಟೇ ಅಲ್ಲ ಅದು ನಿಜವಾಗಿ ಒಳ್ಳೆಯದು. ಉತ್ತಮ ಸ್ಥಿತಿಯಲ್ಲಿ ಸರಿಯಾದ ಅರ್ಥದಲ್ಲಿ ಅದಕ್ಕೆ ನೀವು ಅರ್ಹರಾಗಿರುತ್ತೀರಿ. ನಿಮಗೆ ಅದು ಬೇಕಾಗಿದೆ.

ನಿನ್ನೊಡನೆ ಮಾತ್ರ ಜೀವನಾದ್ಯಂತ ಎಂಬ ಜೋಡಣೆಯಲ್ಲಿ ಲೈಂಗಿಕ ಕ್ರಿಯೆ ಅಷ್ಟೊಂದು ಒಳ್ಳೆಯದು.

ಮಲಗುವ ಕೋಣೆಗಳಿಂದ ಒಳಗೆ ಹೊರಗೆ ಓಡಾಡುವ ಜನ ತಾವು ಏನನ್ನು ಮರೆತಿದ್ದೇವೆ ಎಂಬುದನ್ನು ನಿಜವಾಗಿ ತಿಳಿದಿರುವುದಿಲ್ಲ. ಅವರು ಒಬ್ಬರಿಗೊಬ್ಬರು ಹೇಳಿಕೊಳ್ಳಬಹುದು. ತಾವು ಪ್ರೀತಿಸುತ್ತೇವೆ. ಒಂದು ದಿನ ಮದುವೆ ಮಾಡಿಕೊಳ್ಳುತ್ತೇನೆ. ಎಂದು ಆದರೆ ಅವರು ನಿಜವಾಗಿ ತಮಗೆ ತಾವೇ ವಂಚಿಸಿಕೊಳ್ಳತೊಡಗುತ್ತಾರೆ ಮತ್ತು ಪರಸ್ಪರವಾಗಿ ಕೂಡ.

ನಾನು ಸತ್ಯವಾಗಿ ಒಪ್ಪಿಕೊಂಡಿದ್ದೇವೆ ಎಂದು ಹೇಳಿದರೆ, ಆದರೆ, ನಿಮಗೆ ಇಷ್ಟವಿಲ್ಲದಿದ್ದರೆ ಅಥವಾ ಮದುವೆಗೆ ಸಿದ್ಧವಾಗಿಲ್ಲದಿದ್ದರೆ, ನೀವು ಆತ್ಮವಂಚನೆ ಮಾಡಿಕೊಳ್ಳುತ್ತಿದ್ದೀರಿ ಮತ್ತು ಪರಸ್ಪರವಾಗಿ ವಂಚಿಸಿಕೊಳ್ಳುತ್ತಿದ್ದೀರಿ. ನೀವು ಖಂಡಿತವಾಗಿ, ನಿಶ್ಚಯವಾಗಿ ಹೇಳುತ್ತಿರುವುದು ನಾನು ಖಂಡಿತವಾಗಿಲ್ಲ ಆ ಅಂತಿಮ ತೀರ್ಮಾಣವನ್ನು ಕೈಕೊಳ್ಳಲು ನಾನು ಸಿದ್ಧನಾಗಿಲ್ಲ ಅಥವಾ ನಾನು ಇದರಿಂದ ತಪ್ಪಿಸಿಕೊಂಡು ಹೋಗಲು ಪ್ರಯತ್ನ ಪಡುತ್ತಿದ್ದೇನೆ.

## ಪ್ರಾಮಾಣಿಕನಾಗಿರು

ನಿನ್ನನ್ನು ನೀನು ವಂಚಿಸಿಕೊಳ್ಳಬೇಡ ಅಥವಾ ಪರಸ್ಪರ ವಂಚಿಸಿಕೊಳ್ಳಬೇಡಿ ನೀವು ವಿವಾಹಕ್ಕೆ ಸಿದ್ಧವಾಗಿಲ್ಲದಿದ್ದರೆ ನೀವು ನಿಜವಾಗಿ ಲಿಂಗಕ್ರಿಯೆಗೆ ಸಿದ್ಧವಾಗಿಲ್ಲ. ಲಿಂಗ ಕ್ರಿಯೆ ಬೇಕಾದರೆ ಮತ್ತು ಪ್ರತಿ ಒಬ್ಬರೂ ನಿಜವಾಗಿ ಪ್ರೀತಿಸುತ್ತಿಲ್ಲ ಎಂಬುದರಿಂದ ಒಂದೇ ರೀತಿಯಾಗಿರುವುದಿಲ್ಲ.

ಬೇಡ ಎಂಬುದು ಪ್ರೇಮ ಪದ

ಪ್ರತಿಯೊಬ್ಬರು ಅದನ್ನು ಹೇಳುತ್ತಾರೆ, ಪ್ರತಿಯೊಬ್ಬರು ಅದನ್ನು ಅದನ್ನು ಹೇಳುವುದಿಲ್ಲ.

ಕೆಲವೊಮ್ಮೆ ಸ್ವೀಕೃತವಾದಂತೆ ಮತ್ತು ವಾಡಿಕೆಯಂತೆ ಕಂಡುಬರುವ ವಿಷಯಗಳ ಹಾಗೆ ಕಾಣುವುದೇಕೆಂದರೆ ಅವುಗಳನ್ನು ನೀವು ಅನ್ನೇಕ ವೇಳೆ ಮತ್ತೆ ಮತ್ತೆ ಕೇಳುವುದರಿಂದ.

ವ್ಯಾಪಾರಗಾರರು ಬಳಸುವ ಪ್ರಚಾರ ವೈಖರಿ (bandwagm) ಯ ಪರಿಣಾಮವನ್ನು ಎಂದಾದರೂ ಗಮಿನಿಸಿದ್ದೀರಾ ಪ್ರತಿಯೊಬ್ಬರೂ ಒಂದು ತಯಾರಿಸಿದ ವಸ್ತುವನ್ನು ಕೊಳ್ಳುತ್ತಿದ್ದಾರೆ ಎಂದು ಜನವನ್ನು ನಂಬಿಸಿದರೆ, ಚುರುಕು ಬುದ್ಧಿಯವರೆಂದು ಹೇಳಲ್ಪಡುವ ಇತರರೂ ಕೂಡಲೇ ನೇರವಾಗಿ ಮುನ್ನುಗ್ಗಿ ತಮಗೆ ಅದು ಬೇಡವಿದ್ದರೂ ಅದಕ್ಕೆ ಆ ಬೆಲೆ ಅರ್ಹವಲ್ಲದಿದ್ದರೂ ಅದನ್ನು ಕೊಳ್ಳುತ್ತಾರೆ.

ಇದೇ ಲೈಂಗಿಕ ವಿಚಾರದಲ್ಲಿಯೂ ಆಗುತ್ತಿರುವುದೆಂದೇ ಕಾಣುತ್ತಿದೆ. ಪ್ರತಿಯೊಬ್ಬರೂ ಮಾಡುತ್ತಿದ್ದಾರೆ ಎಂಬ ಚಿತ್ರ ಪ್ರತಿಯೊಬ್ಬರ ಕಣ್ಣೆದುರಿಗೂ ಬಿಚ್ಚಿಕೊಳ್ಳುತ್ತಿದೆ.

ಆದರೆ, ಪ್ರತಿಯೊಬ್ಬರೂ ಇದನ್ನು ಮಾಡುತ್ತಿಲ್ಲ. ಹದಿಹರೆಯದ ಪ್ರತಿಯೊಬ್ಬನು ಲೈಂಗಿಕ ಕ್ರಿಯೆಯನ್ನು ಹೊಂದಿಲ್ಲ. ಆದರೆ ಇದು ತಮಗೆ ಇಷ್ಟವಿಲ್ಲದಿದ್ದರೂ ತಮ್ಮ ವಿಚಾರ ಇತರರು ಮಾತನಾಡಿಕೊಳ್ಳಲಿ ಎಂಬ ಭಾವನೆಯಿಂದ ಸುಮ್ಮನಿದ್ದಾರೆ, ಕಾರಣವೇನೆಂದರೆ ಹಾಗೆ ಇತರರು ತಿಳಿಯದಿದ್ದರೆ ತಮ್ಮನ್ನು ಜನ ಸ್ವೀಕರಿಸುವುದಿಲ್ಲ ಎಂಬ ಭಯದಿಂದ.

ಆದರೆ ನಿಮಗೆ ಲಿಂಗ ಕ್ರಿಯೆ ಬೇಕಾದರೆ ಏನಾಗಬೇಕು

ಅದನ್ನು ಕೈಗೊಳ್ಳುವ ಭಾವನೆ ನಿಮ್ಮಲ್ಲುಂಟಾದರೆ ಏನು ಮಾಡಬೇಕು ನೀವು ಮಾಡಬೇಕಾದ ಬಹು ವಿಷಯಗಳು ಇಲ್ಲವೆ ನೀವು ಮಾಡಬೇಕೆಂಬ ಭಾವನೆ ಹೊಂದಿರುವ ಅನೇಕ ವಿಷಯಗಳು ಇಲ್ಲವೆ.

ಏನಾದರೆಂಬುದನ್ನು ಮಾಡಬೇಕೆಂಬ ಇಷ್ಟವಿದ್ದರೆ ಅದೇ ಉತ್ತಮವಾದದ್ದು ಎಂದು ಅರ್ಥವೆ ನಿಮ್ಮ ಭಾವನೆಗಳು ಯಾವುದು ನಿಜವಾದದ್ದು ಎಂಬುದನ್ನು ಎಂದಿಗೂ ಹೇಳುವುದಿಲ್ಲ. ಯಾವುದೊಂದು ಸರಿಯಾದದ್ದು ಅಥವಾ ತಪ್ಪಾದದ್ದು ಎಂದು ನಿಮ್ಮ ಭಾವನೆಗಳು ಹೇಳಲಾರವು. ಅವು ಹೇಳುವುದಿಷ್ಟೇ ಯಾವುದು ಹೇಘೆ ಭಾವಿತವಾಗುತ್ತದೆ ಎಂದು ಮಾತ್ರ.

ನೀವು ಎಂದಾದರೂ ಯಾವುದಾದರೂ ಸ್ಥಳಕ್ಕೆ ಪ್ರವಾಸ ಹೋಗಿದ್ದೀರಾ ಹೋದಾಗ ನೀವು ಸರಿಯಾದ ಸ್ಥಳಕ್ಕೆ ಹೋಗಿದ್ದೇವೆ ಎಂದು ಭಾವಿಸಿದ್ದೀರಾ ಆದರೆ ನೀವು ಕಂಡುಕೊಂಡದ್ದು

ಏನು ನೀವು ಸಂಪೂರ್ಣವಾಗಿ ದಾರಿ ತಪ್ಪಿದ್ದೀರಿ ಎಂದು ಅದೇ ಸರಿಯಾದ ದಾರಿ ಎಂದು ನೀವು ಭಾವಿಸಿದ ಅಂಶ, ಹಾಗೆ ಅದನ್ನು ಮೂಡಗೊಡುವುದಿಲ್ಲ.

ಮನುಷ್ಯನಾಗಿರಬೇಕಾದರೆ ಭಾವನೆಗಳದು ಅತಿಪ್ರಮುಖವಾದ ಪಾತ್ರ. ಆದರೆ ಅವು ಬರಿಯ ಪಾತ್ರವಲ್ಲ.

ನಿಜವಾಗಿ ಮುಕ್ತವಾಗಿರಬೇಕಾದರೆ ಮತ್ತು ನಿಜವಾಗಿ ಪಕ್ವವಾಗಿರಬೇಕಾದರೆ, ಅದರ ಅರ್ಥ ಹೊಣೆಗಾರಿಕೆಯಿಂದ ವರ್ತಿಸಬೇಕು ಎಂಬುದು, ಲೈಂಗಿಕ ವಿಷಯದಲ್ಲಿ ಮುಖ್ಯವಾದ ತೀರ್ಮಾನಗಳನ್ನು ಅವು ಮುಖ್ಯಅಲ್ಲವೇ ಕೈಕೊಳ್ಳುವುದಕ್ಕೆ ಮುಂಚೆ, ಮೂರು ವಿಚಾರಗಳನ್ನು ಮಾಡಬೇಕು.

೧. ನಿಮ್ಮಲ್ಲಿರುವ ಭಾವನೆಗಳನ್ನು ಅರ್ಥಮಾಡಿಕೊಳ್ಳಿ.

೨. ನಿಮ್ಮಲ್ಲಿರುವ ಭಾವನೆಗಳನ್ನು ನೀವು ಕೈಕೊಳ್ಳಬೇಕಾದ ಕರ್ಮಗಳನ್ನು ಮತ್ತು ಅವುಗಳ ಫಲಿತಾಂಶಗಳನ್ನು ಬಹು ಎಚ್ಚರಿಕೆಯಿಂದ ಯೋಜನೆಮಾಡಿ.

೩. ಜವಾಬ್ದಾರಿಯಿಂದ ನಡೆದುಕೊಳ್ಳಿ.

ಕೆಲಮೊಮ್ಮೆ ಲೈಂಗಿಕ ಕ್ರಿಯೆಗೆ ಬೇಡ ಎಂದು ಹೇಳುವುದ ಕಷ್ಟ ಮತ್ತೆ ಕೆಲವೊಮ್ಮೆ ಬೇಡ ಎಂದು ಹೇಳುವುದು ಬಹು ಒಳ್ಳೆಯದು ಎಂದು ಭಾವಿಸುವುದಕ್ಕೂ ಆಗುವುದಿಲ್ಲ. ಆದರೆ ಹಾಗೆ ಮಾಡಬಹುದು ಇಂದು ಬೇಡ ಎಂದು ಹೇಳುವುದರಿಂದ, ಮದುವೆಯಲ್ಲಿ ಹೌದು ಎಂದು ಹೇಳುವುದು ಒಳ್ಳೆಯದು ಮತ್ತು ಅರ್ಥಪೂರ್ಣವಾದುದು, ಅದಕ್ಕಿಂತ ಭಿನ್ನವಾಗಿ ಹೇಳುವುದಕ್ಕಿಂತ.

ಆದ್ದರಿಂದ ಆಶ್ಚರ್ಯಕರವಾಗುವಂತೆ ಇರಿ ಬೇಡ ಎಂದು ಹೇಳಿ ನಿಜವಾಗಿ ಒಳ್ಳೆಯವರೆಂಬ ಭಾವನೆ ತಾಳಿ

೧. ಇದರ ಮೇಲೆ ಚರ್ಚೆ

ಅ. ವಿವಾಹ ಪೂರ್ವ ಲಿಂಗ ವಿಚಾರ ಕೆಡಕಿನದಾಗುತ್ತದೆಯೆ

ಆ. ಯಾವ ರೀತಿಯ ಹುಡುಗ ಹುಡುಗಿಯರ ಗೆಳತನ ಕ್ಷೇಮಕರವಾದದ್ದು

೨. ಗುಹ್ಯರೋಗಗಳ ಬಗ್ಗೆ ಒಂದು ಚಲನಚಿತ್ರ, ಚಿತ್ರ ಫಲಕಗಳು.



ಅಧ್ಯಾಯ ೧೦

# ಧೂಮಪಾನ, ಮದ್ಯಸಾರ ಮತ್ತು ಔಷಧಗಳು (ಆಫೀಮು)

**ವಾಖ್ಯಾನ :**

ಯಾವುದಾದರೂ ಒಂದು ಪರಿಸ್ಥಿಯಿಂದ ಪಾರಾಗುವುದಕ್ಕೆ ಬಳಸುವ ಔಷಧಗಳು ಮತ್ತು ಮಧ್ಯಸಾರಗಳನ್ನು ರಾಸಾಯನಿಕ ಪಾರಾಗುವಿಕೆ ಎಂಬ ಒಂದು ರೂಪಕ್ಕೆ ಉಲ್ಲೇಖಿಸುತ್ತಾರೆ. ಹೇಗಾದರೂ ತರುಣಜನ ಮೊದಲಿಗೆ ಧೂಮಪಾನ ಮಾಡಲು ಆರಂಭಿಸುತ್ತಾರೆ. ಇದಕ್ಕೆ ಸಾಕ್ಷಿ ಎಂದರೆ, ಸಾಮಾಜಿಕ (ಜೈವಿಕವಾಗಿ ಅಲ್ಲದಿದ್ದರೂ) ಮುಂದಿನ ಹಂತದಲ್ಲಿ, ಧೂಮಪಾನಾಸಕ್ತರು ಔಷಧಗಳಿಗೆ ಮತ್ತು ಅಥವಾ ಮಧ್ಯಸಾರಗಳಿಗೆ ತಿರುಗಿದಾಗ ಚಟವಾಗಿ ಕಂಡು ಬರುವುದು.

**ಹೊಗೆಸೊಪ್ಪಿನಲ್ಲಿ ವಿಷ**

**೧. ಧೂಮಪಾನ**

ಸಿಗರೇಟುಗಳಲ್ಲಿ ಹೊಗೆಸೊಪ್ಪು ಅಳವಟ್ಟಿರುತ್ತದೆ. ಹೊಗೆ ಸೊಪ್ಪಿನ ವಿಷ e ಎಂಬ ಸಸಾರಜನಕ ಕ್ಷಾರದ್ರವ್ಯ ವೂ ಇರುತ್ತದೆ. ಅದೊಂದು ವಿಷ ಅದನ್ನು ಸಾಮಾನ್ಯವಾಗಿ, ಕೀಟನಾಶಕಗಳಲ್ಲಿ ಒಂದು ಘಟಕಾಂಶವಾಗಿ ಎಲ್ಲ ಕಡೆ ಬಳಸಲಾಗುತ್ತದೆ. ಸಿಗರೇಟುಗಳಲ್ಲಿ ಅದು ಒಂದು ಉದ್ದೀಪನ ಕ್ರಿಯೆ ಆಗಿ ನಡೆದುಕೊಳ್ಳುವುದನ್ನು ಕಂಡುಕೊಳ್ಳಲಾಗಿದೆ. ಹವ್ಯಾಸವಾಗಿ ಮತ್ತು ಬಹುವೇಳೆ ಧೂಮಪಾನ ಮಾಡುವುದು ಶರೀರಕ್ಕೆ ಕೆಡಕನ್ನುಂಟು ಮಾಡುತ್ತದೆ.

ನಿಕೊಟಿನ್ ವಿಷ ಅಲ್ಲದೆ ಕಾರ್ಬನ್ ಮಾನಾಕೈಡ್ ಎಂಬೂದೂ ಕ್ಷೇಮಕರ ಎಂದೂ ಪರಿಗಣಿಸಿದ ಪ್ರಮಾಣಕ್ಕಿಂತ ೪೦೦ ರಷ್ಟು ಹೆಚ್ಚಿನ ಸಾರೀಕರಣವೂ ಇರುತ್ತದೆ ಮತ್ತು ಜಲಜನಕ ಸೈಯನೈಡ್ ೧೬೦ ರಷ್ಟು ಸೇರಿರುತ್ತದೆ. ಸಿಗರೇಟಿನ ಹೊಗೆಯಲ್ಲಿ ರೇಡಿಯೋ ಆಕ್ಟಿವ್ ಸಮ್ಮಿಶ್ರಣ ಪ್ಲುಟೋನಿಯಂ ೨೧೦ ರಷ್ಟು ಹೊಂದಿರುತ್ತದೆ. ನಿಕೊಟಿನ್ನಿನ ಒಂದು ತೊಟ್ಟು ಅಥವಾ ೭೦ ಎಂಜಿಎಸ್ ಒಬ್ಬ ಮನುಷ್ಯನ ಸಾವನ್ನು ಕೆಲವೇ ನಿಮಿಷಗಳಲ್ಲಿ ತಂದು ಕೊಡುತ್ತದೆ.

ಇಟಲಿಯ ನಾವಿಕ ಕ್ರಿಸ್ಟೋಫರ್ ಕೊಲೆಂಬಸ್ (೧೪೫೧-೧೫೦೬) ಮೊಟ್ಟ ಮೊದಲು ಕ್ಯೂಬನ್ ರಾಜ್ಯದ ಕೆಲವು ಮೂಲನಿವಾಸಿಗಳು ಕೊಳವೆಯ ಮೂಲಕ ಧೂಮಪಾನ ಮಾಡುವುದನ್ನು ನೋಡಿದ ಏನಿದ್ದರೂ ಆ ನಾಗರಿಕತೆಗಳಲ್ಲಿ ಆ ಅಭ್ಯಾಸ ಸಾಮಾಜಿಕ ಸಾಂಸ್ಕೃತಿಕ ಮತೀಯ ಪದ್ಧತಿಗಳಿಗೆ ಮಾತ್ರ ಸೀಮಿತವಾಗಿದ್ದಂತೆ ಇದ್ದಿರಬಹುದು ಮತ್ತು ಕೆಲವು ವೇಳೆ ಕೆಲವು ರೋಗಗಳನ್ನು ನಿವಾರಿಸಲು ಅದನ್ನು ಬಳಸುತ್ತಿದ್ದರಲೂ ಬಹುದು.

೧೬ನೆಯ ಶತಮಾನದಲ್ಲಿ ಲಿಸ್ಬನನ್ನಿಗೆ ಸೀಮಿತನಾಗಿದ್ದ ಫ್ರೆಂಚ್ ರಾಯಭಾರಿ ಜೀನ್ ನಿಕೋಟ್ ಎಂಬುವನು, ಫ್ರಾನ್ಸಿನ ಮಹಾರಾಣಿಗೆ ಅವಳ ಕಠಿನವಾದ ಅರೆತಲೆನೋವಿಗೆ ಔಷಧವಾಗಿ ನೆಲಹೊಗೆಸೊಪ್ಪಿನ ಪುಡಿಯನ್ನು ಕಳಿಸಿಕೊಟ್ಟಿದ್ದ ಹೊಗೆಸೊಪ್ಪಿನ ಕ್ರಿಯಾತ್ಮಕ ಸಂಯೋಜನೆ ನಿಕೋಟಿನ್ ಎಂದು ಅವನ ಹೆಸರಿನಿಂದ ರೂಢಿಗೆ ಬಂತು.

ಆದರೆ ಅದು ಮೊಘಲರ ಕಾಲದಲ್ಲಿ ಹುಕ್ಕ ಮತ್ತು ಚಿಲಂ ಗಳು ಉನ್ನತಮಟ್ಟದ ಸಮಾಜದ ಪ್ರಮುಖ ಅಂತಸ್ತಾಗಿ ಕಾಣಿಸಿಕೊಂಡಿತು. ಅದು ಇಂದಿಗೂ ಜಮೀಂದಾರರ ಮತ್ತು ಗ್ರಾಮೀಣ ಭಾರತದ ಮಾಜಿ ಚೌಕೀದಾರರ ಆಸ್ಥಾನಗಳನ್ನು ಅಲಂಕರಿಸುತ್ತಿದೆ.

ಧೂಮಪಾನದ ಪ್ರಧಾನ ಸ್ವರೂಪ ೧೯ನೆಯ ಶತಮಾನದಲ್ಲಿ ಸಿಗರೇಟಿನ ರೂಪದಲ್ಲಿ ಹುಟ್ಟಿ ಬಂದಿತು. ಬಹುಶಃ ಸಿಗರೇಟಿನ ಧೂಮಪಾನವನ್ನು ಅತಿಶಯವಾಗಿ ಎತ್ತಿ ಹಿಡಿದವರೆಂದರೆ ಹಾಲಿವುಡ್ಡಿನ ನಾಯಕ ನಾಯಕಿಯರಾದ ಹಂಫ್ರಿಬೊಗಾರ್ಟಯುಲ್ ಬ್ರೆನ್ನರ್ ಮತ್ತು ಆರ್ಸನ್ ವೆಲ್ಸ್ ಅವರೆಲ್ಲ ಕಾನ್ಸರ್ ರೋಗದಿಂದ ಸತ್ತರು ಅವರೆಲ್ಲ ಅತಿಯಾಗಿ ಧೂಮ ಪಾನಾಸಕ್ತರು, ಹಂಫ್ರಿ ಬೊಗಾರ್ಟ ತನ್ನನ್ನು ತಾನು ಪರದೆಯ ಮೇಲೆ ತನ್ನ ತುಟಿಗಳ ನಡುವೆ ಸಿಗರೇಟನ್ನು ಕುಣಿಸುವ ರೀತಿಯಿಂದ ಧೂಮಪಾನವನ್ನು ಪ್ರದರ್ಶಿಸದೆ ಇದ್ದಿದ್ದರೆ ಅನೇಕ ಚಿತ್ರಗಳ ಅಂಥ ಆದರ್ಶ ನಾಯಕನಾಗಿರುತ್ತಿರಲಿಲ್ಲ. ಅವನು ಧೂಮಪಾನದ ಪರಿಣಾಮವಾಗಿ ಸಂಭವಿಸಿದ ಬಸೇಫೇಗಲ್ ಕ್ಯಾನ್ಸರ್ ರೋಗದಿಂದ ಪ್ರಾಣಬಿಟ್ಟ ಎಂಬುದು ಜನಕ್ಕೆ ಅಂಥ ವ್ಯತ್ಯಾಸವೇನನ್ನು ಉಂಟು ಮಾಡಲಿಲ್ಲ.

ಈಗ ಧೂಮಪಾನ ಮತ್ತು ಹೊಗೆಸೊಪ್ಪು ಸೇವನೆ ಮಾನವನ ಕೋಟಲೆಗಳಿಗೆ ಅತೀವ ಪ್ರಮಾಣದಲ್ಲಿ ಜವಾಬ್ದಾರಿವಾಗಿದೆ ಎಂಬುದನ್ನು ಚೆನ್ನಾಗಿ ಸ್ಥಾಪಿಸಲಾಗಿದೆ. ಇಂದು ವಿಶ್ವ ೪ ಹತ್ತು ಲಕ್ಷದ ಹತ್ತು ಲಕ್ಷದ ಹತ್ತೇ ಲಕ್ಷ (೧೦೧೮) ಸಿಗರೇಟುಗಳನ್ನು ಉತ್ಪತ್ತಿ ಮಾಡುತ್ತಿದೆ ಧೂಮಪಾಯಿಗಳು ೨೫ ಸಾವಿರ ಕೋಟಿ ರೂ.ಗಳನ್ನು (೨೦೦ ಬಿಲಿಯನ್ ರೂ.ಗಳು) ಎಂದರೆ ಪ್ರಾಸಂಗಿಕವಾಗಿ ಹೇಳುವುದಾದರೆ ನಮ್ಮ ರಾಷ್ಟ್ರೀಯ ಆರನೆಯ ಪಂಚವಾರ್ಷಿಕ ಯೋಜನೆಯ

ಒಟ್ಟು ವಿನ್ಯಾಸಕ್ಕಿಂತಲೂ ಹೆಚ್ಚಾಗುತ್ತದೆ. ಒಂದಂತೂ ನಿಜ, ಅನೇಕ ಹೊಗೆಸೊಪ್ಪಿನ ಕಂಪನಿಗಳು ಹೆಚ್ಚಿನ ಲಾಭ ಸಂಪಾದಿಸುತ್ತಿರುವುದು.

**ಕೆಡುಕಿನ ಪರಿಣಾಮಗಳುಃ**

ಹೊಗೆಸೊಪ್ಪಿನ ಧೂಮಪಾನದ ಕೆಡುಕಿನ ಪರಿಣಾಮಗಳನ್ನು ಸಂಗ್ರಹವಾಗಿ ಲೆಕ್ಕ ಹಾಕೋಣ.

೧. ಧೂಮಪಾಯಿಗೆ ಒಳ್ಳೆಯ ಆರೋಗ್ಯವನ್ನು ಅನುಭವಿಸುವ ಅವಕಾಶಗಳು ಅತಿ ಕಡಿಮೆ ಮತ್ತು ಅನೇಕ ವೇಳೆ ಧೂಮಪಾಯಿಯಲ್ಲದವನಿಗೆ ಹೋಲಿಸಿದರೆ ಬಹುಬೇಗನೆ ತನ್ನ ಕಾಲಕ್ಕಿಂತ ಬಹಳ ಮುಂಚೆಯೇ ಧೂಮಪಾಯಿಯು ಸಾಯುತ್ತಾನೆ.

೨. ಕ್ರಾನಿಕ್ ಬ್ರಾಂಕೈಟೀಸ್, ಲಂಗ್ ಕ್ಯಾನ್ಸರ (ಶ್ವಾಸಕೊಶದ ಕ್ಯಾನ್ಸರ) ಹೃದ್ರೋಗದಂಥ ಶಕ್ತಿಕುಂದಿಸುವ ಖಾಯಿಲೆಗಳಿಗೆ ಧೂಮಪಾನ ಹೊಣೆ.

೩. ಹೊಗೆಸೊಪ್ಪು ಬಾಯಿಯ ಕ್ಯಾನ್ಸರ್ ಖಾಯಿಲೆಗೆಗೆ ವಿಶೇಷವಾಗಿ ಹೊಣೆಯಾಗಿರುತ್ತದೆ. ಇದು ನಮ್ಮ ದೇಶದಲ್ಲಿ ಒಂದು ಸಾಮಾನ್ಯ ರೋಗ (ಕ್ಯಾನ್ಸರ್).

೪. ಅರ್ಬುದ ರೋಗದ ಎಲ್ಲ ಮಾದರಿಗಳನ್ನು ಒಟ್ಟಾಗಿ ತೆಗೆದುಕೊಂಡರೆ ಅವು ಧೂಮಪಾಯಿಗಳಲ್ಲಿ ಹೆಚ್ಚು ಸಾಮಾನ್ಯ ಎಂದು ಕಂಡು ಬಂದಿದೆ.

೫. ಧೂಮಪಾನ, ಹೆಂಗಸರಲ್ಲಿ ನಾಳಗಳ ತೊಡಕುಗಳನ್ನು ವಿಶೇಷವಾಗಿ ಹೆಚ್ಚು ಮಾಡುತ್ತದೆ, ಅದರಲ್ಲೂ ವಿಶೇಷವಾಗಿ ಗರ್ಭನಿರೋಧಕ ಮಾತ್ರೆಗಳನ್ನು ನುಂಗುವ ಅಭ್ಯಾಸವುಳ್ಳ ಸ್ತ್ರೀಯರಲ್ಲಿ.

೬. ಗರ್ಭಧಾರಣೆಯ ಅವಧಿಯಲ್ಲಿ ಧೂಮಪಾನ ಹೊಸದಾಗಿ ಹುಟ್ಟುವ ಕೂಸಿನ ಹುಟ್ಟು ತೂಕವನ್ನು ಕಡಿಮೆಯಾಗಿಸಲು ಕಾರಣವಾಗುತ್ತದೆ ಮತ್ತು ಶಿಶುಮರಣ ಸಂಖ್ಯೆ ಹೆಚ್ಚಿಸುತ್ತದೆ ಎಂಬುದನ್ನು ಕಂಡು ಹಿಡಿಯಲಾಗಿದೆ.

೭. ಗಣಿಕೆಲಸ, ಕೃಷಿಕೆಲಸ ಮತ್ತು ಹೊಗೆ ಉತ್ಪತ್ತಿಸುವ ಕಾರ್ಖಾನೆಗಳು ಮೊದಲಾದ ಕೆಲವು ಉದ್ಯೋಗಗಳಲ್ಲಿ ಧೂಮಪಾನ ಉದ್ಯೋಗ ಜನಿತ ಶ್ವಾಸನಾಳಗಳ ರೋಗಗಳನ್ನು ತ್ವರೆಗೊಳಿಸುತ್ತದೆ ಇಲ್ಲವೆ ಉತ್ತೇಜಿಸುತ್ತದೆ.

**ಧೂಮಪಾನ ತ್ಯಜಿಸಲು ಮಾರ್ಗೋಪಾಯಗಳು:**

೧. ಸಾಧ್ಯವಾದಷ್ಟು ಮಟ್ಟಿಗೆ ವಿಶೇಷವಾಗಿ ಮುಂದಿನ ಕೆಲವು ವಾರಗಳವರಿಗಾದರೂ ಇತರ ಧೂಮಪಾಯಿಗಳಿಂದ ದೂರವಿರಿ. ಇದರಿಂದ ಪಲೋಭನೆ ಕಡಿಮೆಯಾಗುತ್ತದೆ. ಮತ್ತು ಪುನರಾರಂಭಿಸಲು ಕೈಗೊಳ್ಳುದಿರುವ ನಿರ್ಧಾರಕ್ಕೆ ಬಲ ದೊರಕುತ್ತದೆ.

೨. ಪ್ರತಿನಿತ್ಯವೂ ಬಿಸಿನೀರಿನಲ್ಲಿ ಎರಡು ಸಲ ಸ್ನಾನಮಾಡಿ ಕಡಲೆ ಉದ್ದೀಪನಗೊಳಸುವ ತಣ್ಣೀರಿನ ಸ್ನಾನವನ್ನು ಮುಂದುವರಿಸಿ. ಇದು ದೈಹಿಕವಾಗಿ ನೆರವು ನೀಡುವುದಲ್ಲದೆ ಯಶಸ್ವಿಯಾಗಲು ನಿಮ್ಮ ನಿರ್ಧಾರವನ್ನು ಬಲಪಡಿಸುತ್ತದೆ.

೩. ದೀರ್ಘವಾಗಿ ಉಸಿರಾಡುವುದೂ ಸೇರಿದಂತೆ ಹೆಚ್ಚಿನ ವ್ಯಾಯಾಮಾಭ್ಯಾಸಗಳನ್ನು ಮಾಡಿ ಮತ್ತು ಪ್ರತಿದಿನ ಅನೇಕ ಸಲ ಮುಕ್ತವಾದ ಗಾಳಿಯಲ್ಲಿ ದೂರದ ಪಾದಯಾತ್ರೆ ಮಾಡಿ. ಇದರಿಂದ ಶ್ವಾಸಕೋಶಗಳು ಶುದ್ಧವಾಗುತ್ತದೆ ಮತ್ತು ನಿಮ್ಮ ಆರೋಗ್ಯದ ಭಾವನೆಯನ್ನು ಸ್ವಚ್ಛಗೊಳಿಸುತ್ತದೆ.

೪. ನಿಮ್ಮ ಆಹಾರ ಸೇವನೆಯ ಮೇಲೆ ಕಣ್ಣಿರಲಿ, ಹೊಸಹಣ್ಣು ಮತ್ತು ತರಕಾರಿಗಳನ್ನು ಹೆಚ್ಚಿನ ಪ್ರಮಾಣದಲ್ಲಿ, ತೆಗೆದುಕೊಳ್ಳುವುದನ್ನು ಖಚಿತ ಪಡಿಸಿಕೊಳ್ಳಿ. ಇವೆಲ್ಲ ಹೊಗೆ ಸೊಪ್ಪಿನ ಅಭ್ಯಾಸಕ್ಕೆ ವಿರುದ್ಧವಾದ ಉತ್ತಮ ವಿಪಾಪಹಾರಿ.

೫. ಬಹುಕಾಲ ಹಸಿವಿನಿಂದ ಇರಬೇಡಿ. ಕ್ರಮವಾಗಿ ಆಹಾರ ಸೇವಿಸಿ ಹೊಗೆ ಸೊಪ್ಪಿನ ಹವ್ಯಾಸವನ್ನು ನಿಲ್ಲಿಸುವ ಪ್ರಯತ್ನದಲ್ಲಿರುವಾಗ ನಿಮ್ಮ ತೂಕವನ್ನು ಕಡಿಮೆ ಮಾಡಿಕೊಳ್ಳುವ ಪ್ರಯತ್ನ ಮಾಡಬೇಡಿ.

೬. ಅತಿಯಾಗಿ ಸಂಸ್ಕಾರಗೊಳಿಸಿದ ಆಹಾರಗಳನ್ನು, ಮಧ್ಯಸಾರ, ಟೀ ಮತ್ತು ಕಾಫಿಗಳನ್ನು ತಪ್ಪಿಸಿ ಇವುಗಳೆಲ್ಲ ಬಹುಶಃ ಹೊಗೆಸೊಪ್ಪಿನ ನಿಮ್ಮ ತೃಷ್ಣೆಗೆ ಉತ್ತೇಜನ ಕೊಟ್ಟಿರಬೇಕು. ಇವು ನಿಮ್ಮ ಶರೀರದ ರಚನೆಗೆ ಅಗತ್ಯವಾದ ಸಾಮಾನ್ಯ ಆಹಾರದ ನಿಮ್ಮ ಹಸಿವನ್ನು ಕೆಡಿಸಿರಬೇಕು. ಮೆಣಸು, ಸಾಸುವೆ, ಸಾಂಬಾರ ದಿನಸಿಗಳು ಮತ್ತು ನಿಮ್ಮ ಆಹಾರದಿಂದ ಎಲ್ಲ ಬಿಸಿಯ ಮಸಾಲೆ ಸಾಮಾನುಗಳು ಮುಂತಾದುವುಗಳಾದ ವಸ್ತುಗಳನ್ನು ಬಟ್ಟುಬಿಡಿ. ಸದ್ಯಕ್ಕೆ ಹೆಚ್ಚು ಪ್ರಮಾಣದಲ್ಲಿ ಉಪ್ಪನ್ನು ತೆಗೆದುಕೊಳ್ಳುವುದರಲ್ಲಿ ನೀವು ತುಂಬ ಎಚ್ಚರದಿಂದರಬೇಕು. ಪ್ರತಿ ದಿನ ಕಡೆಯ ಪಕ್ಷ ಹತ್ತು ಲೋಟ ನೀರನ್ನು ಕುಡಿಯಿರಿ. ಕುಡಿಯುವ ಹೊಗೆಸೊಪ್ಪಿನ ಆಸೆಯನ್ನು ಕಡಿಮೆ ಮಾಡಲು ಸಹಾಯ ಮಾಡುತ್ತದೆ.

೭. ನಿಮ್ಮ ಎಲ್ಲ ಸಿಗರೇಟುಗಳನ್ನು ತ್ಯಜಿಸಬಿಡಿ. ನೀವು ಹೊಂದಿರುವ ಹೊಗೆಸೊಪ್ಪಿನ ಪ್ರತಿಯೊಂದು ಕುರುಹನ್ನು ಅಳಿಸಿಹಾಕಿಬಿಡಿ. ಈ ಸಂಧರ್ಭದಲ್ಲಿ ಯಾವುದೇ

ಧೂಮಪಾನದ ವಸ್ತುವನ್ನು ಹತ್ತಿರ ಇಟ್ಟುಕೊಳ್ಳುವುದು ಕ್ಷೇಮವಲ್ಲ. ಪದಾರ್ಥವನ್ನು ಬಳಸಲು ತೋರಿಬರುವ ಆಕರ್ಷಣೆ ಅತಿಪರಿಣಾಮಕಾರಿಯಾಗಿ ಪ್ರಭಾವಿಸಬಹುದು.

೮. ಅದೂ ಧೂಮಪಾನಕ್ಕೆ ದೀನವಾಗಿ ಬೇಡುವ ಭಾವನೆ ನಿಮ್ಮಲ್ಲಿ ಮೂಡಿದಾಗ ಪ್ರತಿ ನಿತ್ಯ ದೇವರಿಗೆ ನಿಮ್ಮನ್ನು ಸಮರ್ಪಿಸಿಕೊಳ್ಳಿ.

೯. ರಾತ್ರಿಯ ಪೂರ್ಣ ನಿದ್ರೆಯನ್ನು ನಿದ್ರಿಸಿ.

**೨. ಮದ್ಯಸಾರ ರೋಗ.**

**ವ್ಯಾಖ್ಯಾನ :**

ಮದ್ಯಸಾರ ಮತ್ತು ಮದ್ಯಸಾರ ರೋಗದ ವಿಚಾರವನ್ನು ಕುರಿತು ನಾವು ಮಾತನಾಡುತ್ತಿರುವಾಗ ಮದ್ಯಾಸಾರ ಮತ್ತು ಮದ್ಯಪಾನರೋಗ ಗಳನ್ನು ವಾಖ್ಯಾನಿಸುವದರಿಂದ ಇದನ್ನು ಆರಂಭಿಸುವುದೇ ಸರಿಯಾದುದು.

ಔಷಧಶಾಸ್ತ್ರವನ್ನು ಕುರಿತು ವಾಖ್ಯಾನಿಸುವಾಗ ಮಧ್ಯಸಾರ ಒಂದು ಔಷಧ. ಅದನ್ನು ಶಾಮಕ, ಶಾಂತಗೊಳಿಸುವ, ನಿದ್ರಾಜನಕ ಅಥವಾ ಅರಿವಳಿಕೆ ಎಂಬಂತೆ ವರ್ಗೀಕರಿಸಬಹುದು. ಸ್ವಪ್ರೇರಕವಾದ ಅಮಲುಬರಿಸುವ ಔಷಧ ಅದೊಂದೇ. ಅದನ್ನು ಸಾವಾಜಿಕವಾಗಿ ಸ್ವೀಕರಿಸಬಹುದುದಾಗಿದೆ.

ಮದ್ಯ ರೋಗಗ್ರಸ್ಥರಾದ ಜನವೆಂದರೆ ಅತಿಹೆಚ್ಚಾಗಿ ಕುಡಿಯುವವರು. ಅವರು ಮಾದಕ ವಸ್ತುವನ್ನು ಎಷ್ಟರಮಟ್ಟಿಗೆ ಅವಲಂಬಿಸಿದ್ದಾರೆ ಎಂದರೆ ಅದು ಮಾನಸಿಕವಾದ ಗೊಂದಲಗಳನ್ನು ಗುರುತಿಸುವಂತೆ ತೋರಿಸುತ್ತದೆ, ಇಲ್ಲವೆ ಅವರ ದೈಹಿಕ ಮತ್ತು ಮಾನಸಿಕ ಆರೋಗ್ಯಗಳ ಒಳ ಪ್ರವೇಶ ಮಾಡುತ್ತದೆ. ಅವರ ವೈಯಕ್ತಿಕ ಸಂಬಂಧಗಳ ಮಧ್ಯೆ ಪ್ರವೇಶಮಾಡುತ್ತದೆ ಮತ್ತು ಅವರ ಸಮಾಧಾನಕರವಾದ ಸಾಮಾಜಿಕ ಕ್ರಿಯೆಗಳಲ್ಲಿ ತೊಡಕುಂಟು ಮಾಡುತ್ತದೆ ಅಥವಾ ಅವರು ಅಂಥ ವೃದ್ಧಿಯ ಪ್ರಾರಂಭಿಕ ಚಿಹ್ನೆಗಳನ್ನು ಹೊಂದಿರುತ್ತಾರೆ.

ಮದ್ಯಸಾರ ಸೇವನೆಯನ್ನು ಎರಡು ವಿಧವಾಗಿ ವಿಂಗಡಿಸಬಹುದು. ಒಂದು ಬಳಕೆ ಇನ್ನೊಂದು ಆಪಬಳಕೆ, ಮೊದಲನೆಯದು ಸಾಮಾಜಿಕವಾಗಿ ಕುಡಿಯುವ ಅಭ್ಯಾಸವನ್ನು ಒಳಗೊಳ್ಳುತ್ತದೆ. ಅದು ವೈದ್ಯಕೀಯ, ನರವೇದನಾ ಮನೋ ಚಿಕಿತ್ಸೆ ಯುಳ್ಳ ಮತ್ತು ಮಾನಸಿಕ ಸಾಮಾಜಿಕ ತೊಡಕುಗಳನ್ನು ಒಳಗೊಳ್ಳುತ್ತದೆ, ಎರಡನೆಯದು ಅನಾವಲಂಬಿತ ಮತ್ತು ಅವಲಂಬಿತ ದುರಪಯೋಗ ಎಂಬುದಾಗಿ ಭಾವೀಕರಣ ಮಾಡಲಾಗಿದೆ.

ಅನಾವಲಂಬಿತ ಅಪಯೋಗವು ಒಬ್ಬ ವ್ಯಕ್ತಿ ಮದ್ಯವನ್ನು ಅವಲಂಬಿಸಿಲ್ಲದಿದ್ದರೂ ತನ್ನ ಮದ್ಯಸೇವನಾ ಪರಿಣಾಮವಾಗಿ ವೈದ್ಯಕೀಯ, ನರವೇಪಸಾ ಚಿಕಿತ್ಸೆಗೆ ಒಳಪಡುವ ಅಥವಾ ಮಾನಸಿಕ ತೊಡಕುಗಳ ಚಿಕಿತ್ಸೆಗೆ ಒಳಗಾಗುವ ವೈದ್ಯಕೀಯ ಚಿಕಿತ್ಸೆಗೆ ಬಾಧ್ಯವಾಗಬಹುದು.

ಅವಲಂಬನೆ ಎರಡು ಪರಿಸ್ಥಿತಿಗಳಲ್ಲಿ ಬಳಕೆಯಾಗುತ್ತದೆ. ಮಾನಸಿಕ ಅವಲಂಬನೆ ಒಬ್ಬ ವ್ಯಕ್ತಿ ಶಾರೀರಿಕ ಪರಿಣಾಮವನ್ನು ಸಹನೆ ಉತ್ಪನ್ನ ಮಾಡಲು ನಿರ್ದಿಷ್ಟವಾದ ಹೆಚ್ಚಿನ ಪ್ರಮಾಣಗಳಲ್ಲಿ ಪ್ರಗತಿಪರವಾಗಿ ಬೇಡುತ್ತಾ ಹೋದಾಗ ಮತ್ತು ಅಥವಾ ಮದ್ಯ ಸೇವನೆಯಿಂದ ತೀಕ್ಷ್ಣವಾಗಿ ಮಿತವಾಗಿರುವ, ಹಿಂದೆತೆಗೆದುಕೊಳ್ಳುವ ಚಿಹ್ನೆಗಳ ಸ್ವಭಾವವನ್ನು ಬೆಳೆಸುತ್ತಾನೊ ಆ ಸ್ಥಿತಿಯನ್ನು ಅದನ್ನು ಸರಳ ಮಾತುಗಳಲ್ಲಿ ಸ್ಪಷ್ಟಪಡಿಸಬಹುದು.

ಅನಾಮಧೇಯ ಮದ್ಯಸೇವಕರಂಥವರಿಗೆ ಇತರ ಚಿಕಿತ್ಸೆಗಳ ಜೊತೆಯಾಗಿ ಬಳಸಿದಾಗ ಸ್ವಭಾವ ಚಿಕಿತ್ಸೆಯ ತಂತ್ರಗಳು ವಿರಾಮ, ಪರಾಂ ಚಿಕಿತ್ಸೆ, ಒತ್ತಾಯದ ತರಬೇತಿ ಇತ್ಯಾದಿ ಕೆಲವು ಮದ್ಯ ಸೇವಕರಲ್ಲಿ ಚೆನ್ನಾಗಿ ಕೆಲಸ ಮಾಡುತ್ತದೆ.

**ಮದ್ಯಸಾರರದ ಸಾರಾಂಶ :**

ದೇಶದಲ್ಲಿ ಮುಂದಿನ ಮದ್ಯಸಾರ ಪಾನೀಯಗಳನ್ನು ಉತ್ಪತ್ತಿ ಮಾಡಲಾಗುತ್ತಿದೆ. ಬೀರು ೩-೪% ಜೀನ್, ರಂ, ವಿಸ್ಕಿ ೪೦% ಸಾರಾಯಿ (arrack) ೩೫% ಹೆಂಡ ೬-೮% ನ್ಯಾಯ ವಿರುದ್ಧವಾಗಿ ಗೃಹತಯಾರಿಗೆ ಸಾರಾಯಿಗಳು ೪೫-೭೦% ೧೯೯೭ ರಲ್ಲಿ ವಿದ್ಯಾರ್ಥಿಗಳ ನಡುವೆ ಮದ್ಯಸಾರದ ಸ್ಥಿತಿಗತಿ ೯-೧೫% ಈಚೆಗೆ ಸರಿಸುಮಾರಾಗಿ ಹೆಚ್ಚಾಗಿದೆ.

ಮದ್ಯಸಾರ ಕೇಂದ್ರ ನರಗಳ ಪದ್ಧತಿಯ ಮೇಲೆ ಗುರುತುಪಡಿಸುವ ಪರಿಣಾಮವನ್ನು ಹೊಂದಿರುತ್ತದೆ, ಬಹುಕಾಲದಿಂದ ನಂಬಿರುವಂತೆ ಅದು ಒಂದು ಮಾದಕ ವಲ್ಲ, ಆದರೆ ಪ್ರಾಥಮಿಕ ಮುತ್ತು ನಿರಂತರ ಮಾಂದ್ಯಜನಕ ಮದ್ಯಸಾರ, ಭಿನ್ನಭಿನ್ನ ದರ್ಜೆಗಳ ಸೌಮ್ಯ ಸ್ಥಿತಿಯಿಂದ ಬಲವತ್ತರವಾದ ಸ್ಥಿತಿಯವರೆಗೆ ಮಾನಸಿಕ ಅವಲಂಬನೆಯನ್ನು ಉತ್ಪತ್ತಿ ಮಾಡುತ್ತದೆ. ಶಾರೀರಿಕ ಅವಲಂಬನೆಯೂ ನಿಧಾನವಾಗಿ ವೃದ್ಧಿಯಾಗುತ್ತದೆ.

ಇಂದಿನ ನಂಬಿಕೆಗಳ ಪ್ರಕಾರ ಮದ್ಯಸಾರ ಸೇವನಾ ಪ್ರವೃತ್ತಿ ಒಂದು ರೋಗವೆಂದು ಪರಿಗಣಿಸಲಾಗಿದೆ, ಮತ್ತು ಮದ್ಯಸಾರ ರೋಗದ ಏಜೆಂಟ್. ಅದು ತೀವ್ರತರವಾದ ಬೇರೂರಿದ ಅಮಲು, ಯಕೃತ್ತಿನಕೋಗ, ವಿಷದ ಮನೋವಿಕಲ್ಪ, ಜಠರ ಚರ್ಮಗಳ ಊತ, ಮೇಧೋಜಿರಕಾರಿ (Pareatits), ಹೃದಯ (Candiomy Pathy) ಮತ್ತು ಹೊರಮೈ (Peripheral nellnoqathu) ಗಳನ್ನು ಉಂಟುಮಾಡುತ್ತದೆ. ಅದು ಬಾಯಿಯ, ಗಂಟಲು ಕುಹರ (Pharynx) ದನಿಪೆಟ್ಟಿಗೆಯ (Layrynx) ಮತ್ತು ಅನ್ನನಾಳದ ಅರ್ಬುದ (Cancer)

ರೋಗಗಳಿಗೆ ಸಂಬಂಧಿಸಿದಿವೆ ಎಂಬುದರ ಬಗ್ಗೆ ಈಚೆಗೆ ಸಾಕಷ್ಟು ಸಾಕ್ಷಾಧಾರಗಳು ಸ್ಪಷ್ಟವಾಗಿ ದೊರಕಿವೆ.

ಅಷ್ಟೇ ಲ್ಲದೆ, ಆತ್ಮಹತ್ಯೆಯಲ್ಲಿ, ವಾಹನ ಮತ್ತು ಇತರ ಆಕಸ್ಮಿಕಗಳಲ್ಲಿ ಮತ್ತು ಘಾಯಗಳಲ್ಲಿ ಮತ್ತು ಹಿಂಸೆಯಿಂದಾದ ಸಾವುಗಳಲ್ಲಿ ಮದ್ಯಸಾರ ಒಂದು ಮುಖ್ಯ ಮತ್ತು ರೋಗನಿದಾನದ ಅಂಶ. ಮದ್ಯಸಾರದ ಹೊಣೆಯಿರುವ ಆರೋಗ್ಯದ ಸಮಸ್ಯೆಗಳು ಕೌಟುಂಬಿಕ ಅವ್ಯವಸ್ಥೆ ಶಕ್ತೀರು ಮತ್ತು ಸಂತಾನೋತ್ಪತ್ತಿಯ ನಷ್ಟ ಮುಂತಾದುವನ್ನೊಳಗೊಂಡ ಸಾಮಾಜಿಕ ಲುಕ್ಸಾನುಗಳಲ್ಲಿ ಒಂದು ಭಾಗ ಮಾತ್ರ.

**ಚಿಹ್ನೆಗಳು :**

ಒಬ್ಬ ವ್ಯಕ್ತಿ ಅನಾಮಧೇಯ (ಅಥವಾ ಖಚಿತ ಲಕ್ಷಣಗಳ ಚಿಹ್ನೆಗಳಿಲ್ಲದ) ಮದ್ಯ ಸೇವನಿಯ ಪ್ರಕಾರ ಮದ್ಯಸೇವಾ ನಿರತನೇ ಅಥವಾ ಅಲ್ಲವೆ ಎಂಬುದನ್ನು ನಿರ್ಧರಿಸುವ ಮುಖ್ಯ ಚಿಹ್ನೆಯೆಂದರೆ (key) ಕುಡಿಯುವ ಪ್ರಮಾಣವಲ್ಲ ಅಥವಾ ಗುಣಮಟ್ಟದಲ್ಲ ಅಥವಾ ಹೆಚ್ಚು ಬಳಕೆಯೂ ಅಲ್ಲ, ಆದರೆ ಕುಡಿದಾಗ ಒಬ್ಬನ ಮೇಲೆ ಮದ್ಯಸಾರ ಏನುಮಾಡುತ್ತದೆ ಎಂಬುದು. ಒಬ್ಬನು ಕುಡಿದಾಗ ಆ ವ್ಯಕ್ತಿ ವ್ಯಕ್ತಿತ್ವದ ಪರಿವರ್ತನೆ ಸ್ಪಷ್ಟವಾಗಿ ಕಂಡುಬರುವ ಅನುಭವವನ್ನು ಪಡೆಯುತ್ತಾನೆ. ಅದು ಪ್ರಧಾನವಾಗಿರುತ್ತದೆ, ಅಥವಾ ಅವನು ಒಮ್ಮೆ ಆರಂಭಿಸಿದರೆ ಸಾಕು ಅವನು ಅದರ ಪ್ರಮಾಣವನ್ನು ಹತೋಟಿಗೆ ತಾರದಿದ್ದರೆ ಅದೂ ಪ್ರಧಾನವಾಗಿ ಗೋಚರಿಸುತ್ತದೆ. ಮದ್ಯಸೇವನಾ ಪ್ರವೃತ್ತಿಯ ಇತರ ಸ್ಪಷ್ಟ ಚಿಹ್ನೆಗಳೆಂದರೆ, ಕುಡಿಯುತ್ತಿರುವಾಗ ನೆನಪುಗಳ ನಷ್ಟ, ಹೆಚ್ಚು ಕುಡಿತಕ್ಕೆ ತೀವ್ರವಾದ ಬೇಡಿಕೆ, ಕುಡಿಯುವುದರ ಪರಿಣಾಮವಾಗಿ ಆರೋಗ್ಯದ ಕ್ಷೀಣತೆ, ಪ್ರಮಾಣವನ್ನು ಅಥವಾ ಅಡಿಗಡಿಗೆ ಕುಡಿಯುವುದನ್ನು ಮುಚ್ಚಿಟ್ಟುಕೊಳ್ಳುವುದು. ನಾಚಿಕೆಯ ಅಥವಾ ಅಭದ್ರತೆಯ ಕಾರಣಕ್ಕಾಗಿ ಕುಡಿಯುವುದು, ಮರೆಯಾಗಿ ಕುಡಿಯುವುದು, ಕೌಟುಂಬಿಕ ಸಂಬಂಧಗಳಲ್ಲಿ ಕ್ಷೀಣದೆಸೆ, ಮೊದಲಾದವು, ಆದ್ದರಿಂದ, ಮದ್ಯಪಾಯಿ ಎಂದರೆ ಪ್ರತಿದಿನವೂ ಒಂದು ಪಾನೀಯ ವಿಲ್ಲದೆ ಏನೂ ಮಾಡಲಾರದವನು.

ಈ ವಿಷಯದ ಮೇಲೆ ಇತ್ತೀಚಿನ ವೈಜ್ಞಾನಿಕ ಸಂಶೋಧನೆಗನುಸಾರವಾಗಿ ನಿಜವಾದ ಮದ್ಯಸೇವಿ, ಸಾಧಾರಣ ವ್ಯಕ್ತಿಗಿಂತ ಭಿನ್ನವಾದ ರಾಸಾಯನಿಕ ಶಾರೀರವನ್ನು ಹೊಂದಿರುತ್ತಾನೆ ಎಂಬುದನ್ನು ಸೂಚಿಸುವುದಕ್ಕೆ ಸಾಕಷ್ಟು ಆಧಾರವಿದೆ.

ಅವನು ಮದ್ಯವನ್ನು ಸೇವಿಸಿದಾಗ ತಾನು ಚೆನ್ನಾಗಿದ್ದೇವೆಂದು, ಅವನು ಆನುಭಾವಿಕ ಭಾವವನ್ನು ತಳೆಯುತ್ತಾನೆ. ಮದ್ಯಪಾಯಿಗಳು ಮತ್ತು ಮದ್ಯಪಾನ ಅನಾಸ್ತಕರ ನಡುವೆ ಕಂಡು ಬರುವ ತಾರತಮ್ಯವೆಂದರೆ ಕುಡಿತ ಮದ್ಯಪಾಯಿಗೆ ಉಂಟುಮಾಡುವ ಈ ಭಾವನೆಗಳಿಂದ ಆ

ಪರಿಹಾರದ ಭಾವನೆಯನ್ನು ನೀಡುವುದಿಲ್ಲ ಎಂಬುದು.

ಮದ್ಯಪಾಯಿಯ ದೇಹದೊಳಕ್ಕೆ ಒಂದು ಸಲ ಮದ್ಯವನ್ನು ತುಂಬಿಬಿಟ್ಟರೆ ಇನ್ನೊಂದು ವ್ಯತ್ಯಾಸ ಆ ರಾಸಾಯನಿಕ ದೇಹದಲ್ಲಿ ಮೈದೋರುತ್ತದೆ ಮದ್ಯವನ್ನು ಸೂಕ್ತವಾಗಿ ಪೋಷಕ ದ್ರವ್ಯ ಜೀವಿಯ ದೇಹಭಾಗವನ್ನಾಗಿ ಮಾರ್ಪಡಿಸುವ ಯಕೃತ್ತಿನ ಅಸಾಮರ್ಥ್ಯ ಮದ್ಯ ಅನಂತರ ಅರ್ಧ ಗಂಟೆಯ ಮೇಲೆ, ಮದ್ಯಪಾಯಿಯ ವ್ಯವಸ್ಥೆಯಲ್ಲಿ ಸಂಪೂರ್ಣವಾಗಿ ರಾಸಾಯನಿಕ (Acetaldehyde) ಘಟಕವಾಗಿ ರಕ್ತಪ್ರವಾಹದಲ್ಲಿ ರೂಪುಗೊಂಡು ಶಾರೀರಿಕ ಮತ್ತು ಮಾನಸಿಕ ಅಹಿತದ ಸ್ವರೂಪದಲ್ಲಿ ವಿಷದ ಪ್ರತಿಕ್ರಿಯೆಯನ್ನು ಉತ್ಪತ್ತಿ ಮಾಡುತ್ತದೆ. ವಿಚಿತ್ರವಾದುದೆಂದರೆ, ಮದ್ಯಪಾಯಿಯ ಈ ಸಂಧರ್ಭದಲ್ಲಿ ಇನ್ನೊಂದು ಪಾನೀಯ(Drink) ವನ್ನು ತೆಗೆದುಕೊಂಡರೆ, ಆ ಋಣಾತ್ಮಕ ಚಿಹ್ನೆಗಳು ಅಳಿದು ಹೋಗುತ್ತವೆ, ಆರೋಗ್ಯದ ಕಾಂತಿ ಹಿಂದಿರುಗುತ್ತದೆ.

ಮದ್ಯಸೇವಾ ಪ್ರವೃತ್ತಿ ಒಂದು ಖಾಯಿಲೆ. ನೀನು ರೋಗವನ್ನು ಪಡೆಯಬೇಡ ಎಂದು ಹೇಳುವ ರೋಗ. ಅನೇಕ ವರ್ಷಗಳಿಂದ ಅಥವಾ ಕೆಲವು ತಿಂಗಳುಗಳಿಂದ ಮದ್ಯವನ್ನು ಕುಡಿಯುತ್ತಿರುವ ವ್ಯಕ್ತಿ ತನ್ನ ಬದುಕಿನ ಸ್ಥಿತಿಗಳನ್ನು ಮದ್ಯಪಾನದಿಂದ ಮೇಲೇರಿಸುವ ಅಭ್ಯಾಸಕ್ಕೆ ಹೊಂದಿಕೊಂಡು ಬಿಟ್ಟರೆ, ಅವನು ತನಗೆ ತಾನೇ ಕಲಿತು ಕೊಂಡದ್ದೇನೆಂದರೆ, ತನಗೆ ತಿಳಿಯದೆಯೆ, ಮದ್ಯವು ಯಾವುದೇ ರೀತಿಯಲ್ಲಿ ತನಗೆ ಕೆಟ್ಟದ್ದು ಎಂಬುದನ್ನು ಸ್ಪಷ್ಟವಾಗಿ ಅಲ್ಲಗಳೆಯುವುದು.

**ಚಿಕಿತ್ಸೆ ಪರಿಹಾರಕ**

ಈ ರೋಗದ ಚಿಕಿತ್ಸೆ ಮದ್ಯಪಾಯಿಯು ಕುಡಿಯುವುದನ್ನು ನಿಲ್ಲಿಸುವಲ್ಲಿ ನಂಬಿಕೆ ಮಾಡಿಸುವುದನ್ನೇ ಒಳಗೊಂಡಿದೆ. ಮತ್ತು ನಿಲ್ಲಿಸುವಿಕೆಯನ್ನು ಜೀವನಪೂರ್ತ ತಡೆಹಿಡಿಯುವಂತೆಯೇ ಮಾಡಿಬಿಡುತ್ತದೆ. ರೋಗ ಹೀಗೆ ವೈದ್ಯಕೀಯವಾಗಿ ವಾಸಿಮಾಡಲಾರದ್ದು. ಏಕೆಂದರೆ, ಅದಕ್ಕೆ ಅಜೈವಿಕ ಕಿಣ್ವದ ಮತ್ತು ಜೀವಕಣದಲ್ಲಿ ಪೋಷಕ ದ್ರವ್ಯ ಜೀವ ಭಾಗವಾಗಿ ಮಾರ್ಪಡುವ ಸ್ಥಿತಿಗಳನ್ನು ತಿದ್ದುವ ಯಾವುದೇ ಔಷಧವೂ ಇಲ್ಲ, ಚಿಕಿತ್ಸೆಯೂ ಇಲ್ಲ. ಅತಿಯಾಗಿ ಕುಡಿಯುವ ಕುಡುಕರು ಸಾಮಾನ್ಯವಾಗಿ ಕುಡಿಯುವ ಸ್ಥಿತಿಗೆ ಹಿಂದಿರುಗಿರುವದೂ ಇರಬಹುದು. ಆದರೆ ನಿಜವಾದ ಮದ್ಯಪಾಯಿಗಳ ಪ್ರಕರಣಗಳಲ್ಲಿ ಸಾಮಾಜಿಕ ಕುಡುಕರಾಗಿ ಪರಿವರ್ತನೆ ಹೊಂದಿರುವುದು ಇದುವರೆಗೆ ಇಲ್ಲ.

ಮದ್ಯಪಾಯಿ ತಾನು ಪುನಃ ಮೊದಲ ಪಾನವನ್ನು ಮುಟ್ಟುವುದಿಲ್ಲ ಮತ್ತು ಈ ಭಯಂಕರ ಆವರ್ತನೆಯನ್ನು ಕಿತ್ತು ಒಗೆಯುತ್ತೇನೆ ಎಂಬುದನ್ನು ಖಚಿತಪಡಿಸಿಕೊಳ್ಳಲು ಇರುವ ಒಂದೇ ಒಂದು ದೃಢವಾದ ಪ್ರಯೋಗವೆಂದರೆ ಮಾನಸಿಕೆ ಮತ್ತು ಸೆದ್ಧಾಂತಿಕ ಉಪದೇಶವೇ. ಈ

ಸಂಬಂಧದಲ್ಲಿ ಇಚ್ಛಾಶಕ್ತಿ ಮಿತವಾದದ್ದು. ಇಚ್ಛಾಶಕ್ತಿ ಕೆಲವು ಕಾಲದವರೆಗೆ, ಕೆಲವು ವರ್ಷಗಳವರೆಗಾದರೂ ಕೆಲಸ ಮಾಡಬಹುದು ಆದರೆ ಇಚ್ಛಾಶಕ್ತಿ ಕೆಲವು ಕಾಲದವರೆಗೆ, ಕೆಲವು ವರ್ಷಗಳವರೆಗಾದರೂ ಕೆಲಸ ಮಾಡಬಹುದು ಆದರೆ ಇಚ್ಛಾಶಕ್ತಿ ಮದ್ಯಪಾಯಿಯನ್ನು ಭಾವೋದ್ರೇಕದ ಅಥವಾ ಬದುಕಿನ ಇರುಕಿನಲ್ಲಿ ೫ ನಿಮಿಷಗಳಷ್ಟಾದರೂ ತೊರೆದು ಬಿಟ್ಟರೆ ಅವನು ತನ್ನ ಮರಣಾಂತಿಕ ಪಾಪವನ್ನು ಪುನಃ ಆರಂಭಿಸಬಹುದು. ಕಾಲಪಥವು ಮದ್ಯಸೇವನೆಯ ಮನೋಮಿಕಾರಕ್ಕೆ ತುತ್ತಾದ ವ್ಯಕ್ತಿಯ ಶಾರೀರಿಕ ಸ್ಥಿತಿಗಳನ್ನು ವಾಸಿಮಾಡಲಾರದು.

ಭಾರತದಲ್ಲಿ ಮದ್ಯಸೇವನಾ ಪ್ರವೃತ್ತಿಯು ಹೆಚ್ಚು ಹೆಚ್ಚಾಗುತ್ತಿದೆ. ಪ್ರತಿ ೧೦ ಜನ ಗಂಡಸು ಮದ್ಯಪಾಯಿಗಳಿಗೆವಾಗುತ್ತಿರುವಂತೆ ಒಬ್ಬ ಸ್ತ್ರೀ ಮದ್ಯಪಾಯಿ ಇರುತ್ತಾಳೆ. ದೇಶ

ಹೆಚ್ಚು ಹೆಚ್ಚುಪಾಶ್ಚಿಮಾತ್ಯೀಕರಣ ಔದ್ಯೋಗಿಕ ತಂತ್ರ ಜ್ಞಾನಮಯವಾಗಿ ಮತ್ತು ಸುಧಾರಿತ

ಉದ್ಯಮೀಕರಣ ಅತಿಶಯವಾಗಿ ಭಾರತೀಯರು ಮೊದಲ ಸಲಕ್ಕೆ ಮದ್ಯಸೇವನೆಯನ್ನು ಪ್ರಯತ್ನಿಸುತ್ತಿದ್ದಾರೆ. ಆದ್ದರಿಂದ ಕುಡಿಯುವ ಸಮಸ್ಯೆಯನ್ನು ಬೆಳಸಿಕೊಳ್ಳುತ್ತಿರುವವರಲ್ಲಿ ಹೆಚ್ಚು ಜನ ಶೇಕಡ ೧೦ ೧೭ ರ ಗುಂಪಿಗೆ ಬೀಳುತ್ತಾರೆ.

ಅನಾಮಧೇಯ ಮದ್ಯಪಾಯಿಗಳು ಕುಡುಕರ ಹೆಂಡತಿಯರಿಗೆ ಮತ್ತು ಮಕ್ಕಳಿಗೆ ಮತ್ತು ಕುಟುಂಬಗಳಿಗೆ ಮದ್ಯಪಾಯಿಗಳನ್ನು ಮತ್ತು ಔಧಾಭ್ಯಾಸಿಗಳನ್ನು ಉಪದೇಶಗಳಿಂದ ಚಿಕಿತ್ಸೆಗೊಳಪಡಿಸುವುದು ಅತ್ಯಂತ ಮುಖ್ಯವಾದ ಕ್ರಿಯೆ ಮದ್ಯಪಾಯಿಯನ್ನು ಮತ್ತು ಶಾಖೆಗಳೊಂದಿಗೆ ಅವನ ಪೂರ್ಣ ಪರಿಸರವನ್ನು ವಾಸಿಮಾಡುವ ತಂತ್ರ ಜೊತೆಗೂಡಿದ ಚಿಕಿತ್ಸೆಯಲ್ಲಿಯೇ ಅಡಗಿದೆ.

**ನಿವಾರಕ ಕ್ರಮಗಳು**

**ಮದ್ಯಸಾರ ಶಿಕ್ಷಣ**

ಮದ್ಯಸಾರ ಶಿಕ್ಷಣ ವಿಷಯಗಳ ಅತಿ ವಿಸ್ತಾರವನ್ನು ಒಳಗೊಳ್ಳುತ್ತದೆ. ಮದ್ಯಸಾರವನ್ನು ಬಳಸುವುದು, ಮತ್ತು ದೇಹದ ಮೇಲೆ ಅದರ ಪರಿಣಾಮ, ಮದ್ಯಸಾರಾವಸ್ಥೀ ರೋಗಗಳ ನಿವಾರಕ ಶಿಕ್ಷಣ ಇತ್ಯಾದಿ. ಇದು ಈ ಜ್ಞಾನವನ್ನು ತರಗತಿಯ ತಂತ್ರಗಳಲ್ಲಿ ಸಂಯೋಜನೆಗೊಳಿಸಲು ಯತ್ನಿಸುತ್ತದೆ. ಹೆಚ್ಚು ಪರಿಣಾಮಕಾರಿಯಾಗಬೇಕಾದರೆ ಮದ್ಯಸಾರ ಶಿಕ್ಷಣ ಶಾಲೆಯಲ್ಲಿ ಅರಂಭವಾಗಿ ಕಾಲೇಜಿನ ಪೂರ್ಣ ಮುಂದುವರಿಯುತ್ತದೆ.

**ಸಲಹೆ ಮಾಡಿದ ಸಾಧಾರಣ ಉದ್ದೇಶಗಳು:**

೧. ವಸ್ತು ವಿಷಯುವನ್ನು, ಮದ್ಯಸಾರಕ್ಕೆ ಸಂಬಂಧಿಸಿದ ವೈಜ್ಞಾನಿಕ ಮಾಹಿತಿಯನ್ನು ಅದರ ಬಳಕೆ, ದುರ್ಬಳಕೆ ಮತ್ತು ಆಬಳಕೆಯನ್ನು ಮತ್ತು ಪ್ರತಿಯೊಬ್ಬ ವ್ಯಕ್ತಿಯ ಮತ್ತು ಸಮಾಜದ ಮೇಲೆ ಬೀರುವ ಪರಿಣಾಮಗಳ ಬಗ್ಗೆ ಎಚ್ಚರಿಕೆ ವೃದ್ಧಿ ಪಡಿಸುವುದನ್ನು ಸ್ಪಷ್ಟವಾಗಿ ತೋರಿಸುವುದು.

೨. ಪ್ರತಿಯೊಂದು ಜಾತಿ ಪಂಗಡದ ಜನದ ಹಿನ್ನಲೆಯಲ್ಲಿರುವ ವಿವಿಧ ಧಾರ್ಮಿಕ, ಮತೀಯ ಮತ್ತು ಸಾಮಾಜಿಕ ಕಾರಣಗಳಿಂದ ಅವುಗಳಲ್ಲಿ ಮದ್ಯಸಾರಾದಿ ಪಾನೀಯಗಳ ಬಳಕೆಗೆ ಸಂಬಂಧಿಸಿದ ಸಾಂಸ್ಕೃತಿಕ ತಿಕ್ಕಾಟಗಳಿವೆ ಎಂಬುದನ್ನು ವಿದ್ಯಾರ್ಥಿ ಅರ್ಥ ಮಾಡಿಕೊಳ್ಳಲು ಸಹಾಯ ಮಾಡುವುದು.

೩. ತರುಣ ಜನಾಂಗವು ಕುಡಿತದ ಬಗ್ಗೆ ತಮ್ಮ ಸ್ವಂತ ಭಾವನೆಗಳನ್ನು ಮತ್ತು ಪ್ರವೃತ್ತಿಗಳನ್ನು ನಿರ್ಧರಿಸಿಕೊಳ್ಳಬಹುದಾದುದಕ್ಕೆ ಅನುಕೂಲವಾಗುವಂತೆ ಮಾಹಿತಿಗಳನ್ನು ಕಂಡುಕೊಳ್ಳಲು ಅವರಿಗೆ ಪ್ರೋತ್ಸಾಹ ನೀಡುವುದು.

೪. ಮದ್ಯಸಾರವನ್ನು ಒಂದು ಪಾನೀಯವಾಗಿ ಬಳಕೆಗೆ ತರುವುದರಿಂದ ಸಾಮಾಜಿಕ ಮತ್ತು ಆರ್ಥಿಕ ಬದುಕಿನಲ್ಲಿ ಮತ್ತು ವೈಯಕ್ತಿಕ ಸಂಬಂಧಗಳಲ್ಲಿ ಎಂಥ ಸಮಸ್ಯೆಗಳನ್ನು ಉಂಟುಮಾಡಿವೆ ಎಂಬುದರ ಪರಿಮಾಣವನ್ನು ಅರ್ಥಮಾಡಿಕೊಳ್ಳುವದನ್ನು ಬೆಳಸುವುದು.

೫. ಮದ್ಯಸಾರವನ್ನು ಬಳಕೆಗೆ ಸಂಬಂಧಿಸಿದಂತೆ ತನ್ನ ಸ್ವಂತ ಮತ್ತು ಇತರರ ಕಲ್ಯಾಣಕ್ಕಾಗಿ ಒಂದು ರೀತಿಯ ಹೊಣೆಯ ಭಾವನೆಯನ್ನು ವಿದ್ಯಾರ್ಥಿಗಳಲ್ಲಿ ವೃದ್ಧಿಪಡಿಸುವದು.

೬. ಚಿಕಿತ್ಸೆ ಮಾಡಬಹುದಾದ ಮದ್ಯಪಾನ ಪ್ರವೃತ್ತಿಯ ಪರಿಮಾಣವನ್ನು ಮತ್ತು ಅದರ ಸ್ವಭಾವವನ್ನು ಅರಿತುಕೊಳ್ಳುವದನ್ನು ಪೋಷಿಸುವುದು.

೭. ಮದ್ಯಪಾನ ಸಮಸ್ಯೆಗಳನ್ನು ಹೊಂದಿರುವವರಿಗೆ ಸಹಾಯವನ್ನು ಒದಗಿಸಲು ತಮ್ಮ ಜನ ಸಮುದಾಯಗಳಲ್ಲಿನ ಎಜನ್ಸಿಗಳನ್ನು ಮತ್ತು ಸಂಘ ಸಂಸ್ಥೆಗಳನ್ನು ಕುರಿತು ತರುಣ ಜನಾಂಗದಲ್ಲಿ ಎಚ್ಚರಿಕೆಯನ್ನು ನೀಡುವುದು.

**೩. ದುರುಪಯೋಗದ ಔಷಧಗಳು ಮತ್ತು ಅವುಗಳ ಪರಿಣಾಮಗಳು:**

ಸರಳವಾದ ಅಡುಗೆ ಮನೆಯ ಸಾಂಬಾರ ಪದಾರ್ಥಗಳಿಂದ ಹಿಡಿದ ಸಾಮಾನ್ಯ ಪುಷ್ಪಗಳ ಮೂಲಕ, ಹೆಚ್ಚು ಮಿಶ್ರಣವಾದ ಔಷಧ (ಮಧ್ಯ)ಗಳ ವರೆಗೆ ದುರುಪಯೋಗದ ಅವ್ಯಕ್ತ ವಲಯಕ್ಕೆ ಸೇರಿದ ಪದಾರ್ಥಗಳು.

ಇವುಗಳನ್ನೆಲ್ಲ ಐದು ವರ್ಗಗಳನ್ನಾಗಿ ವಿಂಗಡಿಸಬಹುದು.

೧. ನಾರ್ಕೋಟಿಕ್ಸ್ (ಹೊಗೆಸೊಪ್ಪುನಂಜು)
೨. ಸೆಡಟಿನ್ಸ್ (ಶಾಮಕ ಔಷಧಗಳು)
೩. ಟ್ರಾಂಕ್ವಿಲೆಜರ್ಸ್ (ಶಾಂತ ಕಾರಕ)
೪. ಉದ್ದೀಪನಗಳು
೫. ಭ್ರಮೆ

ವೈದ್ಯಕೀಯ ಲಕ್ಷಣಗಳನ್ನು ಹೇಳಬೇಕಾದರೆ, ನಾರ್ಕೊಟಿಕ್ಸ್, ಹೊಗೆಸೊಪ್ಪಿನ ವಿಷ ಒಂದು ರೀತಿಯ ಔಷಧ. ಅದು ವಿಸ್ಮೃತಿಯನ್ನುಂಟು ಮಾಡುತ್ತದೆ, ಅಥವಾ ಕೇಂದ್ರ ನರ ವ್ಯವಸ್ಥೆಯ ಮೇಲೆ, ಅವುಗಳ ಕುಗ್ಗಿಸುವ ಪರಿಣಾಮದಿಂದ ಮಬ್ಬನ್ನುಂಟು ಮಾಡುತ್ತದೆ.

ಈ ವ್ಯಾಖ್ಯಾನದಲ್ಲಿ ಒಳಗೊಂಡಿರುವಂತೆ ಆಫೀಮು (opium) ಮತ್ತು ಆಫೀಮಿನಿಂದ ತಯಾರದುವು ಮಾರ್ಫಿನ್, ಕೋಡಿನ್ (ಆಫೀಮಿನ ಸಸ್ಯಕ್ಷಾರ) ಹೆರೆಯಿನ್ ನಿದ್ರೆ ಬರಿಸುವ ಔಷಧ ಮತ್ತು ಸಂಯೋಜಿತ ನಿದ್ರಾಜನಕಗಳು (ಮೆಥಿಡೋನ್ ಮತ್ತು ಮಪಲಿಡೈನ್) ದುರುಪಯೋಗಕ್ಕೆ ಅಳವಡುವಂಥವು. ಇತರ ಎಲ್ಲ ಔಷಧಗಳು ನಾರ್ಕೊಟಿಸ್‌ನಿಂದ ಬೇರೆಯಾದುವು.

ಇವುಗಳಲ್ಲಿ ಅನೇಕ ಔಷಧಗಳು ಮುಖ್ಯವಾದ, ನ್ಯಾಯ ಸಮ್ಮತವಾದ ಅನ್ವಯಗಳು ನಾರ್ಕೊಟಿಕ್, ಶಾಮಕಗಳು, ಶಾಂತಕಾರಕಗಳು ಮತ್ತು ಉದ್ದೀಪನ ಔಷಧಗಳು ಆಧುನಿಕ ಔಷಧಗಳ ಮತ್ತು ಪರಿಶೋಧನೆಯ ಅಭ್ಯಾಸಕ್ಕೆ ಅಗತ್ಯವಾದುವು.

ದುರುಪಯೋಗಿಗೆ ಈ ಔಷಧಗಳು ಅವನ ಭಾವವಿಕಾರದ ಪ್ರತಿಕ್ರಿಯೆಗಳಿಗೆ ಅಥವಾ ಪ್ರತಿ ಜವಾಬುಗಳಿಗೆ ಒಂದು ಬದಲಾವಣೆಯನ್ನುಂಟು ಮಾಡುತ್ತವೆ. ದುರುಪಯೋಗಿಯು ಮದವೇರಿದ ಆರಾಮಗೊಂಡ ಸುಖಮಯ ಅಥವಾ ನೋವಿನ, ಶತ್ರುಭಾವದ ಅಥವಾ ತನಗೆ ಅಸ್ವೀಕೃತವಾದ ಪ್ರಪಂಚದಿಂದ ದೂರವಿರುವ ಭಾವನೆಯನ್ನು ತಾಳಬಹುದು.

ಮತ್ತೆ ಮತ್ತೆ ಬಳಸುವುದರಿಂದ ಅನೇಕ ಔಷಧಗಳು ಶಾರೀರಿಕ ಅವಲಂಬನೆಗೆ ಕಾರಣವಾಗಬಹುದು, ಇದೊಂದು ಅಳವಡಿಕೆ. ಇದರಿಂದ ಶರೀರ, ಔಷಧದಿಂದ ಬದುಕಲು, ಏರುತ್ತಲೇ ಇರುವ ಡೋಸುಗಳಿಂದ ಸೇವನೆ ತಾಳ್ಮೆ ಪಡೆಯಲು, ಕಲಿಯುತ್ತದೆ ಮತ್ತು ಅದನ್ನು ತಪ್ಪಿಸಿಕೊಂಡಾಗ, ಕೆಲವು ಹಿಂಜರಿತದ ಚಿಹ್ನೆಗಳಿಂದ ಪ್ರತಿಕ್ರಿಯಿಸುತ್ತದೆ.

ಹಿಂಜರಿತದ ಚಿಹ್ನೆಗಳು, ಔಷಧ ಸೇವನೆಯಿಲ್ಲದೆ ಇರುವಾಗ ದೇಹ ಮತ್ತೆ ಹೊಂದಾಣಿಕೆ ಮಾಡಿಕೊಂಡಾಗ, ಅಥವಾ ಔಷಧಗಳನ್ನು ಪುನರಾರಂಭಿಸಿದಾಗ ಮರೆಯಾಗುತ್ತವೆ. ತಾಳ್ಮೆ

ಅಥವಾ ಸಹನೆ ಪರ ಪದಾರ್ಥದ ಇರುವಿಕೆ ಅಳವಟ್ಟಾಗ ಶರೀರದ ಸಾಮರ್ಥ್ಯವನ್ನು ಪ್ರದರ್ಶಿಸುತ್ತದೆ. ತಾಳ್ಮೆ ಎಲ್ಲ ಔಷಧಗಳಿಗೆ ವೃದ್ಧಿಯಾಗುವುದಿಲ್ಲ ಅಥವಾ ಎಲ್ಲ ವ್ಯಕ್ತಿಗಳಲ್ಲಿ ಬೆಳೆಯುವುದಿಲ್ಲ. ಆದರೆ ಮಾರ್ಫೀನ್ ಅಡಿಕ್ಟ್‌ಗಳಂಥ ಔಷಧಗಳೊಡನೆ, ತಾಳ್ಮೆಯನ್ನು, ಬಹುಬೇಗನೆ ಹೆಚ್ಚಿನ ತಾಳ್ಮೆಯನ್ನು ರೂಢಿಸುತ್ತದೆ ಎಂದು ಪ್ರಸಿದ್ಧಿಯಾಗಿದೆ, ದುರುಪಯೋಗಿಯು ತನ್ನ ಮಾನಸಿಕ ಅಥವಾ ಮಾನಸಿಕ ಅವಲಂಬನೆಯ ಅಭ್ಯಾಸದಿಂದ ಔಷಧವನ್ನು ದುರುಪಯೋಗ ಪಡಿಸಿಕೊಳ್ಳುವ ಅನೇಕ ಪ್ರಕರಣಗಳಲ್ಲಿ ಕಂಡು ಬರುವ ಗುಲಾಮನಾಗಿ ಬಿಡುತ್ತಾನೆ.

ದುರುಪಯೋಗಿಯು ಔಷಧ ಸೇವನೆಯಿಲ್ಲದೆ ತಾನು ಕೆಲಸ ಮಾಡಲಾರನೆಂದು ಸಾಮಾನ್ಯವಾಗಿ ಭಾವಿಸುತ್ತಾನೆ. ಅದು ಅವನನ್ನು ವಾಸ್ತವಿಕೆಯಿಂದ, ತನ್ನ ಸಮಸ್ಯೆಗಳಿಂದ ಮತ್ತು ಹತಾಶೆಗಳಿಂದ ತಪ್ಪಿಸಿಕೊಳ್ಳುವುಕ್ಕೆ ಸಹಾಯ ಮಾಡುತ್ತದೆ. ನಿರ್ಮೋಹ ಮತ್ತು ಬೇಸರೂ ಒಳಗೊಂಡಂತೆ ಪ್ರತಿಯೊಂದಕ್ಕೂ ಔಷಧ ಮದ್ಯ ಉತ್ತರವನ್ನು ಒದಗಿಸುವಂತೆ ಕಾಣುತ್ತದೆ.

**ವ್ಯಸನ**

ವ್ಯಸನ ಎಂದರೆ, ಒಂದು ಔಷಧವನ್ನು ಪುನಃ ಪುನಃ ನಿರಂತರವಾಗಿ ಸ್ವೀಕರಿಸುವುದರಿಂದ ಪ್ರತಿಫಲಿತವಾಗುವ, ಅವಧಿಯುಕ್ತ ಅಥವಾ ತೀರದ ಮಹೋನ್ಮತ್ತತೆಯ ಸ್ಥಿತಿ ಎಂದು ಅದನ್ನು ವರ್ಣಿಸಲಾಗುತ್ತದೆ. ಅದು, ತಾಳ್ಮೆಯನ್ನು, ಶಾರೀರಿಕ ಅವಲಂಬನೆಯನ್ನು ಮಾನಸಿಕ ನಿಲಂಬನೆಯನ್ನು ಮತ್ತು ವಿನಾಶಕರಕ ಪರಿಣಾಮಗಳೊಂದಿಗೆ ಔಷಧವನ್ನು ನಿರಂತರವಾಗಿ ಬಳಸುವ, ಒತ್ತಾಯಿಸುವ ಒತ್ತಡವನ್ನು ಒಳಗೊಳ್ಳುತ್ತದೆ.

**ವಾಡಿಕೆ ಸ್ಥಿತಿ**

ಅದೊಂದು ಸ್ಥಿತಿ. ಒಂದು ರೀತಿಯ ಮಾನಸಿಕೆ ಅವಲಂಬನೆಯಿಂದ ಕೂಡಿದ, ಆದರೆ ಶಾರೀರಿಕ ಒತ್ತಡ ಅಥವಾಅವಲಂಬನೆಯಿಲ್ಲದ, ಪುನಃ ಸೇವಿಸುವದರ ಪರಿಣಾಮವಾಗಿ ಸಂಭವಿಸುವ ಒಂದು ಸ್ಥಿತಿ.

**ಔಷಧಾವಲಂಬನೆ**

ಇದೊಂದು ಹೆಚ್ಚು ವಿಸ್ತಾರವಾದ ಅರ್ಥವುಳ್ಳ ಪದ. ಅದನ್ನು ಒಂದು ಸತತವಾದ ಆಧಾರದ ಉದಾಃ ಮಾರ್ಫಿನ್ ಮೇಲೆ ಔಷಧವನ್ನು ಮತ್ತೆ ಮತ್ತೆ ಬಳಸುವುದರಿಂದ ಹುಟ್ಟುವ ಒಂದು ಸ್ಥಿತಿ ಎಂದು ವರ್ಣಿಸಲಾಗುವ ಅರ್ಥದಲ್ಲಿ ಬಳಸಲಾಗುತ್ತದೆ. ಔಷಧಪರಾಧೀನತೆ ಅಥವಾ ನಿದ್ರಾಘಟಿಕದ ಬಗೆಯದು.

**ಕುಗ್ಗಿಸುವುವುಗಳು ಅಥವಾ ಮಾರಕಗಳು**

ಹಳೆಯ ಮತ್ತು ಹೊಸ ವಿವಿಧ ಔಷಧ (ಮಾದಕ)ಗಳನ್ನು ಒಳಗೊಳ್ಳುತ್ತದೆ.

**ಸಮಾಧಾನಕಾರಕಗಳು (ಶಾಂತಕಾರಕಗಳು)**

ಒತ್ತಡವನು ಪ್ರತಿರೋಧಿಸಲು ಮತ್ತು ನಿದ್ರೆಯನ್ನುಂಟು ಮಾಡದೆ ಕಾತರವನ್ನು ಪ್ರತಿಕ್ರಿಯಿಸಲು ಅಥವಾ ಪ್ರಧಾನವಾಗಿ ಮಾನಸಿಕ ಅಥವಾ ಶಾರೀರಿಕ ಕ್ರಿಯೆಯನ್ನು ದುರ್ಬಲಗೊಳಿಸಲು ಬಳಸಬಹುದು.

ಸಣ್ಣಪುಟ್ಟ ಶಾಂತಕಾರಕಗಳನ್ನು ಕಾತರ ಮತ್ತು ಒತ್ತಡ ಲಕ್ಷಣಗಳಿಂದ ಕಂಡುಬರುವ ಭಾವವಿಕಾರದ ಅವ್ಯವಸ್ಥೆಗಳ ಚಿಕಿತ್ಸೆಯಲ್ಲಿ ಬಳಸಲಾಗುತ್ತದೆ, ಮತ್ತು ಅನೇಕವನ್ನು ಮಾಂಸಖಂಡಗಳ ಸಡಿಲತೆಗಾಗಿ ಉಪಯೋಗಿಸಲಾಗುತ್ತದೆ.

**ಉತ್ತೇಜಕಗಳು**

ಈ ಔಷಧಗಳು ನೇರವಾಗಿ ಕೇಂದ್ರ ನರವ್ಯವಸ್ಥೆಯನ್ನು ಉತ್ತೇಜನಗೊಳಿಸುತ್ತದೆ. ಉದಾಹರಣೆಗಳೆಂದರೆ ಕ್ಯಾಫೀನ್ (ಕಾಫಿ, ಟೀ, ಕೋಲ ಇತ್ಯಾದಿ) ಹಸಿವು, ಆಯಾಸಗಳನ್ನು ಶಮನಗೊಳಿಸುವ ಔಷಧ (Amphetamine) ಕೂಡ ಅದರಲ್ಲಿರುತ್ತದೆ. ಕೊಕೇನ್ ಒಂದು ಅಪಾಯಕಾರಿ ಉದ್ವೇಜಕ.

**ಭ್ರಾಮಕ ಔಷಧಗಳು**

ಹಲ್ಲುಸಿನೊಜೆನ್ಸ್ ಬ್ರಾಂತಿಯನ್ನುಂಟು ಮಾಡುವ ಸೈಕೊಟೊಮಿನೆಟಿಕ್ಸ್ (PSychotominetic) ಡ್ಯ ಸ್ಟೆಪಿಕ್ಸ್(dystephics) ಅಥ'ವಾ ಸೈಕೆಡೆಲಿಕ್ಸ್ (psychedelics) ಎಂದು ಗುಂಪಿನ ಔಷಧಗಳ ಸ್ವಾಭಾವಿಕ ಲಕ್ಷಣಗಳೆಂದರೆ, ನೋಟದ ಚದುರುವಿಕೆ, ಕನಸಿನ ಮೂರ್ತಿಗಳು ಮತ್ತು ಭ್ರಾಮಕಗಳು ಅವು ಮೆಸ್ಕಲೈನ್ (Muscaline) ಮತ್ತು ಎಲ್ ಎಸ್ ಡಿ (Lysengilalid DieThylamide) ಗಳನ್ನು ಒಳಗೊಳ್ಳುತ್ತದೆ.

ಅವುಗಳಿಗೆ ಸಾಧಾರಣ ಆಸ್ಪತ್ರೆ ವೈದ್ಯದ ಉಪಯೋಗವಿರುವುದಿಲ್ಲ. ಆದರೆ ಅವುಗಳನ್ನು ದುರುಪಯೋಗದ ಔಷಧಗಳಾಗಿ ಬಳಸಲ್ಪಡುತ್ತವೆ.

**ಮರಿಹುಆನ (ಕ್ಯಾನ್ನ ಬಿಸ್)**

ಮರಿಹುಆನಕ್ಕೆ ವೈದ್ಯಕೀಯ ಉಪಯೋಗವಿಲ್ಲ.

ಹೊಗೆ ಸೇವಿಸುವುದು, ನಶ್ಯಹಾಕುವುದು ಅಥವಾ, ತುಂಬಿಕೊಳ್ಳುವುದು, ಮಾನಸಿಕ ಪರಿಣಾಮಗಳು ಇವುಗಳೆಲ್ಲ, ಮೇಲೆತ್ತುವುದು ದೊಡ್ಡವನೆಂದು, ಎತ್ತರದವನೆಂದು ಭಾವಿಸುವುದು ಮತ್ತು ಕನಸಿನ ಲೋಕವನ್ನು ಕಾಣುವುದು. ಭಾವನೆಗಳು ವಿಕಾರಗಳಾಗುತ್ತವೆ. ಕೆಲವೊಮ್ಮೆ ಭಯ ಮತ್ತು ಗಾಬರಿಗಳನ್ನು ಅನುಭವಿಸುತ್ತವೆ. ಅಧಿಕ ಡೋಸ್‌ಗಳಿಂದ ಸೇವನೆ ಭ್ರಮಿಕಸ್ಥಿತಿ ವೃದ್ಧಿಯಾಗಬಹುದು. ಇತರರ ಸಹವಾಸದಲ್ಲಿ ಮರಿಹುಆನ ಬಳಸುವವರು ಸುಮ್ಮನೆ ಮಾತನಾಡಿಯೇ ಆಡುತ್ತಾರೆ. ಸುಲಭವಾಗಿ ನಗುತ್ತಲೇ ಇರುತ್ತಾರೆ. ಒಬ್ಬಂಟಿಗನಾಗಿದ್ದಾಗ ಅವನು ಅರೆ ನಿದ್ದೆಯಲ್ಲಿರಬಹುದು ಮತ್ತು ಶಾಂತವಾಗಿರಬಹುದು. ವಾಹನ ಚಾಲನೆಯಂಥ ಸಾಧಾರಣ ಕಾರ್ಯಗಳ ಸಾಮಾರ್ಥ್ಯವನ್ನು ಗಂಭೀರವಾಗಿ ತಡೆಹಿಡಿಯಲ್ಪಡುತ್ತದೆ.

ಮರಿಹುಆನ ಶಾರೀರಿಕ ಅವಲಂನೆಯನ್ನು ಉತ್ಪತ್ತಿಯನ್ನುಂಟು ಮಾಡದಿದ್ದರೂ ಅದು ಸಾಮಾಜಿಕವಾಗಿ, ವ್ಯಸನಿಯನ್ನಾಗಿಸುತ್ತದೆ. ಅದು ಒಂದು ಲಘು ಔಷಧವೆಂದು ಪರಿಗಣಿಸಲ್ಪಟ್ಟಿದ್ದರೂ ತಪ್ಪದೆ ತೀವ್ರ ಔಷಧಗಳ ಕಡೆಗೆ ಎಳೆದೊಯ್ಯುತ್ತದೆ ಮತ್ತು ಅದರಲ್ಲಿ ಲಂಪಟತ್ವವನ್ನುಂಟು ಮಾಡುತ್ತದೆ. ತರುಣಜನ ಮರಿಹುಆನ ವನ್ನು ಪ್ರಯತ್ನಿಸಬಹುದು. ಪುಟಿಯುವ ಶಕ್ತಿಗಾಗಿ ಅಥವಾ ಕೌತುಕರಾಗಿ ಮಾತ್ರ ಆಗಾಗ ಸ್ವೀಕರಿಸಬಹುದು. ಆದರೆ ಕಾಲಾನಂತರ ಗಂಭೀರವಾದ ಲಂಪಟತ್ವಕ್ಕೆ ಒಳಗಾಗುವುದನ್ನು ಕಾಣಬಹುದು.

ಮೆಸ್ಕಲೈನ್ ಮಾದಕದ್ರವ ಮತ್ತು ಎಲ್. ಎಸ್.ಡಿ.ಗಳ ಅಪಾಯವನ್ನು ಕುರಿತು ಹೆಚ್ಚು ಒತ್ತಿ ಹೇಳಬೇಕಾದುದಿಲ್ಲ. ಅವು ವರ್ಣತಂತು (Chromosomes) ಗಳನ್ನು ಹಾನಿಮಾಡಬಹುದು ಅಥವಾ ಪರಿವರ್ತಿಸಬಹುದು ಕೂಡ. ಔಷಧ ಮದ್ಯಗಳನ್ನು ಉಪಯೋಗಿಸಿದ ಯಾವೊಬ್ಬ ದಂಪತಿಗಳಿಗೆ ಔಷಧವನ್ನು ಬಿಟ್ಟು ನಂತರವೂ ಹುಟ್ಟಿನ ಮಕ್ಕಳು ಅಸಾಧಾರಣತ್ವವನ್ನು ಬೆಳೆಸಿಕೊಳ್ಳಬಹುದು.

ಔಷಧಗಳ ಅಪಬಳಕೆ ಯಾವಾಗಲೂ ಭಾರತದಲ್ಲಿನ ಹೆಚ್ಚಿನ ಸಮಸ್ಯೆ ಆಗಿತ್ತು. ಈಗಲೂ ಆಗಿದೆ ಅದು ಪಶ್ಚಿಮ ದೇಶಗಳಿಗೆ ಮಾತ್ರ ಮೀಸಲಾಗದುದಲ್ಲ. ಭಾರತದಲ್ಲಿ ಔಷಧಾವಲಂಬನೆಯ ಇತಿಹಾಸ ಮತ್ತು ಭರಿಸುವ ಪ್ರಪಂಚದ ಇತರ ಕಡೆಗಳಿಗಿಂತ ಭಿನ್ನವಾದುದೇನೂ ಅಲ್ಲ. ಮದ್ಯಸಾರದ ಗುಣಗಳು ಭಾರತದ ಹಳೆಯ ಗ್ರಂಥಗಳಲ್ಲಿ ವೇದಗಳಲ್ಲಿ ಸೋಮರಸ ಎಂದು ಉಲ್ಲೇಖಿಸಿರುವ ಮದ್ಯಸಾರದಲ್ಲಿ ಕಿ.ಪೂ. ೧೬೦೦-೧೦೦೦ ಮತ್ತು ಗಾಂಜಾದ ಹೂ ಗಳು, ಇಲ್ಲಿ ಬಹುಶಃ ೨೦೦೦ ವರ್ಷಗಳ ಹಿಂದಿನಿಂದಲೂ ಪರಿಚಯವಿದೆ.

ಭಾರತದಲ್ಲಿ ಅವುಗಳ ಬಳಕೆಯ ವಿಶಿಷ್ಟ ಲಕ್ಷಣಗಳೆಂದರೆ ಅವುಗಳನ್ನು ಸಾಮಾಜಿಕ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿ ಜೊತೆಕೂಡಿಸಿ ಕೊಂಡಿದ್ದುದು. ಆಫೀಮಿನ ಬಳಕೆ ಸರಿಸುಮಾರು ೧೬-೧೭ನೇಯ ಶತಮಾನದಿಂದ, ಎಂದರೆ ಯುರೋಪಿಯನ್ನರು ಭಾರತಕ್ಕೆ ಬಂದ ಕಾಲದಿಂದ ಇದ್ದಿತ್ತೆಂದು ಕಂಡು ಬರುತ್ತದೆ, ೧೯೪೭ ರ ವರೆಗೆ ಆಫೀಮು ಮತ್ತು ಗಾಂಜಾಪುಷ್ಪ (Camradms) ಪರವಾನಿಗೆ ಪಡೆದ ಅಂಗಡಿಗಳಲ್ಲಿ ದೊರಕುತ್ತಿತ್ತು.

ಅನೇಕ ಜನ ವಿದ್ಯಾರ್ಥಿಗಳು ಹಾಫಿಷ್ ಮತ್ತು ಚಾರಸ್‌ನಿಂದ ಆರಂಭಿಸಿ ಎಲ್.ಎಸ್.ಡಿ. ಕೊಕೇನ್ ಬಾರ್ಬಿಟುರೇಟ್ಸ್, ಮ್ಯಾಂಡ್ರಾಕ್ಸ್, ಮೇಅಲಿಯಮ್ ಮತ್ತು ಆಮ್ಫೆಟ ಮೈನ್ಸ್‌ಗಳಿಗೆ ತೆರಳುತ್ತಾರೆ, ಏಕೆಂದರೆ ಎರಡನೆಯ ವರ್ಗದ ಸೇವನೆಗಳು ಮನಸ್ಸಿನ ಉತ್ತಮ ಕಾರ್ಯನಿರ್ವಹನೆಗೆ ಅನುಕೂಲ ಮಾಡಿಕೊಡುತ್ತವೆ ಎಂದು.

ಮುಂಬಯಿಯಲ್ಲಿ ನಡೆದ ಇತ್ತೀಚಿನ ಸರ್ವೇಕ್ಷಣೆಯಿಂದ ಕಂಡುಬಂದ ವಿಚಾರವೆಂದರೆ ಪ್ರಶ್ನಿಸಿದ ೪೦೦೦ ವಿದ್ಯಾರ್ಥಿಗಳಲ್ಲಿ ೩.೨೦ ಜನ ತೀವ್ರ ಔಷಧ (hard drug) ಸೇವನೆಯವರು. ಸಾಮಾನ್ಯವಾಗಿ ದುರುಪಯೋಗಿಸಲ್ಪಟ್ಟ ಔಷಧವೆಂದರೆ ಕ್ಯಾನ್ನಿಬಿಸ್, ಅದನ್ನು ಅನುಸರಿಸದವುಗಳೆಂದರೆ, ಆಮ್ಫೆಟಿಮೈನ್ಸ್, ಬಾರ್ಬಿಟುರೇಟ್ಸ್, ಎಲ್.ಎಸ್.ಡಿ.ಓಪಿಯಂ, ಹೆರೋಯಿನ್, ಕೊಕೇನ್ ಮತ್ತು ಮಾರ್ಫಿನ್.

ಸಾಧಾರಣವಾಗಿ ಈ ಕೆಳಕಂಡ ಮದ್ಯ ಔಷಧಿಗಳನ್ನು ಭಾರತೀಯ ವಿದ್ಯಾರ್ಥಿಗಳು ಉಪಯೋಗಿಸುತ್ತಾರೆ.

ಅಲ್ಕೋಹಾಲ್ (ಮದ್ಯಸಾರ) ಆಮ್ಪಟಿಮೈನ್ಸ್ ಬಾರ್ಬಿಟ್ಯುರೇಟ್ಸ್ ಕ್ಯಾನ್ನಬಿಸ್, ಓಪಿಯಂ, ಟೊಬ್ಯಾಕೋ (ಹೊಗೆಸೊಪ್ಪು) ಹಿಪ್ನೊಟಿಕ್ಸ್ ಮತ್ತು ಒಪಿಯೇಟ್ಸ್.

ಟೊಬ್ಯಾಕೊ ಆಲ್ಕೊಹಾಲ್, ಆಮ್ಫೆಟೆಮೈನ್ಸ್, ಬಾರ್ಬಿಟ್ಯುರೇಟ್ಸ್ ಕ್ಯಾನ್ನಬಿಸ್, ಎಲ್.ಎಸ್.ಡಿ.ಓಪಿಯಂ ಕೊಕೇನ ಪೆಥಡಿನ್, ಪೇನ್‌ಕಿಲ್ಲರ್ಸ್, ಟ್ರಾಕ್ವಿಲೈಜರ್ಸ್.

ಬಾರ್ಬಿಟ್ಯುರೇಟ್ಸ್, ಮೆಥಶೇಲೋನ್, ಆಮ್ಪಟಿಮೈನಸ್ಸ್, ಕ್ಯಾನ್ನಿಬಿಸ್, ಎಲ್.ಎಸ್.ಡಿ.

ಮ್ಯಾಂಡ್ರಾಕ್ಸ್, ಡೆಕ್ಸಡ್ರಿನ್, ಓಪಿಯಮ್, ಪಾಟ್, ಎಲ್.ಎಸ್.ಡಿ. ಭಂಗ.

೧೯೮೨ ರಲ್ಲಿ ೫೦ ರೋಗಿಗಳನ್ನು ಮಾತ್ರ ಚಿಕಿತ್ಸೆಗೊಳಿಸಿದ ದೆಹಲಿಯ ಸರ್ಕಾರದ ನಾಲ್ಕು ಪ್ರಮುಖ ಆಸ್ಪತ್ರೆಗಳಲ್ಲಿ ಹೆಚ್ಚು ಕಡಿಮೆ ೩೦೦೦ ವ್ಯಸನಿಗಳು, ಹೋದ ವರ್ಷ ಚಿಕಿತ್ಸೆಗಾಗಿ ಬಂದಿದ್ದರು. ಅವರಲ್ಲಿ ೧೦೦೦ ಜನರಿಗೆ, ಶಯ್ಯಾವಕಾಶವಿಲ್ಲದೆ ಪ್ರವೇಶವನ್ನು

ನಿರಾಕರಿಸಲಾಯಿತು.

ಮುಂಬಯಿಯಲ್ಲಿ ಮೂರು ಸರ್ಕಾರಿ ಆಸ್ಪತ್ರೆಗಳು ಹಿಂದಿನ ವರ್ಷ ೨೫ ೦೦ ಮದ್ಯಾವ್ಯಸನಿಗಳಿಗೆ ಚಿಕಿತ್ಸೆಗಾಗಿ ೧೦೦೦ ಜನರನ್ನು ಮಾತ್ರ ಸೇರಿಸಿಕೊಳ್ಳಲಾಯಿತು.

ವಾರಣಾಸಿಯಲ್ಲಿ ಶೇಕಡಾ ೩೫ ಹುಡುಗರು ಮಾತ್ರ. ಶೇಕಡಾ ೧೫.೩೫ ಹುಡುಗಿಯರು ಓಪಿಯಂ, ಲಿಕ್ಕರ, ಹೆಂಪ್, ಗಾಂಜಾ. ಡ್ರಗ್, ಕೊಕೇನ್, ಹೆರೋಯಿನ್, ಎಲ್.ಎಸ್.ಡಿ. ಇತ್ಯಾದಿಗಳ ರುಚಿ ನೋಡಿದ್ದರು. ಹುಡುಗಿಯರಲ್ಲಿ ಔಷಧವ್ಯಸನ ಹೆಚ್ಚಾಗುತ್ತಿದೆ. ಐ.ಸಿ.ಎಂ. ಆರ್.

ಕಲ್ಕತ್ತಾದಲ್ಲಿ ಅಂದಾಜಿನಂತೆ ೨೦೦ ವ್ಯಸನಿಗಳು ಚಿಕಿತ್ಸೆಯನ್ನು ಅಪೇಕ್ಷಿಸಿದರು. ನೆರೆಯ ಉತ್ತರ ಪೂರ್ವದ ರಾಜ್ಯಗಳಿಂದ ಬಂದ ವರದಿಗಳು, ಬಹುಶಃ ಅತ್ಯಂತ ಚಿಂತಾಜನಕವಾಗಿವೆ. ಮಣಿಪುರ ರಾಜ್ಯವೊಂದರಲ್ಲೇ ೨೫೬ ಜನ ಅವರಲ್ಲಿ ಹದಿಹರೆಯದ ಹುಡುಗಿಯರದೇ ಹೆಚ್ಚಿನ ಪ್ರಮಾಣ ಕಳೆದ ವರ್ಷ ಸ್ಮಾಕ್ ಅಥವಾ ಬ್ರೌನಷುಗರ್, ಅಶುದ್ಧ ಹೆರೊಯಿನ್.

ದಕ್ಷಿಣ ರಾಜ್ಯಗಳಲ್ಲೂ ಕೂಡ ಈ ಸಮಸ್ಯೆ ವ್ಯಾಪಕವಾಗಿ ಹರಡಿದೆ, ಮದರಾಸು ಮತ್ತು ಬೆಂಗಳೂರು ಆಸ್ಪತ್ರೆಗಳು, ಹಿಂದಿನ ವರ್ಷದಲ್ಲಿ ೨೦೦ ವ್ಯಸನಗಳಿಗೆ ಚಿಕಿತ್ಸೆ ನೀಡಿದೆ.

ಈ ಅಂಕಿಗಳು ಮಂಜುಗಡ್ಡೆಯ ತುದಿಗಳು ಮಾತ್ರ. ಏಕೆಂದರೆ ಸಂಶೋಧಕರು ಪ್ರತಿ ೧೦ ಜನ ವ್ಯಸನಿಗಳಿಗೆ ಒಬ್ಬನು ಮಾತ್ರ ಚಿಕಿತ್ಸೆಗೆ ಬರುತ್ತಾನೆ ಎಂದು ಅಂದಾಜುಮಾಡಿದ್ದಾರೆ. ಪೋಲಿಸ ಸಮಾಚಾರದ ಪ್ರಕಾರ, ದೇಶದಲ್ಲಿರುವ ವ್ಯಸನಿಗಳ ಸಂಖ್ಯೆ, ಬಹಳ ಸಂಕೊಚಿತವಾಗಿ ೧೦ ಲಕ್ಷವೆಂದು ಹೇಳಲಾಗುತ್ತಿದೆ. ಆದರೆ ಅದು ಪ್ರತಿವರ್ಷ ೧೫೦೦೦ ದ ದರದಂತೆ ಹೆಚ್ಚುತ್ತಿದೆ. ಮನಶಾಸ್ತ್ರಜ್ಞರು ಆಗಲೆ ಮಾತನಾಡಿಕೊಳ್ಳುತ್ತಿದ್ದಾರೆ. ಹೆರೊಯಿನ್ ಪ್ಲೇಗು ದೇಶವನ್ನು ಈಗಾಗಲೇ ಗುಡಿಸಿ ಹಾಗುತ್ತಿದೆ ಎಂದು.

೪ ವಿವಿಧ ಕೇಂದ್ರಗಳಲ್ಲಿ ಭಿನ್ನ ಭಿನ್ನ ಔಷಧಿಗಳ ಬಳಕೆಯಲ್ಲಿರುವ ಶೇಕಡ ದರ

ಮೋಹನ್ ೧೯೮೧

| ಔಷಧ | ಮುಂಬಯಿ | ಮದ್ರಾಸ | ದೆಹಲಿ | ಜಯಪುರ | ಹೈದರಾಬಾದ್ | ವಾರಣಾಸಿ | ಸೌಗಾರ್ |
|---|---|---|---|---|---|---|---|
| | ೧ | ೨ | ೩ | ೪ | ೫ | ೬ | ೭ |
| ಆಲ್ಕೊಹಾಲ್ (ಮದ್ಯಸಾರ) | ೧೫.೧ | ೯.೫ | ೧೭.೨. | ೯.೮. | ೧೧.೮ | ೧೦.೪. | ೯.೩ |
| ಹೊಗೆಸೊಪ್ಪು | ೮.೧ | ೧೫.೨ | ೧೦.೦೦ | ೯.೨ | ೮೧.೧ | ೧೫.೧ | ೧೦.೯ |
| ನೋವುನಾಶಕಗಳು | ೧೨.೬ | ೧.೨ | ೨೦.೯. | ೨.೩ | ೫.೨ | ೧೩.೮ | ೧೫.೨ |
| ಗಾಂಜಾಹೂವು (ಕೆನ್ನಾಬಿಸ್) | ೦.೪ | ೦.೦೩ | ೦.೫ | ೦.೨ | ೦.೧ | ೦.೯ | ೦.೩ |
| ಅಫೀಮು | ೦.೪ | ೦.೦೩ | ೦.೫ | ೦.೨ | ೦.೧ | ೦.೯ | ೦.೩ |
| ಶಾಂತಕಾರಕ | ೧.೦ | ೧.೦ | ೨.೯. | ೧.೨ | ೧.೬ | ೨.೫. | ೧.೨ |
| ಬಾರ್ಬಿಟ್ಯುರೇಟ್ಸ್ | ೦.೬ | ೧.೪ | ೦.೬ | ೦.೪ | ೦.೫ | ೧.೮ | ೦.೫ |
| ಆಚ್ಟುಟಮೈನ್ಸ್ | ೦.೨ | ೦.೪ | ೦.೩ | ೦.೫ | ೦.೭ | ೧.೩ | ೧.೧ |
| ಎಲ್.ಎಸ್.ಡಿ. | ೦.೦೭ | ೦.೪ | ೦.೨ | ೦.೨ | ೦.೧ | ೦.೬ | ೦.೧ |
| ಕೊಕೇನ್ | ೦.೦೫ | ... | ೦.೦೩ | ೦.೦೯ | ೦.೧ | ೦.೬ | ೦.೧ |
| ಪೆಥಿಡೈನ್ | ೦.೦೫ | ೦.೦೮ | ೦.೨ | ೦.೨ | ೦.೧ | ೦.೯ | ೦.೧ |
| ಒಟ್ಟು ಸಂ. | ೪೧೫೧ | ೩೫೮೦ | ೩೯೯೧ | ೪೦೮೧ | ೨೦೯೭ | ೩೮೫೨ | ೪೪೧೫. |

## ವಿದ್ಯಾರ್ಥಿನಿಲಯಗಳು ಮತ್ತು ವಿರಾಮ ಗಂಟೆಗಳು

ಮದ್ರಾಸಿನಲ್ಲಿ ವಿದ್ಯಾರ್ಥಿನಿಲಯಗಳಿಂದ ಕೂಡಿದ ಕಾಲೇಜಿನಲ್ಲಿ ಶೇಕಡಾ ೮೮ ಜನ ವಿದ್ಯಾರ್ಥಿ ವ್ಯಸನಿಗಳು ಅಭ್ಯಾಸ ಮಾಡುತ್ತಿದ್ದಾರೆ. ಇದರ ಸ್ಪಷ್ಟ ಅರ್ಥವೆಂದರೆ, ವಿದ್ಯಾರ್ಥಿ

ನಿಲಯದ ಮೇಲ್ವಿಚಾರಕರು ಮತ್ತು ಕಾಲೇಜಿನ ಅಧಿಕಾರಿಗಳು, ವಿದ್ಯಾರ್ಥಿಗಳ ವಿರಾಮದ ಕಾಲವನ್ನು ಲಾಭದಾಯಕವನ್ನಾಗಿ ಬಳಸುವಂತೆ ಹೆಣ್ಣಿನ ಎಚ್ಚರಿಕೆ ತೆಗೆದುಕೊಳ್ಳಬೇಕು ಎಂಬುದು.

ಹೆಚ್ಚಿನ ವಿರಾಮವುಳ್ಳ ಮತ್ತು ಹಣವುಳ್ಳ ವಿದ್ಯಾರ್ಥಿಗಳ ನಡುವೆ ಔಷಧ ವ್ಯಸನ ಅಧಿಕವಾಗಿ ಆಗಾಗ್ಗೆ ಸಂಭವಿಸುತ್ತದೆ. ಸರ್ವೇಕ್ಷಣೆ ಬಹಿರಂಗಪಡಿಸುವಂತೆ ವ್ಯಸನಿಗಳಲ್ಲಿ ಶೇಕಡಾ ೫೪ ಜನ ವಾರಕ್ಕೆ ೧೫ ಗಂಟೆಗಳಿಗಿಂತ ಹೆಚ್ಚು ವಿರಾಮದ ಗಂಟೆಗಳನ್ನು ಹೊಂದಿರುತ್ತಾರೆ. ಶೇಕಡಾ ೩೦ ಜನ ವಾರಕ್ಕೆ ೪೦ ಗಂಟೆಗಳ ವಿರಾಮವನ್ನು ಕೂಡ ಹೊಂದಿರಬಹುದು. ಸರ್ವೇಕ್ಷಣೆಯ ಅಂದಾಜು ಸರಾಸರಿ, ವಿದ್ಯಾರ್ಥಿಗಳು, ಪ್ರತಿವರ್ಷ ೬೦೦ ರಿಂದ ೧೦೦೦ ಗಂಟೆಗಳ ಮುಕ್ತ ಬಿಡುವನ್ನು ಪಡೆಯುತ್ತಾರೆ, ಇದರಲ್ಲಿ ಬೇಸಿಗೆ ರಜದ ೨ ತಿಂಗಳು ಸೇರುವುದಿಲ್ಲ, ಸರ್ವೇಕ್ಷಣದ ಸಲಹೆ ಎಂದರೆ, ತಂದೆತಾಯಿಗಳು, ವಿದ್ಯಾಕ್ಷೇತ್ರದ ಅಧಿಕಾರಿಗಳು ಮತ್ತು ಸರ್ಕಾರ ಈ ಅಂಶವನ್ನು ಗಣನೆಗೆ ತೆಗೆದುಕೊಳ್ಳಬೇಕು. ಅಲ್ಲದೆ, ಈ ಕಾಲಾವಧಿಯನ್ನು ಹೆಚ್ಚು ಉಪಯೋಗತ್ಮಕವಾಗಿ ಕಳೆಯುವಂತೆ, ಎಂದರೆ, ಸಾಮಾಜಿಕ ಕಾರ್ಯಗಳು ಅಥವಾ ಕಡ್ಡಾಯದ ಆಟಪಾಟಗಳು ಇವುಗಳಲ್ಲಿ ನೋಡಿಕೊಳ್ಳಬಹುದು.

**ಚಲನಚಿತ್ರಗಳು**

ಸರ್ವೇಕ್ಷಣ ಮತ್ತು ಒಂದು ಅಂಶವನ್ನು ಹೊರಗೆಡದಿದೆ. ಔಷಧ ವ್ಯಸನಿಗಳಲ್ಲಿ ಹೆಚ್ಚು ಭಾಗ ವಿದ್ಯಾರ್ಥಿಗಳು ಚಲನಚಿತ್ರಕ್ಕೆ ಇಂಟುಬಿದ್ದಿದ್ದಾರೆ. ಅದರಲ್ಲಿ ಶೇಕಡಾ ೭೦ ರಷ್ಟು ಕಡೆಯ ಪಕ್ಷ ವಾರಕ್ಕೆ ಒಂದು ಸಿನಿಮಾ ವನ್ನಾದರೂ ನೋಡುತ್ತಾರೆ, ಬಹುಶಃ ಸಿನಿಮಾದಲ್ಲಿನ ಲೈಂಗಿಕ ಮತ್ತು ಹಿಂಸಾತ್ಮಕ ಪ್ರವೃತ್ತಿಯ ಚಾಲ್ತಿ ಗಾಳಿ ಈ ಔಷಧ ವ್ಯಸನವನ್ನು ಪ್ರಭಾವಿಸಿರಬಹುದು. ಒಬ್ಬ ವಿದ್ಯಾರ್ಥಿ ವ್ಯಸನಿ ಹೇಳುವಂತೆ ಚಲನಚಿತ್ರಗಳು ಸಮುದಾಯ ಮಾಧ್ಯಮವಾಗಿ ಸ್ಪಷ್ಟವಾಗಿ ಅಥವಾ ನೇರವಾಗಿ ಔಷಧ ಸೇವನೆಯ ಲಂಪಟತ್ವವನ್ನು ಪ್ರಚಾರ ಮಾಡುತ್ತಿಲ್ಲವಾದರೂ ಚಲನಚಿತ್ರಗಳ ಸಾಮಾನ್ಯ ಪ್ರವೃತ್ತಿ ಇತ್ತೀಚಿನ ದಶಕದಲ್ಲಿ ಅಧಿಕಾರದ ಅಲಕ್ಷ್ಯ, ದುಷ್ಕೃತ್ಯಗಳ ವೈಭವೀಕರಣ ಮತ್ತು ಲೈಂಗಿಕ ವಿಷಯದಲ್ಲಿ ಸಮ್ಮತಿಗಳಾಗಿವೆ. ಅಶ್ಲೀಲ ಸಾಹಿತ್ಯ ಮತ್ತು ನೀಲಿಚಿತ್ರ (Blue film = ಅಶ್ಲೀಲಚಿತ್ರಗಳು) ಔಷಧಗಳು ಹೆಚ್ಚು ಕಡಿಮೆ ಅಥವಾ ಏನೂ ಅಲ್ಲದ ಅರಿಷ್ಟವೇ ಅಲ್ಲ ಎಂದು ಪರಿಗಣಿಸುವ ಅನೇಕ ವಿದ್ಯಾರ್ಥಿಗಳ ನಡುವೆ, ಸತ್ಯಾಂಶದ ವಾಡಿಕೆಯೇ ಆಗಿ ಬಿಟ್ಟಿದೆ.

ಸರ್ವೇಕ್ಷಣೆ ಇಬ್ಬರು ವಿದ್ಯಾರ್ಥಿ ವ್ಯಸನಿಗಳ ಪ್ರಕರಣಗಳ ಅಧ್ಯಯನದಿಂದ ಕಂಡುಕೊಂಡಿರುವ ವಿಷಯಃ ಇಬ್ಬರೂ ವ್ಯಸನಿಗಳೇ. ಒಬ್ಬ ವಿದ್ಯಾರ್ಥಿ ಬಡಕುಟುಂಬದಿಂದ ಬಂದವನು. ಅವನು ಚೆನ್ನಾಗಿ, ಸರಿಯಾಗಿ ನಡೆದುಕೊಳ್ಳುತ್ತಿಲ್ಲವೆಂದು ಕ್ರಮಬದ್ಧವಾಗಿ

ಶಿಕ್ಷಿಸಿಲ್ಪಟ್ಟವನು. ಇನ್ನೊಬ್ಬ ಸಂಪತ್‌ಸಮೃದ್ಧ ಕುಟುಂಬದಿಂದ ಬಂದವನು. ಅಲ್ಲಿ ಅವರ ತಂದೆ ಉದ್ಯೋಗದಲ್ಲಿ ಮುಳುಗಿರುವವನು, ಹುಡುಗನ ಕಡೆ ಗಮನ ಹರಿಸುತ್ತಲೇ ಇರಲಿಲ್ಲ. ತಾಯಿಯೋ ಸಾಮಾಜಿಕ ಕಾರ್ಯ ಕ್ರಮಗಳಲ್ಲಿ ಮೈ ಮರೆತವಳು. ಇದರಿಂದ ಕಂಡುಬರುವ ಅಂಶ, ಹಣವಾಗಲಿ ಅಥಟಾ ಅದರ ಅಭಾವವಾಗಲಿ ವ್ಯಸನಪ ವಿರುದ್ಧವಾಗಿ ಯಾವ ಭರವಸೆಯನ್ನು ಕೊಡುವುದಿಲ್ಲ.

ಆದರೂ ರೋಗವನ್ನು ತಡೆಹಿಡಿಯುವುದು ವಾಸಿಮಾಡುವುದಕ್ಕಿಂತ ಸಾಕಷ್ಟು ಅಧಿಕವಾದ ಪ್ರಯತ್ನವಾದರೂ, ಜವಾಬ್ದಾರಿ ಸ್ಪಷ್ಟವಾಗಿ ತಂದೆತಾಯಿಗಳದೇ ಆಗಿರುತ್ತದೆ. ಅಂಶಕಾಲಿಕ ತಂದೆತಾಯಿಗಳ ಮತ್ತು ಅಣುಸ್ವರೂಪದ ಕುಟುಂಬಗಳ ಅವಿರ್ಭಾವದಿಂದ ಅನೇಕ ತಂದೆತಾಯಿಗಳು ಮಕ್ಕಳ ಬದುಕು ಮತ್ತು ಅವರ ಮನೆಯ ಹೊರಗಿನ ಚಟುವಟಿಕೆಗೊಳಡೆನೆ ಜೊತೆಯಾಗಿರಲು ಸಾಕಷ್ಟು ಸಂಪರ್ಕವನ್ನು ಹೊಂದಿರುವುದಿಲ್ಲ. ತಂದೆತಾಯಿಗಳು, ತಮ್ಮ ಮಕ್ಕಳು, ಮದ್ಯಾಪಥಗಳನ್ನು ತೆಗೆದುಕೊಳ್ಳುತ್ತಿರಬಹುದು ಎಂದು ನಂಬಲೇ ಅವರಿಗೆ ಕಷ್ಟಸಾಧ್ಯವಾಗಿರುತ್ತದೆ ಮತ್ತು ಮದ್ಯವ್ಯಸನಿಯಲ್ಲಿ ಸ್ಪಷ್ಟವಾಗಿ, ಗೋಚರಿಸುವ, ಸ್ವಭಾವದ ಮತ್ತು ನಡತೆಯ ವಿವಿಧ ಬದಲಾವಣೆಗಳಿಗೆ ಕಣ್ಣು ಮುಚ್ಚಿಕೊಂಡೇ ಇರುತ್ತಾರೆ. ಅವರು ಸತ್ಯವನ್ನು ಒಪ್ಪಿಕೊಳ್ಳುವ ವೇಳೆಗೆ ತರುಣ ಹುಡುಗಿಯನ್ನು ಅಥವಾ ಹುಡುಗನನ್ನು ರೋಗದಿಂದ ವಾಸಿ ಮಾಡುವದಕ್ಕೆ ಎಷ್ಟೋ ವೇಳೆ ತುಂಬ ತಡವಾಗಿ ಬಿಟ್ಟಿರುತ್ತದೆ. ಆಗ ಪರಿಪೂರ್ಣವಾಗಿ ಚೆನ್ನಾಗಿರುವ ಕುಟುಂಬದ ಸುಖ ಅಥವಾ ಶಾಂತಿ, ಅಪರಾಧದ ಆರೋಪಗಳಿಂದ, ಅವಹೇಳತನಗಳಿಂದ ಮತ್ತುಕೆಲವೊಮ್ಮೆ ದ್ವೇಷಾಸೂಯೆಗಳಿಂದ ಛಿದ್ರ ಛಿದ್ರವಾಗಿ ಬಿಡುತ್ತದೆ. ರೋಗವ್ಯಸನಿಯು ತನ್ನ ರೋಗವನ್ನು ವಾಸಿಮಾಡಿಕೊಳ್ಳಲು ಅಪೇಕ್ಷಿಸುವುದೇ ಇಲ್ಲ. ತನ್ನ ಕುಟುಂಬದ ಬಗ್ಗೆ ಒಂದು ರೀತಿಯ ದ್ವೇಷವನ್ನು ಮತ್ತು ತಿರಸ್ಕಾರವನ್ನು ಬೆಳಸಿಕೊಂಡಿರುತ್ತಾನೆ. ಆದ್ದರಿಂದ ಸಂಪರ್ಕಿಸುವ ಎಲ್ಲ ದಾರಿಗಳು ಪರಿಣಾಮಕಾರಿಯಾಗಿ ಮುಚ್ಚಿ ಹೋಗುತ್ತವೆ.

ಮುಂಬಯಲ್ಲಿರುವ ಡಾ. ಅಲನ್ ಡಿ ಸೌಜ ಎಂಬ ಸುಪ್ರಸಿದ್ಧ ಮನಶ್ಶಾಸ್ತ್ರಜ್ಞ ಔಷಧಾಲಂಬನೆಯನ್ನು ಕುರಿತು ಹೇಳುವುದಿಷ್ಟೇ:

ಔಷಧಾವಲಂಬಿಯಾಗಬಹುದಾದವನ ಮಾನಸಿಕ ತಯಾರಿಕೆ ಕೂಡ ಬಹು ಮುಖ್ಯವಾದದ್ದು ಮಕ್ಕಳ ವಿಷಯದಲ್ಲಿ ಅತ್ಯಾಶಕ್ತಿಯನ್ನು ಮತ್ತು ಅತಿ ಮುದ್ದು ಮಾಡಲವುದನ್ನು ಅಥವಾ ವಿರುದ್ಧವಾಗಿ ನಡೆಯುವುದನ್ನು ಚಿಕ್ಕವಯಸ್ಸಿನಿಂದಲೇ ಮಕ್ಕಳನ್ನು ತಿರಸ್ಕರಿಸುವ ಮತ್ತು ತಪ್ಪಿಸುವ ತಂದೆ ತಾಯಿಗಳು ತೊಟ್ಟಿಲಿನ ಸ್ಥಿತಿಯಿಂದಲೇ ನೇರವಾಗಿ ಔಷಧಾವಲಂಬನೆಯ ಬೀಜವನ್ನು ಬಿತ್ತುತ್ತಾರೆ.

ತಾರುಣ್ಯದ ವರ್ಷಗಳು ಕೂಡ, ನಿಜವಾಗಿ ಬಹುಮುಖ್ಯವಾದುದೇ. ಈ ಅವಧಿಯಲ್ಲಿ ತರುಣನು ಒಂದು ಕ್ಲಿಷ್ಟ ಹಂತದ ಮೂಲಕ ಮುಂದುವರಿಯುತ್ತಾನೆ. ಅವನನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಅವನನ್ನು ಮಗುವೆಂದಾಗಲೆ ವಯಸ್ಕನೆಂದಾಗಲಿ ಸ್ವೀಕರಿಸುವುದೂ, ಅರ್ಥಮಾಡಿಕೊಳ್ಳುವುದು ಕಷ್ಟ. ಅದು ಅವನಿಗೆ ಚಿಂತೆಯನ್ನುಂಟು ಮಾಡುತ್ತದೆ. ಆದ್ದರಿಂದ ಔಷಧಿಗಳಿಗೆ ದಾರಿಯನ್ನು ಕಾಣುವಂತೆ ಅಥವಾ ಹಿಂದೆಗೆಯುವಂತೆ ಮಾಡಬಹುದು. ಲೈಂಗಿಕ ವಿಷಯದ ಪ್ರಾಥಮಿಕ ಮೇಲುಕ್ಕುಗಳೊಡನೆ ಅವನು ಅವಶ್ಯವಾಗಿ ಕಿಕ್ಸ್‌ಗಳಿಗೆ ಕಾಯುತ್ತಿರುತ್ತಾನೆ. ಇಲ್ಲೆ ಔಷಧಾವಲಂಬನೆಯ ಮುಂಚಿತ ಆರಂಭವನ್ನು ಹೊಂದಿರುವುದು.

ಪ್ರತಿಯೊಂದು ಪುನರಾರ್ತಿತ ಹತಾಶೆಯೂ, ಔಷಧಾವಲಂಬನಿಯನ್ನು ಈ ಪ್ರಪಂಚ ಬದುಕುವುದಕ್ಕೆ ಕಷ್ಟಕರವಾದು ಎಂದು ಖಾತ್ರಿ ಮಾಡಿಕೊಳ್ಳಲು ಸಹಾಯ ಮಾಡುತ್ತದೆ. ಆದ್ದರಿಂದ ಅವನು ವಿಷಯಗಳು ಅವನಿಗೆ ಸರಿಯಾಗಿ ಹೊಂದಿಕೊಳ್ಳದಿದ್ದ ಕೂಡಲೆ ರಾಸಾಯನಿಕ ರಜವನ್ನು ಪಡೆಯಲು ಆಯ್ದುಕೊಳ್ಳುತ್ತಾನೆ. ಅದು ಒಳಗೊಂಡ ಸುಖಸಮಾಧಾನ. ಅವನನ್ನು ಒಂದು ಸ್ಥಿತಿಗೆ ತರಲು ಸಹಾಯಮಾಡುತ್ತದೆ. ಒಮ್ಮೆ ಸಹನೆ ವೃದ್ಧಿಯಾದರೆ, ಔಷಧದ ಆವರ್ತನೆಗಳನ್ನು ಡೋಸುಗಳು ಹೆಚ್ಚುಸುತ್ತಾ ಹೋಗುವ ಅಗತ್ಯ ಉಂಟಾಗುತ್ತದೆ. ಈ ಸಮಗ್ರ ವ್ಯವಹಾರದಲ್ಲಿ ಒಳಗೊಂಡ ವೆಚ್ಚ ಅವನನ್ನು ಕಳ್ಳತನ ಮಾಡಲು ವಂಚಿಸಲು ಪ್ರೇರೇಪಿಸುತ್ತದೆ. ಔಷಧಾವಲಂಬಿ ನಿಧಾನವಾಗಿ ಸಾಮಾಜಿಕ ಏಣಿಯಿಂದ ಜಾರಿ ಬೀಳುತ್ತಾನೆ. ಔಷಧದ ಒಟ್ಟಾದ ಪರಿಣಾಮ ಎಷ್ಟೋ ವೇಳೆ ನಿಧಾನವಾಗಿ ಸಂಭವಿಸಬಹುದಾದ ಶಾರೀರಿಕ ಕ್ಷೀಣತೆಗೆ ದಾರಿಮಾಡಿಕೊಡುತ್ತದೆ. ಔಷಧಾವಲಂಬಿ ಸಮಾಜದಿಂದ ಬಹಿಷ್ಕೃತರಾದವರೊಂದಿಗೆ ಒಮ್ಮೊಮ್ಮೆ ಬೆರೆಯುತ್ತಾನೆ. ಏಕೆಂದರೆ, ಅವನನ್ನು ಸ್ವೀಕರಿಸುವ ಒಬ್ಬರೇ ಜನರೆಂದರೆ ಅವರೇ ಎಂದು ತಿಳಿಯುತ್ತಾನೆ. ಆದ್ದರಿಂದಲೇ ಅವನನ್ನು ಬೆಂಬಲಿಸಲು ಮತ್ತು ಪ್ರೀತಿಸಲು ಕುಟುಂಬದ ಅಗತ್ಯ ಅನಿವಾರ್ಯ.

**೫. ಚಿಕಿತ್ಸೆ**

ಚಿಕಿತ್ಸೆ ಆಸ್ಪತ್ರೆಗೆ ಸೇರಿಸುವುದನ್ನು ಒಳಗೊಳ್ಳುತ್ತದೆ. ಮತ್ತು ಔಷಧ ಪ್ರವೇಶದ ಎಲ್ಲ ಭಾಗಗಳನ್ನು ಮುಚ್ಚಿ ಹಾಕಿ ಬಿಡಬೇಕಾಗುತ್ತದೆ. ಈ ಕಾರ್ಯ ಅತ್ಯಂತ ಭೀತಜನಕ ಕರ್ತವ್ಯ. ಔಷಧಾವಲಂಬಿ ತುಂಬ ಕಪಟಿ, ಅವನಿಗೆ ವಂಚಿಸುವ ವಿಧಾನವೂ ತಿಳಿದಿರುತ್ತದೆ. ಅವನು, ತಪ್ಪದೆ, ಏಕಪ್ರಕಾರವಾಗಿ ತನ್ನ ಔಷಧಿಗಳನ್ನು ಕಳ್ಳತನದಿಂದ ಅಥವಾ ಕಣ್ಣು ತಪ್ಪಿಸಿ ಪಡೆದು ಕೊಳ್ಳಲು ವ್ಯವಸ್ಥೆ ಮಾಡಿಕೊಳ್ಳುತ್ತಾನೆ. ಆ ಮೂಲಕ ಚಿಕಿತ್ಸೆಯ ಉದ್ದೇಶವನ್ನೇ ಸೋಲಿಸಿ

ಬಿಡುತ್ತಾನೆ. ದುದೃಷ್ಟದಿಂದ ಕೆಲವು ಔಷಧಗಳು, ಸಹಲಕ್ಷಣ ಹಿಂಜರಿಕೆಯನ್ನು ಉಂಟುಮಾಡುವುದಿಲ್ಲ. ಆದಾಗ್ಯೂ ಔಷಧಿ ವ್ಯಸನಿಯನ್ನು ತುಂಬ ಹತ್ತಿರದಿಂದ ನೋಡಿದರೆ ಹಿಂತರಿತದ ಅವಧಿಯ ಹಂತದಲ್ಲಿ ಅವನು ಚಡಪಡಿಸುತ್ತಿರುವುದನ್ನು, ಶಾಂತಿಯಿಂದಿಲ್ಲದಿರುವದನ್ನು, ನಿದ್ರಾರಹಿತನಾಗಿರುವುದನ್ನು, ಹಸಿವಿನ ಬಾಧೆಯಿಂದ ನರಳುತ್ತಿಲ್ಲದಿರುವುದನ್ನು ಗುರುತಿಸಬಹುದು. ಈ ಚಿಹ್ನೆಗಳು ಅವನು ಔಷಧದಿಂದ ಹೊರಗಿದ್ದಾನೆ ಎಂಬುದನ್ನು ಸಾಬೀತುಗೊಳಿಸಲು ಸಾಕಷ್ಟಾಗುತ್ತವೆ.

ಹಿಂದೆಗೆಯುವ ಚಿಹ್ನೆಗಳನ್ನು ಶಾಂತಕಾರಕ ಹೊದಿಕೆಗಳ ನಿರ್ವಹಣೆಯಿಂದ ಮತ್ತು ನಿದ್ರೆ ಬರುವಂತೆ ಮಾಡುವದರಿಂದ ಮುಚ್ಚಿಡಲಾಗುವುದು. ರೋಗಿಯ ಸಾಮಾನ್ಯ ಪೋಷಣೆಗೆ ಹೆಚ್ಚು ಗಮನ ಕೊಡಬೇಕಾಗುತ್ತದೆ. ಪುಷ್ಕಳ ವಿಟಮಿನ್‌ಗಳೇ ದಿನದ ಕಾರ್ಯಕ್ರಮವಾಗಬೇಕು. ಏಕೆಂದರೆ ಈ ರೋಗಿಗಳು ಸಾಮಾನ್ಯವಾಗಿ, ಭಯಂಕರವಾಗಿ, ನಿಟ್‌ಮಿನ್‌ಗಳ ಮತ್ತು ಪೋಷಕ ದ್ರವ್ಯಗಳ ಅಭಾವದಿಂದ ವಂಚಿತರಾಗಿರುತ್ತಾರೆ. ಕಾರಣ, ಅವರು ಆಹಾರ ತೆಗೆದುಕೊಳ್ಳುವುದನ್ನು ಔಷಧದ ಗುಟುಕನ್ನು ಹೀರುವಾಗ ನಿರ್ಬಧಿಸುತ್ತಾರೆ. ಅದೇ ಅವರಿಗೆ ಪೂರ್ಣ ತೃಪ್ತಿಯನ್ನು ಕೊಡುತ್ತದೆ.

**ಕುಟುಂಬದ ಪಾತ್ರಃ**

ನಿಜವಾದ ಚಿಕಿತ್ಸೆ ಆರಂಭವಾಗುವದು ಹಂತದ ಹಿಂಜರಿಕೆಯಾದ ಮೇಲೆ, ವೈಯಕ್ತಿಕವಾದ ಅಥವಾ ತಂಡದ ನೆರವು, ಔಷಧಾವಲಂಬಿಯ ವ್ಯಕ್ತಿತ್ವದ ಪುನರ್ರಚನೆಯಾದಾಗ. ಕುಟುಂಬ ಸದಸ್ಯರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಅವರ ಸಹಾಯವಿಲ್ಲದೆ ಯಾವುದನ್ನು ಸಾಧಿಸುವುದಕ್ಕೆ ಸಾಧ್ಯವಿಲ್ಲ. ಕುಟುಂಬ ಸದಸ್ಯರು ಔಷಧಾವಲಂಬಿಯನ್ನು ಸೃಷ್ಟಿಸಲು ಮತ್ತು ಶಾಸ್ವತಪಡಿಸಲು, ಅಲ್ಪ ಕ್ರಮಗಳಿಂದಲ್ಲದೆ, ಹೆಚ್ಚಿನದಾಗಿ ತಮ್ಮ ನೆರವನ್ನು ನೀಡುತ್ತಾರೆ. ಥೆರಪಿಸ್ಟ್‌ನ ಪರವಾಗಿ ಪ್ರತಿಯೊಂದು ಪ್ರಯತ್ನಗಳಿದ್ದಾಗೂ, ಹೆಚ್ಚಿನ ಚಿಕಿತ್ಸೆ ಈಗಾಗಲೆ ಹೇಳಿದಂತೆ ಯಾವುದೇ ಪ್ರಯೋಜನಕ್ಕೆ ಬರುವುದಿಲ್ಲ. ಹೀಗಿದ್ದರೂ, ಆಶಾವಾದಿತ್ವದ ಒಂದು ಗಾಳಿ ಇದ್ದೆ ಇರಬೇಕು, ಗೆಲ್ಲಲೇಬೇಕು, ಔಷಧಾವಲಂಬಿಯನ್ನು ಪುನರ್ವಸಿಸುವ ಪ್ರಯತ್ನಗಳು ಮುಂದುವರಿಯುತ್ತಲೇ ಇರಬೇಕು.

## ವರ್ಗ ಚಟುವಟಿಕೆ

೧. ಚರ್ಚಿಸಿ

೧. ಸಿಗರೇಟು ಸೇದುವುದು ತರುಣ ಜನಾಂಗದಿಂದ , ಮೋಹಕತೆಯೊಡನೆ ಹಾಗೂ ಮಿಶ್ರತ್ವದೊಡನೆ ಸಂಬಂಧ ಹೊಂದಿರುತ್ತದೆ.

೨. ಔಷಧಗಳು ಬಲಿಷ್ಠವಾದ ಕೆಡುಕಿನದಲ್ಲ.

೩. ಮದ್ಯಸಾರ ಸಾಮಾಜಿಕರಣದ ಭಾಗವಾಗಿರಬೇಕಾದ ಅವಶ್ಯಕತೆಯಿಲ್ಲ.

೨. ಪ್ರಶ್ನಾವಳಿ

೧. ಧೂಮಪಾನ

೨. ಮದ್ಯಸಾರ ಪ್ರವೃತ್ತಿ

೩. ನೀವೊಬ್ಬರು ಮದ್ಯಪಾಯಿಯೆ

೪. ಔಷಧ ವ್ಯಸನ ಲಂಪಟತ್ವ

೫. ಶೀಲಳ ಧರ್ಮಸಂಕಟ.

೩. ೧ ಧೂಮಪಾನ

ನೀವೆಂದಾದರೂ ಧೂಮಪಾನವನ್ನು ಪ್ರಯತ್ನಿಸಿದ್ದೀರಾ ಹೌದಾದರೆ ನೀವು ಏನನ್ನು ಭಾವಿಸಿಕೊಂಡಿದ್ದೀರಿ.

೧. ಈಗ ನೀವು ಧೂಮಪಾನ ಮಾಡುತ್ತೀರಾ

೨. ಒಂದು ದಿನಕ್ಕೆ ಎಷ್ಟು ಸಿಗರೇಟುಗಳು

೩. ಧೂಮಪಾನಕ್ಕೆ ಎರಡು ಕಾರಣಗಳನ್ನು ಕೊಡಬಲ್ಲಿರಾ

೧

೨

೪. ಅದನ್ನು ಬಿಟ್ಟು ಬಿಡಲು ನಿಮಗೆ ಇಷ್ಟವಿದೆಯೆ

೫. ಅದನ್ನು ಬಿಟ್ಟು ಬಿಡಲು ನಿಮಗೆ ನೆರವು ಬೇಕೆ

೬. ಧೂಮಪಾನದ ಯಾವುದಾದರೂ ಒಳ್ಳೆಯ ಪರಿಣಾಮಗಳನ್ನು ತಿಳಿಸಿ.

೧

೨

೭. ಧೂಮಪಾನದ ಯಾವದೇ ದುಷ್ಪರಿಮಾಮಗಳನ್ನು ತಿಳಿಸಿ

೧

೨

೮. ಸಿಗರೇಟು ಸೇದುವದನ್ನು ಕಡಿಮೆ ಮಾಡಲು ನೀವು ಯಾವುದಾದರೂ ಮಾರ್ಗೋಪಾಯಗಳನ್ನು ಸೂಚಿಸಬಲ್ಲಿರಾ

**ಮದ್ಯಪಾನ ರೋಗವಸ್ಥೆ**

೧. ಯಾರು ಮದ್ಯಪಾಯಿ ಆಗುತ್ತಾರೆ.

ಅ. ಬಡವ ಮತ್ತು ಅಶಿಕ್ಷಿತ ಮಾತ್ರ

ಆ. ಶ್ರೀಮಂತ ಮತ್ತು ಅಧಿಕಾರವಂತ

ಇ. ನಿಸ್ಸತ್ವ ಮನಸ್ಸುಳ್ಳವರು

ಈ. ಯಾವೊಬ್ಬನೂ ಮದ್ಯಪಾಯಿಯಾಗಬಹುದು.

೨. ಮದ್ಯಪಾನ ರೋಗಾವಸ್ಥೆ ಎಂದರೇನು

ಅ. ಕಾಲಕ್ಷೇಪ ಆ. ಹಳತಾದ ರೋಗ ಇ. ಮದ್ಯಸಾರದ ದುರಪಯೋಗ

೩. ಮನುಷ್ಯ ಯಾವಾಗ ಕುಡಿದು ಮತ್ತನಾಗುತ್ತಾನೆ

ಅ. ವ್ಯಕ್ತಿಯನ್ನು ಅವಲಂಬಿಸುತ್ತದೆ

ಆ. ಒಂದಕ್ಕಿಂತ ಹೆಚ್ಚು ಕುಡಿತ

ಇ. ಸನ್ನಿವೇಶವನ್ನು ಅವಲಂಬಿಸುತ್ತದೆ

ಈ. ಈ ಮೂರು ಕಾರಣಗಳು.

೪. ಮದ್ಯಪಾನದ ಅಲ್ಪಾವಧಿಯ ಪರಿಣಾಮಗಳೇನು

ಅ. ನೀವು ಅತಿಶಯವಾಗಿ ಆಕರ್ಷಕರಾಗುತ್ತೀರಿ ಮತ್ತು ಬೇಕಾದವರಾಗುತ್ತೀರಿ ಹೌದು/ಇಲ್ಲ

ಆ. ಆನಂದವನ್ನು ಮತ್ತು ಆರಾಮವನ್ನು ಕೊಡುತ್ತದೆ ಹೌದು/ಇಲ್ಲ

ಇ. ಸಂಯಮ ಸ್ವಭಾವವನ್ನು ಅನುಕೂಲಿಸುತ್ತದೆ. ಹೌದು/ಇಲ್ಲ

ಈ. ಸ್ಪಷ್ಟವಾಗಿ ಆಲೋಚಿಸಲು ಅನುಕೂಲಿಸುತ್ತದೆ. ಹೌದು/ಇಲ್ಲ

ಉ. ಮೆದುಳನ್ನು ಮದ್ಯಸಾರದಿಂದ ಸ್ನಾನಮಾಡಿಸಲು ಮುಂದುವರಿಸಿದರೆ ಯೋಚನಾ ಶಕ್ತಿ ಮಾತನ್ನು ಮತ್ತು ವಾದಪ್ರವೃತ್ತಿಯನ್ನು ಮಂದವಾಗಿಸುತ್ತದೆ. ಹೌದು/ಇಲ್ಲ

೫. ಮದ್ಯಪಾನದ ದೀರ್ಘಕಾಲದ ಪರಿಣಾಮಗಳೂ ಇವೆಯೇ

ಅ. ಭಾವೋದ್ರೇಕ ಆ. ದೈಹಿಕ ಇ. ಆದ್ಯಾತ್ಮ

೬. ಮದ್ಯಸಾರ ರೋಗದಿಂದ ಸಾವು ಸಂಭವಿಸುತ್ತದೆಯೆ ಹೌದು/ಇಲ್ಲ

೭. ಸಮಸ್ಯಾತ್ಮಕ ಕುಡುಕನನ್ನು ಗುರುತಿಸಲು ಈ ತಾಳೆಪಟ್ಟಿಯನ್ನು ದಯವಿಟ್ಟು ಬಳಸಿ.

ಅ. ಬದುಕಿನೊಡನೆ ಹಂದಿಕೊಳ್ಳಲು ದಿನವೂ ಪಾನೀಯದ ಅವಶ್ಯವನ್ನು ಭಾವಿಸುತ್ತಾನೆ.

ಆ. ಏಕಾಂತವಾಗಿ ಕುಡಿಯಲು ಇಚ್ಚಿಸುತ್ತಾನೆ ಹೌದು/ಇಲ್ಲ

ಇ. ಕುಡಿದು ಮತ್ತನಾಗಿ ಕೆಲಸಕ್ಕೆ ಹೊಗುತ್ತಾನೆ ಹೌದು/ಇಲ್ಲ

ಈ. ಏಕಾಂಗಿತನದ ಕರತೆಯ ಮತ್ತು ಹೊರತೆಯ ಭಾವನೆಯಿಂದ ಪರಿಹಾರವನ್ನು ಪಡೆಯಲು ಮದ್ಯಸಾರವನ್ನು ಬಳಸುತ್ತಾನೆ ಹೌದು/ಇಲ್ಲ

ಉ. ಪ್ರತಿಸಲವು ಮತ್ತೇರುವ ಹಂತದವರೆಗೆ ಕುಡಿಯುತ್ತಾನೆ ಹೌದು/ಇಲ್ಲ

ಊ. ಬಲವಂತದಿಂದ ಕುಡಿಯುತ್ತಾನೆ ಹೌದು/ಇಲ್ಲ

ಎ. ಕುಡಿಯುವುದನ್ನು ನಿರಾಕರಿಸುತ್ತಾನೆ ಅಥವಾ ಮುಚ್ಚಿಡಲು ಪ್ರಯತ್ನಿಸುತ್ತಾನೆ. ಹೌದು/ಇಲ್ಲ

ಏ. ಮರೆವುಗಳ ಅತಿ ಉದ್ರೇಕಗಳ ಮತ್ತು ಭ್ರಮೆಗಳ ಸಮಯಗಳನ್ನು ಅನುಭವಿಸುತ್ತಾನೆ ಹೌದು/ಇಲ್ಲ

ಐ. ಕೂಟಕ್ಕೆ ಮುಂಚೆ ಕೆಲಸ ವೇಳೆಯಲ್ಲಿ ಅಥವಾ ಸ್ನಾನದ ಮನೆಯಲ್ಲಿ ಕದ್ದು ಮುಚ್ಚಿಟ್ಟುಕೊಂಡು ಕುಡಿಯುತ್ತಾನೆ. ಏಕೆಂದರೆ ಅವನು ಅವಳು ತನಗೆ ಕುಡಿಯಲು ಸಾಕಷ್ಟು ಪಾನೀಯ ಸಿಗುವುದಿಲ್ಲವೆಂದು ಭಾವಿಸುವುದರಿಂದ ಹೌದು/ಇಲ್ಲ

ಒ. ಶತ್ರುಭಾವನೆಯನ್ನು ನಾಶಕಾರಕ ಹಿಂಸಾತ್ಮಕವಾದ ಒತ್ತಡದ ಭಾವನೆಗಳನ್ನು ಅನುಭವಿಸುತ್ತಾನೆ. ಹೌದು/ಇಲ್ಲ

ಓ. ಮಾಂಸಖಂಡಗಳ ಸಮ ಹೊಂದಾಣಿಕೆಯ ಅಭಾವ ಮತ್ತು ಕೈಗಳ ನಡುಕವನ್ನು ತಡೆಹಿಡಿಯಲು ಕುಡಿಯುತ್ತಾನೆ. ಹೌದು/ಇಲ್ಲ

ಔ. ಹೆಂಡತಿ ಕುಟುಂಬ ಮಿತ್ರರು, ಉದ್ಯೋಗದಾದತ, ಪೋಲೀಸ ಅವರೋಡನೆ ಅಭ್ಯಾಸ ಜಗಳವನ್ನು ತಂದೊಡ್ಡುವುದರಿಂದ ಹೌದು/ಇಲ್ಲ

ಕ. ಗೆಳೆಯರು ದೂರ ನಿಂತು ಬಿಡುತ್ತಾರೆ ಹೌದು/ಇಲ್ಲ

ಖ. ಮುತ್ತಿನ ಪರಿಣಾಮವಾಗಿ ದೈಹಿಕ ಗಾಯಗಳನ್ನು ಹೊಂದುತ್ತಾನೆ. ಹೌದು/ಇಲ್ಲ

ಗ. ಸಾಮರ್ಥ್ಯ ಮತ್ತು ಆಕಾಂಕ್ಷೆ ಕ್ಷೀಣವಾಗುತ್ತಿರುವುದು ಹೌದು/ಇಲ್ಲ

೮. ಒಬ್ಬವ್ಯಕ್ತಿ ಮದ್ಯಾಸಕ್ತನಾಗಿದ್ದರೆ ಅವನಿಗೆ ಸಹಾಯಮಾಡಲು ನೀವು ಏನು ಮಾಡುತ್ತೀರಿ

೯. ನೀವು ಒಬ್ಬ ಮದ್ಯಪಾಯಿಯೆ

೧. ಕುಡಿಯುವುದರಿಂದ ಕೆಲಸದ ಕ್ರಿಯೆಯವನ್ನು ಕಳೆದು ಕೊಳ್ಳತಣುತೀರಾ ಹೌದು/ ಇಲ್ಲ

೨. ಕುಡಿತದಿಂದ ನೀವು ನಿಮ್ಮ ಗೃಹಜೀವನವನ್ನು ಅಸುಖಿಯನ್ನಾಗಿ ಮಾಡಿಕೊಳ್ಳುತ್ತಿದ್ದಾರಾ ಹೌದು/ಇಲ್ಲ

೩. ಜನದೊಡನೆ ಬೆರೆಯಲು ನಾಚಿಕೆ ಪಟ್ಟುಕೊಳ್ಳುವುದರಿಂದ ನೀವು ಕುಡಿಯುತ್ತೀರಾ ಹೌದು/ಇಲ್ಲ

೪. ಕುಡಿಯುವುದು ನಿಮ್ಮ ಖ್ಯಾತಯನ್ನು ಹಾಳುಮಾಡುತ್ತಿದೆಯೇ ಹೌದು/ಇಲ್ಲ

೫. ಕುಡಿದ ನಂತರ ನೀವೆಂದಾದರೂ ಖೇದಪಟ್ಟದ್ದೀರಾ ? ಹೌದು/ಇಲ್ಲ

೬. ಕುಡಿತದ ಫಲವಾಗಿ ನೀವು ಯಾವುದಾದರೂ ಹಣಕಾಸಿನ ತೊಂದರೆಗೆ ಒಳಗಾಗಿದ್ದರಾ ? ಹೌದು/ಇಲ್ಲ

೭.೮. ಕುಡಿಯುದಕ್ಕೆ ಆರಂಭಿಸಿದಿನಿಂದ ನಿಮ್ಮ ಮಹತ್ವಾಕಾಂಕ್ಷೆ ಕಡಿಮೆಯಾಗಿದೆಯೇ ಹೌದು/ಇಲ್ಲ

೯. ದಿನವೂ ಒಂದು ನಿರ್ದಿಷ್ಟ ಸಮಯದಲ್ಲಿ ಪಾನೀಯವನ್ನು ಬಯಸುತ್ತೀರಾ ? ಹೌದು/ಇಲ್ಲ

೧೦. ಕುಡಿತದಿಂದ ನಿದ್ರೆಯಲ್ಲಿ ಯಾವುದೇ ರೀತಿಯ ತೊಂದರೆ ಉಂಟಾಗುತ್ತದೆಯೇ ಹೌದು/ಇಲ್ಲ

೧೧. ಕುಡಿಯುವುದನ್ನು ಆರಂಭಿಸಾದಾಗದಿಂದ ನಿಮ್ಮ ದಕ್ಷತೆ ಬಿದ್ದಿದೆಯೇ ? ಹೌದು/ಇಲ್ಲ

೧೨. ಕುಡಿತವು ನಿಮ್ಮ ಉದ್ಯೋಗ ಅಥವಾ ವ್ಯಾಪರವು ಗಂಡಾಂತರಕೊಳ್ಳಗಾಗಿದೆಯೇ ಹೌದು/ಇಲ್ಲ

೧೩. ಚಿಂತೆಗಳಿಂದ ಅಥವಾ ತೊಂದರೆಗಳಿಂದ ತಪ್ಪಿಸಿಕೊಳ್ಳಲು ಕುಡಿಯುತ್ತೀರಾ ? ಹೌದು/ಇಲ್ಲ

೧೪. ನೀವು ಒಬ್ಬರೇ ಒಂಟಿಯಾಗಿ ಕುಡಿಯುತ್ತೀರಾ ? ಹೌದು/ಇಲ್ಲ

೧೫. ಕುಡಿತದ ಪರಿಣಾಮವಾಗಿ ನೀವು ಎಂದಾದರೂ ನೆನಪಿನ ಪೂರ್ಣ ನಷ್ಟವನ್ನು ಅನುಭವಿಸಿದೀರಾ ? ಹೌದು/ಇಲ್ಲ

೧೬. ನಿಮ್ಮ ವೈದ್ಯ ನಿಮ್ಮನ್ನು ಎಂದಾದರೂ ಕುಡಿತಕ್ಕೆ ಚಿಕಿಸ್ತೆ ಮಾಡಿದ್ದಾರೆಯೇ ? ಹೌದು/ಇಲ್ಲ

೧೭. ನೀವು ನಿಮ್ಮಲ್ಲಿ ಆತ್ಮಭರವಸೆಯನ್ನು ತುಂಬಿಕೊಳ್ಳುವುದಕ್ಕಾಗಿ ಕುಡಿಯುತ್ತೀರಾ? ಹೌದು/ಇಲ್ಲ

ಮೇಲಿನ ಯಾವುದಾದರೂ ಒಂದು ಪ್ರಶ್ನೆಗೆ ಹೌದು ಎಂದು ಉತ್ತರಿಸಿದರೆ ನೀವು ಒಬ್ಬ ಮದ್ಯಪಾಯಿಯಾಗಿರಬಹುದು ಎಂಬುದಕ್ಕೆ ನಿರ್ದಿಷ್ಟ ಎಚ್ಚರುಚರಿಕೆ ಇದೆ ಇರುತ್ತದೆ.

ಯಾವುದೇ ಎರಡು ಪ್ರಶ್ನೆಗೆ ನೀವು ಹೌದು ಎಂದು ಉತ್ತರಿಸಿದರೆ ನೀವು ಒಬ್ಬ ಮದ್ಯಪಾಯಿ ಆಗಿರುವುದರ ಅವಕಾಶವಿರುತ್ತದೆ.

ಯಾವುದೇ ಮೂರು ಅಥವಾ ಹೆಚ್ಚಿನ ಪ್ರಶ್ನೆಗಳಿಗೆ ಹೌದು ಎಂದು ಉತ್ತರಿಸಿದರೆ ನೀವು ಖಂಡಿತವಾಗಿ ಒಬ್ಬ ಮದ್ಯಾಸಕ್ತ

೪ ಮದ್ಯ ಸೇವ ವ್ಯಸನಿ

೧. ಮದ್ಯಗಳನ್ನು ಮದ್ಯವ್ಯಸನಿಗಳು ವಾಸ್ತವಿಕತೆಯಿಂದ ತಪ್ಪಿಸಿಕೊಳ್ಳುವ

ಉಪಾಯವಾಗಿ ಬಳಸಲಾಗುತ್ತದದೆ ನಾನು ಒಪ್ಪುತ್ತೇನೆ

ಅ. ಪೂರ್ಣವಾಗಿ ಆ. ಭಾಗಶಃ ಇ. ಒಪ್ಪುವುದಿಲ್ಲ

೨. ಮದ್ಯಾವಲಂಬಿಗಳೆಂದರೆ ಯಾರು ಮದ್ಯಾಔಷಧಗಳನ್ನು

ಅ. ನಿರಂತರವಾಗಿ

ಆ. ಕೆಲವು ಸಮಯಗಳಲ್ಲಿ ಮಾತ್ರ

ಇ. ವೈದ್ಯಕೀಯ ಕಾರಣಗಳಿಗಾಗಿ

ಈ. ಅವುಗಳಿಲ್ಲದೆ ಬದಕಲಾಗುವುದಿಲ್ಲ

ಉ. ಮರೆಯಲು ತೆಗೆದುಕೊಳ್ಳುತ್ತಾರೋ ಅವರು

೩. ಮದ್ಯಾವಲಂಬನೆ ದೈಹಿಕ ಅವಲಂಬನೆಯನ್ನುಂಟು ಮಾಡುತ್ತದೆ. ನಿಜ ಸುಳ್ಳು

೪. ಮದ್ಯಾವಲಂಬಿಗಳ ಲಕ್ಷಣಗಳೆಂದರೆ

ಅ. ಮಂದ, ಕುಸಿತ ಮತ್ತು ಭಯಗ್ರಸ್ತ

ಆ. ಹರ್ಷದಾಯಕ ಕ್ರಿಯಾಶೀಲ ಮತ್ತು ವಿಲಾಸ

ಇ. ಮಾತುಬಡಕ ಮತಖುತು ಧೈರ್ಯಸ್ಥ

೫. ಮದ್ಯಾವಲಂಬನೆಗೆ ಕಾರಣಗಳು

ಪ್ರಮುಖತೆಯ ಕ್ರಮದಲ್ಲಿ ಶ್ರೇಷ್ಠಾಂಶ

ಅ. ಸಂಗಡಿಗಳ ತಂಡದ ಪ್ರಬ್ರಾವ

ಆ. ಬಲಿಷ್ಠ ವ್ಯಕ್ತಿತ್ವದ ಅಭಾವ.

ಇ. ಗೆಳೆಯರ ಕೊರತೆ

ಈ. ಬಡ ಕೌಟುಂಬಿಕ ಜೀವನ

ಉ. ಕುಸಿತವನ್ನು ಗೆಲ್ಲಲು

ಊ. ಅದು ಆಧುನಿಕವಾದುದರಿಂದ

೬. ಮದ್ಯಾಪಾನೀಯಗಳ ಮತ್ತು ಮದ್ಯವ್ಯಸನದ ವಿಚಾರವನ್ನು ಮನೆಯಲ್ಲಿ ಚರ್ಚಿಸದೆ ಇರುವುದರಿಂದ ಹಿರಿಯರು ತರುಣ ಜನವನ್ನು ಮದ್ಯಲಂಪಟತ್ವಕ್ಕೆ ಪ್ರವೇಶಿಸಲು ಸಹಾಯ ಮಾಡುತ್ತಿದ್ದಾರೆ ಎಂದು ನೀವು ಭಾವಿಸುತ್ತೀರಾ

ಅ. ಗಟ್ಟಿಯಾಗಿ ಆ. ಖಂಡಿ ಇಲ್ಲ ಇ. ಸ್ವಲ್ಪಮಟ್ಟಿಗೆ

೭. ಮದ್ಯವ್ಯಸನ ಹೆಚ್ಚು ಸೂಕ್ತವಾದುದನ್ನು ಗುರುತಿಸಿ

ಅ. ಅದು ವೈಯಕ್ತಿಕ ಸಮಸ್ಯೆ ಮಾತ್ರ

ಆ. ಒಂದು ರೋಗ

ಇ. ಬೇರೊಂದು ಪ್ರಪಂಚದಲ್ಲಿನ ಬದುಕು

ಈ. ಹೊಸ ಸಾಮಾಜಿಕ ಸಮಸ್ಯೆ

೮. ಮದ್ಯವ್ಯಸನಿಯಲ್ಲಿ ಪ್ರಮುಖವಾದ ಭಾವನೆಗಳೆಂದರೆ
ಮದ್ಯಸೇವನೆಯ ಪ್ರಭಾವದ ಅಡಿಯಲ್ಲಿ ಸಾಧ್ಯವಾದರೆ
ಶ್ರೇಣಿಯನ್ನು ಗುರುತಿಸಿ

ಅ. ಕೋಪ　　ಈ. ಆಶಾಭಂಗ

ಆ. ನಿರಾಶೆ ಹತಾಶ　　ಉ. ತಿರಸ್ಕಾರ

ಇ. ಉದ್ರೇಕ　　ಊ. ಹರ್ಷದಾಯಕ

೯. ನಿಮಗೆ ತಿಳಿದಿರುವ ಕೆಲವು ಮದ್ಯಪಾನೀಯಗಳ ಹೆಸರು ಹೇಳಿ

೧

೨

೩

೪

೫

೬

೧೦. ನಿಮಗೆ ತಿಳಿದಿರುವ ಒಬ್ಬ ವಿದ್ಯಾರ್ಥಿ ಮದ್ಯವ್ಯಸನಿ ಎಂದು ತಿಳಿದಿರೆ, ವಿದ್ಯಾರ್ಥಿಯಾಗಿ ಅವನಿಗೆ ಸಹಯಾ ಮಾಡಲು ನೀವು ಏನು ಮಾಡುತ್ತೀರಿ

೧

೨

೧೧. ಮದ್ಯಾವಲಂಬಿಯೋಡನೆ ಕೆಲಸ ಮಾಡುತ್ತಿರಾವಾಗ ಈ ಮುಂದಿನ ವಾಚಾರಗಲ ಪ್ರಾಮುಖ್ಯವನ್ನು ಕುರಿತು ಏನು ಯೋಚನೆ ಮಾಡುವಿರಿ

ಅ. ಧರ್ಮ　　ಉ. ಸಮುದಾಯ ಮಾಧ್ಯಮ

ಆ. ವೈಯಕ್ತಿಕ ಸಂಪರ್ಕ　　ಊ. ತಂದೆತಾಯಿಗಳ ನೆರವು

ಇ. ಒಬ್ಬ ವ್ಯಕ್ತಿಗೆ ಗೌರವ ನೀಡುವುದು　　ಎ. ಉಪಾಧ್ಯಾಯರ ಸಹಾಯ

ಈ. ಆರೋಗ್ಯಕರ ಅಭ್ಯಾಸಗಳು

೫. ಶೀಲಳ ಧರ್ಮಸಂಕಟ

ರೂಪಲಿಗೆ ೨೦ ವರ್ಷ ವಯಸ್ಸು ಅವಳು ಬುದ್ಧಿವಂತೆ ಶಕ್ತಿವಂತೆ ಒಂದು ಸುಪ್ರಸಿದ್ಧ ಕಾಲೇಜಿನಲ್ಲಿ ಓದುತ್ತಿದ್ದಾಳೆ. ಪಿ.ಯು.ಸಿ. ಆದ ಮೇಲೆ ವೈದ್ಯ ವಿಷಯವನ್ನು ಅಭ್ಯಾಸ ಮಾಡಲು ಅಪೇಕ್ಷಿಪಟ್ಟಳು ಆದರೆ ಯಾವುದೇ ವೈದ್ಯಕೀಯ ಕಾಲೇಜಿನಲ್ಲಿ ಪ್ರವೇಶ ದೋರಕಲಿಲ್ಲ. ಆದ್ದರಿಂದ ಈ.ಎಸ್.ಸಿ. ವ್ಯಾಸಂಗಕ್ಕೆ ತೃಪ್ತಿಪಡಬೇಕಾಯಿತು.

ರೂಪ ತನ್ನ ಬಾಲ್ಯವನ್ನು ನೆನಸಿಕೊಂಡಾಗ ಅವಳಿಗೆ ಮಧುವರಲ್ಲದ ಅನೇಕ ನೆನಪುಗಳು ಬರುತ್ತವೆ. ಅವಳಿಗೆ ಹತ್ತು ವರ್ಷವಾಗಿದ್ದಾಗ ಅವಳ ತಂದೆ ಅವಳನ್ನು ಅನೇಕ ವರ್ಷಗಳ ಕಾಲ ಬಿಟ್ಟುಬಿಟ್ಟು ದೂರವಾಗಿದ್ದರು. ಆಗ ಅವಳು ಅವಳ ತಾಯಿಯ ಬಳಿ ಇದ್ದಳು. ಅದೃಷ್ಟವಶಾತ್ ತಾಯಿತಂದೆಗಳು ಈಚೆಗೆ ಒಟ್ಟಾಗಿ ಕೂಡಿದರು ಈಗ ಅವರು ಒಟ್ಟಾಗಿ

ಬದುಕುತ್ತಿದ್ದಾರೆ ಜೊತೆಗೆ ಅವಳ ತಮ್ಮ ಮತು ತಂಗಿಯರೂ ಇದ್ದಾರೆ.

ಕಾಲೇಜಿನಲ್ಲಿ ರೂಪಳಿಗೆ ಶೀಲ ಎಂಬ ಹೆಸರಿನ ಗೆಳತಿ ಒಬ್ಬಳುಬಲಿದ್ದಾಳೆ. ಆದರೆ ಅವರಿಬ್ಬರಲ್ಲಿ ಏನೂ ಮನಸ್ತಾಪ. ಆದ್ದರಿಂದ ರೂಪಳಿಗೆ ತನ್ನ ವಿಷಯಗಳನ್ನು ಕುರಿತು ಹೇಳಿಕೊಳ್ಳುವ ಹತ್ತಿರದ ಗೆಳತಿಯರು ಯಾರೂ ಇಲ್ಲ.

ಶೀಲ ಗುರುತಿಸಿದಳು ರೂಪ ತರಗತಿಗಳಿಗೆ ಸರಿಯಾಗಿ ಬರುವುದಿಲ್ಲ ಎಂಬುದನ್ನು ಅವಳು ತನ್ನ ಹೊಸ ಸ್ನೇಹಿತರ ತಂಡದೊಡನೆ ಓಡಾಡುವುದನ್ನು ಗಮನಿಸಿದಳು. ರೂಪ ಹುಡುಗರಿಂದ ಆಮಿಷಕ್ಕೊಳಪಡಿಸಲ್ಪಡುತ್ತಿರುವದನ್ನು ಕಂಡುಹಿಡಿದುಕೊಂಡಳು. ಅವರು ಅವಳಿಕೆ ಪಾನೀಯಗಳನ್ನು ಕೊಡುವುದನನಲು ಅರಿತಳು. ಅವರು ಅವಳನ್ನು ರಾತ್ರಿಯ ಹೊತ್ತು ಅವಳು ಬಾಡಿಗೆ ಅತಿಥಿಯಾಗಿ ಉಳಿದುಕೊಂಡಾಗ. ಹೊರಗೆ ಕರೆದುಕೊಂಡು ಹೋಗುವುದನ್ನು ನೋಡಿದಳು.

ರೂಪಳನ್ನು ಹೀಗೆ ಹುಡುಗರು ತಮ್ಮ ಸ್ವಂತಲಾಭಕ್ಕೆ ಬಳಸಿಕೊಳ್ಳುವುದನ್ನು ಅವಲು ಇಷ್ಟಪಡಲಿಲ್ಲ, ಕಾಲೇಜಿನಲ್ಲಿ ಅನೇಕ ಹುಡುಗರು ರೂಪಳನ್ನು ಕಂಡು ನಗುತ್ತಾರೆ. ಇದರಿಂದ ರೂಪ ಒಂದು ರೀತಿಯಲ್ಲಿ ತಿರಸ್ಕೃತಳಾಗಿರುತ್ತಾಳೆ. ರೂಪಳಿಗೆ ಸಹಾಯ ಮಾಡಲು ಶೀಲಳಿಗೆ ಇಷ್ಟವಿದ್ದರೂ ಅವಳು ಹಿಂಜರಿಯುತ್ತಾಳೆ. ಕಾರಣ ಹಿಂದೆ ಅವಳ ಪ್ರಯತ್ನಗಳೆಲ್ಲ ವಿಫಲವಾಗಿದ್ದುವು. ರೂಪಳ ವಿಷಯ ತಾನು ಅಷ್ಟಾಗಿ ಹಚ್ಚಿಕೊಳ್ಳಬಾರದು, ಅವಳ ವ್ಯಾಪಾರ ಅವಳಿಗೆ ಎಂದು ಭಾವಿಸುತ್ತಾಳೆ. ಆದರೆ ಅವಳ ಅಂತರ್ವಾಣಿ ಪಿಸುಗುಟ್ಟುತ್ತದೆ ರೂಪಳಿಗೆ ಸಹಾಯಮಾಡಬೇಕು ಎಂದು

ಶೀಲಳು ಏನು ಮಾಡಬೇಕು

ತಂಡಗಳಲ್ಲಿ ಚರ್ಚಿಸಿ.

ತಂಡಗಳ ವರದಿ ಓದಬೇಕು ಮತ್ತು ಸಮ್ಮತಿಪಡೆಯಬೇಕು.



ಅಧ್ಯಾಯ ೧೧

# ಹೆಂಗಸರು ಮತ್ತು ಗಂಡಸರು

## ೧ ಭಾರತದಲ್ಲಿ ಹೆಂಗಸರ ಸ್ಥಾನ

ವೇದಕಾಲದಲ್ಲಿ (2500-1200) ಕ್ರಿ.ಪೂ ಹೆಂಗಸರಿಗೆ ಕುಟುಂಬದರಲ್ಲಿ ಮತ್ತು ಸಮಾಜದಲ್ಲಿ ಓಡಾಡಲು ಸಾಕಷ್ಟು ಸ್ವಾತಂತ್ರ್ಯವಿತ್ತು. ಅವರು ಸಾರ್ವಜನಿಕ ವ್ಯವಹಾರಗಳಲ್ಲಿ ಬುದ್ಧಿವಂತಿಕೆಯ ಪಾತ್ರವನ್ನು ವಹಿಸುತ್ತಿದ್ದರು. ಹುಡುಗಿಯರು ಹುಡುಗರಂತೆ ವಿದ್ಯಾಭ್ಯಾಸವನ್ನು ಪಡೆಯುತ್ತಿದ್ದರು. ಮದುವೆ ೧೬ ರಿಂದ ೧೭ ವರ್ಷ ವಯಸ್ಸಿನಲ್ಲಿ ನಡೆಯುವ ಕ್ರಮವು ಇತ್ತು. ಪ್ರೇಮವಿವಾಹದ ಸಂದರ್ಭಗಳೂ ಆಗಾಗ ಕಂಡುಬರುತ್ತಿತ್ತು ಸಾಮಾಜಿಕ ಮತ್ತು ಧಾಮಿಕ ಸಮಾರಂಭಗಳಲ್ಲಿ ಅವರು ಪ್ರಮುಖವಾದ ಸ್ಥಾನವನ್ನು ಆಕ್ರಮಿಸುತ್ತಿದ್ದರು. ಧರ್ಮದ ದೃಷ್ಟಿಯಲ್ಲಿ ಹೆಂಗಸಿರಗೆ ಚ ಮತ್ತು ತಾಯಿಯ ಸ್ಥಾನ ಗೌರವದಜ ಸ್ಥಾನವಾಗಿರುತ್ತಿತ್ತು. ಸಾಮಾನ್ಯವಾಗಿ ಏಕಪತ್ನಿತ್ವವೇ ನಿಯಮ. ವಿಧವಾ ವಿವಾಹಕ್ಕೆ ಅನುಮತಿಯಿತ್ತು. ಆದರೆ ಇದು ಸಾಮಾನ್ಯವಾಗಿ ಕುಟುಂಬದ ಒಳಗೆ ಮಾತ್ರ ಆದರೆ ಹೆಂಗಸರು ಕುಟುಂಬದ ಆಸ್ತಿಯನ್ನು ಹೊಂದಿರುವಂತೆಯೂ ಇರಲಿಲ್ಲ, ಪರಂಬರೆಯಿಂದ ಪಡೆಯುವಂತೆಯೂ ಇರಲಿಲ್ಲ.

ಬ್ರಾಹ್ಮಣ್ಯ ಯುಗದಲ್ಲಿ ಕ್ರಿ.ಮೂ. ೧೫೦೦ ೫೦೦ ಸ್ತ್ರೀಯರ ಸ್ಥಾನದಲ್ಲಿ ಕ್ರಮವಾಗಿ ಬದಲಾವಣೆಯಾಗತೊಡಗಿತು. ಕನ್ಯೆಯರ ವಿವಾಹ ವಯಸ್ಸು ೧೬ ವರ್ಷದ ಸುಮಾರಿನವರೆಗೆ ಮುಂದುವರಿದಿತ್ತು ಮತ್ತು ಹುಡುಗಿಯರಿಗೆ ಅವರು ಜೀವನಸಾಥಿಗಳನ್ನು ಆಯ್ಕೆ ಮಾಡಿಕೊಳ್ಳಲು ಸ್ವಲ್ಪಮಟ್ಟಿನ ಅಧಿಕಾರವೂ ಇತ್ತು. ವಿವಾಹ ವಿಚ್ಛೇದನಕ್ಕೆ ಹೆಂಡತಿಗೆ ಅನುಮತಿಯಿತ್ತು. ಆದರೆ ಅದನ್ನು ಬಹುವಾಗಿ ಎಂದರೆ ವಿಸ್ತತವಾಗಿ ಬಳಸಿಕೊಳ್ಳುತ್ತಿರಲಿಲ್ಲ. ಸೂತ್ರಗಳ ಮತಖುತು ಪುರಾಣಗಳ ಸ್ತ್ರೀಯರ ಸ್ಥಾನ ಸಾಕ್ಟು ಬದಲಾವಣೆ ಹೊಂದಿತ್ತು. ಸಮಾಜದ ಕೆಲವು ಶಕ್ತಿಗಳು ಬಾಲ್ಯವಿವಾಹ ೯– ೧೦ ವರ್ಷದ ವಯಸ್ಸಿಗೆ ನಡೆಯಬೇಕೆಂದು ಗದ್ದಲಮಾಡತೊಡಗಿದವು.

ಇತ್ತೀಚಿನ ಒಂದು ವರದಿಯ ತೀರ್ಮಾನಗಳಿಂದ ಕಂಡುಬರುವ ಅಂಶವೆಂದರೆ, ಸ್ವಾತಂತ್ರ್ಯ ಬಂದ ೪ ವರ್ಷಘುಳಿಂದಿಚೆಗೆ ಗೆ ಹೆಂಗಸರ ಸ್ಥಾನ ಸಾವಧಾನವಾಗಿ ಕೆಳದರ್ಜೆಗೆ ಇಳಿಯುತ್ತಿದೆ ಎಂದು ಗೊತ್ತಾಗಿರುವುದ ಯೋಚಿತ ಅಭಿವೃದ್ಧಿಯ ಸೌಲಭ್ಯಗಳು ಭಾರತೀಯ ಸ್ತ್ರೀಯರ

ಸಣ್ಣಭಾಗವೊಂದಕ್ಕೆ ಮಾತ್ರ ಬಹುಸಂಖ್ಯಾತ ಸ್ತ್ರೀವರ್ಗವನ್ನು ಅಲಕ್ಷ್ಯಮಾಡಿ ಕ್ರೋಡೀಕರಣವಾಗಿದೆ.

**೨. ಲೈಂಗಿಕ ವಿವೇಚನೆ**

ಪುತ್ರ ಸಂತಾನೋತ್ಪತ್ತಿ ಧಾರ್ಮಿಕ ಅಗತ್ಯ ಏಕೆಂದರೆ ಅವನೊಬ್ಬನೆ ಪಿತೃಗಳಿಗೆ ಕೆಲವು ಧಾರ್ಮಿಕ ಋಣಗಳನ್ನು ತೀರಿಸಲು ಬಾಧ್ಯಸ್ಥ ಹುಡುಗಿಯರ ವಿದ್ಯಾಭ್ಯಾಸನಿಂತು ಹೋಯಿತು. ಅದರಿಂದ ಪುಟ್ಟ ಕನ್ಯೆಯರು, ಮದುವೆಗೆ ವರಗಳನ್ನು ಆರಿಸಿಕೊಳ್ಳವುದರಲ್ಲಿ ಯಾವುದೇ ಆಯ್ಕೆಯ ಅಧಿಕಾರಮತವನ್ನು ಹೊಂದಿರುವ ಹಕ್ಕನ್ನು ಕಳೆದಕೊಂಡರು ವಿಧವಾವಿಹಾವನ್ನು ವಿರೋಧಿಸಿದರು. ಪತ್ನಿಯಾದವಳು ಪತಿಯ ಅಗತ್ಯ ಸೇವೆಗಳನ್ನು ನೆರವೇರಿಸಬೇಕಾದದು ಅಪೇಕ್ಷಿತವಾಗಿತ್ತು ಮತ್ತು ಅವನನ್ನು ತೃಪ್ತನನ್ನಾಗಿ ನೋಡಿಕೊಳ್ಳುವುದೂ ಅವಳ ಕೆಲಸ.

**೩. ಹೆಣ್ಣಿನ ಭ್ರೂಣ ಹತ್ತೆ ಮತ್ತು ಶಿಶುಹತ್ತೆ**

ಹೆಣ್ಣಿನ ಭ್ರೂಣಹತ್ತದ ಪರಿಣಾಮವಾಗಿ ಲೈಂಗಿಕ ವಿವೇಚನೆ ಮಾಡುವುದು ಅತ್ಯಂತ ದುಃಖದ ಸಂಗತಿ, ಭ್ರೂಣಚಿಕಿತ್ಸೆ ಭಾರತದಲ್ಲಿ ವಿಶಿಷ್ಟವಾಗಿ ಭ್ರೂಣದ ಲಿಂಗವನ್ನು ನಿರ್ಧರಿಸುವ ಬಹುವಾದ ಕಾರ್ಯದಲ್ಲಿ ಮಾಡಲಾಗುತ್ತಿದೆ. ಅದು ಸ್ತ್ರೀಲಿಂಗವಾಗಿದ್ದರೆ ಈ ಪರೀಕ್ಷೆ ಕೂಡಲೆ ಗರ್ಭಪಾತದಿಂದ ಮುಂದುವರಿಯುತ್ತಿತ್ತು. ಹೆಣ್ಣು ಶಿಶುಗಳ ಮರಣದ ದರ ಪ್ರತಿ ಜನಗಣತಿ ವರ್ಷಗಳಲ್ಲಿ ಹೆಚ್ಚುತ್ತಲೇ ಇತ್ತು. ಉದಾ ೧೯೫೧ ರಲಖುಲಿ ಸ್ತ್ರೀ ಶಿಶುಮರಣದ ದರ ೧ ೧೫ ವರ್ಷಕ್ಕಿಂತ ಕಡಿಮೆ ವಯಸ್ಸಿನ ತಂಡದಲ್ಲಿ ತುಂಬ ಕೆಳಸ್ತರದಲ್ಲಿತ್ತು ೧೯೭೧ ರಲ್ಲಿ ಸ್ತ್ರೀ ಮರಣ ಪುರುಷ ಮರಣಕ್ಕಿಂತ ೧ ರಿಂದ ೪೫ ವರ್ಷದ ಬದುಕಿನ ಪ್ರತಿ ವರ್ಷವೂ ಹೆಚ್ಚಾಗಿಯೇ ಇರುತ್ತಿತ್ತು.

ಭಾರತದಲ್ಲಿ ಗರ್ಭಪಾತ ಮತ್ತು ವಿಶೇ,ವಾಗಿ ಹೆಣ್ಣುಶಿಶು ಭ್ರೂಣಹತ್ಯ ವಿಶೇ,ವಾಗಿ ಶಿಶುಹತ್ಯದ ಜೋತೆಗೆ ಸೇರಿಕೊಂಡಿತ್ತು. ಡಾ. ಯುಗೀನ ಡೈಮೆಂಡ್ ಹೇಳಿದ್ದಾನೆ. ವೈದ್ಯಕೀಯ ವೃತ್ತಿಯಲ್ಲಿರುವ ನಾವು ಈಗ ಗರ್ಭಪಾತ ಕೋಟಿ ಕೋಟಿ ಶಿಶುಗಳ ರಕ್ತದಲ್ಲಿ ಕೈತೊಳೆಯುತ್ತಿದ್ದೇವೆ ನಾವು ನಮ್ಮ ಚಿಕಿತ್ತಕ ಹೆರೆಗತ್ತಿಗಳನ್ನು ಪಕ್ಕದಲ್ಲಿಟ್ಟು ಬಿಟ್ಟಿದ್ದೇವೆ ತುಂಬ ಇತ್ತೀಚೆಗೆ ಕೂಲಿ ಮಾಡಿದ ಭ್ರೂಣಗಳು ಹಸಿ ಕುಸರಿಗಲನ್ನುಳ್ಳ ಸರಕುಗಳನ್ನು ಬಳೆಗಳಿಗೆ ಒಡ್ಡುತ್ತಿದ್ದೇವೆ ನಾವು ನಮ್ಮ ಕಣ್ಣಿನ ದೃಷ್ಟಿಗಳನ್ನು ಸಿಶುಕೋಣೆಯ ಮೇಲ್ಕಿಟಕಿಗಳ ಕಡೆ ಹರಿಸಿದ್ದೇವೆ. ಆ ಮೂಲಕ ಕೂಸುಕೋಣೆಗಳತ್ತ ದೃಷ್ಟಿಸುತ್ತಿದ್ದೇವೆ.

ಬಾರತದಲ್ಲಿ ಶಿಶುಹತ್ಯೆ ವರದಕ್ಷಿಣೆ ದಾನದ ಮತ್ತು ಸ್ತ್ರೀಯರು ಕಡಿಮೆ ದರ್ಜೆಯವರು ಎಂಬ ನಂಬಿಕೆಯ ಬಯದೊಡನೆ ಅಂಟಿಕೊಂಡಿದೆ ಪಶ್ಚಿಮದೇಶಗಳಲ್ಲಿ ಶಿಶುಹತ್ಯೆ ಆಸ್ಪತ್ರೆಗಳಲ್ಲಿ

ಮುರಿಯಬಹುದಾದ ಅಥವಾ ತ್ಯಜಿಸಬಹುದಾದ ಒಪ್ಪಂದಕ್ಕೂ ಜೀವನದ್ಯಂತದ ಒಕ್ಕೂಟಕ್ಕೆ ಪವಿತ್ರವಾದ ಒಪ್ಪಂದಕ್ಕೂ ಇರುವುದೇ ಅತ್ಯಂತ ನಿಷ್ಪಕ್ಷವಾದ ವ್ಯತ್ಯಾಸ ಪುನಃ ಮಕ್ಕಳಿಗೆ ಅಗತ್ಯವಾದ ಬದ್ರವಾದ ಭದ್ರತೆಯನ್ನು ಕೊಡಲಿಕ್ಕಾಗುವುದಿಲ್ಲ, ಅಷ್ಟೇ ಅಲ್ಲ, ಅವರು ತಮ್ಮ ಸ್ವಂತ ತಂದೆತಾಯಿಗಳಿಂದ ಅನುಭವ ಪಡೆದ ತೆಳುವಾದ ಒಕ್ಕೂಟದ ಕಾರಣದಿಂದ ಸರಿಯಾಗಿ ಶಿಕ್ಷಣವನ್ನು ಮುಂದುವರಿಸಲೂ ತಮ್ಮ ವಿವಾಹ ಜೀವನದಲ್ಲಿ ಅವರು ಬಹುಬೇಗನೆ ಇದು ಸ್ವರ್ಗಕ್ಕೆ ದಾರಿಮಾಡಿಕೊಡುವುದಲ್ಲದೆ ಕುಟುಂಬ ಜೀವನ ಉದ್ದೇಶ ಸಾಧನೆಗೆ ಅವಶ್ಯಕ ಆದ್ದರಿಂದ ಅದು ಆಜ್ಞೆಯ

೧೮. ಸಂಧಾನ

ಎಷ್ಟೋ ವೇಳೆ ಮನಸ್ಸಿನ ವಿವದಮಟ್ಟಗಳ ಅಸಮ್ಮತಿ ತಲೆದೋರುತ್ತವೆ. ಮೊದಲನೆಯದಾಗಿ, ವಿವಾಹ ಒಕ್ಕೂಟದ ಪಾಲುದಾರರು ಸಂಧಾನದಿಂದ ಹೊಂದಿಕೊಳ್ಳುವಂತಾದರೆ ಅದು ಅಂತ್ಯದವರೆಗೆ ನಿಲ್ಲಬಹುದೆಂಬ ಆಶೆ ಸಕಾರಣವಾಗಿರುತ್ತದೆ. ಆದ್ದರಿಂದ ನಮ್ಮ ಮೊದಲ ಕರ್ತವ್ಯ ಈ ಸಂಧಾನವನ್ನು ಸಾಧಿಸಲೇಬೇಕು. ಎರಡನೆಯದಾಗಿ ಮಾನವ ಮೌಲ್ಯಗಳ ಬಗ್ಗೆ ನಾವು ಯೋಚಿಸಬೇಕು. ಆದ್ದರಿಂದ ಕಿತ್ತುಹೋಗುವ ಭಯಂಕರ ಅಪಾಯದಲ್ಲಿರುವ ವಿವಾಹದ ಒಕ್ಕೂಟವನ್ನು ಮುರಿಯುವ ಕಾರ್ಯಕ್ಕೆ ನಾವು ಒಪ್ಪಬಾರದು ಅಥವಾ ಸ್ಪಷ್ಟವಾಗಿ ಯೋಗ್ಯವಲ್ಲದ ಹೊಸ ವಿವಾಹಕ್ಕೆ ನಡೆಯುದಕ್ಕೆ ಆಸ್ಪದವನ್ನೂ ಕೊಡಬಾರದು. ಇಂದಿನ ಪ್ರಪಂಚದಲ್ಲಿ ವೈವಾಹಿಕ ಹೊಂದಿಆಣಿಕೆಗೆ ಮತ್ತು ಸುಗಮತೆಗೆ ಹಿತೋಪದೇಶವು ವಿವೇಷವಾಗಿ ಪ್ರಯೋಜನಕಾರಿ. ಆ ಮೂಲಕ ಅವರ ವಿವಾಹವನ್ನು ಬಲಪಡಿಸಲು ಮತ್ತು ಸಂಪದ್ಭರಿತಮಾಡಲು ಹೆಚ್ಚು ಸಹಾಯ ಒದಗಿಸಬಹುದು.

ವಿವಾಹ ಇಲ್ಲಿ ಇರುವುದಕ್ಕೆ

ವಿವಾಹ ಎಂಬ ಕಟ್ಟು ಮುಗಿದು ಹೋಯಿತು ಎಂದು ನಾವು ಯೋಚಿಸಿದರೆ ಅದರ ಬದಲು ನಮಗೆ ಏನಿದೆ ನನ್ನಾದರೂ ಕೆಡವಿಬಿಡಬುದು ಆದರೆ ಅದನ್ನು ಬಿಟ್ಟು ಬೇರೆ ಏನನ್ನಾದರೂ ಸ್ಥಾಪಿಸುವುದು ಅಷ್ಟು ಸುಲಭವಲ್ಲ.

ದಂಪತಿಗಳಿಗೆ ವಿವಾಹ, ಭೂತ ಭವಿಷ್ಯದಲ್ಲಿ ಮತ್ತು ವರ್ತಮಾನಗಳಲನನಲು ಕೊಡುತ್ತದೆ. ಅಷ್ಟೇ ಅಲ್ಲ ಅದಕ್ಕೆ ತನ್ನದೆ ಆದ ಒಂದು ತಾದಾತ್ಮ್ಯವಿದೆ ಗೆಳೆತನವನ್ನು, ಬಾವನೆಯ ಹಿತವನ್ನು ಲೈಂಗಿಕ ತೃಪ್ತಿಯನ್ನು, ವಿರಾಮಕ್ಕೆ ಆಶ್ರಯವನ್ನು ನಾವು ಮುದುಕರಾದಾಗ ರೋಗಗ್ರಸ್ಥರಾದಾಗ ರಕ್ಷಣೆಯನ್ನು ಮತ್ತು ಎಚ್ಚರಿಕೆಯನ್ನೂ ಅದು ಒದಗಿಸುತ್ತದೆ. ನಾವು ಜೊತೆಯನ್ನು ಕಂಡುಕೊಳ್ಳಲು ಹೆಚ್ಚು ಕಷ್ಟಪಡುತ್ತಿಲ್ಲವಾದಾಗ ಅದು ಆರಾಮದ ಅವಕಾಶವನ್ನು

ಕೊಡುತ್ತದೆ ನಾವು ಯಾವ ಸ್ತರದಲ್ಲಿದ್ದೇವೆ ನಮಗೆ ಗೊತ್ತಿದೆ ಮತ್ತು ಸಮತಲ ಭಾವದ ಮಟ್ಟಗಳಲ್ಲಿ ನಾವು ಶಾಂತವಾಗಿರಬಹುದು ಮತ್ತು ಇನ್ನೊಂದು ದಿನ ಇದೆ ಎಂದು ತಿಳಿದು ಬಿರುಗಾಳಿಗಳನ್ನು ಎದುರಿಸಬಹುದು.

ವಿವಾಹ ಇನ್ನೊಬ್ಬರ ಬದುಕಿನಲ್ಲಿ ಮುಖ್ಯವಾದ ಮತ್ತು ವಿಶಿಷ್ಟವಾ ಭಾವನೆಯಾಗುತ್ತದೆ. ಸಮಾಜಕ್ಕೆ ಒಂದು ಭದ್ರ ಬುನಾದಿ ನೀಡುತ್ತದೆ ಮತ್ತು ಮಕ್ಕಳು ಬೆಳೆಯಲು ಒಂದು ಸುಭದ್ರ ವಾತಾವರಣವನ್ನುಂಟು ಮಾಡುತ್ತದೆ. ಜನ ಪರ್ಯಾಯಗಳನ್ನು ಪ್ರಯತ್ನಿಸಿದ್ದಾರೆ. ಆದರೆ ಪ್ರತಿಯೊಬ್ಬರೂ, ವಿಶೇ,ವಾಗಿ ಮಕ್ಕಳು ನರಳಿದ್ದಾರೆ. ಶಾಶ್ವತ ಗೃಹದಲ್ಲಿ ತಮ್ಮನ್ನು ಪ್ರೀತಿಸುವ ತಾಯಿ ಮತ್ತು ತಂದೆ ಇದ್ದಾಗ ಅವರು ಉತೃಪ್ತವಾಗಿ ಬೆಳೆಯುತ್ತಾರೆ. ತಂದೆ ತಾಯಿಗಳೂ ಕೂಡ ತಮಗೆ ಸಿದ್ಧವಾಗುವ ಜೀವನಾದ್ಯಾಂತದ ಬದ್ಧಸ್ಥಿತಿಯ ಅಗತ್ಯವನ್ನು ಪಡೆಯುತ್ತಾರೆ.

ಯಾರೊಬ್ಬರೂ ವಿವಾಹ ಕ್ಕಿಂತ ಉತೃಪ್ತವಾದದನ್ನು ಯೋಚಿಸಿಲ್ಲ.ಆದ್ದರಿಂದ ವಿವಾಹವಾಗುವ ತರುಣ ಜನವನ್ನು ಅವರು ವಿವಾಹಕ್ಕೆ ಸಾಕಷ್ಟು ಸಿದ್ಧವಾಗುವಂತೆ ಸಹಾಯಮಾಡೋಣ ಒಮ್ಮೆ ವಿವಾಹವಾದರೆ ಈ ಸಹಾಯವನ್ನೂ ಅಗತ್ಯಬಿದ್ದರೆ ನಾವು ಅವರಿಗೆ ಸಿದ್ಧರಾಗಿ ಮುಂದುವರಿಸೋಣ ಸುಖವಾಗಿ ಮದುವೆಯಾದರೆ ದಂಪತಿಗಳಿಗೆ ರೆಕ್ಕೆಮೂಡುತ್ತವೆ. ಅಸುಹವಾಗಿ ಮುದವೆಯಾದರೆ, ಅವರು ನರಳುವ ಶಿಕ್ಷೆಗೆ ಗುರುಯಾಗುವುದಲ್ಲದೆ, ತಮ್ಮ ಕುಟುಂಬ ಮತ್ತು ಹಾಗೆಯೇ ತಮ್ಮ ಸಮಾಜಕ್ಕೆ ಭಾರವಾಗಿ ಕೆಳಕ್ಕೆ ಅದುಮಲ್ಪಡುತ್ತಾರೆ, ಎಂಬುದನ್ನು ಸೆನಪಿನಲ್ಲಿಟ್ಟುಕ್ಕೊಣ.

**ಹಿಂದೂ ವಿವಾಹ**

**ಶ್ರೀಮತಿ ಲೀಲಾ ಚಂದ್ರಶೇಖರ, ಎಂ.ಎ.**

ಹಿಂದು ವಿವಾಹ ಪವಿತ್ರವಾದದ್ದು. ಅದಕ್ಕೆ ಸಾಮಾಜಿಕ ಪ್ರಮುಖತೆ ಇದೆ ಆಧ್ಯಾತ್ಮಿಕ ಗುರು.ಇದೆ ಗಂಡಸಾಗಲಿ ಅಥವಾ ಹೆಂಗಸಾಗಲಿ ಬದುಕಿನಲ್ಲಿ ಜೊತೆಗಾತಿಯರು ಇಲ್ಲದೆ ಅದು ಪೂಣಾಂವಾಗುವುದಿಲ್ಲ. ಈ ಶುದ್ಧ ಪವಿತ್ರ ತತ್ತ್ವವನ್ನು ಬ್ರಹ್ಮಾಂಡದಲ್ಲಿ ಪುರುಷ ಮತ್ತು ಲೋಕಶಕ್ತಿ ಸ್ತ್ರೀ ಪ್ರಕೃತಿ ಎಂದು ಉಲ್ಲೇಖಿಸುತ್ತಾರೆ. ಪಿಂಡಾಂಡದಲ್ಲಿ ಸ್ತ್ರೀ ಪುರುಷರೇ ಅವಳು ಮತ್ತು ಅವನು ಪ್ರತಿ ಬದುಕಿನಲ್ಲಿ ಆವಿರತರು, ಅವರಿಬ್ಬರ ಒಕ್ಕೂಟನೇ ವಿಶ್ವದ ಹೃದಯ ಬಡಿತಕ್ಕೆ ಜವಾಬ್ದಾರವಾದದ್ದು.

ಮಾನವ ಬದುಕಿನಲ್ಲಿ ವಿವಾಹ ಅತ್ಯಂತ ಮಹಾತ್ತರ ಸಂಸ್ಕಾರಗಳಲ್ಲಿ ಒಂದು. ಅಥವಾ ಜೀವನವನ್ನೂ ಮತ್ತೊಂದು ಜೀವದೊಡನೆ ಆರಂಭಿಸುವುದಕ್ಕೆ ಜೊತೆಗಾರರು ತಂದೆ ತಾಯಿರು, ಸೃಷ್ಟಿಕಾರ್ಯಕ್ಕೆ ಒಂದಾದಾಗಲಿಂದ, ಒಬ್ಬನು ಳು ಸ್ಮಶಾನದ ಅಗ್ನಿಗೆ ಆಹುತಿಯಾಗಿ

ಮುಗಿಯುವವರೆಗೆ, ಸಜ್ಜುಗೊಳಿಸುವ ಅವಶ್ಯಕ ಧಾರ್ಮಿಕ ಆಚರಣೆಗಳು.

ಮನುಷ್ಯ ೨೫ ವರ್ಷಗಳವರೆಗೆ ಕಲಿಯುತ್ತಾನೆ. ಮುಂದಿನ ೨೫ ವರ್ಷಗಳವರೆಗೆ ಮನೆಯ ಯಜಮಾನನಾಗಿ ಕುಟುಂಬದ್ಗ್ರೃಹದ ಸಂಸಾರದ ಬದುಕನ್ನು ನಡೆಸುತ್ತಾನೆ. ಮತ್ತು ಮುಂದೆ ಇಪ್ಪತ್ತೈದು ವರ್ಷಗಳ ತನಕ ಬಂಧು ಬಾಂಧವರನ್ನು ಮಿತ್ರರನ್ನು ಮತ್ತು ಸಮಾಜವನ್ನು ರೂಢಿಸಲು ಸಹಾಯ ಮಾಡುತ್ತಾನೆ. ಉಳಿದ ಬದುಕನ್ನು ದೇವರ ಚಿಂತನೆಯಲ್ಲಿ, ಅವನ ಯೋಜನೆಯ ಚಿಂತನೆಯಲ್ಲಿ ಕಳೆಯುತ್ತಾನೆ ಹೀಗೆ ತನ್ನನ್ನು ತಾನು ಮುಂದಿನ ಜನ್ಮಕ್ಕೆ ಸಿದ್ಧಗೊಳಿಸಿ ಕೊಳ್ಳುತ್ತಾನೆ.

೨೫ ರಿಂದ ೫೦ ವರ್ಷಗಳ ಅವಧಿ ತುಂಬಾ ಉತ್ಪಾದನಾ ಅವಧಿ. ಆಗ ಅವನು ತನ್ನೊಡನಿರುವ, ತನ್ನ ಅಧೀನದಲ್ಲಿರುವ ಮತ್ತು ತನ್ನ ಸುತ್ತಲಿರುವ ಜನವನ್ನು ಒಳ್ಳೆಯದರ ಕಡೆಗೆ ಕರೆದೊಯ್ಯಲು ಯತ್ನಿಸುತ್ತಾನೆಂದು ನಿರೀಕ್ಷಿಸಲಾಗುತ್ತದೆ. ಆ ಮಾರ್ಗದರ್ಶಿತ್ವ ಎಲ್ಲರ ಒಳ್ಳೆಯದಕ್ಕೆ ದಾರಿ ತೋರಿಸುವ ಜವಾಬ್ದಾರಿಯುತ, ಆರೋಗ್ಯಕರ ದೃಷ್ಟಿಯಿಂದ ಕೂಡಿರುತ್ತದೆ.

ಹಿಂದೂ ವಿವಾಹ ಇಬ್ಬರು ವ್ಯಕ್ತಿಗಳ, ಕುಟುಂಬಳ ಮತ್ತು ಗ್ರಾಮಗಳ ಗಟ್ಟಿ ಸಂಬಂಧವನ್ನು ಭದ್ರಪಡಿಸಲು ಅವಶ್ಯಕವಾಗಿ ನಿರ್ದೇಶಿಸುವುದೇ ಆಗಿರುತ್ತದೆ. ದಂಪತಿಗಳ ಸಹಯೋಗಕ್ಕೆ ಸೂಕ್ತ ಆಯ್ಕೆಗೆ ಹೆಚ್ಚಿನ ಚಿಂತನೆಯನ್ನು ಮಾಡಲಾಗುತ್ತದೆ. ವೈಯುಕ್ತಿಕ ಮಟ್ಟಗಳನ್ನು ತಿಳಿದುಕೊಳ್ಳಲು ಜಾತಕಗಳನ್ನು ಪರಿಶೀಲಿಸಲಾಗುತ್ತದೆ. ಮತ್ತು ಜೊತೆಗೆ ಆರೋಗ್ಯ, ದೀರ್ಘಾಯುಸ್ಸು, ಮನೋಧರ್ಮ, ಪ್ರವೃತ್ತಿಗಳು ಮತ್ತು ವ್ಯಕ್ತಿಗೆ ಕುಟುಂಬಗಳಿಗೆ ಸಂಬಂಧಿಸಿದಂತೆ ಪರಸ್ಪರ ಬೆಂಬಲ ಮೊದಲಾದ ಮುಖ್ಯ ಅಂಶಗಳನ್ನು ಸಮಾಲೋಚಿಸಲಾಗುತ್ತದೆ. ವಿವಾಹಶ್ಚ, ವಿವಾದಶ್ಚ ಸಮಾನ ಯೋರೇವ ಶೋಭತೆ.

**ಸಮಾನರಲ್ಲಿ ನಡೆಯುವ ವಿವಾಹವನ್ನು ಮೆಚ್ಚಿಕೊಳ್ಳಬಹುದು.**

ಸೊಸೆ ಎಂಬ ಪದಕ್ಕೆ ಒಂದು ವಿಶಿಷ್ಟ ಅರ್ಥವಿದೆ. ಹಳ್ಳಿಯ ಮಗಳು ಎಂದು. ಸಂಸ್ಕೃತದಲ್ಲಿ ಅವಳು ಸ್ನುಷಾ ಅವಳೊಬ್ಬಳು ಗೆಳತಿ. ಹಿಂದಿಯಲ್ಲಿ ಅವಳನ್ನು ಪತ್ನಿ ರಾಣಿ ಪಿತೃಪ್ರಧಾನ ಕುಟುಂಬಗಳಲ್ಲಿ ಅವಳು ಗಂಡನ ಕುಟುಂಬಕ್ಕೆ ಬದುಕಲು ಹೋಗುತ್ತಾಳೆ. ಮಾತೃಪ್ರಧಾನ ಕುಟುಂಬಗಳಲ್ಲಿ ಕೇರಳ ಮೇಘಾಲಯ ಗಂಡ ಅವಳನ್ನು ಆಗಾಗ ಭೇಟಿ ಮಾಡುತ್ತಾನೆ ಅಥವಾ ಪಿತೃಪ್ರಧಾನ ಪದ್ಧತಿಯಲ್ಲಿರುವಂತೆ ಹೆಂಡತಿಯ ತಾಯಿಯೊಡನೆ ಕೂಡುಕುಟುಂಬವನ್ನು ಸ್ಥಾಪಿಸಬಹುದು.

ಗಂಡ ಹೆಂಡತಿ ಪ್ರತಿಯೊಬ್ಬರಿಗೆ ತಮ್ಮದೇ ಕರ್ತವ್ಯ ಮತ್ತು ಹಕ್ಕುಗಳು ಇರುವುದು ಸಹಜ. ಜನಕರಾಜ ತನ್ನ ಮಗಳು ಸೀತೆಯನ್ನು ರಾಮನಿಗೆ ಕೊಟ್ಟು ವಿವಾಹ ಮಾಡಿದ.

ಇವಳು ನನ್ನ ಮಗಳು, ಸೀತೆ ಧರ್ಮಪಥದಲ್ಲಿ ನಿನ್ನೊಡನೆ ನಡೆಯುತ್ತಾಳೆ. ಆರೋಗ್ಯದ ಶೋಧನೆಯಲ್ಲಿ ಸುಖ ಸಂಪತ್ತಿನಲ್ಲಿ ಮತ್ತು ಆತ್ಮಸಾಧನೆಯಲ್ಲಿ ನಿನ್ನೊಡನೆ ನಡೆಯುತ್ತಾಳೆ.

ಸೀತೆಯನ್ನು ನಿವಾರಿಸಲು ಎಷ್ಟೇ ಪ್ರಯತ್ನಪಟ್ಟರೂ ಅವನನ್ನು ಕಾಡಿಗೆ ಕಳಿಸಿದಾಗ ಅವಳು ಅರಣ್ಯಕ್ಕೆ ಅವನ ಜೊತೆಯಲ್ಲಿ ನಡೆದಳು.

ಸಾಮಾನ್ಯ ಪ್ರಾಮುಖ್ಯರನ್ನು ಮತ್ತು ಸ್ಥಾನವನ್ನು ನಿರ್ಧಿಷ್ಟ ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳೊಡನೆ ಎರಡು ಪಾತ್ರಗಳಿಗೂ ನೀಡಲಾಗಿದೆ, ಗಂಡ ಅವಳ ರಕ್ಷಕ, ಅವಳಿಗೆ ಸುಖ ಒದಗಿಸುವವನು. ಹೆಂಡತಿ ಅವನ ಹಿತಕಾಂಕ್ಷಿ, ಮಾರ್ಗದರ್ಶಿ ಮತ್ತು ಗೆಳತಿ.

ಮಕ್ಕಳನ್ನು ಸೃಷ್ಟಿಸುವಲ್ಲಿ ಮತ್ತು ಹೊಣೆ ಹೊತ್ತ ಮಕ್ಕಳನ್ನು ಪೋಷಿಸುವಲ್ಲಿ ಇಬ್ಬರಿಗೂ ಸಮಾನ ಜವಾಬ್ದಾರಿಯಿದೆ. ಪಿತೃಪ್ರಧಾನ ಸಮಾಜದಲ್ಲಿ ಒಬ್ಬ ಮಗ ಸೀಮಂತ ಪುತ್ರ. ಮಾತೃ ಪ್ರಧಾನ ಸಮಾಜದಲ್ಲಿ ಸೀಮಂತ ಪುತ್ರಿ ಅತಿಮುಖ್ಯ ಅನಿವಾರ್ಯ. ಅದು ಬದುಕಿನ ಮತ್ತು ಸಮಾಜದ ಋಣ ಪರಿಹಾರಕ್ಕೆ ಬಹು ಮುಖ್ಯ, ಮರುಪಾವತಿ. ಉಳಿದ ಮಕ್ಕಳು ಕರ್ಮದ ಅಥವಾ ಆಕಾಂಕ್ಷೆಯ ಉತ್ಪನ್ನಗಳು. ಅವುಗಳನ್ನು ಕುಟುಂಬದ ಮತ್ತು ಸಮಾಜದ ಅಗತ್ಯಗಳಿಗೆ ಅನುಸಾರವಾಗಿ, ಅವಶ್ಯವಾಗಿ ಅಡಗಿಸಿಡಬೇಕು.

ಮಗನನ್ನು ಆರೋಗ್ಯವಂತನನ್ನಾಗಿ, ಸಭ್ಯನನ್ನಾಗಿ, ವಿದ್ಯಾವಂತರನ್ನಾಗಿ, ಮಧುರ ಮಾತುಗಾರನನ್ನಾಗಿ, ಚೆನ್ನಾಗಿ ಉಡುಪುಳ್ಳವನನ್ನಾಗಿ ಬೆಳೆಸುವುದು ತಂದೆ ತಾಯಿಗಳ ಮೇಲೆ ಬಿದ್ದ ಅನಿವಾರ್ಯತೆ.

ಸುಂದರಳಾದ, ಒಳ್ಳೆಯ ಗುಣವುಳ್ಳ, ಒಳ್ಳೆಯ ಸ್ವಭಾವವುಳ್ಳ, ನಿಪುಣೆಯಾದ ಮತ್ತು ಒಳ್ಳೆಯ ಕುಟುಂಬದ ಹಿನ್ನೆಲೆಯುಳ್ಳ ಹೆಂಡತಿಯನ್ನು ಪಡೆದ ಗಂಡ ಹೆಚ್ಚಿನ ಅದೃಷ್ಟವಂತನಾಗುತ್ತಾನೆಂದು ಹೇಳುತ್ತಾರೆ. ತಂದೆ ತಾಯಿಗಳು ತಮ್ಮ ಮಕ್ಕಳು ತಂದೆ ತಾಯಿಗಳಾಗಿ ಒಳ್ಳೆಯ ಹೆಸರನ್ನು ಗಳಿಸುವಂತೆ ಅವರಿಗೆ ತರಬೇತಿ ಕೊಡಲು ಪ್ರಯತ್ನಿಸಬೇಕು.

ಯೋಗ್ಯ ತಿಳುವಳಿಕೆಯನ್ನು ಹೆಂಡತಿ ಎಂಬ ಹೆಸರನ್ನು ಸಾರ್ಥಕಪಡಿಸಿಕೊಳ್ಳಬೇಕಾದರೆ ಆಕೆ ತೀರ್ಮಾನಗಳನ್ನು ಕೈಕೊಳ್ಳುವಾಗ ಹೆಂಡತಿ ಉಪದೇಶಿಯಾಗಬೇಕು, ವೈಯಕ್ತಿಕ ಅಗತ್ಯಗಳನ್ನು ಪೂರೈಸುವಾಗ ಸೇವಕಳಾಗಬೇಕು, ಆಹಾರವನ್ನು ಒದಗಿಸುವಾಗ ತಾಯಿಯಾಗಬೇಕು, ಶಯ್ಯೆಯಲ್ಲಿ ವಾರಾಂಗನೆಯಾಗಬೇಕು.

ಗಂಡನಾದವನು ಹೆಂಡತಿಯಾದವಳಿಗೆ ಯುಕ್ತ ಹಿಂಬದಿಯನ್ನು ಒದಗಿಸಬೇಕು. ಆ ಮೂಲಕ ಒಳ್ಳೆಯ ಸುಂದರ ಚಿತ್ರ ಒಡಮೂಡುವಂತೆ ಮಾಡಬೇಕು ಹೆಂಗಸು ತನ್ನ ಎಲ್ಲ

ವೈಭವದಿಂದ ಕಂಗೋಳಸಬೇಕಾದರೆ.

ಪಂಡಿತಾ ಲತಾ ವನಿತಾಚ ನಶೋಭಂತೇ ನಿರಾಶ್ರಿತೇಂ

ಗಂಡಸು ತನ್ನ ಪೂರ್ಣ ನೈಭವವನ್ನು ಬೆಂಬಲ ಪ್ರೋತ್ಸಾಹಗಳಲ್ಲದೆ ಸಾಧಿಸಲಾರ

**ವಿವಾಹ ಪೂರ್ವಲಿಂಗ**

ವಿವಾಹಪೂರ್ವ ಲಿಂಗವನ್ನು ಪೂರ್ಣವಾಗಿ ನಿಷೇಧಿಸಬೇಕು ಪ್ರತಿಯ.ಒಬ್ಬನೂ ಮುದವೆಯಾಗುವುದು ಖಂಡಿತ ಏಕೆಂದರೆ ಆತ್ಮಸಾಕ್ಷಾತ್ಕಾರಕ್ಕೆ ನಷ್ಟವಾಗದ ಆಕಾಂಕ್ಷೆ ಇಲ್ಲದ ಹೊರತು ಮದುವೆ ಎಲ್ಲರಿಗೂ ಕಡ್ಡಾಯ, ಮನುಷ್ಯನು ಬದುಕಿನ ನಾಲ್ಕು ಆಶ್ರಯಗಳ ಮೂಲಕ ಬ್ರಹ್ಮಚರ್ಯ, ಗ್ರಹಸ್ಥ, ವಾನಪ್ರಸ್ಥ ಜಿರಿಯನಾಗರಿಕತೆ ಮತ್ತು ಸನ್ಯಾಸಗಳ ಎಲ್ಲ ಸುಖ ಸಂತೋಷಗಳನ್ನು ಅನುಭವಿಸಿದಾಗ ಮಾತ್ರ, ಪೂರ್ಣಮಾನವ ಎಂಬ ಅರ್ಥವನ್ನು ಹೊಂದುತ್ತಾನೆ. ಹೆಂಗಸಾಗಲಿ ಗಂಡಸಾಗಲಿ ತನ್ನಷ್ಟಕ್ಕೆ ತಾನೆ ಪೂರ್ಣವಲ್ಲ.

ನಾವು ತಿಳಿದಂತೆ ಪ್ರತಿಯೊಬ್ಬನೂ ಯೋಗ್ಯ ವಯಸ್ಸಿನಲ್ಲಿ ಮದುವೆಯಾಗುವುದನ್ನು ನಿರೀಕ್ಷಿಸಲೇ ಬೇಕು ಲೈಂಗಿಕ ಪ್ರೇರಣೆ, ವಿವಧಮಾರ್ಗಗಳಲ್ಲಿ ಉದಾಹರಣೆಗೆ ಜ್ಞಾನ ಕ್ಷೇತ್ರದಲ್ಲಿ, ಶಕ್ತಿಯನ್ನು ಹತೋಟಿಗೆ ಮೂಗುದಾರ ಹಾಕಿ ಉನ್ನತ ಮತ್ತು ಪವಿತ್ರವನ್ನಾಗಿಸುತ್ತದೆ.

ಮದುವೆ ಆದನಂತರ ಹೊರಗಿನ ಲಿಂಗಪ್ರವೃತ್ತಿ ಆತ್ಮನಿಯಂತ್ರಣ ಇಲ್ಲದವರಲ್ಲಿ ಸಮೃದ್ಧಿಯಾಗಿ ಕಂಡು ಬರುತ್ತದೆ. ನಿಯಮದ ಪ್ರಕಾರ ತರುಣ ಪಾಲುದಾರರಿಗೆ ಎಚ್ಚರದಿಂದ ಆರಿಸುವವರೆಗೆ ಮತ್ತು ವಿವಾಹದಿಂದ ಅನುಮತಿ ನೀಡುವವರೆಗೆ ಕಾಯಬೇಕೆಂದು ಕಲಿಸಲಾಗುವುದು.

**ಗರ್ಭಪಾತ**

ಶಾಸ್ತ್ರಗಳ ಪ್ರಕಾರ, ಭ್ರೂಣದಲ್ಲಿ ನಾಲ್ಕನೆಯ ತಿಂಗಳ ನಂತರ ಜೀವ ಆರಂಭವಾಗುತ್ತದೆ. ಆಗ ಒಂದು ಬದುಕಿರುವ ಭ್ರೂಣಕ್ಕೆ ಆಶೀರ್ವಾದ ನೀಡಿ ಉತ್ತಮವನ್ನು ಆಚರಿಸಲಾಗುತ್ತದೆ. ಮೂರು ತಿಂಗಳ ಮುಂಚಿನ ಗರ್ಭಪಾತ ಎಂದರೆ ತಾಯಿಯ ಜೀವವನ್ನು ಉಳಿಸಿಕೊಳ್ಳುವುದಕ್ಕಾಗಿ ಆ ಕಾರ್ಯಕ್ಕೆ ತೊಡಗಿದರೆ, ಆದರೆ ಗರ್ಭಧರಿಸುವುದನ್ನು ತಡೆಯುವುದೇ ಉತ್ತಮ ಜೀವವನ್ನು ತೆಗೆದುಬಿಡುವ ಕ್ರಿಯೆಯೆಂದು ಪರಿಗಣಿಸುವುದಿಲ್ಲವೆಂದು ಯಾವಾಗಲೂ ಪರಿಗಣಿಸಲಾಗುವುದು, ಆತ್ಮ ನಿಯಂತ್ರಣವನ್ನು ಅತಿನಿಷ್ಠುರ ಮಾಡುಗಳಲ್ಲಿ ವಾದಿಸಲಾಗುತ್ತದೆ. ಹುಟ್ಟಿನ ಕೃತಕ ನಿಂಯತ್ರಣವನ್ನು ನಿರುತ್ಸಾಹಿಸುವುದಿಲ್ಲ.

ಹಿಂದೂ ವಿವಾಹ ವ್ಯವಸ್ಥೆಯಲ್ಲಿನ ಶಾಸ್ತ್ರ ಸಂಪ್ರದಾಯಗಳು. ದಂಪತಿಗಳ ಶಾಶ್ವತೆಯನ್ನು

ಒತ್ತಾಯಪಡಿಸುತ್ತದೆ. ನಡೆಸಬೇಕಾದ ಅಭಿನಂದನೀಯ ಮತ್ತು ಪುರವಣಿಯ ಸಂಸ್ಕಾರಗಳು, ಪಾಲುಗೊಳ್ಳುವ, ಎಚ್ಚರಿಕೆವಹಿಸುವ, ಕರ್ತವ್ಯದನಿಷ್ಠೆಯ ಮತ್ತು ಶಿಸ್ತಿನ ಋಣಾನುಬಂಧಗಳು ನಡೆಯಲೇಬೇಕು ಒಳಬುಳಿಯ ಮದುವೆಯ ವೃತ್ತದಲ್ಲಿ ಮಾತ್ರ ಸುಭದ್ರ ಸಮಾಜ ನಿರ್ಮಾಣವಾಗುತ್ತದೆ.

## ಇಸ್ಲಾಂದ ಮತ್ತು ವಿವಾಹ

**ಡಾ ಎಂ. ಎ. ಆಹದ, ಎಂ.ಎ.ಎಂಟಿಎಚ್. ಪಿಎಚ್.ಡಿ**

ವಿವಾಹ ಕುಟುಂಬದ ಮೂಲಾಧಾರವಾದುದರಿಂದ ಇಸ್ಲಾಂ ಧರ್ಮ ಅದಕ್ಕೆ ಬಹುಳ ಪ್ರಾಮುಖ್ಯ ಕೊಡುವುದಲ್ಲದೆ ಅದೊಂದು ಅತಖಯಿಂದ ಪವಿತ್ರ ಬಂಧನ ಎಂದೂ ಪರಿಗಣಿಸುತ್ತದೆ ಪ್ರಸಿದ್ಧ ಹದಿಸೆ ಪೈಗರ್ ಮಹಮ್ದ್ ಅವನ ಮೇಲೆ ಸಾಂತಿಯಿರಲಿ ಹೇಳಿಕೆಯಲ್ಲಿ ಹೀಗೆ ಹೇಳುತ್ತದೆ ಖನಿಜ ವಿವಾಹ ನನ್ನ ಸನ್ನತ್ತುಗಳಲ್ಲಿ ಮಾರ್ಗಗಳಲ್ಲಿ ಒಂದು ಯಾರಾದರೂ ನನ್ನ ಯಾವುದೇ ಸನ್ನತ್‌ನಿಂದ ಮುಖ ತಿರುಗಿಸಿದರೆ ಅವನು ನನಗೆ ಸೇರುವುದಿಲ್ಲ ಒಂದು ಕಡೆ ಅದು ಗಂಡಸನ್ನು ಮತ್ತು ಹೆಂಗಸನ್ನು ಇಫ್ಫತ್ ಅನ್ನು ಶುದ್ಧತೆ ಉಳಿಸಿಕೊಳ್ಳಲು ಸಹಾಯಮಾಡುತ್ತದೆ, ಮನಸ್ಸಿನಲ್ಲಿ ಶಾಂತಿ ಉಳಿದಂತೆ ಮಾಡುತ್ತದೆ ಇನ್ನೊಂದು ಕಡೆ ಕುಟುಂಬದ ನಿರ್ಮಾಣದ ಉದ್ದೇಶಕ್ಕೆ ನೆರವು ನೀಡುತ್ತದೆ. ಈ ರೀತಿಯಲ್ಲಿ ಅವರಿಗೆ ಒಪ್ಪಿಸಿದ ಜವಾಬ್ದಾರಿಗಳನ್ನು ಹೆಚ್ಚಿನ ಎಚ್ಚರಿಕೆಯಿಂದ ಪೂರ್ಣಗೊಳಿಸಲಾಗುತ್ತದೆ. ಅದು ಇಬ್ಬರು ಹೊಸಬರಲ್ಲಿ ಪರಸ್ಪರ ಪ್ರೇಮ ವಾತ್ಸಲ್ಯದ ಜೀವನ ಜೊತೆಯನ್ನು ಆರಿಸಿಕೊಳ್ಳುವ ಅದೇ ಕಾಲದಲ್ಲಿ ಸೌಂದಯಗ ಮತ್ತು ಐಶ್ವರ್ಯಕ್ಕಿಂತ ವಿಶೇಷವಾಗಿ ಧಮ ನಿಷ್ಠೆಯನ್ನು ಆಯ್ಕೆ ಮಾಡಿಕೊಳ್ಳುತ್ತದೆ. ಕುಫು ಜಾತಿಮತದಲ್ಲಿ ಸಾಮಾಜಿಕ ಇತ್ಯಾದಿಗೂ ಕೂಡ ಬಂಧುತ್ವದಲ್ಲಿ ಸಮತ್ವವನ್ನು ಹೊಂದಿರುವುದಕ್ಕೂ ಪ್ರಾಮುಖ್ಯವನ್ನು ಕೊಡವಲಾಗಿದೆ. ಆದರೆ ತಾಖ್ವ ಧರ್ಮ ನಿಷ್ಠೆ ಎಂಬುದೇ ಮನಸ್ಸಿನಲ್ಲಿ ನಿಲ್ಲಿಸಿಕೊಳ್ಳಬೇಕಾದ ಅತ್ಯಂತ ಪ್ರಧಾನ ಅಂಶ.

ಇಸ್ಲಾಂ ವಿವಾದವನ್ನು ಬಹುಸರಳ ಮಾರ್ಗದಲ್ಲಿ ಧರ್ಮಿಕರಿಸಲು ತನ್ನ ಅನುಯಾಯಿಗಳನ್ನು ಪಡೆಯುತ್ತದೆ. ಅತ್ಯಂತ ಮುಖ್ಯ ಚಾಬುಗಳು ಮಾತ್ರ ಎಂದರೆ ಖುತ್ಬ ಎ ನಿಖ ಹಾದಿಸ ಮತ್ತು ಖುರಾನಗಳಿಂದ ಸೇರಿಸಲ್ಪಟ್ಟ ಕೆಲವು ಮಂತ್ರಗಳನ್ನು ಒಳಗೊಂಡಿರುವುದು. ಎಜ್ಯಾಟ ಕನ್ಯೆಯನ್ನು ಅಥವಾ ಒಪ್ಪಂದವನ್ನು ಸ್ವೀಕರಿಸುವುದು ಇತರ ಎಲ್ಲ ಸಂಸಾರಗಳು ಸುಮ್ಮನೆ ಅನಾವಸ್ಯಕವಾದುವುಗಳಲ್ಲದೆ ಅವು ಕೆಡಕಿನವು ಮತ್ತು ಇಸ್ಲಾಮಿನ ಆತ್ಮಕ್ಕೆ ವಿರುದ್ಧವಾದುವುದ ಹಿರಿಯರು ಮತ್ತು ಶುಭಕಾಂಕ್ಷಿಗಳು ದಂಪತಿಗಳನ್ನು ಪ್ರಾರ್ಥನೆಯಿಂದ ಮಲ ಆಶೀರ್ವದಿಸುತ್ತಾರೆ. ಅದರ ಅರ್ಥ ಅಲ್ಲಾ ನಮ್ಮನ್ನು ನಿನ್ನನ್ನು

ಕ್ಷಮಿಸಲಿ ಮತ್ತು ನಿಮ್ಮಿಬ್ಬರಮ್ಮೂ ಆಶೀರ್ವದಸಲಿ ನಿಮ್ಮ ವಿವಾಹ ಫಲಪ್ರದವಾಗಲಿ ಎಂದು.

ವರದಕ್ಷಿಣೆ ಮುದವೆಯ ಭಾಗವಾಗುವುದಿಲ್ಲ. ತಂದೆತಾಯಿಗಳು ಹೊಸ ಸಂಸಾರ ಹೂಡುವುದಕ್ಕೆ ಉಪಯೋಗವಾಗುವಂಥ ಕೆಲವು ಮುಖ್ಯ ಪದಾರ್ಥಗಳನ್ನು ಕೊಡಲು ಇಚ್ಛಿಸಿದರೆ ಅದಕ್ಕೆ ಸರಳರೀತಿಯಲ್ಲಿ ಹಾಗೆ ಮಾಡಲು ಅನುಮತಿಯಿದೆ ವರ ಅವರಿಂದ ಏನನ್ನೂ ಬಲತ್ಕಾರದಿಂದ ಬೇಡಕೂಡದು. ಆದರೆ ಅವನು ತನಗೆ ತಾನೇ ಹೆಣ್ಣಿಗೆ ಏನನ್ನಾದರೂ ಮೆಹಲ್ ವಿವಾಹದ ಸಮಯದಲ್ಲಿ ಘೋಷಿಸಿದ ನಿರ್ದಿಷ್ಟ ಮೊಬಲಗು ಆಗಿ ಕೊಡಬಹುದು. ಅದನ್ನು ಸ್ಥಳದಲ್ಲಿ ಅಥವಾ ಮತ್ತೊಂದು ದಿನದಂದು ನೀಡಬಹುದು. ಇದು ವಿವಾಹದ ಪಿನಿಯಮಗಳಲ್ಲಿ ಒಂದು ಆದಿಲ್ಲದೆ ಹೆಂಡತಿ ಹಲಾಲೆ ನ್ಯಾಯಬದ್ಧವ್ಯಕ್ತಿ ಆಗುವುದಿಲ್ಲ. ಹುಡುಗಿ ತನಗೆ ಇಷ್ಟಬಂದರೆ ಅದನ್ನು ಪೂರ್ತಿಯಾಗಿ ಅಥವಾ ಭಾಗಶಃ ಕ್ಷಮಿಸಬಹುದು.

ಕುಟುಂಬದಲ್ಲಿ ಇಬ್ಬರೂ ಸಮಾನ ಸ್ಥಾನವನ್ನು ಹೊಂದಿರುತ್ತಾರೆ, ಎಂದರೆ ಪ್ರತಿಯೊಬ್ಬರೂ ಅವನ ಳ ಕರ್ತವ್ಯದ ಕ್ಷೇತ್ರ ಮತ್ತು ಹೊಣೆಗಾರಿಕೆಯ ವೃತ್ತದಲ್ಲಿ ಎಂದು ಭಾವ ಆದಾಗ್ಯೂ ಶಿಸ್ತಿನ ಕಾರಣಕ್ಕಾಗಿ ಗಂಡನನ್ನು ಶಕ್ತನನ್ನಾಗಿ ಖವ್ವಾಮಾ ಆಗಿ ಮಾಡಲಾಗುತ್ತದೆ ಅದು ಅವನು ಅಧಿಕಾರವನ್ನು ದುರುಪಯೋಗ ಮಾಡಿಕೊಳ್ಳತಕ್ಕದ್ದಲ್ಲ ಎಂಬ ವಿಶಿಷ್ಟ ಇಂಜೆಕ್ಷನ್ ಕೂಡುವುದರ ಮೂಲಕ ಆಗಬೇಕು ವಿಶೇಷವಾಗಿ ಅವನ ನಡತೆ ಹೆಂಡತಿಯ ಬಗ್ಗೆ ಅಸಾಧಾರಣವಾಗಿರಬೇಕು ಈ ಸಂಧರ್ಭದಲ್ಲಿ ಅನೇಕ ಹಾಡಿಗಳಿವೆ

**ಉದಾಹರಣೆಗೆ**

೧. ನಿಮ್ಮಲ್ಲಿ ಉತ್ತಮರಾದವರು ಯಾರೆಂದರೆ, ಯಾರು ತನ್ನನ್ನು ಮತ್ತು ತನ್ನ ಕುಟುಂಬದವರನ್ನು ಚೆನ್ನಾಗಿ ನೋಡಿಕೊಳ್ಳುತ್ತಾನೊ ಅವನು.

೨. ಯಾರು ತಮ್ಮ ಗಂಡ, ಹೆಂಡತಿಯವರ ಬಗ್ಗೆ ಗಂಭೀರವಾಗಿ ಮತ್ತು ಒಳ್ಳೆಯತನದಿಂದ ನಡೆದ ಕೊಳ್ಳುತ್ತಾರೆ ಅವರೇ ಉತ್ತಮ ವ್ಯಕ್ತಿಗಳು.

೩. ಹೆಂಗಸು ಬಾಗಿದ ಮಗ್ಗುಲಿನ ಎಲುಬಿನಿಂದ ಹುಟ್ಟಿದವಳು ಅದನ್ನು ನೀವು ನೇರ ಮಾಡಲು ಹೊರಟರೆ ಅದನ್ನು ಮುರಿಯಬಹುದು ಅದು ಹಾಗೆಯೇ ಇರಲಿ.

ಹೆಚ್ಚು ಪರ್ಯಾಲೋಚನೆಯಿಂದ ಮುಂದುವರೆಯಿರಿ ಹೆಂಡತಿಯೊಡನೆ

**ವಿವಾಹ ವಿಚ್ಛೇದ**

ಯಾವುದೇ ಹಂತದಲ್ಲಿ ಗಂಡಹೆಂಡಿರ ನಡುವೆ ತೀವ್ರ ವಿರೋಧ ಅಥವಾ ಕಲಹ ಉಂಟಾದ ಸಂದರ್ಭದಲ್ಲಿ ಅವರು ಬೇರೆಯಾಗಲು ಬಾಗಿಲು ತೆರೆದೇ ಇರುತ್ತದೆ ಇದೇ ಕಡೆಯ ಆಶ್ರಯ

ಮೊದಲಿಗೆ ಅವರು ಜಗಳವನ್ನು ತಮ್ಮ ತಮ್ಮಲ್ಲೇ ಪರಿಹರಿಸಿಕೊಳ್ಳಲು ಪ್ರಯತ್ನಿಸುವುದನ್ನು ನಿರ್ಣಯಿಸಿಕೊಳ್ಳಬೇಕು. ಅವರು ಇತರರ ಸಹಾಯವನ್ನು ಕೂಡ ಪಡೆಯಬಹುದು. ಸಾಕಷ್ಟು ಕಾಲದವರೆಗೆ ಅವರು ಕಾಯಲೇಬೇಕು. ಇವೆಲ್ಲವೂ ವಿಫಲವಾದರೆ ತಲಾಖಿ ನ ಗಂಡಸಿಗೆ ಅಥವಾ ಖಿಲಾನ ಹೆಂಗಸಿಗೆ ಹಕ್ಕನ್ನು ಬಳಸಿಕೊಳ್ಳಬಹುದು ಈ ಸಂದರ್ಭದಲ್ಲಿ ಆತಂರದ ನಿರ್ಣಯವನ್ನು ಆದಷ್ಟು ಮಟ್ಟಿಗೆ ದೂರರಿಡಲು ಎಚ್ಚರಿಕೆ ವಹಿಸಬೇಕು ಏಕೆಂದರೆ ಅನಂತರ ಅಪರಾಧದ ಅಥವಾ ಅಪಮಾನದ ಪ್ರಜ್ಞೆ ಒಡಮೂಡಬಾರದು.

ವಿವಾಹವಿಚ್ಛೇದನಗೊಂಡ ಹೆಂಗಸು ಇದಿಯತ್ ನ ೮ ತಿಂಗಳು ೧೦ ದಿನಗಳು ಅನಂತರ ಮರುಮದುವೆ ಆಗಬಹುದು, ಗಂಡನು ಒಬ್ಬಳಿಗೆಂತ ಹೆಚ್ಚುಜನ ೪ರವರೆಗೆ ಹೆಂಡಂದಿರನ್ನು ಹೊಂದಿರಲು ಅನುಮತಿಯಿದೆ ಆದರೆ ಅದರ ಹಿಂದೆ ಒಂದು ಕರಾರೂ ಉಂಟು ಅವನು ಅವರೆಲ್ಲರನ್ನೂ ಸಮಾನವಾಗಿ ನಡೆಸಿಕೊಳ್ಳಬೇಕು ಇಲ್ಲಿಯೂ ಕೂಡ ಒಳ್ಳೆಯ ಅಥವಾ ಕೆಟ್ಟಕಾರ್ಯಗಳಂತೆ ಅವನು ದೇವರಿಗೆ ಉತ್ತರಕೊಡಬೇಕಾಗುತ್ತದೆ.

ಶ್ರೀ ಎಚ್.ಸುಲೇಮಾನ್. ಬಿ.ಎ. ಬಿ.ಎಲ್. ಅವರು ಈ ಮುಂದಿನ ಇಸ್ಲಾಂ ಮತದ ಬೋಧನೆಯನ್ನೂ ಸೇರಿಸುತ್ತಾರೆ.

**ಗರ್ಭಪಾತ**

ಬದುಕು ದೇವರ ಕಾಣಿಕೆ ಎಂಬುದು ಇಸ್ಲಾಂ ಧರ್ಮದ ಮೂಲಾಧಾರಗಳಲ್ಲಿ ಒಂದು ಆದ್ದರಿಂದ ಯಾವ ಮನುಷ್ಯನೇ ಆಗಲಿ ಅದಕಖುಕೆ ಹಾನಿಕರವಾದ ಯಾವುದೇ ಬಗೆಯ ಕ್ರಿಯಯನ್ನು ಮಾಡಲು ಅದಕ್ಕಿಂತ ಹೆಚ್ಚಾಗಿ ಅದನ್ನು ಅಳಿಸಿಹಾಕಲು ಅವನಿಗೆ ಆಯವುದೇ ಹಕ್ಕಿಲ್ಲ ಈ ಒಂದು ನಂಬಿಕೆಯ ಮೇಲೆ ಮಹಮ್ಮದೀಯರು ಸಾಮಾನ್ಯವಾಗಿ ಗರ್ಭಪಾತಕ್ಕೆ ವಿರೋಧಿಗಳಾಗಿದ್ದಾರೆ. ಏಕೆಂದರೆ ಅದು ಒಂದು ಜೀವವನ್ನೂ ಅಳಿಸಿಹಾಕು ಕರ್ಮದಲ್ಲಿ ಪರಿಣಾಮಕ್ಕೆ ಕಾರಣವಾಗುತ್ತದೆ ಎಂದು ಭಾವಿಸಲಾಗುವುದರಿಂದ ಅಷ್ಟೇ ಅಲ್ಲ ಸರ್ವಶಕ್ತನ ವಿಚಾರಣೆಗೆ ಒಳಪಡುತ್ತದೆ ಎಂಬ ಭಾವನೆಯಿಂದ. ಆದ್ದರಿಂದ ಇಸ್ಲಾಂ ಮತದಲ್ಲಿ ಅದನ್ನು ಅತ್ಯಂತ ಜಾಗರೂಕತೆಯಿಂದ ತಪ್ಪಿಸಿಕೊಳ್ಳಲಾಗುತ್ತದೆ. ಆದಾಗ್ಯೂ ವಿದ್ಯಾವಂತ ಮುಸ್ಲಿಮರು ಈ ಗರ್ಭಪಾತದ ವಿಶಿಷ್ಟ ಭಯ ತುಂಬ ಪರಾತನವಾದದ್ದು ಮತ್ತು ಆಧುನಿಕವಲ್ಲದ್ದು ಎಂಬ ಭಾವನೆಯನ್ನು ಬೆಳಸಿಕೊಂಡಿರುವುದರಿಂದ, ತಮ್ಮ ಕುಟುಂಬಗಳ ಗಾತ್ರವನ್ನು ಮಿತಿಗೊಳಿಸಿಕೊಳ್ಳುವುದಕ್ಕಾಗಿ ಅಥವಾ ವೈದ್ಯಕೀಯ ಸಲಹೆಯ ಮೇರೆಗೆ ಗರ್ಭಪಾತವನ್ನು ಸ್ವೀಕರಿಸುತ್ತಾರೆ.

ವಿವಾಹಪೂರ್ವ ಮತ್ತು ವಿವಾಹಕ್ಕಿಂತ ಹೆಚ್ಚಿನ ಲಿಂಗಪ್ರವೃತ್ತಿವಿವಾಹಪೂರ್ವ ಮತ್ತು ವಿವಾಹಕ್ಕಿಂತ ಹೆಚ್ಚಿನ ಲಿಂಗಪ್ರವೃತ್ತಿಯನ್ನು ಇಸ್ಲಾಂಮತ ಬಹಿಷ್ಕರಿಸುತ್ತದೆ. ಪವಿತ್ರ ಕುರಾನಿನಿಂದ ಎತ್ತಿತೆಗೆದ ಪರಿಯತ್ ಕಾನೂನಿನ ಅನುಸಾರ, ವ್ಯಭಿಚಾರಿ ವ್ಯಭಿಚಾರಿಣಿಯರನ್ನು ಸಾರ್ವಜನಿಕವಾಗಿ ಶಿಕ್ಷಿಸಿಲ್ಪಡಬೇಕು. ಅಷೂ ಮುಸ್ಲಿಂ ಕಾನೂನನ್ನು ಅಲ್ಪ ಬದಲಾವಣೆಯೊಂದಿಗೆ ಅನುಸರಿಸುವ ಷಿಯಮತ್ ಸಮುದಾನಯದಲ್ಲಿ ಯಾವನೊಬ್ಬ ವ್ಯಾಪಾರೋದ್ಯಾಗಕ್ಕಾಗಲಿ ಅಥವಾ ಯಾವುದೇ ಒಂದು ನಿರ್ದಿಷ್ಟ ಕಾರ್ಯಕ್ಕಾಗಲಿ ತನ್ನ ಮನೆಯಿಂದ ದೀರ್ಘಾವಧಿಯವರೆಗೆ, ದೂರವಿರಭೇಕಾಗುತ್ತದೋ ಅವನು, ಕಾಲಮಿತಿಗೊಳಪಟ್ಟ ಮುತಾವಿವಾಹ ಕ್ಕೆ ಹಕ್ಕುಳ್ಳವನಾಗಿರುತ್ತಾನೆ ಮುತಾವಿವಾಹವನ್ನು ನೆರವೇರಿಸುವ ಸಮಯದಲ್ಲಿ ಈಗಾಗಲೇ ಒಪ್ಪಕೊಂಡ, ಮೇಲೆ ಹೇಳಿದ ಅವಧಿಯ ಮುಕ್ತಾಯಾನಂತರ, ವಿವಾಹದ ಬಂಧನ ತನ್ನಷ್ಟಕ್ಕೆ ತಾನೆ ಮುಕ್ತಾಯವಾಗುತ್ತದೆ. ಮತ್ತು ಗಂಡ ಹೆಂಡತಿ ಯಾರಾಗಲಿ ಮೇಲಿನ ಬಂಧನದಿಂದ ಸ್ವತಂತ್ರರಾಗುತ್ತಾರೆ. ಮುತಾವಿವಾಹದ ಅವಧಿಯಲ್ಲಿ ಈ ಬಂಧುತ್ವದಿಂದ ಹುಟ್ಟಿದ ಮಕ್ಕಳಾದಾಗ್ಯೂ ಮುತಾವಿವಾಹದ ಅವಧಿಯ ವಿವಾಹಬಂಧನದಿಂದ ಹುಟ್ಟಿವರಾದ್ದರಿಂದ ಅವರನ್ನು ಕಾನೂನುಬದ್ದ ಮುಕ್ಕಳೆಂದು ಪರಿಗಣಿಸಲಾಗುತ್ತದೆ.

**ವರ್ಗಚಟುವಟಿಕೆ**

**ಚರ್ಚಿಸಿ**

೧. ವಿವಾಹಗಳನ್ನು ಸ್ವರ್ಗದಲ್ಲಿ ನೆರವೇರಿಸಲಾಗುತ್ತದೆ ಆದರೆ ಅವು ಭಲಾಮಿಯಲ್ಲಿ ಬದುಕಬೇಕಾಗುತ್ತವೆ

೨. ನಿಮ್ಮ ಪತಿ ಪತ್ನಿ ನಿಮ್ಮ ಉತ್ತಮು ಗೆಳೆಯ, ಗೆಳತಿ

೩. ಮುದವೆ ವಯಸ್ಕರಿಗೆ ಮಾಡಿದ್ದಜು ಇದರಿಂದ ನೀವು ಏನು ಅರ್ಥಮಾಡುತ್ತೀರಿ

ಇವುಗಳನ್ನು ಕುರಿತು ಧರ್ಮಗುರುಗಳಿಂದ ಬಾಷಣಗಳು

ಅ. ಕ್ರೈಸ್ತ

ಆ. ಹಿಂದು ಮತ್ತು

ಇ. ಮುಸ್ಲಿಂ ವಿವಾಹ



ಅಧ್ಯಾಯ-೧೩

# ಬದುಕಿಗೆ ಗೌರವ

''ಮಾನವ ಜೀವಿ(ಪ್ರಾಣಿ) ತನ್ನ ಇರುವಿಕೆಯನ್ನು ವೀರ್ಯಾಣುವು ಅಂಡಕೋಶವನ್ನು ಫಲವತ್ತಿಸಿದಾಗ ಆರಂಭಿಸುತ್ತದೆ'' -ಟಿ ಡೊಬ್ಜಾನ್‌ಸ್ಕಿ

ಬದುಕಿಗೆ ಗೌರವ ಐದು ಅಂಶಗಳನ್ನು ಒಳಗೊಳ್ಳುತ್ತದೆ. ಆದರೆ ಅದರಲ್ಲಿ ಪರಪೋತ್ತವಾದದ್ದು ಹುಟ್ಟದೇ ಇರುವ ಮಗುವಿನದು. ಆ ಐದು ಅಂಶವೆಂದರೆ:

1) ವಿವಿಧ ಜಾತಿ, ಸಮುದಾಯ, ಲಿಂಗ, ವರ್ಣ ಮತ್ತು ಧರ್ಮ ಇವುಗಳ ವಿವಿಧ ಮಾನವ ಪ್ರಾಣಿಯ ಬಗ್ಗೆ ಗೌರವ.

2) ಅಂಗವಿಕಲರಿಗೆ, ರೋಗಿಗಳಿಗೆ ಮತ್ತು ವಯಸ್ಸಾದವರಿಗೆ ನಿಶಕ್ತರಿಗೆ ಗೌರವ,

3) ಹುಟ್ಟದ ಇರುವ, ನಿಸ್ಸಹಾಯಕ ಭ್ರೂಣಕ್ಕೆ ಲಿಂಗವಿವಕ್ಷೆ ಅಥವಾ ಹುಟ್ಟು ಕ್ರಮದ ಪಕ್ಷಪಾತವಾವಿಲ್ಲದಂತೆ ಗೌರವ.

4) ಸನ್ನಿವೇಶಕ್ಕೆ ಮತ್ತು ಆವರಣಕ್ಕೆ ಗೌರವ.

5) ಅಸಂಖ್ಯಾತ ಜನಾಂಗದಿಂದ ಅಥವಾ ಶ್ರೀಮಂತರಿಂದ ಶೋಷಿಸಲ್ಪಟ್ಟ ವ್ಯಕ್ತಿಗಳ ಅಗತ್ಯಗಳಿಗೆ ಗೌರವ. ಒಬ್ಬಂಟಿಗಳನನ್ನು ಪೂರ್ಣವಾಗಿ ಅವಲಂಬಿತನಾಗಿ ರುತಂತೆ ಮತ್ತು ಮಾನವ ಮರ್ಯಾದೆ ರಹಿತವಾಗಿರುವಂತೆ ಬಿಟ್ಟುಬಿಡಿ.

## 1. ಆನುವಂಶೀಯತೆ

ಪ್ರತಿಯೊಬ್ಬ ವ್ಯಕ್ತಿಯ ಮಾನಸಿಕ ಮತ್ತು ಶಾರೀರಕ ಗುಣಸ್ವಭಾವಗಳು ಸ್ವಲ್ಪಮಟ್ಟಿಗೆ ಕೊಡುವ ಗಳಿಗೆಯಲ್ಲಿ ಅವನ ವಂಶವಾಹಿಯ ಸ್ವಭಾವದಿಂದ ನಿರ್ಧರಿತವಾಗುತ್ತದೆ.

ಗಂಡಸಿನ ವಂಶವಾಗಿ ದತ್ತಿ ಫಲವತ್ತಾದ ಮೇಲೆ ಬದಲಾಯಿಸಲಾಗುವುದಿಲ್ಲ. ಅನೇಕ ಸಂಖ್ಯೆಯ ಖಾಯಿಲೆಗಳು ವಂಶವಾಹಿಯ ಅನುಕೂಲ ಮನೋಭಾವವನ್ನು ಹೊಂದಿರುತ್ತವೆ. ಉದಾ: ಕೆಲವು ಬಗೆಯ ಮಾನಸಿಕ ಸಾವಕಾಶ, ಮೂತ್ರ, ರೋಗಗಳು, ಜೀವಿಪೋಷಕದ್ರವ್ಯಗಳು ಮಾರ್ಪಾಡಾಗುವುದರಲ್ಲಿನ ದೋಷಗಳು, ಅನಿಷ್ಟ ಇತ್ಯಾದಿ

## ವರ್ಣತಂತುಗಳು

1956ರಲ್ಲಿ ಟೀಯೊ ಮತ್ತು ಲೆವನ್ ವರದಿ ಮಾಡಿದ್ದಾರೆ. ಈಗ ಸ್ವೀಕರಿಸಿದ ಸತ್ಯಾಂಶವೆಂದರೆ, ಸಾಮಾನ್ಯ ಮಾನವ ದೇಹದ ಕೋಶ 46 ವರ್ಣತಂತುಗಳನ್ನು ಒಳಗೊಳ್ಳುತ್ತದೆ. ಎಂದರೆ 22 ಜೊತೆ ಶರೀರ ವರ್ಣತಂತುಗಳು ಮತ್ತು ಒಂದು ಜೊತೆ ಲಿಂಗವರ್ಣತಂತುಗಳು - XX ಹೆಂಗಸಿನಲ್ಲಿ ಮತ್ತು xy ಗಂಡಸಿನಲ್ಲಿ

XX ಹೆಂಗಸಿನಲ್ಲಿ xy ಗಂಡಸಿನಲ್ಲಿ

ವರ್ಣತಂತುಗಳು ವರ್ಣಗ್ರಾಹಿಗಳ, ಕಂಬಿಯಂತಿರುವ ಘನಿಭೂತ ವಸ್ತುಗಳು. ಅವು ಜೊತೆಜೊತೆಯಾಗಿ ಕಂಡುಬರುತ್ತವೆ. ಪ್ರತಿಯೊಂದು ಜೊತೆಯ ಒಂದು ಅಂಶ. ತಾಯಿಯಿಂದ ಬರುತ್ತದೆ. ಅತ್ಯಂತ ಉದ್ದದ ವರ್ಣತಂತು 7ಮೀ ನಷ್ಟು ಅಳತೆಯುಳ್ಳದ್ದಾಗಿರುತ್ತವೆ. ಮತ್ತು ಅತ್ಯಂತ ಸಣ್ಣದರ 5ರಷ್ಟು ಉದ್ದದಷ್ಟಿರುತ್ತದೆ. ಜೀವ ರಾಸಾಯನಿಕವಾಗಿ ವರ್ಣ ತಂತುಗಳು ಡೆಸೋತಿ ಬೇರಿಬೇಸೆನ್ಯು ಕ್ಲೀಕೆ ದ್ವದಿಂದ (Desoxyribosenudeic acid) (DNA) ರಚಿತವಾಗಿದೆ. ವಂಶವಾಹಿಗಳನ್ನು ಒಳಗೊಂಡಿರುತ್ತವೆ. ವಂಶವಾಹಿಯು ವರ್ಣತಂತುವಿನ ಮೇಲಿನ ಸ್ಥಳದ ಮೇಲಿನ ನಿರ್ದಿಷ್ಟ ಸ್ಥಳವನ್ನು ಹೊಂದಿರುತ್ತದೆ, ಪ್ರತಿಯೊಂದು ಮಾನವ ಪ್ರಾಣಿ ಸುಮಾರು ಒಂದುಕೋಟಿ ವಂಶವಾಹಿಯನ್ನು ಹೊಂದಿರುವ ಸಂಭವವಿದೆ.

## ವಂಶವಾಹಿಗಳು

ಸಣ್ಣ ಸೂಕ್ಷ್ಮದರ್ಶಿ ರಾಸಾಯನಿಕ ಪದಾರ್ಥಗಳು, ವರ್ಣತಂತುಗಳನ್ನು ರಚಿಸುತ್ತವೆ. ದೇಹದ ಪ್ರತಿಯೊಂದು ಚಿಕ್ಕಭಾಗದಲ್ಲೂ ಒಂದು ವಂಶವಾಹಿ ಇದೆ. ಆರೋಗ್ಯ ಸಾಮಾನ್ಯವಾಗಿ, ಭಾಗಶಃ ಉತ್ಪಾದನೆಯ ಸಂವಿಧಾನಗಳನ್ನು ಅವಲಂಬಿಸುತ್ತದೆ. ಆದ್ದರಿಂದ ಉತ್ಪಾದನೆಯ ದೃಷ್ಟಿಯಿಂದ ಆರೋಗ್ಯವನ್ನು, ಆರೋಗ್ಯದ ವಂಶವಾಹಿಯನ್ನು ಸರಿಯಾದ ಸಂಖ್ಯೆಯಲ್ಲಿ ಮತ್ತು ಪ್ರಮಾಣದಲ್ಲಿ ನಿರ್ಮಿಸಬಲ್ಲ ಆರೋಗ್ಯದಾಯಕ ವಂಶವಾಹಿಯ ಪ್ರತ್ರಕ್ಷಯತೆಯ ಆಧಾರದ ಮೇಲೆ ಅವಲಂಬಿಸಿರುತ್ತದೆ, ಎಂದು ಹೇಳಬಹುದು. ವಂಶವಾಹಿ ಅಥವಾ ಅವ್ಯವಸ್ಥೆಯಲ್ಲಿ ಪರಿಣಾಮ ಹೊಂದಬಹುದು. ಜೊತೆಜೊತೆಯಾಗಿ ಕಂಡುಬರುವ ವಂಶವಾಹಿಗಳು ಒಂಟಿಯಾಗಿ ಇರುವಂತಿದ್ದರೆ ಅದನ್ನು ಆ ವಂಶವಾಹಿಗೆ ಹಾಮಾಜಿಗಸ್ (Homozygous) ಎಂದು ವರ್ಣಿಸಲಾಗುತ್ತದೆ. ಅದು ಒಂದೇ ರೀತಿಯಲ್ಲಿದಿದ್ದರೆ, ಆ ಒಂಟಿಯನ್ನು ವಂಶವಾಹಿಗೆ ಹೆಡೆರೊಜಿಗಸ್ (Heterozygous) ಎಂದು ವರ್ಣಿಸಲಾಗುತ್ತಿದೆ, ಒಂದು ವಂಶವಾಹಿಯು ಭಿನ್ನ ಸಂಯುಕ್ತ ಬೀಜದಲ್ಲಿ ಅಥವಾ ಏಕ ಸಂಯುಕ್ತ ಬೀಜದ ಹಂತದಲ್ಲಿ ತನ್ನ ಪ್ರಭಾವಗಳನ್ನು ತೋರಿಸಿಕೊಂಡಾಗ ಅದು ಪ್ರಧಾನವಾಗಿರುತ್ತದೆ ಎಂದು ಹೇಳಲಾಗುತ್ತಿದೆ. ಏಕ ಸಂಯುಕ್ತ ಬೀಜದ ಸ್ಥಿತಿಯಲ್ಲಿ ತನ್ನ

ಪ್ರಭಾವಗಳನ್ನು ತೋರಿಸಿಕೊಂಡಾಗ ಅದನ್ನು ಹಿಂಜರಿಯುವಿಕೆ (recessive) ಎಂದು ಹೇಳಲಾಗುತ್ತದೆ.

## 2. ಉತ್ಪತ್ತಿಯ ಉಪದೇಶ

ವಿವಾಹವನ್ನು ಕುರಿತು ಚಿಂತಿಸುತ್ತಿರುವ ತರುಣಜನರಿಗೆ, ಉತ್ಪತ್ತಿಗಳನ್ನು ನೀಡುವ ವ್ಯಾವಹಾರಿಕ ಸೇವೆಯೆಂದರೆ ಅದೊಂದೇ ಜೀವಂತ ಹುಟ್ಟಿದ ವ್ಯಕ್ತಿಗಳಲ್ಲಿ ಶೇಕಡ 4ರಷ್ಟು ಯಾವೊಂದು ಉತ್ಪತ್ತಿಯ ಅಥವಾ ಭಾಗಶಃ ಉತ್ಪತ್ತಿಯ ಸ್ಥಿತಿಯಿಂದ ನರಳುತ್ತಾರೆ ಎಂದು ಅಂದಾಜು ಮಾಡಲಾಗಿದೆ ಮತ್ತು ಅವರು ಉತ್ಪತ್ತಿಯ ಉಪದೇಶದಿಂದ ಪ್ರಯೋಜನ ಹೊಂದಬಹುದು.

ಮಾನವ ಜೀವಕಣ ಶಾಸ್ತ್ರದಲ್ಲಿ ಮತ್ತು ಮಾನವ ಜೀವರಸಾಯನಿಕಶಾಸ್ತ್ರದಲ್ಲಿ ಕಂಡುಬರುವ ಮುನ್ನಾಲೋಚನೆಗಳು ತಳಿಶಾಸ್ತ್ರದ ಉಪದೇಶದ ಔಷಧಾಲಯಗಳ ಸ್ಥಾಪನೆಗೆ ದಾರಿಮಾಡಿಕೊಟ್ಟವೆ. ಅಲ್ಲಿ ಏಕವಂಶೀಯ ವಿವಾಹಗಳಿಗೆ, ವ್ಯಕ್ತಿಗಳಲ್ಲಿನ ತಳಿ ವಿಷಯದ ಅಸಮಾನ್ಯತೆಗಳು ಮತ್ತು ಜೀವದ್ರವ್ಯ ಪರಿಣಾಮಗಳು ಹುಟ್ಟದೆ ಇರುವ ದೋಷಗಳು ಇವುಗಳಿಗೆ ಸಂಬಂಧಿಸಿದ ಉಪದೇಶಗಳು ಸ್ವಲ್ಪ ಸಹಾಯವನ್ನು ಪಡೆಯಬಹುದು ಅಥವಾ ಅಭಿವೃದ್ಧಿ ಪಡೆಯುವ ಗಂಭೀರ ಪರಿಸ್ಥಿತಿಗಳಿಗೆ ಶೂನ್ಯತೆಯನ್ನು ಪಡೆಯಬಹುದು.

(ಉದಾ: ಫೆನಿಲ್ ಕಟೇನುರಿಯಾ, ಡಯಬಿಟಸ್)

## ಇನ್ ವಿಟ್ರೋ ಗರ್ಭಾದಾನ IVF ಮತ್ತು ಭ್ರೂಣ ವರ್ಗಾವಣೆ

1978ನೆಯ ಜುಲೈ 25ರಂದು ಮೊದಲ ಟೆಸ್ಟ್ ಟ್ಯೂಬ್ ಮಗು ಲೂಯಿಬ್ರೌನ್ ಹುಟ್ಟಿದಾಗ ಉಂಟಾದ ಆನಂದದ ಸ್ಫೋಟದ ನಂತರ ಅನೇಕ ಸಂದೇಹಗಳು, ತಪ್ಪು ತಿಳಿವಳಿಕೆಗಳು ಈ ಸಂಶೋಧನೆಯ ಅಂಶದ ಬಗ್ಗೆ ವ್ಯಾಪಕವಾಗಿ ಹರಡಿಕೊಂಡವು. ಇವೊತ್ತಿನವರೆಗೂ ಅನೇಕ ಪ್ರಕರಣಗಳು ವಿಫಲವಾಗಿವೆಯೇ ಹೊರತು ಯಶಸ್ವಿಯಾಗಿಲ್ಲ. ಅಷ್ಟೇ ಅಲ್ಲದೆ ಅದರಲ್ಲಿ ಸಾವಿರಾರು ಲಕ್ಷಗಟ್ಟಲೆ 'ಡಾಲರ್' ಖರ್ಚು ಒಳಗೊಂಡಾಗ ಸಾಮಾಜಿಕ ಆರ್ಥಿಕ ಮತ್ತು ನೈತಿಕ ವಿವಾದಗಳು ಸಂದರ್ಭ ಸನ್ನಿವೇಶಗಳನ್ನು ಪ್ರವೇಶಿಸಿವೆ.

ಗಂಡ ಅಫಲವತ್ತತೆಯಿಂದ ಕೂಡಿದ್ದರೆ, ಅವನನ್ನು ದಾನಿಯ ಕೃತಕ ಬೀಜಾವಾಪನೆಯಿಂದ ಬದಲಾಯಿಸಲಾಗುತ್ತದೆ. ಈ ಅಂಶ ಇನ್ನೂ ಹೆಚ್ಚಿನ ಸಮಸ್ಯೆಗಳನ್ನು ತಂದೊಡುತ್ತದೆ.

## IVF ಮತ್ತು ಭ್ರೂಣ ವರ್ಗಾವಣೆಗೆ ಯಾವ ಹೆಂಗಸು ಮುಂದೆ ಬರುತ್ತಾಳೆ ?

ಮೂಲತಃ ಇನ್ ವಿಟ್ರೊ ಗರ್ಭಾದಾನ ಮತ್ತು ಭ್ರೂಣ ವರ್ಗಾವಣೆ ಅಂಡನಾಳಗಳ

(ಕೊಳವೆ) ಮುಚ್ಚುವಿಕೆಯಿಂದ ಹೆಂಗಸರಿಗಾಗಿ ಮಾತ್ರ ಉದ್ದೇಶಿಸಲಾಗಿತ್ತು. ಒಟ್ಟಿನಲ್ಲಿ ಕೊಳವೆಯ ರೋಗ ನಿದಾನ ಶೇಕಡ 90ರಷ್ಟು ಪ್ರಕರಣಕ್ಕೆ ಲೆಕ್ಕ ಕೊಡುತ್ತದೆ. ಸೋಂಕಿನ ರೋಗಗಳಿಂದ ಹಿಂದಿನ ಗರ್ಭಪಾತದವರೆಗೆ ಅದರ ಕಾರಣಗಳು ಬದಲಾಗುತ್ತವೆ.

ಈಚಿನ ದಿನಗಳಲ್ಲಿ ಈ ಸೇವೆ ಅಫಲವತ್ತತೆಯ ಕಾರಣ ಅಗೋಚರವೋ ಅಥವಾ ಗಂಡನಲ್ಲಿ ಅತ್ಯಂತ ಕೆಳದರ್ಜೆಯ ವೀರ್ಯದ ಎಣಿಕೆಯಿರುತ್ತದೋ ಅಂಥ ಪ್ರಕರಣಗಳಿಗೂ ವಿಸ್ತೃತಗೊಂಡಿದೆ. ಸಾಮಾನ್ಯವಾಗಿ ಹೆಂಗಸರು ಹೆಚ್ಚಿನ ವಯಸ್ಸಿನ ತಂಡಕ್ಕೆ ಸೇರಿರುತ್ತಾರೆ. ಎಷ್ಟೋ ವೇಳೆ ಅವರ 30ನೆಯ ವಯಸ್ಸು ಎನ್ನಿ. ಮುಂದೆ ಬರುವ ದಂಪತಿಗಳು ಉನ್ನತ ಆಶಯಗಳನ್ನು ಹೊಂದಿರುತ್ತಾರೆ ಮತ್ತು ಬಹುಶಃ ತಮ್ಮದೇ ಆದ ಮಗುವನ್ನು ಹೊಂದಲು ಪೀಡಿಸುತ್ತಲೂ ಇರುತ್ತಾರೆ. ಇದು ಮಾನಸಿಕ ಸಮಸ್ಯೆಗಳನ್ನು ಉಂಟು ಮಾಡುವ ಕಡೆಗೆ ಜಾರುತ್ತಿದೆ. ಒಂದು ರೀತಿಯ ಸಾಕಾಗದಷ್ಟರ ಭಾವನೆ- ಯಶಸ್ವೀ ಫಲದಾಯಕವಾಗಿದ್ದರೂ ಅದು ಇನ್ನೂ ಒತ್ತಾಯಿಸುತ್ತಲೇ ಇದೆ. ದಂಪತಿಗಳ ಅಫಲವತ್ತತೆಯ ಸಮಸ್ಯೆ ಪರಿಹಾರವಾಗದಿರುವುದಕ್ಕೆ ಕಾರಣ ಅದು ಕಾರ್ಯವಿಧಾನದ ತಂತ್ರಜ್ಞಾನದಿಂದ ಮಾತ್ರ ಸುತ್ತುವರಿಯಲ್ಪಟ್ಟಿರುವುದೇ ಆಗಿದೆ. ದಂಪತಿಗಳ ಮನೋಭಾವದ ಅಗತ್ಯಗಳನ್ನು ತೃಪ್ತಿಪಡಿಸಲು ಸರ್ವಪ್ರಯತ್ನಗಳನ್ನು ಮಾಡಲಾಗಿದೆ. ಎಲ್ಲಿಯವರೆಗೆ ಎಂದರೆ, ಕಾರ್ಯವಿಧಾನದಲ್ಲಿ ಕಳೆದುಕೊಂಡ ಹೆಚ್ಚಿನ ಸಂಖ್ಯೆಯ ಮಾನವ ಭ್ರೂಣಗಳ ವೆಚ್ಚವನ್ನು ಸಹಿಸಿಯೂ ಕೂಡ IVF ಮತ್ತು ಭ್ರೂಣವರ್ಗಾವಣೆಗಳು ವಯಸ್ಕರ/ಳ ಅಗತ್ಯವನ್ನು ತೃಪ್ತಿಪಡಿಸಲೋಸುಗದ ತಂತ್ರಕ್ಕಿಂತ ಹೆಚ್ಚಿನದೇನೂ ಆಗಿಲ್ಲ.

ಅಂಡಾಶಯಗಳನ್ನು ಕೃತಕವಾಗಿ 'ಕ್ಲೊಮಿಫೀನ್' ಗುಳಿಗೆಗಳ ಸೇವನೆಯಿಂದ, ಚೋದಿಸುವುದರಿಂದ ದಿನವೂ ಕುಹರಗಳಿಗೆ, ಬೋದಕ ಮದ್ದುಗಳ ಇನ್ಜೆಕ್ಷನ್ ಕೊಡುವುದರಿಂದ ಹಣ್ಣಾದ ಕುಹರಗಳ ಬೆಳೆಯನ್ನು ಉತ್ಪತ್ತಿ ಮಾಡಲು ಗರ್ಭಾಣುಗಳನ್ನು ತುಂಬುವುದರಿಂದ ಚಿಕಿತ್ಸೆ ಆರಂಭವಾಗುತ್ತದೆ. ಕುಹರಗಳ ಸಂಖ್ಯೆ ಮತ್ತು ಬೆಳವಣಿಗೆ ಅಸ್ಟ್ರೊಜನ್ನಿನ ರೇಡಿಯೋ ಸೋಂಕು ನಿವಾರಕ ಪ್ರಯತ್ನಗಳನ್ನು ದಿನವೂ ಕ್ರಮಕ್ರಮವಾಗಿ ವ್ಯವಸ್ಥೆಗೊಳಿಸಲಾಗುತ್ತದೆ. ಇದರ ಮುಖ್ಯ ಗುರಿ ಲ್ಯಾಪ್ರೆರೆ ಸ್ಕೋಪಿಯಿಂದ ಕುಹರಗಳು ಛಿದ್ರವಾಗುವುದಕ್ಕೆ ನಿಕಟಪೂರ್ವದಲ್ಲಿ ಅವುಗಳ ಒಳ ವಸ್ತುಗಳನ್ನು ಹೊರಗೆ ಸೆಳೆದು ಹಾಕುವುದರಿಂದ ಬೆಳೆಯನ್ನು ತೆಗೆಯುವುದೇ ಆಗಿದೆ. ಅಂಡಾಣುಗಳನ್ನು, ಅವುಗಳನ್ನು ತೆಗೆದ ವೇಳೆಗೆ ಒಂದು 'ಪೆಟ್ರಿಡಿಷ್'ನಲ್ಲಿ ಇಡಲಾಗುವುದು ಮತ್ತು ಅದಕ್ಕೆ ವೀರ್ಯಾಣುಗಳನ್ನು ಸೇರಿಸಲಾಗುವುದು. ಆಗ ಗರ್ಭಧಾರಣೆ ಮುಂದುವರಿಯುತ್ತದೆ. ಒಂದು ಅಥವಾ ಹೆಚ್ಚಿನ ಫಲವತ್ತಾದ ಅಂಡಾಣುಗಳನ್ನು ನಾಲ್ಕು ದಿನದನಂತರ, ಭ್ರೂಣಕ್ಕೆ, ಬಿತ್ತುವುದಕ್ಕಾಗಿ ಇಂಜೆಕ್ಟ್ ಮಾಡಲಾಗುತ್ತದೆ. ಇತರ ಭ್ರೂಣಗಳನ್ನು ನಾಶಮಾಡಲಾಗುವುದು ಇಲ್ಲವೆ ಅವುಗಳ ಮೇಲೆ ಪ್ರಯೋಗ ನಡೆಸಲಾಗುವುದು. ''ಕೊಳವೆ ಅಂಡಾಣು ವರ್ಗಾವಣೆ''ಯ

ಹೊಸಕಾರ್ಯವಿಧಾನ ವಿವಾಹ ಸಮಾನತೆಯೊಡನೆ ಗಮನದಿಟ್ಟು ಹೆಚ್ಚಾದುದು. IVF ನಲ್ಲಿರುವಂತೆ ಅಂಡಾಣುವನ್ನು ಹೀರಿ ತೆಗೆಯಲಾಗುತ್ತದೆ. ಆದರೆ ಅದನ್ನು 'ಪೆಟ್ರಿಡಿಷ್'ನಲ್ಲಿ ವೀರ್ಯಾಣುಗಳೊಡನೆ ಸೇರಿಸುವುದಿಲ್ಲ. ಆದರೆ ಗರ್ಭದಲ್ಲಿ ಕೂಡಲೆ ಇಂಜೆಕ್ಟ್ ಮಾಡಲಾಗುವುದು. ಆದಾದ ತತ್‌ಕ್ಷಣ ದಂಪತಿಗಳು ಸಂಭೋಗ ಕ್ರಿಯೆಯನ್ನು ವಾಡಿಕೆಯಾಗಿ ಮಾಡಬಹುದು. ಆದ್ದರಿಂದ ಯಾವುದೇ ದಾನಿ ವೀರ್ಯಾಣವನ್ನು ಬಳಸುವುದಿಲ್ಲ; ವೈವಾಹಿಕ ಕ್ರಿಯೆ ಗಂಡ ಹೆಂಡಿರ ನಡುವೆ ಸಮಾನ್ಯವಾಗಿರುತ್ತದೆ.

## ಯಶಸ್ವೀ ಪ್ರಮಾಣ

ಹೆಂಗಸರಲ್ಲಿ ಸುಮಾರು ಶೇಕಡ 16ರಷ್ಟು ಜನ 1 ಮತ್ತು 3 ಪ್ರಯತ್ರಗಳಲ್ಲಿ ಬಸಿರನ್ನು ಸಾಧಿಸುತ್ತಾರೆ. 3ಕ್ಕಿಂತ ಹೆಚ್ಚಿನ ಶ್ರಮವನ್ನು ಕೆಲವರು ಮಾತ್ರ ತಾಳಬಹುದು.

ಮಾನವ ಜೀವಿಯ ಸೃಷ್ಟಿ ಅಥವಾ ಸಿದ್ಧಪಡಿಸುವಿಕೆಯನ್ನು ಒಳಗೊಳ್ಳು ಕಾರ್ಯ ವಿಧಾನ ಭ್ರೂಣಗಳನ್ನು ಕುರಿತು ಕ್ರಿಯೆ ನಡೆಸುವವರಲ್ಲಿ ಅತ್ಯಂತ ಕಠಿಣ ನಿಯಂತ್ರಣಗಳನ್ನು ಅಪೇಕ್ಷಿಸುತ್ತದೆ ಮತ್ತು ಶ್ರೇಷ್ಠ ದರ್ಜೆಯ ನೈತಿಕ ತತ್ವಗಳನ್ನು ಬಯಸುತ್ತದೆ.

ಈಗಿರುವ ವ್ಯಕ್ತಿಯಿಂದ ಒಂದೇ ರೀತಿಯ ವ್ಯಕ್ತಿಯನ್ನು ಉತ್ಪತ್ತಿ ಮಾಡಬಹುದೇ ? ಅಂಥಲ್ಲಿ ವೈದ್ಯಕೀಯ ವಿಜ್ಞಾನಿಗಳು, ಒಂದೇ ವಂಶದ ಕೋಶಗಳನ್ನು ರೂಢಿಸುವ ಕನಸು ಕಾಣುತ್ತಾರೆ. ಅದೃಷ್ಟವಶಾತ್ ಇದರ ಸಾಧನೆ ಬಹುದೂರದ ಕಾಲಕ್ಕೆ ಸೇರಬಹುದಾಗಿ ಕಾಣುತ್ತದೆ.

IVF ಆಚರಣೆ, ಅದನ್ನು ಬೆಂಬಲಿಸುವ ತಂತ್ರಜ್ಞಾನ ಇರುವಂಥ ದೇಶಗಳಲ್ಲಿ ಹೆಚ್ಚು ವ್ಯಾಪಕವಾಗಿದೆ. ಮತ್ತು ಅದನ್ನು ಪಡೆಯುವ ದೃಷ್ಟಿ ಸಮರ್ಥರಾದ ಶ್ರೀಮಂತ ಮಧ್ಯಮ ವರ್ಗದಲ್ಲೂ ಬಳಕೆಯಲ್ಲಿದೆ. ಅದು ಬಡವರಿಗೆ ಸಾಧ್ಯವಾಗುವ ಕಾರ್ಯ ವಿಧಾನವಲ್ಲ. ಅದನ್ನು ಬಹುಕಠಿಣವಾಗಿ ನಿಯಂತ್ರಿಸಬೇಕು ಮತ್ತು ಹಿಡಿತದ ಶಾಸನದಿಂದ ರಕ್ಷಿಸಬೇಕು. ಕಾನೂನು ಬದ್ಧವಾಗಿ ಅದನ್ನು ವಿವಾಹ ಸಂಬಂಧಗಳ ಒಳಗೆ ಮಾತ್ರ ಅನುಮತಿಸಬೇಕು. ವಿವಾಹಿತರ ವೀರ್ಯಾಣು ಮತ್ತು ಅಂಡಾಣುಗಳನ್ನು ಮತ್ತು ಕೊಳವೆ ಅಂಡಾಣು ವರ್ಗಾವಣೆಯನ್ನು ಬಳಸಿ ಆ ಕಾರ್ಯ ವಿಧಾನವನ್ನು ಉಪಯೋಗಿಸಬೇಕು.

IVF ಯನ್ನು ವ್ಯಾಪಕ ಆಧಾರದ ಮೇಲೆ ಅನುಮತಿಸಿದರೆ, ಅದು ಆಚರಣೆಯಲ್ಲಿ ಭ್ರೂಣಗತ ಮಾನವ ಜೀವಿಗಳ ನಾಶದಲ್ಲಿ ಕೊನೆಗೊಳ್ಳುವ ಅತ್ಯಂತ ಉಗ್ರ ಅನ್ಯಾಯವನ್ನು ಅನಿವಾರ್ಯವಾಗಿ ಒಳಗೊಳ್ಳುತ್ತದೆ. ಅದು, ಅನೇಕ ವೇಳೆ, ವಿವಾಹಿತ ದಂಪತಿಗಳಿಗೆ ಹುಟ್ಟುವ ಮಗುವಿನ ನಿಜವಾದ ಹಕ್ಕನ್ನು ಕಸಿದುಕೊಳ್ಳುವುದರಲ್ಲಿ ಪರ್ಯಾವಸನಗೊಳ್ಳುತ್ತದೆ. ಸಾವಿರಾರು ಮಕ್ಕಳು ದತ್ತು ತೆಗೆದುಕೊಳ್ಳಲು ದೊರಕುತ್ತಿರುವ ಭಾರತದಲ್ಲಿ ನಮ್ಮ ಮೌಲ್ಯಗಳು ಮತ್ತು ಆದ್ಯತೆಗಳು IVF ಮತ್ತು E.T.ಗಳನ್ನು ಹೊರತು ಪಡಿಸಬೇಕು.

## 3. 'ಜೀವ' ಆರಂಭವಾಗುವುದು ಯಾವಾಗ ?

ಪ್ಯಾರಿಸಿನಲ್ಲಿರುವ ಅಂತಾರಾಷ್ಟ್ರೀಯ ಕೀರ್ತಿಯ ವಿಜ್ಞಾನಿ ಪ್ರೊ. ಜೆರೋಮ್ ಲೆ ಜ್ಯಾನ್ ಮತ್ತು ಜನನ ದೋಷಗಳನ್ನು ಕಂಡು ಹಿಡಿದ- ಮಂಗೋಲಿಸಂ ಅಥವಾ ಡಾನ್ ಸಿಂಡ್ರೋಮ್-ಉಂಟು ಮಾಡುವ ಟ್ರಿಜೊಮಿ ಇದನ್ನು ಕುರಿತು ಹೇಳುತ್ತಾರೆ.

''ವಿಜ್ಞಾನಕ್ಕೆ ವಾಸ್ತವವಾಗಿ ಲಭ್ಯವಿರುವ-ಆ ಪ್ರಶ್ನೆಗೆ ನಿಷ್ಕೃಷ್ಟವೂ ಸೂಕ್ತವು ಆದ ಉತ್ತರವನ್ನು ಅದು ಕೊಡಲು ಪ್ರಯತ್ನಿಸುತ್ತದೆ. ಆಧುನಿಕ ಪ್ರಾಣಿಶಾಸ್ತ್ರ ನಮಗೆ ಏನನ್ನು ಕಲಿಸುತ್ತದೆ ? ಪುರಾತನರು ತಮ್ಮ ಸಂತತಿಗೆ ಸತತವಾದ ಲೌಕಿಕ ಸರಪಣಿಗೆ ಹೊಂದಿಕೊಂಡಿರುತ್ತಾರೆ. ಏಕೆಂದರೆ ಹೆಣ್ಣು ಮೊಟ್ಟೆ ಕೋಶದಿಂದ ಪುರುಷ ಕೋಶದ ಮೂಲಕ ಸ್ಪಪೋಟೇಜ (ಅಂಡಾಣು) ಆದ ಫಲವತ್ತತೆಯಿಂದ ತಳಿಯ ಒಬ್ಬ ಹೊಸ ಸದಸ್ಯ ಹೊಮ್ಮಿ ಬರುತ್ತದೆ. 'ಜೀವನ'ಕ್ಕೆ ಒಂದು ದೀರ್ಘ ಚರಿತ್ರೆಯಿದೆ. ಆದರೆ ಪ್ರತಿಯೊಂದು ವ್ಯಕ್ತಿಗೂ ಫಲವತ್ತತೆಯ ಕ್ಷಣದಿಂದ ಒಂದು ಅತ್ಯಂತ ನಾಜೂಕಾದ ಆರಂಭವಿದೆ.

ಲೌಕಿಕ ಕೊಂಡಿಯೇ DNAಯ ಅಣುಗಳ ದಾರ. (DNA=Desoxyri losenuclic acid) ಪ್ರತಿಯೊಂದು ಪುನರಾತ್ಪದಕ ಕೋಶದಲ್ಲೂ ಈ ರಿಬ್ಬನ್, ಸುಮಾರು ಒಂದು ಮೀಟರ್ ಉದ್ದವಿರುತ್ತದೆ. ಮತ್ತು 23 ಚೂರುಗಳಾಗಿ (ನಮ್ಮ ಪ್ರಕಾರಗಳಲ್ಲಿ 23) ಕತ್ತರಿಸಲ್ಪಟ್ಟಿರುತ್ತವೆ. ಪ್ರತಿಯೊಂದು ತುಂಡನ್ನು ಬಹುಎಚ್ಚರಿಕೆಯಿಂದ ಸುತ್ತಿರುತ್ತದೆ ಹಾಗೂ ಗಂಟುಕಟ್ಟರುತ್ತದೆ (ಸಣ್ಣ ಸುರುಳಿಯಲ್ಲಿ) (Casette) ಮಾಗ್ನೆಟಿಕ್ ಟೇಪನ್ನು ಸುತ್ತಿರುವಂತೆ) ಸೂಕ್ಷ್ಮ ದರ್ಶಕದಲ್ಲಿ ಅದು ಸಣ್ಣ ಕಂಬಿಯಂತೆ-ವರ್ಣತಂತು ಕಾಣುವಂತೆ ಇರುವ ಹಾಗೆ.

ಈ 23 ಪಿತೃ ಸಂಬಂಧ ಪಡೆದ ವರ್ಣತಂತುಗಳನ್ನು ಮಾತೃ ಸಂಬಂಧದ 23 ವರ್ಣತಂತುಗಳೊಡನೆ ಫಲವತ್ತತೆಯಲ್ಲಿ ಜೋಡಿಸಿದ ಕೂಡಲೆ, ಹೊಸ ವ್ಯಕ್ತಿಯ ಹುಟ್ಟದೇ ಇರುವ ಗುಣಗಳೆಲ್ಲವನ್ನು ತಿಳಿಸುವುದಕ್ಕೆ ಅವಶ್ಯವೂ ಸಾಕಷ್ಟು ಆದ ಪೂರ್ಣ ಜನನದ ಮಾಹಿತಿಯನ್ನು ಸಂಗ್ರಹಿಸಲಾಗುತ್ತದೆ. ಟೇಪ್ ರಿಕಾರ್ಡರ್ ಒಳಗೆ ಮಿನಿ ಕ್ಯಾಸೆಟ್ ಅನ್ನು ಒಳಸೇರಿಸಿದಾಗ ಅದು ಸ್ವರ ಮೇಳವನ್ನು ಪುನರ್ವಶಮಾಡುವಂತೆ, ಈ ಹೊಸ ಜೀವ ತಾನು ಗರ್ಭಿಕೃತವಾದೊಡನೆ ತನ್ನನ್ನು ತಾನೆ ಅಭಿವ್ಯಕ್ತಿಗೊಳಿಸಿಕೊಳ್ಳುತ್ತದೆ. ವರ್ಣತಂತುಗಳು ಜೀವನದ ಕಾನೂನಿನ ಪಟ್ಟಿ, ಅವುಗಳನ್ನು ಹೊಸ ಜೀವಿಯಲ್ಲಿ ಆರಿಸಿಟ್ಟಾಗ ಅವು ವೈಯಕ್ತಿಕವಾಗಿ ತನ್ನ ರಚನೆಯನ್ನು ಹೊರ ಹಾಕುತ್ತದೆ. ಆಶ್ಚರ್ಯಕರವಾದ ಅಂಶವೆಂದರೆ ಹಸ್ತಪ್ರತಿಯ ಸೂಕ್ಷ್ಮತೆ, ಸಾಧ್ಯವಾದಸಂದೇಹವನ್ನು ಮೀರಿ ಅದನ್ನು ನಂಬುವುದೇ ಕಷ್ಟವಾಗುತ್ತದೆ. ನಮ್ಮ ಶರೀರವನ್ನು ರಚಿಸಲು ಅವಶ್ಯಕವಾದ ಮತ್ತು ಸಾಕಷ್ಟಾದ ಪೂರ್ಣ ಜನನದ ಮತ್ತು ನಮ್ಮ ಮೆದುಳಿನ ಮಾಹಿತಿಯನ್ನು ಸಮಸ್ಯೆ ಪರಿಹಾರದ, ಅತ್ಯಂತ ಶಕ್ತಿಯುತವಾದ, ರೀತಿಯನ್ನು-ವಿಶ್ವದ ಕಾನೂನನ್ನು ವಿಭಜಿಸಲು ಸಮರ್ಥ

ವಾದ-ಸಂಗ್ರಹಿಸಬಹುದು. ಹೇಗೆಂದರೆ ಭೌತ ವಿಷಯದ ಕೆಳಸ್ತರವು ಒಂದು ಸೂಜಿಯ ತುದಿಯ ಮೇಲೆ ಸೊಗಸಾಗಿ ಸೇರಿಸಬಹುದಾಗುವಷ್ಟು ಮತ್ತು ಹೆಚ್ಚಿನ ಮನ ತಟ್ಟುವ ಅಂಶವೆಂದರೆ ಜನನೋತ್ಪತ್ತಿಯ ಕೋಶಗಳು ಪಕ್ವವಾಗುವ ಅವಧಿಯಲ್ಲಿ ಜನನೇಂದ್ರಿಯದ ಮಾಹಿತಿಗಳನ್ನು ಅನೇಕ ಮಾರ್ಗಗಳಲ್ಲಿ ಬೇರೆ ಬೇರೆ ಕಡೆಗೆ ಬದಲಾಯಿಸಿಲಾಗುತ್ತದೆ. ಆಗ ಪ್ರತಿಯೊಂದು ಗರ್ಭಧಾರಣೆಯನ್ನು ಪೂರ್ತಿಯಾದ ಮೊದಲಿಗೆ ಸಂಭವಿಸದಿದ್ದ ಮತ್ತು ಮತ್ತೆ ಪುನಃ ಸಂಭವಿಸಿದ ಮೂಲ ಒಟ್ಟುಗೂಡುವಿಕೆಯನ್ನು-ಸ್ವೀಕರಿಸುತ್ತದೆ.

ಪ್ರತಿಯೊಂದು ಗರ್ಭಧಾರಣೆಯೂ (Conceptns) ಅಪೂರ್ವವಾದದ್ದು ಮತ್ತು ಹಾಗೆ ಹಾಗೆ ಅದು ದುರಸ್ತಿಯಾಗದಂಥದ್ದು. ಒಂದೇ ರೀತಿಯ ಅವಳಿ ಜವಳಿಗಳು ಮತ್ತು ಶುದ್ಧ ಸ್ತ್ರೀಪುಲ್ಲಿಂಗಗಳನ್ನುಳ್ಳ ಶಿಶುಗಳು ''ಒಬ್ಬ ಮನುಷ್ಯ ಒಂದು ಜನನ ರಚನೆ'' ಎಂಬ ನಿಯಮಕ್ಕೆ ಹೊರತಾದುದು. ಆದರೆ ಅದು ಎಷ್ಟು ಕುತೂಹಲಕಾರಿ ಎಂದರೆ ಈ ಅಪವಾದಗಳು ಗರ್ಭಧಾರಣೆಯ ಕಾಲದಲ್ಲಿಯೇ ಆಗಬೇಕು. ಆಚಿನ ಆಕಸ್ಮತ್ತುಗಳು ಏಕ ರೀತಿಯ ಬೆಳವಣಿಗೆಗೆ ದಾರಿ ಮಾಡಿಕೊಡಲಾರದು.

ಈ ಎಲ್ಲ ವಿಚಾರಗಳು ಬಹು ಹಿಂದಿನಿಂದಲೇ ತಿಳಿದು ಬಂದಿತ್ತು. ಟೆಸ್ಟಟ್ಯೂಬ್ ಶಿಶುಗಳು-ಅವುಗಳನ್ನು ಸೃಷ್ಟಿಸಿದರೆ, ಗರ್ಭಧಾರಣೆಯ ಸ್ವಾತಂತ್ರ್ಯವನ್ನು ಪ್ರದರ್ಶಿಸುತ್ತದೆ ಎಂಬುದಕ್ಕೆ ಪ್ರತಿಯೊಬ್ಬರಲ್ಲಿಯೂ ಒಮ್ಮತವಿತ್ತು. ಟೆಸ್ಟ್ ಟ್ಯೂಬ್ ಶಿಶುಗಳ ಈಗ ಅಸ್ತಿತ್ವದಲ್ಲಿವೆ.

ಎರಡು ತಿಂಗಳ ವಯಸ್ಸಿನಲ್ಲಿ 'ಮಾನವಜೀವಿ' ಒಂದು ಹೆಬ್ಬಟ್ಟಿನ ಉದ್ದಕ್ಕಿಂತ ಚಿಕ್ಕದಾಗಿರುತ್ತದೆ-ತಲೆಯಿಂದ-ಪೃಷ್ಟದವರೆಗೆ. ಅದು ಒಂದು ಚಿಪ್ಪಿನೊಳಗೆ ಸುಲಭವಾಗಿ ಹಿಡಿಸಬಲ್ಲದು. ಆದರೆ ಅಲ್ಲಿ ಕೈಗಳು, ಕಾಲು, ಅವಯಗಳು, ತಲೆ, ಮೆದುಳು ಎಲ್ಲವೂ ಆಯಾ ಸ್ಥಳಗಳಲ್ಲೇ ಇರುತ್ತದೆ. ಅದರ ಹೃದಯ ಒಂದು ತಿಂಗಳಿಗೆ ಮುಂಚಿನಿಂದಲೇ ಹೊಡೆತವನ್ನು ಆರಂಭಿಸಿರುತ್ತದೆ.

ಬಹಳ ಹತ್ತಿರದಿಂದ ನೋಡಿದರೆ ಅಂಗೈನ ಗೆರೆಗಳನ್ನು ಕಾಣಬಹುದು-ಒಬ್ಬ ಹಸ್ತ ಸಾಮುದ್ರಿಕ ಆ ಸಣ್ಣ ವ್ಯಕ್ತಿಯ ಅದೃಷ್ಟವನ್ನು ಓದಬಹುದು. ಚೆನ್ನಾದ ಭೂತಕನ್ನಡಿಯಿಂದ ಬೆರಳು ಗುರುತುಗಳನ್ನು ಕಂಡು ಹಿಡಿಯಬಹುದು, ರಾಷ್ಟ್ರೀಯ ಗುರುತಿನ ಕಾರ್ಡಿಗೆ ಬೇಕಾದ ಪ್ರತಿಯೊಂದು ದಾಖಲೆಯೂ ಲಭ್ಯವಾಗುತ್ತದೆ

ನಮ್ಮ ತಂತ್ರಜ್ಞಾನದ ತೀವ್ರವಾದ ಕುತರ್ಕದಿಂದ ನಾವು ಅವನ ರಹಸ್ಯಸ್ಥಾನವನ್ನು ಆಕ್ರಮಿಸಿದ್ದೇವೆ. ಅದೊಂದು ಆಳವಾದ ಗಂಭೀರವಾದ ಪುನಃ ಭರವಸೆ ಕೊಡುವ ಬಡಿತಗಳಿಂದ ಎಂದರೆ ನಿಮಿಷಕ್ಕ 60-70ರವರೆಗೆ ಹೃದಯ ಬಡಿತ (ತಾಯಿಯ ಹೃದಯ) ಮತ್ತು ತೀವ್ರಗತಿಯ ಎತ್ತರ ಏರಿಳಿತದ ವಿಶಿಷ್ಟ ಜಲಗತ ಗ್ರಾಹಕಗಳು ಅತ್ಯಂತ ಪ್ರಾಚೀನ

ಸಂಗೀತವನ್ನು ಪ್ರದರ್ಶಿಸುತ್ತದೆ. ಸ್ವರಗತಿಯನ್ನು 150-170 ದರದಲ್ಲಿ - (ಭ್ರೂಣದ ಹೃದಯ) ಈ ಸಂಕೀರ್ಣದ, ಅನುಕರಣೆಯ ಮಂದ್ರಸ್ವರ, ಪಿರೋಧಿಯಾದ ಗಿಲಕಿಯ ಶಬ್ದಗಳೇ ಯಾವುದೇ ಪಾಪ್ ಸಂಗೀತದ ಮೂಲ ಲಯಗಳು.

ಅದು- ಹೆಣ್ಣಾಗಲಿ ಗಂಡಾಗಲಿ ಏನನ್ನು ಕೇಳುತ್ತದೆ, ಅದನ್ನು ನಾವು ಕೇಳಿದ್ದೇವೆ ಎಂದು ನಮಗೆ ತಿಳಿಯುತ್ತದೆ ಅವಳು/ನು ಏನನ್ನು ರುಚಿನೋಡುತ್ತದೆ, ಎಂಬುದನ್ನು ಮೂಸುತ್ತದೆ. ಅದು ತುಂಬ ಗಾಂಭೀರ್ಯದಿಂದ ಮತ್ತು ಯೌವನದಿಂದ ಕುಣಿಯುತ್ತಿರುವುದನ್ನು ನಾವು ನಿಜವಾಗಿ ಕಂಡಿದ್ದೇವೆ, ಈ ಹೆಬ್ಬಟ್ಟಿನ ಕೂಸಿನ (Tom Thumb) ಯಕ್ಷಿಣೀ ಕಥೆ ವಾಸ್ತವ ಕಥೆಯೆಂದು ವಿಜ್ಞಾನ ತೋರಿಸಿಕೊಟ್ಟಿದೆ. ಈ ಕಥೆ ನಮ್ಮಲ್ಲಿ ಪ್ರತಿಯೊಬ್ಬರೂ ನಮ್ಮ ತಾಯಂದಿರ ಹೊಟ್ಟೆಯಲ್ಲಿ ಬದುಕಿದ ಕಥೆಯೇ ಆಗಿದೆ.

## ಜನನ ಪೂರ್ವದ ವಿಜ್ಞಾನ

ಇತ್ತೀಚೆಗೆ ಜನನ ಪೂರ್ವಸ್ಥಿತಿಯ ವಿಜ್ಞಾನ ನಮ್ಮ ಗಮನವನ್ನು ಸೆಳೆದಿದೆ. ಏಕೆಂದರೆ, ವಿಶೇಷವಾಗಿ ತಾಯಿಯಲ್ಲಿನ ಜನನ ಪೂರ್ವದ ಸ್ಥಿತಿಯಲ್ಲಿ ಕೆಲವನ್ನು ತಿದ್ದಲು ಮತ್ತು ಕೆಲವನ್ನು ತಡೆಯಲು ಸ್ಪಷ್ಟವಾದ ಕ್ರಮಗಳನ್ನು ಕೈಗೊಳ್ಳಬಹುದಾದ ಸಾಧ್ಯತೆಯಿರುವುದರಿಂದ.

ಅಂತರ ಗರ್ಭದ ಬೆಳವಣಿಗೆ ತಡೆಯನ್ನು ಬೆಡೆಯ ಕಾಲದ ಮೂತ್ರದಿಂದ, ಮಾನವ ಗರ್ಭಾಶಯದ ಅಂದಾಜುಗಳಿಂದ, ಮಿತಿಮೀರಿದ ಶಬ್ದದಿಂದ ಅಥವಾ ಚಿಕಿತ್ಸಾ ಪರೀಕ್ಷೆಗಳಿಂದ ಕಂಡು ಹಿಡಿಯಬಹುದು. ರಕ್ತ ಚಲನೆಯ ಅವ್ಯವಸ್ಥೆ ಇರುವೆಡೆಗಳಲ್ಲೆಲ್ಲ, ತಾಯಿಯನ್ನು ಭ್ರೂಣಕ್ಕೆ ಉಪಯೋಗ ಸಾಧ್ಯ ಪರಿಣಾಮವನ್ನುಂಟು ಮಾಡುವುದರಿಂದ ಚಿಕಿತ್ಸೆ ನೀಡಬಹುದು.

ಇಂದು ಚಿಕಿತ್ಸಾಧಾರದ ಗರ್ಭಪಾತಕ್ಕೆ ಯಾವುದೇ ಕಾರಣ ಇವುದಿಲ್ಲ ಅಥವಾ ಗರ್ಭಪಾತದ ವೈದ್ಯಕೀಯ ಅಂತ್ಯಕ್ಕೆ ಕಾರಣವಿಲ್ಲ. ಏಕೆಂದರೆ ಜನನ ಪೂರ್ವಜ್ಞಾನದ ವಿಜ್ಞಾನ ತಾಯಿಯಲ್ಲಿರುವ ಯಾವುದೇ ಅಪಾಯಕರ ಗುರುತುಗಳನ್ನು ಅಥವಾ ಚಿಹ್ನೆಗಳನ್ನು ಕಂಡು ಹಿಡಿಯಬಹುದು ಮತ್ತು ಅದಕ್ಕೆ ಚಿಕಿತ್ಸೆ ನೀಡಬಹುದು.

ಅಗತ್ಯವಾದ ವಿಟಮಿನ್ ಅನ್ನು ಜೀರ್ಣಗೊಳಿಸುವ ಭ್ರೂಣದ ಅಸಾಮರ್ಥ್ಯವನ್ನು ಕಂಡು ಹಿಡಿಯಬಹುದು ಮತ್ತು ಹೆಚ್ಚಿನ ಪ್ರಮಾಣದಲ್ಲಿ ವಿಟಮಿನ್ ಡೋಸ್‌ಗಳನ್ನು ಕೊಡುವುದರ ಮೂಲಕ ತಾಯಿಗೆ ಚಿಕಿತ್ಸೆಯನ್ನು ನೀಡಬಹುದು. ಕಾಲಕ್ಕೆ ಮುಂಚಿತವಾಗಿ ಬಹುಶಃ ಹುಟ್ಟುವ ಶಿಶುಗಳು ಶ್ವಾಸಕೋಶಗಳ ಪಕವತೆಯನ್ನು ತ್ವರೆಗೊಳಿಸಲು ಔಷಧಗಳನ್ನು ಸ್ವೀಕರಿಸಬಹುದು ಅಂದರೆ ಆ ಮೂಲಕ ಅಲಕ್ಷ್ಯ ಶಿಶುಗಳನ್ನು ಕೊಲ್ಲುವ 'ಹೆಲೈನ್ ಮೆಂಬ್ರೇನ್' ರೋಗವನ್ನು ಎದುರಿಸುವುದರ ಮೂಲಕ ರೋಗವಾಸಿ ಮಾಡಬಹುದು. ಡಿಜಿಟಾಲಿಸ್ (ಒಂದು ಬಗೆ ಸೊಪ್ಪಿನ ಔಷಧಿ) ಅಂಥ ಔಷಧಗಳನ್ನು ಭ್ರೂಣಕ್ಕೆ ತಾಯಿಯ

ರಕ್ತದ ಮೂಲಕ ಹೃದಯದ ಅಕ್ರಮ ಲಯಗಳನ್ನು ಸರಿಪಡಿಸಲು ತಲುಪಿಸಬಹುದು. ಭ್ರೂಣದ ಎದೆಯಿಂದ ಮತ್ತು ಹೊಟ್ಟೆಯಿಂದ ಅವುಗಳಲ್ಲಿರುವ ಹೆಚ್ಚಿನ ದ್ರವಗಳನ್ನು ಒಣಗಿಸುವುದು ಮತ್ತು ರಕ್ತವನ್ನು ತುಂಬಬಹುದು. ನಾವು ನಿಜವಾಗಿ ಹೇಳಬಹುದಾದುದೇನೆಂದರೆ ವೈಜ್ಞಾನಿಕ ಪ್ರಗತಿಗಳು ವೈದ್ಯಕೀಯ ಕ್ಷೇತ್ರದಲ್ಲಿ ಆರೋಗ್ಯಕರ ಶಿಶುಜನನ ಒಂದು 'ಸತ್ಯ' ಕ್ರಿಯೆ ಆಗಿದೆ ಎಂದು.

## 4. ಭ್ರೂಣ ಒಂದು ವ್ಯಕ್ತಿಯಾಗಿ

ಭ್ರೂಣ ಗರ್ಭಧಾರಣೆಯಲ್ಲಿ ಒಂದು ಹರಿದು ಹೋಗುವ ಪ್ರಯಾಣಿಕನಲ್ಲ, ಅದೊಂದು ಸಕ್ರಿಯವಾಗಿ ತನ್ನ ಹತೋಟಿಗೊಳಪಟ್ಟ ತನ್ನದೇ ಆದ ಸ್ವಂತ ಸಣ್ಣ 'ಬಾಹ್ಯಸಾಕೆ'

ವೀರ್ಯಾಣು ಗರ್ಭಾಶಯವನ್ನು ಪ್ರವೇಶಿಸಿದ ಒಂದು ಗಂಟೆಯೊಳಗೆ ಎರಡೂ ಕೋಶಗಳ ಅಣ್ವಂಶಗಳು ಒಟ್ಟಾಗಿ ಸೇರಿಬಿಡುತ್ತವೆ. ಒಬ್ಬ ಪೋಷಕನಿಂದ ಹೊರಟ ಸೂಚನೆಗಳು ಪೂರಕವಾದ ಇನ್ನೊಬ್ಬ ಪೋಷಕನಿಂದ ಹೊರಬಂದ ಸೂಚನೆಗಳುಒಂದು ಪೂರ್ಣ ರೂಪವನ್ನು ಸ್ಥಾಪಿಸಲು ಹೊಸ ವ್ಯಕ್ತಿ ಪಾರಂಪರ್ಯವನ್ನು ಮೂರ್ತವಾಗಿ ತಂದುಕೊಡಲು ಪರಸ್ಪರವಾಗಿ ಜೊತೆಗೂಡುತ್ತವೆ.

ಒಂದು ಕೋಶ ಎರಡು ಭಾಗವಾಗುತ್ತದೆ, ಎರಡು ನಾಲ್ಕಾಗುತ್ತದೆ, ಹೀಗೆ ಮುಂದುವರೆದು 4 ರಿಂದ 7 ದಿನಗಳವರೆಗೆ ಈ ಕೋಶದ ಚೆಂಡುಗಳು ಅಂಡವಾಗಿ ಕೊಳವೆಯ ಮೂಲಕ ಗರ್ಭಾಶಯವನ್ನು ತಲುಪಲು ಹರಿಯುತ್ತಿರುತ್ತವೆ. ಗರ್ಭಕೋಶವನ್ನು ತಲುಪಿದ ಮೇಲೆ ಈ ಪುಟ್ಟವ್ಯಕ್ತಿ ಸ್ಪಂಜಿನಂಥ ಒಳ ಪದರದಲ್ಲಿ, ಅದರ ತಾಯಿ ಮುಟ್ಟಿನ ಅವಧಿಯನ್ನು ಅಡಗಿಸುವ ಒಂದು ರೀತಿಯ ಮಾನಸಿಕ ಪ್ರಜ್ಞೆಯ ಪ್ರದರ್ಶನದೊಡನೆ ಹುಟ್ಟು ಹಾಕುತ್ತದೆ. ಇದು ಅದರ ಮನೆ, ಮುಂದಿನ 270 ದಿನಗಳವರೆಗೆ ಅದು ಅಲ್ಲಿ ವಾಸಿಸಲು ಭ್ರೂಣ ಗರ್ಭವೇಷ್ಟನ (Placemfa) ವನ್ನು (ಸೆತ್ತೆ) ಬೆಳಸುತ್ತದೆ ಮತ್ತು ತನಗಾಗಿ ದ್ರವದ ರಕ್ಷಾ ಕವಚವನ್ನು ಬೆಳೆಸಿಕೊಳ್ಳುತ್ತದೆ.

''ಸ್ಯಾಕ್ರಿನ್'' ಎಂಬ ಸಕ್ಕರೆಯನ್ನು ಗರ್ಭವೇಷ್ಟನ ಕುಹರಕ್ಕೆ ಒಳಸೇರಿಸಿದರೆ ( inject) ಭ್ರೂಣ ಆ ಸಿಹಿ ದ್ರವವನ್ನು ಕುಡಿಯಲು ಆರಂಭಿಸುತ್ತದೆ ಎಂಬುದನ್ನು ಪ್ರಯೋಗಗಳು ತೋರಿಸಿಕೊಟ್ಟವೆ. ದ್ರವಗಳನ್ನು ಸೂಜಿ ಮದ್ದಿನಿಂದ ಒಳಸೇರಿಸಿದಾಗ, ಭ್ರೂಣ ಈ ಕಟು ದ್ರವ್ಯವನ್ನು ವಾಂತಿ ಮಾಡಿಕೊಳ್ಳಲು ಆರಂಭಿಸುತ್ತದೆ. ಭ್ರೂಣ ಬಿಕ್ಕಳಿಸಲೂ ತೊಡಗುತ್ತದೆ. ಅವನು/ಳು ನೀಡಿದಾಗುವುದರಿಂದ ಮತ್ತು ಒದೆಯುವುದರಿಂದ ವ್ಯಾಯಾಮವನ್ನು ಮಾಡುತ್ತದೆ.

ಹುಟ್ಟಿದ ಮೇಲೆ ಅವನು/ಳು ತನ್ನ ತಾಯಿಯ ಧ್ವನಿಗೆ ಪ್ರತಿ ಕ್ರಿಯೆ ತಾನೆ/ಳೆ ಏಕೆಂದರೆ ಹುಟ್ಟಿಗೆ ಮುಂಚೆ ಆ ಧ್ವನಿ ಅವನಿಗಾಗಲೇ ಪರಿಚಯದಾಗಿರುತ್ತದೆ.

ಗರ್ಭಧಾರಣೆಯ ವೈದ್ಯಕೀಯ ಪದ ಸರಿಯಾದ ಪದವಲ್ಲ. ಪ್ರತಿಯೊಂದು ಗರ್ಭಧಾರಣೆಯೂ 9 ತಿಂಗಳಿಗೆ ಕೊನೆಗೊಳ್ಳುತ್ತದೆ. 9 ತಿಂಗಳಿಗಿಂತ ಮೊದಲು ಕೊನೆಗೊಂಡರೆ ಅದನ್ನು ಸರಿಯಾಗಿ ಹೇಳುವುದಾದರೆ 'ಗರ್ಭದಾರಣೆಯ ನಿರ್ಮೂಲನ' ಎಂದೇ ಹೇಳಬೇಕಾಗುತ್ತದೆ.

ಹುಟ್ಟದೇ ಇರುವ ಗರ್ಭಸ್ಥ ಶಿಶು ತನ್ನ ತೇಲುವ ಪ್ರಪಂಚದಲ್ಲಿ ಆನಂದಪೂರ್ಣ ಸರಳ ಗಾಂಭೀರ್ಯದಿಂದ ಚಲಿಸುತ್ತಿರುತ್ತದೆ. ಭ್ರೂಣದ ಸೌಕರ್ಯ ಭ್ರೂಣದ ಸ್ಥಿತಿಯನ್ನು ನಿರ್ಧರಿಸುತ್ತದೆ. ಅವನು/ಳು ತನ್ನ ಹೆಬ್ಬರಳನ್ನು, ಮುಂದೆ ಎದೆ ಹಾಲನ್ನು ಚೀಪುವುದನ್ನು ಅಭ್ಯಾಸ ಮಾಡುವುದನ್ನು ರೂಢಿಗೆ ತರುವುದನ್ನು ಕಲಿಯಲು ಅಭ್ಯಸಿಸುತ್ತದೆ. ಮತ್ತು ತನ್ನದೇ ಸ್ವಂತ ನಿರ್ಣಯದಂತೆ ಎಚ್ಚರಗೊಳ್ಳುತ್ತದೆ ಮತ್ತು ನಿದ್ರಿಸುತ್ತದೆ. ಪುನರಾವರ್ತನ ಸಂಕೇತಗಳಿಂದ ಬೇಸರ ಪಟ್ಟುಕೊಳ್ಳುತ್ತದೆ. ಅವನ್ನು ಬದಲಾಯಿಸಿಕೊಳ್ಳಲು ವಿವಿಧ ಸಂಕೇತಗಳಿಂದ ಅದಕ್ಕೆ ಕಲಿಸಿಕೊಡಬೇಕು-ಮೆದುಳಿನ ಅಲೆಗಳು (EEG) ಅಂಜಿಕೆಯನ್ನು, ಸಂತೋಷವನ್ನು ಮತ್ತು ಇತರ ಮನೋಭಾವನೆಗಳನ್ನು ದಾಖಲಿಸಿಕೊಳ್ಳುತ್ತದೆ. ಹೃದಯವೂ ಕೂಡ ಮಗುವಿನಿಂದ ಸರಿಯಾಗಿ ನಿಯಂತ್ರಿಸಿಕೊಳ್ಳುತ್ತದೆ.

ಓಡ್‌ಬ್ಲ್ಯಾಡ್ ಹೇಳುತ್ತಾನೆ. ಇತ್ತೀಚಿನ ವ್ಯಾಸಂಗ EEG ಯನ್ನು ದಾಖಲು ಮಾಡುವ ಚಟುವಟಿಕೆಯಂಥ ಮಿತಿಯನ್ನು ಏಳುವಾರಗಳ ವರೆಗೆ ನಿಗದಿ ಪಡಿಸುತ್ತದೆ. ಹಂತದಲ್ಲಿ ಪೂರ್ಣವಾಗಿ ಹುಟ್ಟಿದ ಶಿಶುವಿನಲ್ಲಿರುವಂತೆ, ಮತ್ತು ವಯಸ್ಕ ಮಾನವ ಪ್ರಾಣಿಗಳಂತೆ, ಯಾವುದೇ ಸತತವಾದ ಇ ಇ ಜಿ ಮಾದರಿ ಕಂಡು ಬರುವುದಿಲ್ಲ. ಆದರೆ, ಒಡೆದು ಹೋಗುವ ಚಟುವಟಿಕೆಗಳಿರುತ್ತವೆ. ಅಷ್ಟೇ ಅಲ್ಲ ಒಡೆದುಹೋಗುವ ಅಂತರಗಳಲ್ಲಿ ಮೌನದ ಅವಧಿಗಳು ಇರುತ್ತವೆ. ಈ ಮೌನದ ಅವಧಿಗಳು ಒಂದು ನಿಮಿಷದ ಸಣ್ಣ ಅಂಶದಿಂದ ಹಿಡಿದು ಕೆಲವು ನಿಮಿಷಗಳವರೆಗೆ ಇದ್ದುದು ಕಂಡುಬಂದಿದೆ. ಒಡೆತಗಳು ಹಲವಾರು ಕ್ಷಣಗಳ (Seconds) ದೀರ್ಘವಾಗಿದ್ದುದೂ ಗೋಚವಾಗಿದೆ.

ಇಇಜಿ ಚಿಹ್ನೆಗಳು ತಾರುಣ್ಯದ ಮಾನವ ಅಪಕ್ವ ಮಕ್ಕಳಲ್ಲಿ ದಾಖಲಾಗುವುದು ಒಂದು ವಿಶಿಷ್ಟ ಆಸಕ್ತಿಯುಳ್ಳದ್ದು. ಅತ್ಯಂತ ಕಿರಿಯ ಭ್ರೂಣ ಅಪಕ್ವವಾಗಿ ಜನಿಸಿದ್ದನ್ನು ಡ್ರೈಫಸ್ ಬ್ರೆಸಾನ್ (1962) ಅಧ್ಯಯನ ಮಾಡಿದಾಗ ಅದು 41/2 ತಿಂಗಳಿನದಾಗಿತ್ತು. ಗರ್ಭಾವಸ್ಥೆಯ ಅವಧಿಯಲ್ಲಿತ್ತು. ಹಾಗೆಂದರೆ, ವಾಸ್ತವವಾದ ಭ್ರೂಣದ ವಯಸ್ಸು ಸುಮಾರು 4 ತಿಂಗಳು ಅಥವಾ 16 ವಾರಗಳು.

ಅಂಥ ಧ್ವನಿಯುಕ್ತ ಚಟುವಟಿಕೆಯ ಇರುವಿಕೆ ಏನನ್ನು ತೋರಿಸುತ್ತದೆ ಎಂದರೆ, ಭ್ರೂಣದ ಮೆದುಳಿನಲ್ಲಿ ಒಂದು ಬಗೆಯ ಮಾನಸಿಕ ಅಥವಾ ಪ್ರಜ್ಞಾ ಚಟುವಟಿಕೆ ಇದ್ದಿರಬಹುದು ಎಂಬುದನ್ನು ಮನಸ್ಸಿನಲ್ಲಿ, ಈ ಹಿನ್ನೆಲೆಯಲ್ಲಿ ಅಂಥ ಬಾಲಿಶವಾದ ಭ್ರೂಣವೂ ಒಂದು ರೀತಿಯ ಪ್ರಜ್ಞೆಯನ್ನು ಒಂದು 'ಆತ್ಮ'ವನ್ನು ಮತ್ತು ಒಂದು

ಅಪೂರ್ವವಾದ 'ವ್ಯಕ್ತಿತ್ವವನ್ನು' ಹೊಂದಿರಬಹುದೆಂಬ ಭಾವನೆಯನ್ನು ಬಿಟ್ಟು ಬಿಡುವುದು ತುಂಬ ಕಷ್ಟವಾಗುತ್ತದೆ. ನಾವು ಇದನ್ನೇನ ಸಿದ್ಧಮಾಡಿ ತೋರಿಸಲಾರೆವು. ಏಕೆಂದರೆ ನಾವು ಭ್ರೂಣವನ್ನು ಏನಾದರೂ ಕೇಳುವುದಕಾಗುವುದಿಲ್ಲ. ಹಾಗೂ ಅದರ ಉತ್ತರವನ್ನು ಪಡೆಯುವುದಕಾಗುವುದಿಲ್ಲ. ಆದರೆ, ಈ ಭ್ರೂಣದ ಆರಂಭದ ವಯಸ್ಸಿನಲ್ಲಿ ಮಾನಸಿಕ ಚಟುವಟಿಕೆಯ ಅಸ್ತಿತ್ವವನ್ನು ಬಿಟ್ಟು ಬಿಡುವುದಕ್ಕಾಗುವುದಿಲ್ಲ.

ಸ್ವೀಕೃತ ಕೋಶಗಳು ಪ್ರೇಷಕ ವಸ್ತುಗಳಿಗೆ (transmitter) ಅಧಿಕ ಲೋಮನಾಳ ಜಾಗಕ್ಕೆ ಹರಿಯುವ ರಕ್ತಪ್ರವಾಹದಿಂದ ಬರುವ ಪ್ರೇಕ್ಷಕ ವಸ್ತುಗಳಿಗೆ (Transmitter) ಇನ್ನೂ ಶೀಘ್ರ ಗ್ರಾಹಿಗಳಾಗಿರಬಹುದು. ಭ್ರೂಣದ ಮೆದುಳಿಗೆ ಸುದ್ದಿಯನ್ನು ಪ್ರವಹಿಸುವ ಈ ಸಂಭಾವ್ಯ ಯಂತ್ರ ಕೌಶಲ, ತಾಯಿಯಿಂತ 'ಕೂಸು'ವಿಗೆ ಅಡ್ಡಲಾಗಿ ಬರುವ ಜೀವ ರಾಸಾಯನಿಕದ ಮೇಲೆ ಪ್ರತಿಕ್ರಿಯಿಸಲೂಬಹುದು ಎಂಬುದನ್ನು ಒಳಗೊಳ್ಳುತ್ತದೆ.

ಅನೇಕ ಜನ ಬಸಿರು ಹೆಂಗಸರು, 'ತಾಯಿ', ಹೆದರಿಕೊಂಡರೆ, ಅಥವಾ ಸುಖ ಅನುಭವಿಸುತ್ತಾರೆ. ಚಿಕ್ಕಮಗು ವಾಸ್ತವವಾಗಿ ಪ್ರತಿಕ್ರಿಯಸುತ್ತದೆ ಎಂಬುದನ್ನು ಭಾವಿಸಿರಬಹುದು. ಎಲ್ಲ ಸಾಧ್ಯತೆಗಳಿಂದ ನಾವು ಅಂಥ ಪ್ರತಿಕ್ರಿಯೆಗಳನ್ನು ತಾಯಿಯಿಂದ ಮಗುವಿಗೆ ತಲುಪುವ ನರವ್ಯೂಹದ ಮಾರ್ಗಗಳಿಗೆ ಬದಲಾಗಿ ಜೀವ ರಾಸಾಯನಿಕ ಉದ್ರೇಕದ ಯಂತ್ರ ಕೌಶಲಗಳ ಆಧಾರದ ಮೇಲೆ, ವಿವರಿಸಿಬಹುದು. ಉದಾಹರಣೆಗೆ ಪಿಯೊನೋಬಾರಿಸುವ ಗರ್ಭಧರಿಸಿದ ಹೆಣ್ಣು ಹಾಡು ನುಡಿಸುವಾಗ ಶಕ್ತಿಯನ್ನು ಪಡೆಯಬೇಕಾದ ಒಂದು ನಿರ್ದಿಷ್ಟ ದಾರಿಗೆ ಪ್ರತಿ ಸಲ ಬಂದಾಗಲೆಲ್ಲ ಮತ್ತು ಶರೀರದ ಅಧಿಕ ಚಲನೆಯನ್ನು ಪಡೆದಾಗ, ತನ್ನ ಮಗು ಹಾರುವುದನ್ನು ಅಥವಾ ಗರ್ಭದಲ್ಲಿ ಚಲಿಸುವುದನ್ನು ಅವಳು ಗಮನಿಸುತ್ತಾಳೆ. ಅವಳ ಮಗು ಹುಟ್ಟಿದ ಮೇಲೆ, ಅವಳ ಈ ಮಾರ್ಗಕ್ಕೆ ಬಂದಾಗ, ಅವಳ ಪಕ್ಕದಲ್ಲಿ ಅದರ ಮಂಚದ ಮೇಲೆ ಮಲಗಿರುವಾಗ, ಅದೇ ಸ್ಥಳದಲ್ಲಿ ಹಾರುವುದನ್ನು ನೋಡಿದಾಗ- ಮಗು ಅದನ್ನು ನೆನಸಿಕೊಂಡಿದೆ ಎಂದೆನ್ನಬಹುದು.

## ಹೆಂಗಸರಿಗೆಅವರ ಸ್ವಂತ ದೇಹದ ಮೇಲೆ ಅವರ ಹಕ್ಕುಗಳು

ಮಹಿಳೆಯರ ಸ್ವಾತಂತ್ರ್ಯವನ್ನು ಬೇಡುವ ಕೆಲವು ಸ್ತ್ರೀ ವಿಮೋಚಕರು ಹೇಳುತ್ತಾರೆ. ಹೆಂಗಸು ತನ್ನ ಸ್ವಂತ ಶರೀರವನ್ನು ತಾನೇ ನಿಯಂತ್ರಿಸಿಕೊಳ್ಳುವ ಹಕ್ಕುಳ್ಳವಳಾಗಿದ್ದಾಳೆ ಎಂಬುದು ವ್ಯಕ್ತಿತ್ವದ ಅವ್ಯವಸ್ಥೆಯನ್ನು ತೋರಿಸುತ್ತದೆಯೇ ಹೊರತು ಗರ್ಭಪಾತದ ಕಾನೂನುಗಳನ್ನು ಸಡಿಲಗೊಳಿಸುವ ವಾದವನ್ನಲ್ಲ. ಹೆಂಗಸು ಮತ್ತು ಅವಳ ದೇಹ ಇವುಗಳ ನಡುವಣ ಛಿದ್ರ, ಒಂದು ಮಾನಸಿಕ ವಿಭಾಗಗಳನ್ನು ತೋರಿಸುತ್ತದೆ. ಅದು ಹೆಂಗಸು ತನ್ನಿಂದಲೇ ಆದ ಸಂಯೋಜನೆಯನ್ನು ಕಳಚಿ ಬಿಡುತ್ತದೆಯಷ್ಟೆ. ನ್ಯಾಯಬದ್ಧ ಭಾವವೊಂದಿದೆ. ಅದರ ಪ್ರಕಾರ, ಬುದ್ಧಿ ಅವರವರ ಕ್ರಿಯೆಗಳನ್ನು ನಿಯಂತ್ರಿಸಿ ಕೊಳ್ಳಲೇಬೇಕು ಎಂದು ಹೇಳುವುದು, ದೇಹ ಹೆಂಗಸಿನ ಹೊಂದಿಕೊಂಡು ಭಾಗ ಅಲ್ಲ

ಎಂಬುದನ್ನು ಸೂಚಿಸುತ್ತದೆ. ಹೀಗೆ ಹೆಂಗಸು ತನ್ನನ್ನು ತನ್ನ ದೇಹದಿಂದ ಪ್ರತ್ಯೇಕಿಸಿಕೊಳ್ಳುತ್ತಾಳೊ ಅವಳ ಪ್ರಕಾರ ಅದೊಂದು ಅವಳು ಸ್ವಂತಕ್ಕೆ ಪಡೆದ ಆಸ್ತಿ ಅದನ್ನು ಜಾರಿಯಲ್ಲಿ ಪ್ರತ್ಯೇಕ ಮಾಡಕೊಳ್ಳತ್ತಾಳೆಯೋ ಎಂಬಂತೆ ಭಾವಿಸುತ್ತಾಳೆ. ಅವಳೇ ಅವಳ ದೇಹ. ಹೀಗೆ ದೇಹವನ್ನು ಪ್ರತ್ಯೇಕಿಸುವ ಭಾವನೆ ಸಾಮಾನ್ಯವಾಗಿ, ಅತ್ಯಂತ ಅಭದ್ರ ಮಾದರಿಯ ವ್ಯಕ್ತಿಯಲ್ಲಿ ಸಂಬಂಧ ಹೊಂದಿರುತ್ತದೆ.

## ಬದುಕಿನ ಮೊದಲವಾರಗಳು

| | |
|---|---|
| ದಿನ-1 | ಗರ್ಭಧಾರಣೆ - ಗರ್ಭಧಾರಣೆಯಲ್ಲಿ ಧಾತುಗಳು ಮತ್ತು ಅಂಡಾಣುಗಳು ಸಂಧಿಸುವುದು- ಉತ್ಪತ್ತಿಯ ಸಿದ್ದತೆ-ಕಣ್ಣುಗಳ, ಕೂದಲಿನ, ಲಿಂಗದ ಪೂರ್ಣ ಸಿದ್ಧತೆ ಮತ್ತು ರಚನೆಯನ್ನು ನಿರ್ಧರಿಸಲಾಗುವುದು. ಉದರದಲ್ಲಿ ಒಂದು ಅಪೂರ್ವ ವ್ಯಕ್ತಿ ಹಾಜರಾಗುತ್ತದೆ. |
| ದಿನ-17 | ಸ್ವಂತ ರಕ್ತಕೋಶಗಳ ಮತ್ತು ಮಾಸಲಚೀಲದ ಬೆಳವಣಿಗೆ. |
| ದಿನ-20 | ಸಂಪೂರ್ಣ ನರಗಳ ವ್ಯವಸ್ಥೆಯನ್ನು ಪ್ರತಿಷ್ಠಾಪನೆ |
| ದಿನ-21 | ಹೃದಯ ಬಡಿಯಲು ಆರಂಭವಾಗುತ್ತದೆ. |
| ದಿನ-30 | ಮುಚ್ಚಿದ ನಾಡಿ ವ್ಯವಸ್ಥೆಯ ಒಳಗೆ ಕ್ರಮಬದ್ಧ ರಕ್ತ ಚಲನೆ |
| ದಿನ-42 | ಅಸ್ಥಿಪಂಜರ ಪೂರ್ಣ ಮತ್ತು ಪ್ರತಿಸ್ಪಂದನಗಳ ಹಾಜರಿ ಯಕೃತ್ತು, ಮೂತ್ರಪಿಂಡ ಮತ್ತು ಶ್ವಾಸಕೋಶಗಳ ರೂಪರಚನೆ. |
| ದಿನ-43 | ವಿದ್ಯುತ್ತಿನ ಮೆದುಳಿನ ಅಲೆಗಳನ್ನು ದಾಖಲಿಸಬಹುದು |
| ದಿನ-56 | ಎಲ್ಲ ಅವಯವಗಳು ಕ್ರಿಯಾಶೀಲವಾಗಿವೆ. ಬೆಳವಣಿಗೆ ಮತ್ತು ಪಕ್ವತೆ, ಇವುಗಳೆಲ್ಲ ಈಗ ಸಂಭವಿಸುತ್ತಿವೆ ಮಗು ವಯಸ್ಕಾನಾಗಲು ಬೆಳೆಯುವಂತೆ ಅದೇ ರೀತಿಯಲ್ಲಿ ಬೆಳೆಯುತ್ತಿದೆ. |
| ದಿನ-65 | ಮಗು ಮುಷ್ಟಿ ಕಟ್ಟಬಲ್ಲುದು, ತನ್ನ ಅಂಗೈಯನ್ನು ತಟ್ಟಿ ವಸ್ತುವೊಂದನ್ನು ಹಿಡಿದುಕೊಳ್ಳಬಲ್ಲುದು. ಹಾಗೂ ಹೊಟ್ಟೆಯೊಳಗೆ ಕೆಳಕ್ಕೆ ಧುಮುಕಲೂಬಹುದು. ಈ ಎಲ್ಲ ಚಲನಗಳಲ್ಲಿ ಮೊಂದಾಣಿಕೆಯಿರುತ್ತದೆ. |
| ವಾರ-16 | ಮಗು ತನ್ನ ಹುಟ್ಟಿನ ಅರ್ಧ ಉದ್ದ ಮತ್ತು ಅದರ ಹೃದಯ ಪ್ರತಿದಿನ 50 ಪಿಂಟ್ |

ರಕ್ತವನ್ನು ಚಿಮ್ಮುತ್ತದೆ.

---

ವಾರ-20 ತಲೆಯಲ್ಲಿ ಕೂದಲು ಕಾಣಿಸಿಕೊಳ್ಳುತ್ತದೆ ತೂಕ-2ಪೌಂಡು, ಎತ್ತರ.12 ಅಂಗುಲ

---

ವಾರ-28 ಕಣ್ಣು ತೆರೆಯುತ್ತದೆ. ಮಗು ತಾಯಿಯ ಜೀರ್ಣಕ್ರಿಯಾ ವಿಧಾನವನ್ನು, ಹೃದಯ ಬಡಿತವನ್ನು ಕೇಳಬಲ್ಲುದು, ಬ್ರಿಟನ್‌ನಲ್ಲಿ ಸಾಮಾಜಿಕ ಗರ್ಭಪಾತವನ್ನು ಈ ಕಾಲದವರೆಗೆ ನಡೆಸಬಹುದು ಮತ್ತು ಯಾವುದೇ ಕಾರಣಕ್ಕಾಗಿ ಭಾರತ ಮೊದಲಾದ ದೇಶಗಳಲ್ಲಿ ನಡೆಸಬಹುದು.

---

ವಾರದ-36 ಹುಟ್ಟು ಚೆನ್ನಾಗಿ ಮುಂದುವರೆದ ಕಾರ್ಯವಿಧಾನದಲ್ಲಿ ಇನ್ನೊಂದು ಪಟ್ಟ.

---

## ಹುಟ್ಟು-ವಿಳಾಸದ ಒಂದು ಬದಲಾವಣೆ

ವೀರ್ಯಾಣು ಮತ್ತು ಅಂಡಾಣು ಇವು ಸ್ವತಃ ಮನುಷ್ಯವಲ್ಲ, ಅವು ಏಕೀಕರಿಸುವವರೆಗೆ ಕೆಲವು ಜನ ಈ ಕೋಶವನ್ನು ಕುರಿತು ವಾದಮಾಡುವುದನ್ನು ಕೇಳಿದಾಗ ಇದು ಅತ್ಯಂತ ಕುತೂಹಲಕಾರಿ. ಅವರೆಡೂ ಒಟ್ಟುಗೂಡಿದ ತಕ್ಷಣ ಅವರೆಡೂ ಪರಸ್ಪರ 'ಜೀವಂತ'ವಾಗಿ ಹತ್ತಿಕೊಳ್ಳುತ್ತವೆ, ಚೈನೀಯರಂತೆ ನಾವೂ ಕೂಡ ಈ ಬದುಕನ್ನು ಕಾಲಗಣನೆಯೆಯ ಪ್ರಕಾರ ಲೆಕ್ಕ ಹಾಕಬೇಕು. ಹುಟ್ಟಿನ ಮೂರು ತಿಂಗಳ ನಂತರ ಚೀನೀಯರು ಮಗುವಿನ ಮೊದಲ ಹುಟ್ಟು ಹಬ್ಬವನ್ನು ಆಚರಿಸುತ್ತಾರೆ. ಠಾಕೂರರು ಹೇಳಿದರು ಪ್ರತಿಯೊಂದು ಮಗು ಹುಟ್ಟಿದಾಗಲೂ ಅದು ದೇವರು ಮನುಷ್ಯನಲ್ಲಿ ಇನ್ನು ನಂಬಿಕೆ ಇಟ್ಟಿದ್ದಾನೆ ಎಂಬುದರ ಗುರುತು ಎಂದು.

## ಗರ್ಭಪಾತ ಹಿಂಸೆಯ ಒಂದು ಕ್ರಿಯೆ

ಭಾರತ ಅಹಿಂಸೆಯ ರಾಷ್ಟ್ರ. ಮಹಾತ್ಮಗಾಂಧಿ ಗರ್ಭಪಾತದ ಬಗ್ಗೆ ಹೀಗೆ ಹೇಳಿದ್ದಾರೆ. ''ಬೇಡದ ಮಕ್ಕಳನ್ನು ಹೊರತರುವುದು ಪಾಪ. ಆದರೆ ಒಬ್ಬನ ಸ್ವಂತ ಕ್ರಿಯೆಯ ಪರಿಣಾಮವನ್ನು ತಪ್ಪಿಸುವುದು ಮಹಾಪಾಪ ಎಂದು ನನ್ನ ಅನಿಸಿಕೆ''

ಗರ್ಭಪಾತ ಹಿಂಸೆಯ ಒಂದು ಕ್ರಿಯೆ. ಬಲವಂತ ಪಡಿಸಿದ ಗರ್ಭಪಾತ ತನ್ನದೇ ಆದ ಪಾರ್ಶ್ವಿಕ ಪರಿಣಾಮಗಳನ್ನು, ತೊಡರುಗಳನ್ನು ಹೊಂದಿರುತ್ತದೆ. ಸೋಂಕಂಟುವುದರ ಜೊತೆಗೆ, ರಕ್ತಸ್ರಾವ ಎಷ್ಟೋವೇಳೆ ಸಾವಿನಲ್ಲಿ ಕೊನೆಗೊಳ್ಳುತ್ತದೆ. ಮತ್ತು ಕುಸಿತ ಹಾಗೂ ಮನಸ್ಸಿನ ಒಡೆತದ ಅಂಥ ಮಾನಸಿಕ ತೊಡರುಗಳು ಸಂಭವಿಸಬಹುದು. ಅನೇಕ ತರುಣ ಸ್ತ್ರೀಯರನ್ನು (ಸಂಯುಕ್ತ ರಾಜ್ಯದಲ್ಲಿ ಮೂರನೆಯ ಒಂದು ಭಾಗ) ಬಂಜೆಯರನ್ನಾಗಿ ಮಾಡುತ್ತಾರೆ.

''ಹೆಂಗಸಿಗೆ ತನ್ನ ಗರ್ಭದಾರಣೆಯೊಂದಿಗೆ ಮುಂದುವರಿಯುವುದು ಬಲವಂತದ ಗರ್ಭಪಾತಕ್ಕಿಂತ ಹೆಚ್ಚು ಕ್ಷೇಮಕರ ಮತ್ತು ಆರೋಗ್ಯಕರ. ಆದ್ದರಿಂದ ನಾವು ಜನಕ್ಕೆ ಅವರ ಆರೋಗ್ಯದ ಮತ್ತು ಕಲ್ಯಾಣದ ದೃಷ್ಠಿಯಿಂದ ಗರ್ಭಪಾತದ ಅಪಾಯಗಳ ಬಗ್ಗೆ ತಿಳಿವಳಿಕೆ ಶಿಕ್ಷಣವನ್ನು ಕೊಡೋಣ''

## ಸಾಮಾನ್ಯ ಪ್ರಶ್ನೆಗಳು ಮತ್ತು ಉತ್ತರಗಳು

ಅಂತರಾಷ್ಟ್ರೀಯ ತಜ್ಞ ಡಾ: ಹರ್‌ಬರ್ಟ್ ರತ್ನರ್ ಎಂ. ಡಿ. ಅವರೊಡನೆ ಒಂದು ಸಂದರ್ಶನ

1. ಮಾನಭಂಗ ಹಟಾತ್‌ಸಂಭೋಗ ಆಗಾಗ ಗರ್ಭದಾರಣೆಯಲ್ಲಿ ಪರಿಣಮಿಸುತ್ತದೆಯೇ ?

ಈ ಬಗ್ಗೆ ಏನಾದರೂ ಅಂಕೆಸಂಖ್ಯೆಗಳಿವೆಯೇ ? ವಾಸ್ತವ ಮಾನಾಪಹಾರದಿಂದ ಗರ್ಭಧಾರಣೆ ತುಂಬ ವಿರಳ. ಸುಮಾರು 250ರಲ್ಲಿ ಒಂದೇ ಒಂದು ಮಾತ್ರ ಅಥವಾ ಹೆಚ್ಚಿನ ಸಂಭೋಗ ಕ್ರಿಯೆಗಳು ಯಶಸ್ವಿ ಗರ್ಭಧಾರಣೆಯನ್ನುಂಟು ಮಾಡಬಲ್ಲುದು. ಇದೊಂದು ಅತ್ಯಂತ ಆಸಕ್ತ ಅಂಕೆಸಂಖ್ಯೆ : ಜಾನ್ಸ್ ಹಾಪ್‌ಕಿನ್ಸ್ ಅವರ ಪ್ರಕಾರ ಕಂಡು ಬರುವಂಥದು. ಇದು ಒಂದು ಅಂಶವನ್ನು ದೃಢಪಡಿಸುತ್ತದೆ, ಏಕೆಂದರೆ ಮನುಷ್ಯ ಎಲ್ಲ ಪ್ರಾಣಿ ವರ್ಗಗಳಲ್ಲಿ ಸಹಜವಾಗಿ ಅತಿಗೊಡ್ಡಾದ ಪ್ರಾಣಿ. ನಮಗೆ ತಿಳಿದಂತೆ ಬಂಜೆತನ ಒಂದು ದೊಡ್ಡ ಮಾನವನ ವೈದ್ಯಕೀಯ ಸಮಸ್ಯೆ. ಗರ್ಭ ನಿಯಂತ್ರಣ ಚಿಕಿತ್ಸಾಲಯಗಳಿಗೆ ತುಂಬಿಕೊಳ್ಳುವ ಅನೇಕ 20ರ ಸುಮಾರಿನ ವಯಸ್ಸಿನ ಜನ ಸ್ತ್ರೀಯರು, ತಮ್ಮ 30-39 ವಯಸ್ಸಿನಲ್ಲಿ ಜನನ ನಿಯಂತ್ರಣ ಚಿಕಿತ್ಸಾಲಯಗಳಿಗೆ ಹೆಚ್ಚು ಸಂಖ್ಯೆಯಲ್ಲಿ ವಿಶೇಷವಾಗಿ ಹೋಗುತ್ತಾರೆ, ಇತ್ತೀಚಿನ ವೈದ್ಯಕೀಯ ಸಂಖ್ಯೆಗಳು ( 1982) ತೋರಿಸುವುದೇನೆಂದರೆ ಕೇವಲ ಶೇಕಡ 2ರಷ್ಟು ಗರ್ಭಪಾತಗಳು, ವೈದ್ಯಕೀಯ ಕಾರಣಗಳಿಂದ ಅಥವಾ ಮಾನಭಂಗ ಕಾರಣಗಳಿಂದ ನಡೆಯುತ್ತವೆ.

ಸಾಮಾನ್ಯವಾಗಿ ಅವಿವಾಹಿತ ಮಹಿಳೆ ಒಬ್ಬಳು ವೈದ್ಯಾಲಯಕ್ಕೆ ಬಂದು ತಾನು ಒಮ್ಮೆ ತಪ್ಪಿದಾಗ, ಮಾನಭಂಗಕ್ಕೆ ಎಡೆಯಾದಾಗ ಅಥವಾ ಇತರ ಕಾರಣದಿಂದ ಗರ್ಭಧರಿಸಿದೆ ಎಂದು ಹೇಳಿದರೆ, ಅನುಕಂಪದ ವಿಚಾರಣೆ, ಅವಳು ಅನೇಕ ಸಲ ಸಂಭೋಗ ಹೊಂದಿದ್ದಳು ಅನೇಕ ತಿಂಗುಳಗಳವರೆಗೆ ವಾರಕ್ಕೆ ಹಲವಾರು ಸಲ ಸಂಭೋಗಿಸಿದ್ದಳು ಎಂಬುದು ಕಂಡುಬರುತ್ತದೆ. ಹಾಗಿದ್ದರೂ ಕಾನೂನುಗಳು ಬದಲಾವಣೆಯಾದಾಗ ಮಾನಭಂಗದಿಂದಾದ ಗರ್ಭಧಾರಣೆಯ (ಹಕ್ಕು) ಕೋರಿಕೆಗಳು ಜ್ಯೋತಿಷ್ಯ ಸಿದ್ಧಾಂತದ್ದೆಂದು ನಾನು ಖಂಡಿತವಾಗಿ ಹೇಳುತ್ತೇನೆ.

2. ವೈದ್ಯರು ಒಂದು ಗುಂಪಾಗಿ ಗರ್ಭಪಾತದ ಪರವಾಗಿದ್ದಾರೆಯೆ ? ಇಲ್ಲ. ಗರ್ಭಪಾತದ ಕಾನೂನುಗಳನ್ನು ಬದಲಾಯಿಸುವ ದೊಡ್ಡ ಹೋರಾಟ, ಚೆನ್ನಾಗಿ ಧನಸಹಾಯ ಪಡೆದ

ಧರ್ಮ ಯುದ್ಧ ನಾಯಕರ ಸಣ್ಣ ತಂಡದಿಂದ ಆರಂಭವಾಗುತ್ತದೆ. ಏಕೆಂದರೆ ಅವರು ಧೈರ್ಯದ ಹೊಸ ಪ್ರಪಂಚಕ್ಕೆ ನಮ್ಮನ್ನು ಕರೆದೊಯ್ಯುವ ಮತ್ತು ನಮಗೆ ಶಿಕ್ಷಣ ಕೊಡುವ ಬಲವತ್ತರವಾದ ಅಪೇಕ್ಷೆಯನ್ನು ಹೊಂದಿರುವುದರಿಂದ. ಈ ಮೇಲ್ಮಟ್ಟದ ವರ್ಗದ ಧರ್ಮಯೋಧರು ಕೆಲವು ವೈದ್ಯಕೀಯ ತಂಡಗಳ ಮುಂದಾಳುಗಳನ್ನು ಪರಿವರ್ತಿಸಿದ್ದರೂ, ವೈದ್ಯಕೀಯ ಚಿಕಿತ್ಸಕರು ಗರ್ಭಪಾತವನ್ನು ಬೆಂಬಲಿಸುವ ಅಲ್ಪ ಸಂಖ್ಯಾತರಾಗಿದ್ದಾರೆ.

ಔಷಧದ ಸಮಸ್ತ ಪರಂಪರೆ, ಗರ್ಭಧರಿಸಿದ ಕಾಲದಿಂದ ಹಿಡಿದು 'ಜೀವ'ವನ್ನು ಗೌರವಿಸುವುದೇ ಆಗಿದೆ. ಗರ್ಭಪಾತದ ವಿರುದ್ಧ ಗಟ್ಟಿಯಾಗಿತಿಳಿಸಿ ಹೇಳುವ 'ಹಿಪ್ಪೋಕ್ರ್ಯಾಟಿಕ್' ಪ್ರತಿಜ್ಞೆಯಲ್ಲಿ ಇದು ಪ್ರತಿಬಿಂಬ ತವಾಗಿದೆ. ಹಿಂದಿನ ಎರಡನೆಯ ಮಹಾಯುದ್ಧದ ಹಿಪ್ಪೋಕ್ರ್ಯಾಟಿಕ್ ಪ್ರತಿಜ್ಞೆಯ ಜನೀವಾ ಭಾಷಾಂತರದಲ್ಲೂ ಇದೇ ರೀತಿಯ ದೃಷ್ಟಿಕೋನ ಸ್ಪಷ್ಟವಾಗಿಯೇ ಇದೆ. ''ಗರ್ಭಧರಿಸಿದ ಕ್ಷಣದಿಂದ 'ಪ್ರಾಣ'ವನ್ನು ಗೌರವಿಸುವುದೇ ಮುಖ್ಯ. 'ಸಂಯುಕ್ತ ರಾಷ್ಟ್ರ'ದ ಘೋಷಣೆಯಲ್ಲೂ ಇನ್ನು ಹುಟ್ಟದೇ ಇರುವ ಮಗುವನ್ನು ರಕ್ಷಿಸಬೇಕು ಎಂದೇ ಇದೆ.

3. ಆಧುನಿಕ ಔಷಧ ಭ್ರೂಣದ ಬಗ್ಗೆ ಏನನ್ನು ಕಲಿಸುತ್ತದೆ? ಅದು ಯಾವಾಗ ವ್ಯಕ್ತಿ?

ಮಾನವ ಪ್ರಾಣಿ ವೀರ್ಯಾಣು ಅಂಡದೊಡನೆ ಕೂಡಿದ ತತ್‌ಕ್ಷಣ ಅಸ್ತಿತ್ವಕ್ಕೆ ಬರುತ್ತದೆ, ಎಂಬುದು ಈಗ ಪ್ರಶ್ನಾತೀತವಾದ ಖಚಿತತೆ, ಇದು ನಮಗೆ ಹೇಗೆ ಗೊತ್ತಾಗುತ್ತದೆ? ಜನನದ ಬಗ್ಗೆ ನಾವು ತಿಳಿದಿರುವ ಎಲ್ಲದರಿಂದ ವಿರ್ಯಾಣು ಮತ್ತು ಅಂಡ ಏಕವಾಗಿ ಯಾವಾಗ ಸೇರುತ್ತದೆ ಎಲ್ಲ ಲಕ್ಷಣಗಳು ಎಂದರೆ ಮಾನವ ಪ್ರಾಣಿಯನ್ನು ವ್ಯಕ್ತಿಯನ್ನಾಗಿ ಮಾಡುವ ಕಣ್ಣಿನ, ಕೂದಲಿನ ಚರ್ಮದ-ಬಣ್ಣದಂಥವುಗಳನ್ನು ಮತ್ತು ಅಪೂರ್ವ ವ್ಯಕ್ತಿತ್ವವನ್ನು ಸ್ಥಾಪಿಸಿ ಬಿಡುತ್ತವೆ.

4. ಔಷಧ ಮಾತ್ರ ಬಲಾತ್ಕಾರದ ಗರ್ಭಪಾತದ ಸಮರ್ಥನೆಯನ್ನು ಬೆಂಬಲಿಸುವುದಿಲ್ಲ ಎಂಬುದು ನಿಮ್ಮ ಅರ್ಥವೆ?

ಖಂಡಿತ. ನನ್ನ ವೈದ್ಯಕೀಯ ಸಹಪಾಠಿಗಳು ಖಂಡಿತವಾಗಿ ಒಪ್ಪಿಕೊಳ್ಳುತ್ತಾರೆ, ಮತ್ತೊಂದು ಮಾನವ ಜೀವಿಯನ್ನು ಕೊಲ್ಲುವ ಹಕ್ಕನ್ನು ನಿರ್ಧರಿಸುವುದು ಔಷಧಕ್ಕಿಂತ ಅದು ಕಾನೂನಾಗಲಿ ಅಥವಾ ದೈವಜ್ಞಾನವಾಗಲಿ ಶ್ರೇಷ್ಠವಾದ ವಿಜ್ಞಾನದಿಂದಲೇ ನಿರ್ಧಾರವಾಗಬೇಕು. ಔಷಧದ ದೃಷ್ಟಿಯಿಂದಲೇ ಹೇಳುವುದಾದರೆ, ನಾವು ವೈದ್ಯರು ಒಂದೇ ಸಾಕ್ಷಿಯನ್ನು ಕೊಡಬಹುದು, ನಾವು ಮುಗ್ಧ ಮಾನವ ಜೀವಿಯೊಡನೆ ವ್ಯವಹರಿಸುತ್ತಿದ್ದೇವೆ. ಅದು ಯಾವ ಮಾನವ ಜೀವಿ ಬದುಕಬೇಕು, ಯಾವುದು ಬದುಕಬಾರದು ಎಂಬುದನ್ನು ನಿರ್ಣಯಿಸುವ ಹಕ್ಕು ವೈದ್ಯಕೀಯ ಅಧಿಕಾರದಿಂದ ಅಲ್ಲ, ಎಂದು.

5. ಬಸಿರು ತಾಯಿಯ ಮಾನಸಿಕ ಅಥವಾ ಶಾರೀರಕ ಆರೋಗ್ಯವನ್ನು ಹೆದರಿಸಬಲ್ಲುದೆ?

ತಾಯಿ ಪೌಷ್ಟಿಕವಾಗಿ ನಿತ್ರಾಣಗೊಂಡರೆ, ಅದನ್ನು ಸೂಕ್ತ ಮತ್ತು ಯುಕ್ತ ಆಹಾರಗಳಿಂದ, ಖನಿಜ (ಧಾತು) ವಸ್ತುಗಳಿಂದ ವಿಟಮಿನ್‌ಗಳಿಂದ ಅಥವಾ ಅಗತ್ಯವಾದ ಇತರೇ ಯಾವುದರಿಂದಲಾದರೂ, ಸರಿಪಡಿಸಬಹುದುದೇ ? ಇದಕ್ಕೆ ಪರಿಹಾರ, ಸಾಕಷ್ಟು ಸಾಮರ್ಥ್ಯವನ್ನು ಸಂಗ್ರಹಿಸಲು ವೈಜ್ಞಾನಿಕ ಸಾಮರ್ಥ್ಯದ ಬಗ್ಗೆ ಇಂದು ಯಾವುದೇ ಪ್ರಶ್ನೆ ಇಲ್ಲ.

ಹೆಂಗಸೊಬ್ಬಳು ವೈದ್ಯರ ಬಳಿಗೆ ಬಂದು ''ಇನ್ನೊಂದು ಮಗುವನ್ನು ಪಡೆಯುವುದೆಂದರೆ ಅದು ನನ್ನನ್ನು ಕೊಲ್ಲುತ್ತದೆ'' ಎಂದು ಹೇಳಿದರೆ ಮಗುವನ್ನುಳಿದು ಸ್ವತಂತ್ರವಾದ ತಾಯಿಯಲ್ಲಿ ಅಂದು ಹಾಜರಿರುವ ಸ್ಥಿತಿ ಎಂದು ನಾವು ಕಾಣಲೇ ಬೇಕಾಗುತ್ತದೆ.

ಅಂಥ ತಾಯಿ ಆ ವೇಳೆಗಾಗಲೇ ತನ್ನ ಗಂಡನೊಡನೆ ಮತ್ತು ಮಕ್ಕಳೊಡನೆ ಕಡೆಗೆ ಜೀವನದ ಬಗ್ಗೆಯೇ ಮನೋವಿಕಾರದ ಮತ್ತು ಮಾನಸಿಕ ತೊಡಕುಗಳನ್ನು ಹೊಂದಿರುತ್ತಾಳೆ. ಗರ್ಭಧಾರಣೆಯಲ್ಲಿ ಬಿಡುಗಡೆ ಹೊಂದಿದ ಆತಂಕದ ಹೆಂಗಸು, ಗರ್ಭಧರಿಸದೆಯೇ ಬಿಡುಗಡೆ ಹೊಂದಿದ ಆತಂಕವನ್ನು ಹೊಂದಿರುತ್ತಾಳೆ, ವಾಸ್ತವವಾಗಿ-ಬಸಿರು ಅಧಿಶಾಸ್ತ್ರದ (Psychiatric) ರೋಗವನ್ನು ಕಡಿಮೆ ಮಾಡುತ್ತದೆ ಎಂಬುದನ್ನು ತೋರಿಸಲು ಹಲವಾರು ಅಧ್ಯಯನಗಳು ಬಂದಿವೆ.

ಮುಖ್ಯವಾದ ಅಂಶ ಎಂದರೆ ಹೆಂಗಸಿನ ಸಮಸ್ಯೆಗೆ ಪರಿಹಾರ ಅವಳು ತನ್ನ ಮಗುವನ್ನು ಕೊಲ್ಲುವುದಿಲ್ಲ ನಾವು ಈ ಮಗುವನ್ನು ಬಿಟ್ಟುಬಿಟ್ಟರೆ ಅವಳ ಇತರ ಮಕ್ಕಳು ಅವಳನ್ನು ಶ್ರಮಿಷ್ಟಳನ್ನಾಗಿ ಮಾಡುವುದನ್ನು ದಾರಿಯಾಗುವ ಸಂಭವವೂ ಉಂಟು. ಆದ್ದರಿಂದ ನಾವು ಅವುಗಳನ್ನು ಬಿಟ್ಟು ಬಿಡಬೇಕಾಗುತ್ತದೆ.

6. ''ಗರ್ಭಪಾತಗಳು ಲಾಭದಾಯಕಗಳೂ ಕೂಡ'' ಎಂಬ ನಿಮ್ಮ ಹೇಳಿಕೆಯನ್ನು ವಿಸ್ತರಿಸಿ ಹೇಳಬಲ್ಲಿರಾ ?

ನಾವು ಅನಾವಶ್ಯಕ ಶಸ್ತ್ರ ಚಿಕಿತ್ಸೆಗಳಿರುವುದನ್ನು ಅನುಭವಿಸಿದ್ದೇವೆ. ಹಣ ಮಾಡುವವವರ ಜೊತೆಗೆ ಮತ್ತೇನೇ ಬರುವುದಿದ್ದರೂ ಅದು ವೈದ್ಯಕೀಯ ವೃತ್ತಿಯನ್ನು ಅತ್ಯಂತವಾಗಿ ಮೊಸಗೊಳಿಸ ತಕ್ಕಂಥದು. ಇಷ್ಟೆಲ್ಲ ಹೇಳಿದರೂ ವೈದ್ಯರಾದ ನಾವು 'ಮಾನವ ಜೀವಿಗಳೇ. ಮತ್ತು ನಾವು ಚಾರ್ವಾಕ ಸಮಾಜದಲ್ಲಿಯೇ ಮುಳುಗಿ ಬಿಟ್ಟದ್ದೇವೆ.

ಒಬ್ಬ ಜಪಾನೀ ಪ್ರೊಫೆಸರ್ ನನಗೆ ಈಚೆಗೆ ಹೇಳಿ : ಅವನ ದೇಶ : ಸುಲಭವೂ-ಹಗುರವೂ ಆದ ಕಾನೂನುಬದ್ಧ ಗರ್ಭಪಾತಗಳ ಅಪಾಯಗಳನ್ನು ಈಗ ಗುರುತಿಸಿದ್ದರೂ ಅದಕ್ಕೆ ಕಾನೂನುಗಳನ್ನು ಬಿಗಿಗೊಳಿಸುವ ಅತಿಬಲಿಷ್ಠ ವಿರೋಧ ಸ್ತ್ರೀರೋಗ ತಜ್ಞರಿಂದಲೇ ಬರುತ್ತಿದೆ. ಅದು ಒಳ್ಳೆಯದು ಎಂದು ಅವರು ಯಾವತ್ತೂ ಹೇಳಿಲ್ಲ. ಏಕೆಂದರೆ-ಇದು ಮುಖ್ಯ-ಜಪಾನಿನಲ್ಲಿ ಗರ್ಭಪಾತವನ್ನು ಗರ್ಭನಿರೋಧಕಗಳಿಗೆ

ಹೋಲಿಸಿದರೆ ಹೆಚ್ಚು ತೀವ್ರಗತಿಯಲ್ಲಿ ಗರ್ಭನಿಯಂತ್ರಣವನ್ನು ಸುಲಭ ರೀತಿಯಲ್ಲಿ ಬಳಕೆಗೆ ಬರುತ್ತಿರುವುದು ಕಂಡುಬರುತ್ತಿರುವುದರಿಂದ.

ಅದು ಉದಾಹರಣೆಗೆ ಅಪರಾಧಿಕ ಗರ್ಭಪಾತಗಳನ್ನು ಕಡಿಮೆ ಮಾಡುತ್ತವೆಯೆ ? ಹಾಗೆ ಮಾಡುತ್ತದೆ ಎಂಬುದನ್ನು ತೋರಿಸಲು ಯಾವುದೇ ಸಾಕ್ಷ್ಯಗಳಿಲ್ಲ. ವಾಸ್ತವವಾಗಿ, ಸಮಾಜ, ಗರ್ಭಪಾತವನ್ನು ಸಾಂಸ್ಕೃತಿಕವಾಗಿ ಸ್ವೀಕರಿಸಬಲ್ಲದುದನ್ನಾಗಿ ಮಾಡುತ್ತಿರುವ ಕಾರಣ ಅದು ಅಪರಾಧಿಕ ಗರ್ಭಪಾತಗಳನ್ನು ಹೆಚ್ಚಿಸುತ್ತದೆ ಎಂದು ನಿರೀಕ್ಷಿಸಬಹುದು.

## ಒಬ್ಬ ಮುಹಮ್ಮದೀಯ ವೈದ್ಯನಿಂದ

'ನಾನು ಯಾವುದೇ ರೋಗಿಗೆ ಯಾವುದೇ ರೀತಿಯ ವಿಷಪೂರ್ಣ ಔಷಧವನ್ನು ಕೊಡುವುದಿಲ್ಲ. ಮೊದಲು ಅವರು ಕೇಳಿದರೂ ಅಷ್ಟೇ ಅಲ್ಲ ಅವರಿಗೆ ಹಾಗೆ ಸಲಹೆಯನ್ನು ಕೊಡುವುದಿಲ್ಲ ಮತ್ತು ಗರ್ಭಪಾತಕ್ಕೆ ಸಹಾಯವನ್ನು ಮಾಡುವುದಿಲ್ಲ'.

-ಮಹಮ್ಮದೀಯ ವೈದ್ಯನ ಪ್ರತಿಜ್ಞೆ

## ಗರ್ಭಪಾತ - ಜೀವನವನ್ನು ತೆಗೆದುಕೊಳ್ಳುತ್ತದೆ

'Afortion' ಎಂಬ ಲ್ಯಾಟಿನ್ ಭಾಷೆಯ ಎರಡು ಪದಗಳಿಂದ ಸಿದ್ಧವಾಗಿದೆ. ' Ab' ಎಂದರೆ 'off' ಅಥವಾ 'away' (off - ಎಂದರೆ ಹೋಗು ಆಚೆಗೆ ಕಳಿಸು away ಎಂದರೆ ದೂರ) oriri ಎಂದರೆ to be form ಎಂದರೆ ಹುಟ್ಟುವುದು. ಆದ್ದರಿಂದ 'Afortion' ಎಂಬುದು ಅರ್ಥ 'ತೆಗೆದುಕೊಂಡು ಹೋಗುವುದು' ಮಾನವ ಜೀವನವನ್ನು ತೆಗೆದುಕೊಂಡು ಹೋಗುವುದು. ಅದು ಘಟನೆಗಳ ಸಾಮಾನ್ಯ ರೀತಿಯಲ್ಲಿ 'ಹುಟ್ಟು' ಎಂದು.

ಗರ್ಭಪಾತ ಸಹಜವಾಗಿ ಉಂಟಾಗುತ್ತದೆ ಅಥವಾ ಇದ್ದಕಿದ್ದಂತೆ ಸಂಭವಿಸುತ್ತದೆ ಎಂದು ಪರಿಗಣಿಸಬಹುದು. ಯಾವುದೇ ಅಡೆತಡೆಯಿಲ್ಲದೆ ಅಥವಾ ಪ್ರಚೋದನೆಯಿಲ್ಲದೆ, 'ಗರ್ಭಸಂಬಂಧಿ' (Conceptons) ಯನ್ನು ಹೊರಹಾಕಿದಾಗ, ಸುಮಾರು 501/2 ಬಸಿರುಗಳು ಇದ್ದಕ್ಕಿದಂತೆ ಗರ್ಭಪಾತದಿಂದ ಅಥವಾ ಗರ್ಭಸ್ರಾವದಿಂದ ಕೊನೆಗೊಳ್ಳುತ್ತವೆ, ಆದ್ದರಿಂದ ಭ್ರೂಣವು ಆರೋಗ್ಯಕರವಾಗಿಲ್ಲದಿದ್ದಾಗ ಅದನ್ನು ಗರ್ಭಸ್ರಾವ ಎಂದು ಹೇಳುವುದೇ ಸರಿ.

## ಕೃತಕ ಅಥವಾ ಬಲವಂತದ ಗರ್ಭಪಾತ

ಇದು ಒಂದು ಗರ್ಭದ ಕೊಲೆ, ಮಗುವನ್ನು ಕೊಲ್ಲುವ ಪ್ರಧಾನ ಉದ್ದೇಶದಿಂದ ಅದರ ಜೀವನವನ್ನು ತೆಗೆದು ಹಾಕುವುದು. ಇದನ್ನು ''ಚೋದನೆ ಅಥವಾ ಕೃತಕ''

ಮಾರ್ಗದಿಂದ ಮಾಡಲಾಗುತ್ತದೆ. ಗರ್ಭಪಾತವನ್ನು ಯಾವುದೇ ಕಾನೂನಿನ ಅಥವಾ ವೈದ್ಯಕೀಯ ಇಲ್ಲದೆ ಬಲವಂಥ ಪಡಿಸಿದರೆ ಅದು ಅಪರಾಧಿಕ ಬಗೆಯದಾಗಬಹುದು. ಅದು ತಾಯಿಯ ಕುಟುಂಬದ ಅಥವಾ ಗಂಡನ ಬಲಾತ್ಕಾರದಿಂದ ತಾಯಿಯು ಒಂದು ಒತ್ತಡಕ್ಕೆ ಒಳಗಾಗುವ ಕಾರಣದಿಂದರಬಹುದು.

ಕೆಲವರು ಅವಿವಾಹಿತ ತಾಯಂದಿರು ಇದ್ದಾರೆ, ಅವರ ಸಂಖ್ಯೆ ದುರದೃಷ್ಟದಿಂದ, ಹೆಚ್ಚಿನ ಅನುಮತಿ ದೊರಕುವುದರಿಂದ, ತಪ್ಪು ಮೌಲ್ಯಗಳಿಂದ ಮತ್ತು ಸರಿಯಾದ ಮಾರ್ಗದರ್ಶನದ ಅಭಾವದಿಂದ ಮತ್ತು ಅಜ್ಞಾನದಿಂದ, ಹೆಚ್ಚುತ್ತಿದೆ. ಈ ಹೆಂಗಸರನ್ನು ಪೋಷಿಸಬೇಕು, ಭಾವುಕವಾಗಿ ಪುನರ್ವಸತಿಗೊಳಿಸಬೇಕು ಮತ್ತು ಆರೋಗ್ಯ ಪೂರ್ಣ ಮಗುವನ್ನು ಪಡೆಯುವಂತೆ ಸಹಾಯ ಮಾಡಬೇಕು. ಏಕೆಂದರೆ ಅನಂತರ ಅದನ್ನು ದತ್ತು ಸ್ವೀಕಾರಕ್ಕಾಗಿ, ಮಕ್ಕಳಿಗಾಗಿ ಕಾದಿರುವ 'ಶಿಶುಗೃಹ'ಗಳಿಗೆ ತಲುಪಿಸುವ ಸಾಧ್ಯತೆ ಇರುವುದರಿಂದ, ಕೆಲವು ಜನ ಹೆಂಗಸರು ಮಗುವನ್ನು ತಾವೇ ಇಟ್ಟುಕೊಂಡು ಅದರ ಬೆಳವಣಿಗೆ ಬೆಂಬಲ ಪಡೆಯಲು ಉದ್ಯೋಗವನ್ನು ಕೈಕೊಳ್ಳಬಹುದು.

ಕೆಲವರು ಮಕ್ಕಳನ್ನು ದತ್ತು ತೆಗೆದುಕೊಳ್ಳಲು ಹೆದರಬಹುದು. ಕಾರಣವಿಷ್ಟೆ ಅವುಗಳ ತಂದೆ ತಾಯಿಗಳು ಅಪರಿಚಿತರು ಅಥವಾ ಅಪಾರಾಧಿಗಳೋ ಇನ್ನಾರೋ ಆಗಿರಬಹುದು. ಈ ಪರಿಗಣನೆ ಆಧಾರ ರಹಿತವಾದುದು, ಪ್ರೀತಿಸುವ ಪೋಷಕರು ಮತ್ತು ಸೂಕ್ತ ವಾತಾವರಣ ಒಳ್ಳೆಯದನ್ನು ಮಾಡಬಹುದು. ಈ ಮಕ್ಕಳಂತೆಯೇ. ವಾತಾವರಣ ದುಷ್ಟವಾಗಿದ್ದರೆ ಕೆಟ್ಟ ಚಾಳಿಗಳನ್ನು ಕಲಿತುಕೊಳ್ಳಬಹುದು, ಅವನ್ನೇ ಬೆಳೆಸಿಕೊಳ್ಳಲೂಬಹುದು.

ಸಂಯುಕ್ತ ಸಂಸ್ಥೆ ಮಗುವಿನ ಹಕ್ಕುಗಳನ್ನು ಕುರಿತು ಒಂದು ಪೋಷಣೆಯಲ್ಲಿ ಹೀಗೆ ಹೇಳಿದೆ. 'ಮಗು ತನ್ನ ಶಾರೀರಕ ಮತ್ತು ಮಾನಸಿಕ ಅಪಕ್ವತೆಯ ಕಾರಣದಿಂದ ವಿಶೇಷ ರಕ್ಷಣೆಗಳನ್ನು ಮತ್ತು ಎಚ್ಚರಿಕೆಯನ್ನುಕಾನೂನಿನ ಸೂಕ್ತ ರಕ್ಷಣೆಯೊಡನೆ ಬಯಸುತ್ತದೆ. ಹುಟ್ಟಿನ ಮುಂಚೆ ಮತ್ತು ಅನಂತರ'.

## ಹುಟ್ಟದೆ ಇರುವ ಮಗುವಿನ ದಿನಚರಿ

### ಅಕ್ಟೋಬರ್ - 5

ಇಂದು ನನ್ನ ಜೀವ ಆರಂಭವಾಯಿತು. ನನ್ನ ತಂದೆ ತಾಯಿಗಳಿಗೆ ಅದು ಇನ್ನೂ ತಿಳಿದಿಲ್ಲ. ನಾನು ಸೇಬಿನ ಬೀಜದಷ್ಟು ಸಣ್ಣಗಿದ್ದೇನೆ. ಆದರೆ ಅದು ಈಗಾಗಲೇ ನಾನೇ. ನಾನು ಹುಡುಗಿಯಾಗಬೇಕಾದೆ. ನನಗೆ ಕಂದು ಬಣ್ಣದ ಕಣ್ಣುಗಳಿವೆ, ಪ್ರತಿಯೊಂದು ನಿರ್ಧಾರವಾಗುವಷ್ಟರಲ್ಲಿದ್ದರೂ, ನಾನು ಹೂವುಗಳನ್ನು ಪ್ರೀತಿಸುತ್ತೇನೆ.

## ಅಕ್ಟೋಬರ್ - 19

ನಾನು ಸ್ವಲ್ಪ ಬೆಳೆದಿದ್ದೇನೆ. ಆದರೂ ಇನ್ನು ಸಣ್ಣವನಾಗಿಯೇ ಏನೂ ಮಾಡಲಾರದಷ್ಟು ಚಿಕ್ಕವ. ನನ್ನ ತಾಯಿ ನನಗೆ ಸಾಕಷ್ಟು ಎಲ್ಲವನ್ನು ಮಾಡುತ್ತಾಳೆ. ಹಾಗಿದ್ದಾರೂ ನಾನು ಅವಳ ಹೃದಯದ ಕೆಳಗೆ ಇದ್ದೇನೆ, ನನ್ನನ್ನು ಧರಿಸಿದ್ದೇನೆ ಎಂದು ಅವಳಿಗೆ ಇನ್ನೂ ಗೊತ್ತಿಲ್ಲ, ಆದರೆ ಈಗಾಗಲೇ ಅವಳು ನನಗೆ ಸಹಾಯ ಮಾಡುತ್ತಿದ್ದಾಳೆ. ತನ್ನ ರಕ್ತದಿಂದಲೇ ನನಗೆ ಉಣಿಸುತ್ತಿದ್ದಾಳೆ. ಅವಳು ಒಳ್ಳೆಯವಳು.

## ಅಕ್ಟೋಬರ್ - 23

ನನ್ನ ಬಾಯಿ ಈಗ ತಾನೆ ತೆರೆಯುತ್ತಿದೆ. ಸ್ವಲ್ಪ ಯೋಚಿಸಿ, ಇನ್ನೊಂದು ವರ್ಷದಲ್ಲಿ ನಾನು ನಗುತ್ತಿರುತ್ತೇನೆ. ಆಮೇಲೆ ಮಾತನಾಡುತ್ತಿರುತ್ತೇನೆ. ನನ್ನ ಮೊದಲ ಮಾತು ಏನು ಎಂಬುದು ನನಗೆ ಗೊತ್ತು ಅದು ಅಮ್ಮ ಎಂದು.

## ಅಕ್ಟೋಬರ್ - 26

ನನ್ನ ಹೃದಯ ಇಂದು ತನ್ನಷ್ಟಕ್ಕೆ ತಾನೆ ಮಿಡಿಯಲು ಆರಂಭಿಸಿದೆ. ಈಗಿನಿಂದ ಅದು ನನ್ನ ಮುಂದಿನ ಉಳಿದ ಜೀವನದುದ್ದಕ್ಕೂ ಬಡಿಯುತ್ತಲೇ ಇರುತ್ತದೆ. ವಿಶ್ರಾಂತಿಗಾಗಿ ಎಂದೂ ನಿಲ್ಲದೆಯೇ ಬಡಿಯುತ್ತಿರುತ್ತದೆ. ಅನೇಕ ವರ್ಷಗಳ ನಂತರ ಅದು ಆಯಾಸವನ್ನು ಬೆಳೆಸಿಕೊಳ್ಳುತ್ತದೆ. ಅದಾದ ಮೇಲೆ ನಾನು ಸಾಯುತ್ತೇನೆ.

## ನವಂಬರ್ - 2

ಪ್ರತಿ ದಿನವೂ ಸ್ವಲ್ಪ ಸ್ವಲ್ಪ ಬೆಳೆಯುತ್ತಿದ್ದೇನೆ. ನನ್ನ ಕೈಗಳು ಮತ್ತು ಕಾಲುಗಳುರೂಪುಗೊಳ್ಳಲು ಆರಂಭಿಸುತ್ತಿವೆ. ಈ ಕಾಲುಗಳು ನನ್ನನ್ನು ಮೇಲಕ್ಕೆತ್ತಿ ನನ್ನ ತಾಯಿ ತೋಳುಗಳಲ್ಲಿ ಸೇರಿಸುವುದಕ್ಕೆ ಇನ್ನು ಸ್ವಲ್ಪ ಕಾಲ-ದೂರದ ಕಾಲದವರೆಗೆ ನಾನು ಕಾಯಬೇಕು' ನನ್ನ ಕೈಗಳು ಹೂವುಗಳನ್ನು ಆರಿಸುವುದಕ್ಕೆ ಮುಂಚೆ, ನನ್ನ ಅಪ್ಪನನ್ನು ತಬ್ಬಿಕೊಳ್ಳುವುದಕ್ಕೆ ಮುಂಚೆ, ಇನ್ನು ಸಾಕಷ್ಟು ಕಾಲ ಕಾಯಬೇಕು.

## ನವಂಬರ್ - 12

ನನ್ನ ಕೈಗಳ ಮೇಲೆ ಪುಟ್ಟ ಬೆರಳುಗಳು ರೂಪುಗೊಳ್ಳುತ್ತವೆ. ನನಗೆ ಆಶ್ಚರ್ಯ! ಎಷ್ಟು ಸಣ್ಣ ಅವು ! ಅವುಗಳಿಂದ ನನ್ನ ತಾಯಿಯ ತಲೆಗೂದಲನ್ನು ಸವರಲು, ನನಗೆ ಸಾಧ್ಯವಾಗುತ್ತದೆ.

ನವಂಬರ್ - 20

ವೈದ್ಯರು ತಾಯಿಗೆ ಹೇಳಿದರು. 'ಅವಳ ಹೃದಯದ ಅಡಿಯಲ್ಲಿ ನಾನಿದ್ದೇನೆ' ಎಂದು. ಹಾಗೆ ಹೇಳಲು ಅವರಿಗೆ ಇದುವರೆಗೆ ಸಾಧ್ಯವಾಗಿರಲಿಲ್ಲ. ಅವಳಿಗೆ ಎಷ್ಟು ಆನಂದವಾಗಿರಬೇಕು ?

ನವಂಬರ್ - 25

ನನ್ನ ಅಪ್ಪ ಅಮ್ಮ ಬಹುಶಃ ನನಗೊಂದು ಹೆಸರು ಕಂಡು ಹಿಡಿಯಲು ಚಿಂತಿಸುತ್ತಿರಬಹುದು. ಆದರೆ ಅವರಿಗೆ ಎಷ್ಟೊ ಗೊತ್ತಿಲ್ಲ. ನಾನೊಬ್ಬ ಚಿಕ್ಕ ಹೆಣ್ಣು ಎಂಬುದು. ನನ್ನನ್ನು 'ಶಾಂತಿ' ಎಂದು ಕರೆಯಬೇಕೆಂದು ನನಗೆ ಇಷ್ಟ.

ಡಿಸೆಂಬರ್ - 10

ನನ್ನ ಕೂದಲು ಬೆಳೆಯುತ್ತಿದೆ. ಬಹಳ ನುಣುಪಾಗಿದೆ, ಕಾಂತಿಯುತವಾಗಿದೆ, ಹೊಳೆಯುತ್ತಿದೆ. ನನ್ನ ಅಮ್ಮನಿಗೆ ಎಂಥ ಕೂದಲಿದಿಯೋ ? ನನಗೆ ಕೂತೂಹಲ.

ಡಿಸೆಂಬರ್ - 13

ನಾನು ನೋಡಲು ಈಗ ತಾನೆ ಸಾಧ್ಯವಾಗುತ್ತದೆ. ಕತ್ತಲೆ ನನ್ನ ಸುತ್ತಲೂ ತುಂಬಿದೆ. ಅಮ್ಮ ನನ್ನನ್ನು ಈ ಪ್ರಪಂಚಕ್ಕೆ ತಂದಾಗ ಅದು ಸೂರ್ಯನ ಬೆಳಕನಿಂದ, ಹೂವುಗಳಿಂದ ತುಂಬಿರುತ್ತದೆ. ಆದರೆ ನನಗೆ ಎಲ್ಲಕ್ಕಿಂತ ಹೆಚ್ಚಾಗಿ ಬೇಕಾದದ್ದು ನನ್ನ ಅಮ್ಮನನ್ನು ನೋಡುವುದು. ಅಮ್ಮ ನೀನು ಹೇಗೆ ಕಾಣಿಸುತ್ತೀಯಾ ? ಆಗಲೇ ನಾನು ನಿನ್ನ ಧ್ವನಿಯನ್ನು ಗುರುತಿಸುತ್ತಿದ್ದೇನೆ.

ಡಿಸೆಂಬರ್ - 24

ನನ್ನ ಹೃದಯದ ಬಡಿತವನ್ನು ನನ್ನ ಅಮ್ಮ ಕೇಳುತ್ತಿದ್ದಾಳೊ ಏನೋ! ನನಗೆ ಆಶ್ಚರ್ಯ! ಕೆಲವು ಮಕ್ಕಳು ಪ್ರಪಂಚಕ್ಕೆ ಬರುವಾಗ ಸ್ವಲ್ಪ ಅಸ್ವಸ್ಥತೆಯಿಂದ ಬರುತ್ತಾರೆ. ಆದರೆ ನನ್ನ ಹೃದಯ ಗಟ್ಟಿಯಾಗಿದೆ. ಆರೋಗ್ಯವಾಗಿದೆ, ಅದು ಆದೆಷ್ಟು ಸಮಾನಾಂತರದಲ್ಲಿ ಬಡಿಯುತ್ತಿದೆ. ಟಪ್! ಟಪ್! ಅಮ್ಮ ನೀನು ಒಳ್ಳೆಯ ಆರೋಗ್ಯವಂತ ಚಿಕ್ಕಮಗಳನ್ನು ಪಡೆಯುತ್ತೀಯಾ.

ಡಿಸೆಂಬರ್ - 28

ಇಂದು ನನ್ನ ಅಮ್ಮ ನನ್ನನ್ನು ಕೊಲೆ ಮಾಡಿದಳು !

ದತ್ತು ಸ್ವೀಕಾರ

ದಂಪತಿಗಳು ಮಕ್ಕಳನ್ನು ಅನೇಕ ಕಾರಣಗಳಿಂದ ಪಡೆಯಲಾಗದಿದ್ದರೆ, ದತ್ತು ಸ್ವೀಕಾರ ಒಳ್ಳೆಯ ಸಲಹೆ. ಗರ್ಭಧಾರಣೆಗೆ ಮೂರು ವರ್ಷಗಳವರೆಗೆ ಪ್ರಯತ್ನಿಸಿ, ಸೋತರೆ ಅನಂತರ ದಂಪತಿಗಳು ದತ್ತು ಸ್ವೀಕಾರದ ವಿಚಾರವನ್ನು ಗಂಭೀರವಾಗಿ ಚಿಂತಿಸಬಹುದು.

ಇದನ್ನು ಅವರಿಬ್ಬರೂ ಜೊತೆಯಾಗಿ ಚರ್ಚಿಸಬೇಕು. ಅನಂತರ ಇತರರೊಡನೆ, ಸಾಧ್ಯವಾದರೆ, ಮಗುವನ್ನು ಯಶಸ್ವಿಯಾಗಿ ದತ್ತು ತೆಗೆದುಕೊಂಡ ಮಿತ್ರರೊಡನೆ ಚರ್ಚಿಸಬೇಕು. ಸಾವಿರಾರು ದಂಪತಿಗಳು, ಪ್ರಪಂಚದಾದ್ಯಂತ, ದತ್ತು ಪಡೆದ ಮಕ್ಕಳಿಂದ ಸುಖಸಂಸಾರವನ್ನು ಹೊಂದಿರಲು ಸಹಾಯವನ್ನು ಪಡೆದಿದ್ದಾರೆ.

## ವರ್ಗ ಚಟುವಟಿಕೆ

1. ಚರ್ಚಿಸಿ

ಅ) ನಾನು ನನ್ನ ತಂದೆತಾಯಿಗಳಿಂದ ಪರಂಪರಾಗತರಾಗಿ ಪಡೆದ ಒಳ್ಳೆಯ ಲಕ್ಷಣಗಳಾವುವು ?

ಆ) ತಾಯಿಯ ಮೇಲೆ ಮತ್ತು ಬದುಕಿರುವ ಮಕ್ಕಳ ಗರ್ಭಪಾತದ ಪರಿಣಾಮಗಳು ಯಾವುವು ?

ಇ) ದತ್ತು ಸ್ವೀಕರಿಸು - ಗರ್ಭಸ್ರಾವ ಬೇಡ.

2. ಅಭ್ಯಾಸ

(Personal Coat of Arms)

3. ಚಲಚಿತ್ರ

ಗರ್ಭಪಾತ ಹೆಂಗಸಿನ ನಿರ್ಧಾರ (Personal Coat of Arms)

### ಉದ್ದೇಶ

ಮೌಲ್ಯ ಸ್ಪಷ್ಟೀಕರಣ ಚಟುವಟಿಕೆಗಳಿಂದ ಪರಿಣಾಮ ಹೊಂದುವ ಕೆಲವು ಅತಿ ಮುಖ್ಯ ಪ್ರಶ್ನೆಗಳೆಂದರೆ :

ನನ್ನ ಬದುಕಿನಿಂದ ನಾನು ಏನು ಮಾಡುತ್ತದ್ದೇನೆ ?

ನಾನು ಬರಿದೆ ಶೋಧಿಸುತ್ತಿದ್ದೇನೆಯೆ ?

ಇತರರೊಡನೆ ಸುಮ್ಮನೆ ಅನುಸರಿಸುತ್ತಿದ್ದೇನೆಯೇ ? ಅಥವಾ ನನ್ನ ಬದುಕಿನ

ನಿರ್ದೇಶನದಲ್ಲಿ ನಾನು ನಿಯಂತ್ರಿತನಾಗಿದ್ದೇನೆಯೇ ?

ನನ್ನ ಬದುಕಿಗೆ ಒಂದು ಉದ್ದೇಶವನ್ನುಮತ್ತು ಅರ್ಥವನ್ನು ಹೊಂದಿದ್ದೇನೆಯೆ ? ಏನಾದರೂ ವ್ಯತ್ಯಾಸ ಹೊಂದುತ್ತಿದೆಯೇ ? ಈ ಚಟುವಟಿಕೆ ಈ ಪ್ರಶ್ನೆಗಳನ್ನು ಕುರಿತು ವಿದ್ಯಾರ್ಥಿಗಳು ಚಿಂತಿಸಲು ಸಹಾಯ ಮಾಡುವ ಮಾರ್ಗ ಸುಖಕರವಾದ ಮಾರ್ಗವೆ ?

## ಕಾರ್ಯವಿಧಾನ

ಶಿಕ್ಷಕ ತನ್ನ ವಿದ್ಯಾರ್ಥಿಗಳಿಗೆ ಕಾಲೇಜಿನ ರಕ್ಷಾಕವಚದ ಚಿಹ್ನೆಯನ್ನು ಕೊಡುತ್ತಾನೆ. ಪ್ರತಿಯೊಬ್ಬ ವಿದ್ಯಾರ್ಥಿನಿಯೂ ತನ್ನ ಒಂದು ಏಕತೆಯನ್ನು ಪ್ರತಿಬಿಂಬಿಸುವ ತನ್ನದೇ ಸ್ವಂತ ಕವಚವನ್ನು ಮಾಡಿಕೊಳ್ಳುತ್ತಾನೆ/ಳೆ.

ವಿದ್ಯಾರ್ಥಿಯರೇ ಮುಂದಿನ ಪ್ರತಿಯೊಂದು ಪ್ರಶ್ನೆಗಳನ್ನು ತನ್ನ ಕವಚದ ಸೂಕ್ತ ಪ್ರದೇಶದಲ್ಲಿ ಒಂದು ಚಿತ್ರವನ್ನೋ ನಕ್ಷೆಯನ್ನೋ ಅಥವಾ ಗುರುತನ್ನೊ ಬರೆದು, ಉತ್ತರಿಸಬೇಕು.

| | |
|---|---|
| 1 | 2 |
| 3 | 4 |
| 5 | 6 |

1. ಇಂದಿಗೆ ನಿಮ್ಮ ವೈಯಕ್ತಿಕ ಉನ್ನತ ಸಾಧನೆಯನ್ನು ಏನೆಂದು ಭಾವಿಸುತ್ತೀಯಾ ?
2. ನಿಮ್ಮ ಕುಟುಂಬದ ಅತ್ಯಂತ ಶ್ರೇಷ್ಠ ಸಾಧನೆಗಳನ್ನು ಏನೆಂದು ಭಾವಿಸುತ್ತೀರಾ ?
3. ನಿಮ್ಮನ್ನು ಸುಖಿಗಳನ್ನಾಗಿ ಇಡಲು ಇತರ ಜನ ಮಾಡಬಹುದಾದ ಯಾವುದಾದರೂ ಒಂದು ವಿಷಯವೇನು ?
4. ಇಂದಿಗೆ ನಿಮ್ಮ ಅತ್ಯಂತ ಅಧಿಕ ವೈಯಕ್ತಿಕ ನಿಷ್ಫಲತೆ ಯಾವುದು ಎಂದು ಭಾವಿಸುತ್ತೀರಾ?
5. ನೀವು ಬದುಕಲು ಒಂದು ವರ್ಷ ಇದ್ದರೆ ನೀವು ಏನು ಮಾಡುತ್ತೀರಾ ? ನೀವು ಪ್ರಯತ್ನಿಸಿದುದೆಲ್ಲ ಯಶಸ್ವಿಯಾಗಲು ನೀವು ಭರವಸೆ ಕೊಡುತ್ತೀರಾ ?
6. ನೀವು ಇಂದೇ ಮರಣ ಹೊಂದಿದರೆ ನಿಮ್ಮ ವಿಷಯಕ್ಕೆ ಮೂರು ವಿಚಾರಗಳನ್ನು ಹೇಳಬೇಕೆಂದು ಇಷ್ಟಪಡುತ್ತೀರಾ ?

## ಉಪನ್ಯಾಸಕರಿಗೆ

ವಿದ್ಯಾರ್ಥಿಗಳು ಆರನೆಯ ಸಂಖ್ಯೆ ಪ್ರದೇಶದಲ್ಲಿ ಹೊರತು ಬೇರೆ ಪದಗಳನ್ನು ಉಪಯೋಗಿಸಬಾರದ್ದು ಕಲಾಕೆಲಸ ಲೆಕ್ಕಕ್ಕೆ ಬರುವುದಿಲ್ಲ ಎಂಬುದನ್ನು ಒತ್ತಾಯಿಸಿ, ನಕ್ಷೆಗಳು (drawings) ಸರಳವಾಗಿರಬಹುದು. ಅಪೂರ್ಣವಾಗಿರಬಹುದು ಮತ್ತು ಎಲ್ಲಿಯವರೆಗೆ ವಿದ್ಯಾರ್ಥಿಗಳು ತಾವು ಅಭಿವ್ಯಕ್ತಿಪಡಿಸುವುದನ್ನು ತಿಳಿದಿರುವವರೆಗೆ ಇತರರಿಗೆ ಅರ್ಥವಾಗದಂತಿರಬಹುದು.

ವಿದ್ಯಾರ್ಥಿಗಳು ಅನಂತರ ಸಣ್ಣ ಸಣ್ಣ ತಂಡಗಳಲ್ಲಿ ತಮ್ಮ ಕವಚಗಳ ಮೇಲಿನ ನಕ್ಷೆಗಳನ್ನು ಚಿಹ್ನೆಗಳ ಪ್ರಾಮುಖ್ಯವನ್ನು ವಿವರಿಸುತ್ತಾ, ವಿಚಾರ ವಿನಿಮಯಗಳಲ್ಲಿ ಭಾಗಿಗಳಾಗಬಹುದು. ಅವರು ಭಾಗವಹಿಸಲು ಇಷ್ಟಪಡುವ ಯಾವುದೇ ನಕ್ಷೆಯನ್ನು ಅವರು ಪೂರ್ತಿಗೊಳಿಸಬಹುದು.

ಕಪ್ಪು ಹಲಗೆಯ ಮೇಲೆ ತರಗತಿಯ ಸುತ್ತ ಕವಚವನು ಇಡುತ್ತ ಗ್ಯಾಲರನಡಿಗೆಯನ್ನು ಹಿಡಿಯುತ್ತಾ ಇರುವುದು ಇನ್ನೊಂದು ಪರ್ಯಾಯ. ವಿದ್ಯಾರ್ಥಿಗಳು ನೋಡಬೇಕು, ಟಿಪ್ಪಣಿಸಬೇಕು ಮತ್ತು ಭಾವನೆಗಳನ್ನು ದೃಷ್ಟಿಗಳನ್ನು ಬದಲಾಯಿಸಿಕೊಳ್ಳಬೇಕು.



ಅಧ್ಯಾಯ-೧೪

# ಶಿಶುಪೋಷಣೆ ಮತ್ತು ಹೊಣೆಯರಿತ ಪೋಷಕತ್ವ

ನಾನೊಂದು ಮಗು

ನನಗಾಗಿ ವಿಶ್ವವೆಲ್ಲ ಕಾದಿತ್ತು

ವಿಶ್ವವೆಲ್ಲ ಆಸಕ್ತಿಯಿಂದ ವಿಕ್ಷಿಸುತ್ತದೆ.

ನಾನು ಮುಂದೆ ಏನಾಗುತ್ತೇನೆ ಎಂದು.

ಭವಿಷ್ಯ ತಕ್ಕಡಿಯಲ್ಲಿ ತೂಗಾಡುತ್ತದೆ

ನಾನು ಏನೆಂದು

ನಾಳಿನ ವಿಶ್ವ ಹೇಗಿರುತ್ತದೆ, ಎಂದು

ನಾನೊಂದು ಮಗು

ನಾನು ನಿಮ್ಮ ಪ್ರಪಂಚಕ್ಕೆ ಬಂದಿದ್ದೇನೆ

ಅದರ ಬಗ್ಗೆ ನನಗೇನೂ ತಿಳಿಯದು

ನಾನೇಕೆ ಬಂದೆ, ನನಗೆ ತಿಳಿಯದು

ನಾನು ಹೇಗೆ ಬಂದೆ ನನಗೆ ತಿಳಿಯದು

ನನಗೆ ಕುತೂಹಲವಿದೆ.

ನಾನು ಕೌತುಕಗೊಂಡಿದ್ದೇನೆ.

ನಾನೊಂದು ಮಗು

ನನ್ನ ಅದೃಷ್ಟ ನಿನ್ನ ಕೈಯಲ್ಲಿದೆ

ವಿಶೇಷವಾಗಿ ನೀನು ಅದನ್ನು ನಿರ್ಧರಿಸುತ್ತೀಯೆ

ನಾನು ಸೋಲುತ್ತೇನೊ ಇಲ್ಲವೆ ಗೆಲ್ಲುತ್ತೇನೊ

ನನಗೆ ಕೊಡು, ನಿನ್ನನ್ನು ಬೇಡುತ್ತೇನೆ

ನನ್ನನ್ನು ಶಿಕ್ಷಿಸು, ನಿನ್ನನ್ನು ಪ್ರಾರ್ಥಿಸುತ್ತೇನೆ.

ನಾನು ವಿಶ್ವಕ್ಕೆ ಒಂದು ಆಶೀರ್ವಾದವಾಗುವಂತೆ.

ಭಾರತದಲ್ಲಿ 800 ಕೋಟಿ ಜನಸಂಖ್ಯೆಯಲ್ಲಿ ಶೇಕಡ 42 ಮಕ್ಕಳು, ಅದೂ 15 ವರ್ಷ ವಯಸ್ಸಿನೊಳಗೆ. ಆದ್ದರಿಂದ ಸುಮಾರು 400 ಕೋಟಿ ಮಕ್ಕಳಿಗೆ ಅತ್ಯಂತ ಹೆಚ್ಚಿನ ಪೋಷಣೆ ಮತ್ತು ಗಮನ ಅಗತ್ಯವಿದೆ, ಪೂರ್ಣ ಅಭಿವೃದ್ಧಿಯ ಸಾಧನೆಗೆ.

## ಮಕ್ಕಳ ಬೆಳವಣಿಗೆಯ ಹಂತಗಳು

1. ಜನನ ಪೂರ್ವ ಬೆಳವಣಿಗೆ ಅಥವಾ ಅರೆಅರೆ ಹುಟ್ಟು (ಗರ್ಭಧಾರಣೆಯಿಂದ ಹುಟ್ಟಿನವರೆಗೆ) (ಪ್ರಾಣ ರೂಪದ ಬೆಳವಣಗೆ) (Priology)
2. ನವಜನನ (ಹೊಸಹುಟ್ಟು ಅಥವಾ ಶರೀರದ ಜನನ)

   -ಪ್ರಾಣರೂಪದ ಮಾನಸಿಕ ಸ್ವರೂಪದ ಬೆಳವಣಿಗೆ
3. ಶೈಶವ

   2ವರ್ಷಕ್ಕೆ ಹುಟ್ಟು ಅಥವಾ ಭಾವೋದ್ವೇಗದ ಹುಟ್ಟು, ಭಾವೋದ್ವೇಗದ ಬೆಳವಣಿಗೆ.

### 4. ಬಾಲ್ಯದ ಆರಂಭ

2 ವರ್ಷದಿಂದ 5 ವರ್ಷದವರೆಗೆ-ಸಾಮಾಜಿಕ ಹುಟ್ಟು. ಮನೆಯಲ್ಲಿ ಮತ್ತು ಪರಿಸರದಲ್ಲಿ ಇರುವ ಜನಗಳೊಡನೆ ಸಾಮಾಜಿಕವಾಗಿ ಹೊಂದಾಣಿಕೆ ಮಾಡಿಕೊಳ್ಳುವ ಶಾಲಾಪೂರ್ವದ ವಯಸ್ಸು.

### 5. ಬಾಲ್ಯದ ಕೊನೆ ಹಂತ

5 ವರ್ಷದಿಂದ 12 ವರ್ಷದವರೆಗೆ - ಶಾಲಾ ವಯಸ್ಸು.

### 6. ಶೈಶವ

12 ರಿಂದ 18 ವರ್ಷಗಳವರೆಗೆ - ತಾದಾತ್ಮ್ಯದ ಸಂದುಕಟ್ಟು ಮತ್ತು ನೆನಪಿಗೆ ತರುವುದು. ಮಕ್ಕಳ ಅಗತ್ಯಗಳನ್ನು ನೆನಪಿಗೆ ತಂದುಕೊಳ್ಳುವುದುನ್ನು ಸಾಕಷ್ಟು ಪ್ರಕಟಿಸಲಾಗುವುದಿಲ್ಲ.

## 1. ಜನನ ಪೂರ್ವ ಮಕ್ಕಳ ಬೆಳವಣಿಗೆ

ತುಂಬು ಗರ್ಭಿಣಿ ಸ್ತ್ರೀ ಆರೋಗ್ಯಪೂರ್ಣ, ಸುಮಾರು 7 ಪೌಂಡು ತೂಕದ ಮಗುವನ್ನು ಪಡೆಯಬೇಕಾದರೆ ಅವಳು 25 ರಿಂದ 30 ಪೌಂಡುಗಳಷ್ಟು ತೂಕವನ್ನು ಸಾಧಿಸಿ ಕೊಳ್ಳಬೇಕು. ಮತ್ತು ಈ ಎಲ್ಲ ತೂಕವನ್ನು ಅವಳ ಗರ್ಭಧಾರಣೆಯ ಕೊನೆ ಕೊನೆಯಲ್ಲಿ ಎಂದರೆ, ಹೆರಿಗೆಗೆ ಸಮೀಪ ಕಾಲದಲ್ಲಿ ಅವಳು ನಿರೀಕ್ಷಿಸಬೇಕು. ಮೊದಲ ಹತ್ತು ವಾರಗಳಲ್ಲಿ ಸಾಮಾನ್ಯವಾಗಿ ಪಡೆಯುವ ತೂಕ ಒಂದು ಅಥವಾ ಎರಡು ಪೌಂಡುಗಳು ಮಾತ್ರ ಮತ್ತು 10 ರಿಂದ 20 ವಾರಗಳ ವರೆಗೆ ಸುಮಾರು 8 ಪೌಂಡು 13ನೆಯ ವಾರದಲ್ಲಿ ಹೆಂಗಸು ಸಾಧಾರಣವಾಗಿ 15 ಪೌಂಡುಗಳಷ್ಟು ಮತ್ತು 40 ವಾರಗಳಲ್ಲಿ (ಪೂರ್ಣಕಾಲ) ಸರಿಸುಮಾರು ಅವಳು ಗರಿಷ್ಠ ತೂಕವನ್ನು ಎಂದರೆ 25 ಪೌಂಡುಗಳ ತೂಕವನ್ನು ತಲುಪುತ್ತಾಳೆ. ಅತಿ ಹೆಚ್ಚಿನ ಲಾಭವೆಂದರೆ ಮೂರನೆಯ ಕಾಲಾವಧಿಯಲ್ಲಿ.

## ಗರ್ಭಧಾರಣೆಯ ಕಾಲದಲ್ಲಿ ಸಂಭೋಗ

ಇಲ್ಲೊಂದು ತಾರ್ಕಿಕ ಅಂಶವಿದೆ. ನಾನು ಶಿಫಾರಸು ಮಾಡುವುದು, 8 ತಿಂಗಳಾದ ಮೇಲೆ ಸಂಭೋಗವನ್ನು ಗರ್ಭಿಣಿ ಸ್ತ್ರೀಯರು ನಿಲ್ಲಿಸಬೇಕು ಎಂಬುದು. ಗರ್ಭಧಾರಣೆಯ ಕಡೆಯ ಕೆಲವು ವಾರಗಳಲ್ಲಿ ಕಂಠನಾಳ (Cervix) ಗರ್ಭದ ಬಾಯಿ ತೆರೆಯಲು ಆರಂಭವಾಗಬಹುದು. ಆಗ ಜೀವಾಣು ಗರ್ಭಾಶಯವನ್ನು ಪ್ರವೇಶಿಸುವ ಸಾಧ್ಯತೆಯಿದೆ. ಆದ್ದರಿಂದ ನೀವು ಆಗ ಬಹು ಎಚ್ಚರಿಕೆಯಿಂದಿರಬೇಕು, ಸಂಭೋಗವನ್ನು ನಡೆಸಲು.

## ಗರ್ಭಕಾಲದಲ್ಲಿ ವ್ಯಾಯಾಮ

ಸಮಸ್ಯಾರಹಿತ ಗರ್ಭಕಾಲದಲ್ಲಿ ಮಧ್ಯಮ ರೀತಿಯ ವ್ಯಾಯಾಮ ಬೆನ್ನಿನ ಕೆಳಭಾಗದ ನೋವನ್ನು ಮತ್ತು ಕಾಲುಗಳ ಉಳುಕನ್ನು ಶಮನಗೊಳಿಸುತ್ತದೆ. ಅದು ರಕ್ತ ಚಲನೆಯನ್ನು ಸುಧಾರಿಸುತ್ತದೆ ಮತ್ತು ಶಿಶು ಜನನಕ್ಕೆ ಕಿಬ್ಬೊಟ್ಟೆಯ ಸ್ನಾಯುಗಳನ್ನು ಬಲಪಡಿಸುತ್ತದೆ. ಶ್ರಮದಾಯಕ ವ್ಯಾಯಾಮ, ಬೇರೊಂದು ರೀತಿಯಲ್ಲಿ ಕೆಡಕಾಗುವ ಸಂಭವವನ್ನುಂಟು ಮಾಡಬಹುದು. ಗರ್ಭಕಾಲದಲ್ಲಿ ನೀವು ವ್ಯಾಯಾಮವನ್ನು ಮಾಡಿದರೆ, ಈಗಾಗಲೇ ಹೆಚ್ಚಿನ ಪ್ರಮಾಣದಲ್ಲಿರುವ ಹೃದಯ ಬಡಿತವನ್ನುಮೇಲಕ್ಕೆತ್ತುತ್ತೀರಾ ? ಹಾಗೂ ಮೃದುವಾದ ಕೀಲುಗಳನ್ನು ಬಿಗಿಗೊಳಿಸಲೂಬಹುದು. ನೀವು ತೂಕ ತಪ್ಪಲೂಬಹುದು. ಮಧ್ಯಮಾವಸ್ಥೆಯೇ ಪರಿಹಾರ.

## ಹಗಲಿನ ಕಾಯಿಲೆ

ವಾಪಾಕರಿಕೆ ಮತ್ತು ವಾಂತಿ ಹಗಲಿನ ಕಾಯಿಲೆಯ ಲಕ್ಷಣಗಳು. ಇದು ಹಗಲಿನ ಯಾವ ಸಮಯದಲ್ಲಾದರೂ ಸಂಭವಿಸಬಹುದು. ಹಗಲಿನ ಕಾಯಿಲೆ ಎಚ್‌ಸಿಜಿ (Hu-

man choric in gonadotropim) ಯ ಏರಿಕೆಯಿಂದ ಬಹುಶಃ ಬರಬಹುದೆಂದು ಸಂಶೋಧಕರು ಸಂಬುತ್ತಾರೆ. ಇದು ರಕ್ತದಲ್ಲಿ ಗರ್ಭಧಾರಣೆ ಚೋದಕಸ್ರಾವದಿಂದುಂಟಾದದ್ದೆಂದೂ ಹೇಳಲಾಗುತ್ತದೆ. 'ಎಚ್‌ಸಿಜಿ' ಮುಟ್ಟು ತಪ್ಪಿದ ಕೆಲವು ದಿನಗಳ ನಂತರ ಏರುತ್ತಾ ಹೋಗುತ್ತದೆ. ಅದೆಂದರೆ ಹಗಲು ಕಾಯಿಲೆ ಸಾಮಾನ್ಯವಾಗಿ ಆರಂಭವಾಗುವ ಕಾಲ - ಅನಂತರ 12 ವಾರಗಳ ಸುಮಾರಿಗೆ ಇದ್ದಕ್ಕಿದ್ದಂತೆ ನಾಟಕೀಯವಾಗಿ ನಿಂತುಹೋಗುತ್ತದೆ. ರೋಗಗ್ರಸ್ಥಳಾದ ವಾಂತಿ ಮಾಡಿಕೊಳ್ಳುತ್ತಿರುವ ಹೆಂಗಸು ತತ್‌ಕ್ಷಣ ಯಾವ ಅಸುಖವೂ ಇಲ್ಲದ ಚಪ್ಪೆಯಿಂದ ಎಚ್ಚರಗೊಳ್ಳುತ್ತಾಳೆ. ತತ್‌ಕ್ಷಣದ ಚಲನೆ ವಾಕರಿಕೆಯನ್ನು ಮತ್ತು ವಾಂತಿಯನ್ನು ಕೀಲು ಕೊಟ್ಟಂತೆ ಹೊರಹೊಮ್ಮಿಸಬಹುದು. ಆದ್ದರಿಂದ ನೀವು ನಿಧಾನವಾಗಿ ಎದ್ದು ನಿಂತುಕೊಳ್ಳಬೇಕು. ಜನನ ಪೂರ್ವ ವಿಟಮಿನ್ ತಯಾರಿಕೆಗಳು (ಬಿ ಕಾಂಪ್ಲೆಕ್ಸ್ ಮತ್ತು ಬಿ6 ವಿಟಮಿನ್‌ಗಳನ್ನು ಒಳಗೊಂಡಿರುತ್ತದೆ) ಸಹಾಯಕವಾಗಬಹುದು.

## 2. ಶಿಶುಜನನ

ಮೊದಲ ಹೆರಿಗೆ ನೋವು ಸುಮಾರು, ಸರಾಸರಿ 12 ಗಂಟೆಗಳಕಾಲ ಇರುತ್ತದೆ. ಏಕೆ ಅಷ್ಟು ಕಾಲ ? ಏಕೆಂದರೆ ಸ್ತ್ರೀ ದೇಹ ಅದುವರೆಗೆ ಅನುಭವಿಸದ ಘಟನೆಯೊಂದಕ್ಕೆ ಹೊಂದಿಕೊಳ್ಳುವುದರಲ್ಲಿರುತ್ತದೆ. ಮುಂದಿನ ಹೆರಿಗೆಗಳಲ್ಲಿ ಹೆರಿಗೆ ನೋವು 5ರಿಂದ7 ಗಂಟೆಗಳವರೆಗೆ ಸರಾಸರಿ ಇರುತ್ತದೆ. ಹೆರಿಗೆ ನೋವು ಆರಂಭವಾದಾಗ, ಸಂಕೋಚನಗಳು ಸಾಧಾರಣವಾಗಿ ಮೃದುವಾಗಿರುತ್ತವೆ ಮತ್ತು ಎಷ್ಟೋ ವೇಳೆ ನೋವಿಲ್ಲದೇ ಇರುತ್ತದೆ. ಅದು 30 ರಿಂದ ಅರವತ್ತು ಸೆಕೆಂಡ್‌ಗಳ (ಕ್ಷಣ) ವರೆಗೆ ಇರಬಹುದು ಮತ್ತು 5 ರಿಂದ 20 ನಿಮಿಷಗಳ ಅಂತರದಲ್ಲಿ ಕಾಣಿಸಿಕೊಳ್ಳಬಹುದು. ಹೆರಿಗೆ ನೋವು ಮುಂದವರಿದಂತೆಲ್ಲ ಅಂತರಗಳು ಕಡಮೆಯಾಗುತ್ತವೆ ಮತ್ತು ಸಂಕೋಚನಗಳು ದೀರ್ಘವಾಗುತ್ತವೆ ಮತ್ತು ಹೆಚ್ಚು ಅಸುಖಕರವಾಗುತ್ತವೆ. ಕಂಠನಾಳ (Cervix) ತೆಳುವಾಗತೊಡಗುತ್ತದೆ. ಮತ್ತು ಬೇಗನೆ ಸುಲಭವಾಗಿ ನಿರ್ದಿಷ್ಟಕಾಲದಲ್ಲಿ ಅನುಭವಕ್ಕೆ ಬರುತ್ತದೆ. ಸಂಕೋಚನಗಳು 4 ಅಥವಾ 5 ನಿಮಿಷಗಳ ಅಂತರದಲ್ಲಿ ಇದ್ದಾಗ, ಮಗು ಹೊರಬರುವ ದಾರಿಯಲ್ಲಿರುತ್ತದೆ. ಆಗ ಖಂಡಿತವಾಗಿ ನಿಸ್ಸಂದೇಹವಾಗಿ ನೀವು ನಿಜವಾದ ಹೆರಿಗೆಯ ನೋವಿನಲ್ಲಿರುತ್ತೀರಾ.

## ಇಪಿಸಿಯೊಟೊಮಿ (Episiotomy)

ಇಪಿಸಿಯೆಟೊಮಿ ಒಂದು ಸಣ್ಣ ಕಚ್ಚು. ಯೋನಿಯ ಕೆಳಭಾಗದಿಂದ ಗುದಕ್ಕೂ ವೃಷಣಕ್ಕೂ ಮಧ್ಯೆ ಇರುವ ದೇಹಭಾಗದವರೆಗೆ ಪ್ರದೇಶದ ಮೂಲಕ ಕಂಡುಬರುವ ಒಂದು ಸಣ್ಣ ಕೊರತೆ. ಅದು ಶಿಶುವನ್ನು ತಾಯಿಯ ಯೋನಿಯ ಹೊಕ್ಕಳ ಬಳ್ಳಿಯನ್ನು ಕತ್ತರಿಸುವುದರಿಂದ ಆದ ಸಣ್ಣ ಮಚ್ಚೆಯನ್ನು ಹೊಕ್ಕಳು ಎಂದು ಕರೆಯುತ್ತಾರೆ.

ವಿವಾಹ ಮೊದಲ ಘಟ್ಟದ ಪ್ರಾರಂಭದಲ್ಲಿ ಆದ ಘಟನೆಗಳಲ್ಲಿ ಅತ್ಯಂತ ಮುಖ್ಯವಾದದ್ದೆಂದರೆ ಮಗುವಿನ ಹುಟ್ಟು. ಈಗ ದಂಪತಿಗಳು ಮೂವರಾಗುತ್ತಾರೆ. ಆಗ ಹೆಂಡತಿ ತಾಯಿಯಾಗಿಯೂ ಗಂಡ ಪತಿ, ತಂದೆಯಾಗಿಯೂ ಆಗುವುದನ್ನು ಕಲಿಯಬೇಕು. ಅವರು ತಮ್ಮ ಬದುಕನ್ನು ಮಗುವಿನ ಅಗತ್ಯವನ್ನು ಪೂರೈಸುವುದಕ್ಕೆ ಹೊಂದಿಕೊಳ್ಳುವಂತೆ ತಮ್ಮ ಜೀವನ ಕ್ರಮವನ್ನು ಪುನರ್ ವ್ಯವಸ್ಥೆಗೊಳಿಸಿಕೊಳ್ಳಬೇಕು. ಅವರು ಮಗುವಿನ ಅಗತ್ಯತೆಗಳನ್ನು ಮತ್ತು ತಮ್ಮ ಆಪ್ತತ್ವದ ಮತ್ತು ಪಾಲುಗಾರಿಕೆಯನ್ನು ಅವಶ್ಯಕತೆಗಳನ್ನು, ಸಮತೋಲನ ಗೊಳಿಸಬೇಕಾಗುತ್ತದೆ.

## ಗರ್ಭವೇಷ್ಟನ ತೆಗೆಯುವುದು (Amnio Cartesics)

ಇದೊಂದು ಕಾರ್ಯವಿಧಾನ. ಇದರಲ್ಲಿ ಗರ್ಭವೇಷ್ಟನದ ಚೀಲದ ಒಳಗಿನ ಬಸುರಿನ ಗರ್ಭಶಯವನ್ನು ಛಿದ್ರಗೊಳಿಸಲಾಗುವುದು. ಮತ್ತು ದ್ರವದಲ್ಲಿರುವ ಕೋಶಗಳನ್ನು ಪರೀಕ್ಷಿಸಲಾಗುವುದು. ಇದು ಬ್ರಿಟನ್ನಿನಲ್ಲಿ ಶೇಕಡ 5 ರಷ್ಟು ಅಪಾಯವನ್ನು ಮಗುವಿನ ಬಗ್ಗೆ ಒಡ್ಡುತ್ತದೆ.

ಭಾರತದಲ್ಲಿ ಇದನ್ನು ಪ್ರತ್ಯೇಕವಾಗಿ ಮಗುವಿನ ಲಿಂಗವನ್ನು ಗುರುತಿಸುವುದಕ್ಕೆ ಮಾಡುತ್ತಾರೆ. ಅದು ಹೆಣ್ಣಾದರೆ(x x ಕ್ರೋಮೋಸಮ್) ಆಗ ಸ್ತ್ರೀ ಭ್ರೂಣ ಚಿಕಿತ್ಸೆಯನ್ನು ನಡೆಸಲಾಗುತ್ತದೆ. ದುರದೃಷ್ಟದಿಂದ ವೈದ್ಯರು ಇದನ್ನು ಹಣದ ಕಾರಣಗಳಿಂದ ಪ್ರೋತ್ಸಾಹಿಸುತ್ತಾರೆ. ಹೆಂಗಸರು ಮತ್ತು ಗಂಡಸರು ಈ ಪಕ್ಷಪಾತವನ್ನು ಖಂಡಿಸಿದ್ದಾರೆ.

## 3. ಪೋಷಕತ್ವ

ವಿವಾಹದಲ್ಲಿ ಇಬ್ಬರು ವ್ಯಕ್ತಿಗಳು, ಪರಸ್ಪರ ಭಾವನೆಗಳಿಂದ, ಮನೋಭಾವುಕತೆಯಿಂದ ಒಟ್ಟಾಗುತ್ತಾರೆ. ಆಧ್ಯಾತ್ಮಿಕವಾಗಿಯೂ ಅವರು ದೇವರ ಯೋಜನೆಯಲ್ಲಿ ವಿವಾಹಸುಖಕ್ಕಾಗಿ ಮತ್ತು ಸೃಷ್ಟಿ ಕ್ರಿಯೆಯಾಗಿ ಭಾಗವಹಿಸುತ್ತಿದ್ದೇವೆ ಎಂದೂ ತಿಳಿದಿರುತ್ತಾರೆ, ಮಾನಸಿಕವಾಗಿ ಒಬ್ಬರೊಬ್ಬರ ವ್ಯಕ್ತಿತ್ವನ್ನು ಪೂರ್ಣಗೊಳಿಸಲು ಸಿದ್ಧರಾಗಿರುತ್ತಾರೆ. ಮತ್ತು ಶಾರೀರಕವಾಗಿ ಪರಸ್ಪರವಾಗಿ ತಮ್ಮ ತಮ್ಮ ಶರೀರಗಳನ್ನು ಪರಸ್ಪರ ಅಂಗಾಂಶಗಳನ್ನು ನೋವಿನ ಮೂಲಕ ಕತ್ತರಿಸಿ ಹಾಕದೆ ಹೊರ ಬರುವಂತೆ ಮಾಡುತ್ತದೆ. ಹೆರಿಗೆ ದಾದಿ ಕೈಕೊಂಡ ಹೆರಿಗೆಯಲ್ಲಿ ನೀವು ವಿಶೇಷವಾಗಿ ಇಪಿಸಿಯೆಟೋಮಿಯನ್ನು ತಪ್ಪಿಸಿಕೊಳ್ಳುತ್ತೀರಾ. ಏಕೆಂದರೆ ದಾದಿಯರು ಹುಟ್ಟಿನ ನಾಲೆಯನ್ನು ಪೆರಿನಿಯಲ್ ಪ್ರದೇಶನ್ನು ನೀವಿ ಸುಲಭಗೊಳಿಸುವುದರ ಮೂಲಕ ವಿಸ್ತಾರವನ್ನಾಗಿಸಲು ತರಬೇತಿ ಹೊಂದಿರುತ್ತಾರೆ. ಎಪಿಸಿಯೇಟೊಮಿಯಿಲ್ಲದಿದ್ದರೂ ನೀವು ಅನಾವಶ್ಯಕ ಮತ್ತು ಹಾನಿಕಾರಕ ಕತ್ತರಿಸುವಿಕೆಯನ್ನು ಅನುಭವಿಸಬಹುದು.

ಶಿಶುಜನನದ ನಂತರ ಬೇಕಾಗುವ ವಾಸಿಯಾಗುವ ಕಾಲ ಹೆಂಗಸಿನಿಂದ

ಹೆಂಗಸಿಗೆ ವ್ಯತ್ಯಾಸವಾಗುತ್ತದೆ. ಸಾಮಾನ್ಯವಾಗಿ ನಿಮಗೆ ವಾಡಿಕೆಯ ಯೋನಿ ಮೂಲಕ ಹೆರಿಗೆಯಾಗಿದ್ದರೆ, ಹೆರಿಗೆಯಾದ 3 ಅಥವಾ 4 ವಾರಗಳ ನಂತರ ನೀವು ಸಂಭೋಗ ಕ್ರಿಯೆಯನ್ನು ಆರಂಭಿಸಲು ಸಮರ್ಥರಾಗಬಹುದು. ಅದಾಗ್ಯೂ ಗಾಯ ವಾಸಿಯಾಗುವುದು ಮೂರು ಅಂಶಗಳ ಮೂಲಕ ಪ್ರಭಾವಿತವಾಗುತ್ತದೆ. ನೀವು ಹೆರಿಗೆಯನ್ನು ಇಪಿಸಿಯೋಟಮಿಯ ಮೂಲಕವಾಗಲಿ ಅಥವಾ ಪ್ರಭಾವಿತವಾಗುತ್ತದೆ. ನೀವು ಹೆರಿಗೆಯನ್ನು ಇಪದಿಸಿಯೋಟಮಿಯ ಮೂಲಕವಾಗಲಿ ಅಥವಾ ಸಿಸೇರಿಯನ್ ಮೂಲಕ ಮಗುವನ್ನು ಹೆತ್ತಿದ್ದರಾಗಲಿ ಮತ್ತು ಎದೆ ಹಾಲನ್ನು ಕೊಡಲು ಇಚ್ಛಿಸಿದ್ದರಾಗಲಿ, ಇಲ್ಲದಿದ್ದರಾಗಲಿ ಈ ಮೂರು ಅಂಶಗಳು ಗಾಯವನ್ನು ವಾಸಿಮಾಡಲು ತಮ್ಮ ಪ್ರಭಾವನ್ನು ಬೀರುತ್ತವೆ.

ಒಂದು ಸಣ್ಣ ಇಪಿಸಿಯೋಟಮಿಯನ್ನು ಅನುಸರಿಸಿ ನಿಮ್ಮ ಯೋನಿ 4 ಅಥವಾ 5 ವಾರಗಳೊಳಗೆ ಮೊದಲಿನ ಸುಸ್ಥಿತಿಗೆ ಬಂದು ಬಿಡಬಹುದು, ದೊಡ್ಡ ಅಥವಾ ತೊಡಕಿನ ಇಪಿಸಯೋಟಮಿಗೆ ವಾಸಿಯಾಗಲು ಹೆಚ್ಚು ಕಾಲ ಬೇಕಾಗುತ್ತದೆ.

## ಸಿಸೇರಿಯನ್ ಭಾಗ

ಇದನ್ನು ಹೀಗೆ ಕರೆಯಲು ಒಂದು ಐತಿಹ್ಯವೇ ಇದೆ. ಸುಪ್ರಸಿದ್ಧ ಚರಿತ್ರಾರ್ಹ ವ್ಯಕ್ತಿ ಈ ರೀತಿಯಿಂದ ಹುಟ್ಟಿದನಂತೆ, ಹೆಂಗಸಿಗೆ ಗರ್ಭದ ಜಡತೆಯಿಂದ ಅಥವಾ ಮಗುವಿನ ಸ್ಥಿತಿಯಿಂದ ಯೋನಿಯ ಮೂಲಕ ಹೆರಿಗ ಆಗದಿದ್ದರೆ ಹೊಟ್ಟೆಯನ್ನು ಅಥವಾ ಗರ್ಭವನ್ನು - ಸೀಳಿ ಮಗುವನ್ನು ಹೊರತೆಗೆಯುವ ಒಂದು ದೊಡ್ಡ ಶಸ್ತ್ರ ಚಿಕಿತ್ಸೆಯಿಂದ ಮಾಡಬೇಕು. ಈ ಕೊಚ್ಚಿನಿಂದ ಮಗುವನ್ನು ಹೊರಕ್ಕೆ ಎಳೆದುಕೊಳ್ಳಬೇಕು. ಈ ಚಿಕಿತ್ಸೆಯನ್ನು ಸಾಮಾನ್ಯ ಅರಿವಳಿಕೆಯಿಂದ ನಡೆಸಬೇಕು. ಅದು ತಾಯಿ ಮತ್ತು ಮಗು ಇಬ್ಬರಿಗೂ ಅಪಾಯವನ್ನುಂಟು ಮಾಡುವ ಸಾಧ್ಯತೆಯಿದೆ. ತಾಯಿಯ ಶಕ್ತಿಯ ಸಾಕಷ್ಟು ಪ್ರಯತ್ನ ಮತ್ತು ಗರ್ಭಶಾಸ್ತ್ರದ ಕಾಲದ ಪ್ರಯತ್ನ ಮತ್ತು ತಾಳ್ಮೆ ಇದಕ್ಕೆ ತುಂಬ ಅವಶ್ಯಕ. ಅದು ಆಧುನಿಕ ಕಾಲದಲ್ಲಿ ಎಷ್ಟೋ ವೇಳೆ ಅಸಮರ್ಥನೀಯವಾದ ಅಂತರದಲ್ಲಿ ಈ ಪ್ರಯತ್ನ ಕೈಕೊಳ್ಳುವುದು ಹೆಚ್ಚು ಅಗತ್ಯ.

## ಸಿಸೇರಿಯನ್ ಹೆರಿಗೆ ಆದಮೇಲೆ

ಬಹುಹಿಂದೆ ಒಂದು ಸಲ ಸಿಸೇರಿಯನ್ ಹೆರಿಗೆ ಆದ ಮೇಲೆ ಮುಂದಿನ ಹೆರಿಗೆಗಳೆಲ್ಲವೂ ಈ ರೀತಿಯಲ್ಲೇ ನಡೆಯಬೇಕು ಎಂಬ ನಂಬಿಕೆಯಿತ್ತು. ಆದರೆ ಅದು ಈಗ ಇಲ್ಲ. ಇಂದು ಗರ್ಭ ವಿಜ್ಞಾನಿಗಳು ಕೆಳಸ್ತರದ ಉದರದ ಕೊರತೆಯನ್ನು ಬಳಸಿಕೊಳ್ಳುತ್ತಾರೆ (ಹಿಂದೆ ಬಳಸಿಕೊಳ್ಳುತ್ತಿದ್ದ ನೇರ ಮೇಲ್ಭಾಗದುದನ್ನಲ್ಲ) ಇದು ಗರ್ಭದ ಸ್ನಾಯುಗಳನ್ನು ಒಳಗೆ ಕತ್ತರಿಸುವುದಿಲ್ಲ. ಛಿದ್ರತೆಯ ಅಪಾಯ ತುಂಬ ಕಡಿಮೆ, ಪುರಾತನ ಕಟ್ಟಿನಿಂದುಂಟಾಗುವ ಅಪಾಯಕ್ಕಿಂತ ಅನೇಕ ಅಧ್ಯಯನಗಳು ತೋರಿಸಿಕೊಟ್ಟಿವೆ. ಹಿಂದಿನ

ಸಿಸೇರಿಯನ್ ಹೆರಿಗೆಯಾದ ಮೇಲೆ, ಯೋನಿ ಮೂಲಕ ಹೆರಿಗೆ ಹೆಚ್ಚು ಸಮಾಧಾನಕರವಾಗಿ ಕ್ಷೇಮವಾದದ್ದು ಎಂದು, ಅನೇಕ ಹೆಂಗಸರು ಇದನ್ನು ಅನುಭವಿಸಿದ್ದಾರೆ.

ಅತಿ ತೂಕವನ್ನು ತಪ್ಪಿಸುವ ಶ್ರೇಷ್ಠ ಮಾರ್ಗವೆಂದರೆ ಸ್ವಲ್ಪ ತಿನ್ನಬೇಕು, ಅಂತರಗಳಲ್ಲಿ ಆಹಾರ ಸೇವಿಸಬೇಕು ಮತ್ತು ಪೌಷ್ಠಿಕವಾದ ಸಮತೋಲನ ಊಟಗಳನ್ನು ಮಾಡಬೇಕು. ಹೆರಿಗೆಯ ನಂತರ, ಪಥ್ಯದ ಸಮತೋಚಿತ ಕಾರ್ಯಕ್ರಮ ಮತ್ತು ವ್ಯಾಯಾಮ ಅವಶ್ಯಕ, ಒಳ್ಳೆಯ ಶರೀರ ದಾರ್ಢ್ಯತೆ ಸಂಪಾದಿಸಲು ಇಂಥ ಕ್ರಮಗಳು ಅನಿವಾರ್ಯವೆಂದೂ ಹೇಳಬಹುದು.

## ಹೊಕ್ಕುಳ ಬಳ್ಳಿ

ಇದು ಮಾಸಿನಿಂದ ರಕ್ತವನ್ನು ತರುವ ಹೊಕ್ಕಳಿನ ಅಪಧಮನಿಯನ್ನು ಮಗುವಿನಿಂದ ಉತ್ಪನ್ನಗಳನ್ನು ತೆಗೆದುಕೊಂಡು ಹೋಗುವ ಅಭಿಧಮನಿಯನ್ನು (ರಕ್ತನಾಳ) ಒಳಗೊಂಡಿರುತ್ತದೆ. ಹೊಸದಾಗಿ ಹುಟ್ಟಿದ ಮಗುವಿನ ಹೊಕ್ಕಳ ಬಳ್ಳಿಯನ್ನು ಗಾಳಿಗೆ ತೆರೆದಿಟ್ಟು ಬಿಟ್ಟರೆ ಅದರಲ್ಲಿರುವ ಚಲನೆ ಕಡಿದು ಹೋಗುತ್ತದೆ. ಆಗ ಮಗು ಗಾಳಿ ಪಡೆಯಲು ಉಸಿರಾಡಬೇಕಾಗುತ್ತದೆ. ಪೂರ್ಣತೆಗಾಗಿ ರೂಪಿಸಿರುವುದನ್ನು ಹೊಂದಿಸಿ (ಬಾಗಿಸಿ)ಕೊಳ್ಳುವುದರ ಮೂಲಕ ಒಂದಾಗಲು ಇಷ್ಟಪಡುತ್ತಾರೆ. ಗಂಡು ಹೆಣ್ಣು ಇಬ್ಬರೂ ಎಂದರೆ ಗಂಡ ಹೆಂಡತಿ ಇಬ್ಬರೂ ಪಕ್ವವಾದಾಗ, ತಾಯಿ ಮತ್ತು ತಂದೆಯ ಪೋಷಕತ್ವವನ್ನು ಸಾಧಿಸಲು ಸಾಧ್ಯವಾಗುವಾಗ, ಲೈಗಿಕ ಸಂಭೋಗ ಆರಂಭಗೊಳ್ಳುತ್ತದೆ.

ಮಗು ಹೊಟ್ಟೆಯಲ್ಲಿ ಬೆಳೆಯುತ್ತಿರುವ ಒಂಭತ್ತು ತಿಂಗಳ ಅವಧಿಯಲ್ಲಿ ಗಂಡಹೆಂಡಿರ ಪ್ರೇಮ ಪರಸ್ಪರವಾಗಿ ಸುಖದ ತುತ್ತತುದಿಯನ್ನು ತಲುಪುತ್ತವೆ. ಇಬ್ಬರ ಸೃಷ್ಟಿಯ ಆಕಾಂಕ್ಷೆ ಅವರ ಪ್ರೇಮದಿಂದ ಪ್ರವಹಿಸಿ, ಈ ಎರಡು ಮಾನವ ಪ್ರಾಣಿಗಳ ಒಕ್ಕೂಟವನ್ನು ಮೀರಿ ಬದುಕಲು ಇಷ್ಟಪಡುತ್ತದೆ.

ತಂದೆ ತಾಯಿಗಳು, ತಾತಂದಿರಾಗುವ, ಬಂಧುಗಳಾಗುವ ಆಸಕ್ತಿಗೆ ಅವಕಾಶವನ್ನುಂಟು ಮಾಡಿಕೊಡಬೇಕು. ಹೆಂಡತಿಯು ಕೆಲಸ ಮಾಡುತ್ತಿದ್ದರೆ ಅದು ಅವಳ ಕರ್ತವ್ಯವೂ ಹೌದು. ಮತ್ತು ಅಯವ್ಯಯಗಳಲ್ಲಿನ ಬದಲಾವಣೆ ಮತ್ತು ಗಂಡನ ತಂದೆಯ ಪಾತ್ರ ಪಾಲುದಾರಿಕೆ ಕೈಗೊಳ್ಳುವುದು ಅವಶ್ಯಕ ಎಂಬುದನ್ನು ಚರ್ಚಿಸಬೇಕಾದುದು, ಪರಿಗಣಿಸಬೇಕಾದದ್ದು ತುಂಬಾ ಅವಶ್ಯಕ.

ಮೊಲೆಗಳು ಮತ್ತು ಮೊಲೆಹಾಲು ಗರ್ಭಧಾರಣೆಯ ಕಾಲದಲ್ಲಿ ಮಾಸುವಿನ ಚೋದಕ ದ್ರವ ತಾಯಿಯ ಸ್ತನಗಳಲ್ಲಿ ಹಾಲನ್ನು ಉತ್ಪತ್ತಿ ಮಾಡಲು ಆರಂಭಿಸುತ್ತದೆ. ಮೊಲೆಗಳು ದಪ್ಪವಾಗುತ್ತವೆ. ಹಾಗೆಯೇ ಮೊಲೆತೊಟ್ಟುಗಳೂ ಕೂಡ. ಅವು ಮೊಲೆಯೂಡಲು ಸಿದ್ಧವಾಗುವುದಕ್ಕೆ ಹೆಚ್ಚಿನ ಗಮನವನ್ನು ಸೆಳೆಯಬೇಕು. ಮಾಸುವನ್ನು

ಹೊರತೆಗೆದ ಮೇಲೆ ನಿರ್ನಾಳ (ಶ್ರೇಷ್ಠ) ಗ್ರಂಥಿ ಮೊಲೆಹಾಲನ್ನು (Prolactin) ಉತ್ಪತ್ತಿ ಮಾಡಲು ಶುರು ಮಾಡುತ್ತದೆ. ಇದೇ ಸ್ತನಗಳಲ್ಲಿರುವ ಗ್ರಂಥಿಗಳು ಹಾಲನ್ನು ಉತ್ಪತ್ತಿ ಮಾಡುವುದಕ್ಕೆ ಕಾರಣವಾಗುತ್ತವೆ. ಈ ಕಾರ್ಯವಿಧಾನ ಸ್ತನಗಳಲ್ಲಿರುವ ಹಾಲು ಬರಿದಾಗುವವರೆಗೆ ಸಾಮಾನ್ಯವಾಗಿ ಮುಂದುವರಿಯುತ್ತಲೆ ಇರುತ್ತದೆ.

5. ಅಪಕ್ವ ಅಥವಾ ಕಡಿಮೆ ತೂಕದಿಂದ ಹುಟ್ಟಿದ ಮಕ್ಕಳು

ಅಪಕ್ವ ಜನನಗಳು ದುರದೃಷ್ಟವಶಾತ್ ನಮ್ಮಲ್ಲಿ ಸಾಮಾನ್ಯ. ಐದು ಪೌಂಡಿಗಿಂತ ಕಡಿಮೆ ತೂಕದಿಂದ ಹುಟ್ಟಿದ ಮಗುವನ್ನು ಸಾಧಾರಣವಾಗಿ ಅಪಕ್ವ ಹುಟ್ಟೆಂದು ಭಾವಿಸಲಾಗುತ್ತದೆ. ಅದು ಪೂರ್ಣ ಅವಧಿ ತೆಗೆದುಕೊಂಡು ಹುಟ್ಟಿದರೂ ಅವುಗಳಿಗೆ ವಿಶೇಷ ಗಮನ, ಪೋಷಣೆ ಅಗತ್ಯ. ಅವು ಅನೇಕ ಪ್ರಕರಣಗಳಲ್ಲಿ ಹೆಚ್ಚು ಕಡಿಮೆ 'ನಾರ್ಮಲ್' (ಸಾಧಾರಣ)ವಾಗಿಯೇ ಬೆಳೆಯುತ್ತವೆ. ಆದಾಗ್ಯೂ ಅಪಕ್ವತೆಯನ್ನು ಜನನ ನಂತರದಲ್ಲಿ ಒಳ್ಳೆಯ ಎಚ್ಚರಿಕೆಯಿಂದ ತಪ್ಪಿಸಲು ಯತ್ನಿಸಬೇಕು.

6. ತಾಯಿಯ ಅಂಜಿಕೆಗಳು

ಗರ್ಭಧಾರಣೆಯ ಕಾಲಾವಧಿಯಲ್ಲಿ ಮಗು ಮತ್ತು ತಾಯಿಯ ಅತಿ ಸಮೀಪದ ಸಂಬಂಧ ಇದ್ದಾಗ್ಯೂ ಅವೆರಡು ಒಂದು ಶರೀರವಲ್ಲ. ಮಗು ಖಂಡಿತವಾಗಿ ಪ್ರತ್ಯೇಕ ವ್ಯಕ್ತಿ. "ತಾಯಿ ಮತ್ತು ಮಗು ಇವುಗಳ ನಡುವೆ ರಕ್ತ ಸರಬರಾಜು ನೇರವಾಗಿ ಇರುವುದಿಲ್ಲ. ಇಬ್ಬರ ರಕ್ತನಾಳಗಳು, ಮಾಸುವನ್ನು ತಲುಪಿದಾಗ ಒಂದಕ್ಕೊಂದು ಸುತ್ತಿಕೊಂಡಿರುತ್ತದೆ. ಆದರೆ ಒಂದರೊಳಗೊಂದು ತೆರೆದಿರುವುದಿಲ್ಲ. ಯಾವುದೇ ಪೋಷಕೋಪಚಾರ ತಾಯಿಯಿಂದ ಮಗುವಿಗೆ ಹರಿದು ಬಂದರೆ ಅದು ಮೊದಲು ತಾಯಿಯ ರಕ್ತದಲ್ಲಿ ಕರಗಿ ಹೋಗುತ್ತದೆ. ಅನಂತರ ಮಗುವಿನ ರಕ್ತದೊಳಗೆ ಪೊರೆಯ (membrane) ಮೂಲಕ ಸೋಸುತ್ತದೆ. ಬೆಳೆಯುವ ಮಗು ಸುರಕ್ಷಿತವಾಗಿ ಕಾಪಾಡಲ್ಪಡುತ್ತದೆ. ಅದು ಚಲಿಸುವ ತನ್ನ ರಸದ್ರವ್ಯದಿಂದ ತಾಯಿಗುಂಟಾಗುವ ಗಾಬರಿಗಳಿಂದ ರಕ್ಷಿಸಲ್ಪಡುತ್ತದೆ.

ತಾಯಿಯ ಅಂಜಿಕೆಗಳನ್ನು ಬಲು ನಿಷ್ಠೂರವಾಗಿ ಮತ್ತು ಸ್ಪಷ್ಟವಾಗಿ ವ್ಯವಹರಿಸಬೇಕು. ಮೂಢನಂಬಿಕೆಗಳನ್ನು ಅತ್ತ ತೆಗೆದಿಡಬೇಕು. ಅವುಗಳನ್ನೆಂದೂ ಪ್ರೋತ್ಸಾಹಿಸಬಾರದು.

7. ಮೊಲೆಯೂಡಿಸುವುದು

ಸ್ತನ್ಯಪಾನ ನಿಮ್ಮ ಮಗುವಿನ ಮೂಲಹಕ್ಕು. ಅದು ಸಮತೋಲನ ಪಥ್ಯವನ್ನು ಕೊಡುತ್ತದೆ ಮತ್ತು ಸೋಂಕುಗಳ ವಿರುದ್ಧ ರಕ್ಷಣೆ ನೀಡುತ್ತದೆ. ಅದರ ಅತ್ಯಂತ ಮುಖ್ಯವಾದ ಅಂಶವೆಂದರೆ ನಿಮ್ಮ ಮಗುವಿನ ಪ್ರೋತ್ಸಾಸ್ಪದಕ್ಕೆ ಮತ್ತು ಭದ್ರತೆಗೆ ಸಹಾಯ ಮಾಡುವುದೇ ಆಗಿದೆ.

## ಮೊಲೆಯೂಡಿಸುವುದರ ಮೌಲ್ಯ ಮತ್ತು ಅನುಕೂಲಗಳು

"ಒಳ್ಳೆಯ ತಾಯಂದಿರನ್ನು ನನಗೆ ಕೊಡು. ನಾನು ನಿನಗೆ ಒಳ್ಳೆಯ ರಾಜ್ಯವನ್ನು ಕೊಡುತ್ತೇನೆ".

-ನೆಪೋಲಿಯನ್

### 1. ಮೂಲಹಕ್ಕು

ಮಕ್ಕಳಿಗೆ ಸೋಂಕುಗಳ ವಿರುದ್ಧ ಸೂಕ್ತವಾದ ಪೋಷಣೆ, ಬೋಧನೆ ಮತ್ತು ರಕ್ಷಣೆ ಬೇಕಾಗುತ್ತದೆ. ಸ್ತನ್ಯಪಾನ ಈ ಎಲ್ಲಾ ಪ್ರಮುಖ ಅಗತ್ಯಗಳನ್ನು ಪೂರೈಸುತ್ತದೆ ಮತ್ತು ಅದು ಬದುಕಿನಲ್ಲಿ ಉತ್ತಮ ಆರಂಭವನ್ನು ತಂದುಕೊಡುತ್ತದೆ. ಅದೊಂದು ಸಹಜ ಮತ್ತು ಮೂಲ ಪಾತ್ರ. ಜೀವನದ ಕಾರ್ಯವಿಧಾನದಲ್ಲ ಸ್ತನ್ಯಪಾನ ಎಲ್ಲ ಮಕ್ಕಳ ಆರೋಗ್ಯದ ಬೆಳವಣಿಗೆಗೆ ಮತ್ತು ಅವುಗಳ ವೃದ್ಧಿಗೆ ಬಹುಮುಖ್ಯವಾದುದು. ತಾಯಂದಿರು ತಿಳಿದಿರುವುದನ್ನು ವಿಜ್ಞಾನಿಗಳು ದೃಢಪಡಿಸಿದ್ದಾರೆ. ಸ್ತನ್ಯಪಾನ ಸುಮ್ಮನೆ ಊಡಿಸುವುದಕ್ಕಿಂತ ಹೆಚ್ಚಿನದು ಮತ್ತು ಮೊಲೆ ಹಾಲು ಸಾಮಾನ್ಯ ಆಹಾರಕ್ಕಿಂತ ಹೆಚ್ಚಿನದು.

### 2. ಭದ್ರತೆ

ಗರ್ಭಧಾರಣೆಯ ಕಾಲದಲ್ಲಿ ತಾಯಿ ಮತ್ತು ಮಗು ಶಾರೀರಿಕವಾಗಿ ಅಂಟಿಕೊಂಡಿರುತ್ತಾರೆ. ಆಗ ತಾಯಿ ತನ್ನ ಮಗುವಿಗೆ ಪೂರ್ಣವಾಗಿ ಮಾಸುವಿನ ಮೂಲಕ ಊಟ ಮಾಡಿಸುತ್ತಾಳೆ. ಹೆರಿಗೆಯ ನಂತರ, ಹೊಕ್ಕಳ ಬಳ್ಳಿ ಕತ್ತರಿಸಿದ ತರುವಾಯ ತಾಯಿ ಮತ್ತು ಮಗು ಬೇರ್ಪಡುತ್ತಾರೆ. ಆದರೆ ಮಗು ಇನ್ನು ತಾಯಿಯನ್ನೇ ಅವಲಂಬಿಸಿರುತ್ತದೆ. ಸ್ತನ್ಯಪಾನ ಭದ್ರತೆಯ ಮುಂದುವರಿಕೆಯನ್ನು ನಿರ್ವಹಿಸಿಕೊಂಡೇ ಬರುತ್ತದೆ.

### 3. ಬಂಧನ

"ತಾಯಿ ಮತ್ತು ಮಗುವಿನ ನಡುವಣ ಬಂಧನ" ಸ್ತನ್ಯಪಾನದದಿಂದ ಹೆಚ್ಚು ಭದ್ರವಾಗುತ್ತದೆ. "ಮನೋವಿಕಾರದ ಭದ್ರತೆ" ಹೀಗೆ ಗಟ್ಟಿಯಾಗಿ ಸ್ಥಾಪಿತವಾದ ಮೇಲೆ ಮಗು ತನ್ನನ್ನು ತಾಯಿ ಪ್ರೀತಿಸುತ್ತಾಳೆ. ನಾನು ಅವಳಿಗೆ ಬೇಕಾಗಿದ್ದೇನೆ ಎಂದು ಭಾವಿಸುತ್ತದೆ. ಈ "ಚರ್ಮ ಚರ್ಮದ ಸಂಪರ್ಕ ಮೊಲೆ ಹಾಲನ್ನು ಊಡಿಸುವುದರಿಂದ ಪ್ರತ್ಯಕ್ಷವಾಗಿ ಪರಿಣಾಮವನ್ನು ಮುಂದುವರಿಸುತ್ತದೆ.

### 4. ಮಾನಸಿಕ ಆರೋಗ್ಯ ಮತ್ತು ಸ್ತನ್ಯಪಾನ

ಫ್ರಾನ್ಸಿನಲ್ಲಿ ನಡೆದ ಅಧ್ಯಯನಗಳು 'ಮಾನಸಿಕ ಭ್ರಮೆಯ' ವಯಸ್ಕರು ಬಹುಶಃ ಬಾಲಕರಾಗಿದ್ದಾಗ ಮೊಲೆಹಾಲು ಕುಡಿದಿರುವುದಿಲ್ಲ ಎಂಬುದನ್ನು ತೋರಿಸಿಕೊಟ್ಟಿವೆ. ಆದ್ದರಿಂದ ತಮ್ಮ ಜವಾಬ್ದಾರಿಯನ್ನರಿತ ಮತ್ತು ಸ್ತನ್ಯಪಾನದ ದೊಡ್ಡ ಗುಣವನ್ನು ತಿಳಿದುಕೊಂಡ ತಾಯಂದಿರುವ ತಮ್ಮ ಮಕ್ಕಳಿಗೆ ಮಾನಸಿಕ ಧನಾತ್ಮಕ ಆರೋಗ್ಯದ ಜೀವನ

ಕಾಣಿಕೆಯನ್ನು ನೀಡುತ್ತಾರೆ.

## 5. ಮಾತು ಮತ್ತು ಸ್ತನ್ಯಪಾನ

ಹಾಲು ಚೀಪುವ ಮತ್ತು ಉಚ್ಚಾರಣೆಯ ಅವಯವಗಳು ಎರಡೂ ಒಂದೇ. ಆದ್ದರಿಂದ ಹಾಲು ಚೀಪುವ ಕ್ರಿಯೆಗಳನ್ನು ವೃದ್ಧಿಪಡಿಸುವಲ್ಲಿ ಪ್ರಭಾವವನ್ನುಂಟು ಮಾಡುವ ಅಂಶಗಳು ಮಾತನ್ನು ಕಲಿಸುವ ಸ್ನಾಯುಗಳ ಮೇಲೆ ಸೂಕ್ತ ಪರಿಣಾಮವನ್ನು ಹೊಂದಿರುತ್ತದೆ ಎಂದು ನಿರೀಕ್ಷಿಸುವುದು ತಪ್ಪಾಗಲಾರದು, ಸ್ತನ್ಯಪಾನ ಮಾತಿನ ಬೆಳವಣಿಗೆಯಲ್ಲಿ, ವಿಶೇಷವಾಗಿ ಹುಡುಗರಲ್ಲಿ ನಾವಿಕೀಯವಾದ ಪರಿಣಾಮವನ್ನು ಹೊಂದುತ್ತದೆ ಎಂಬುದನ್ನು ಅಧ್ಯಯನಗಳು ತೋರಿಸಿಕೊಟ್ಟಿವೆ.

## 6. ಅಖಂಡ ಆಹಾರ

ಆರೋಗ್ಯವಂತ ಮಗುವಿಗೆ ಬೇಕಾದ ಎಲ್ಲಾ ಪೋಷಕ ದ್ರವ್ಯಗಳನ್ನು ಎದೆಹಾಲು ಒಳಗೊಂಡಿರುತ್ತದೆ. ಅದು ತಾಯಿಯ ಶರೀರದಿಂದ ಮಗುವಿಗಾಗಿಯೇ ಉತ್ಪತ್ತಿಯಾಗುವ ಆಹಾರ. ಮೊಲೆಹಾಲಿನಲ್ಲಿ ಸೋಂಕುಗಳ ವಿರುದ್ಧ ಹೋರಾಡುವ ಪದಾರ್ಥಗಳು ಸಂಪದ್ಭರಿತವಾಗಿ ತುಂಬಿರುತ್ತವೆ ಮತ್ತು ಮಗುವಿಗೆ ಭೇದಿ, ಸೋಂಕುಗಳು ಮತ್ತು ಅನ್ಯೆಚ್ಛಿಕ ಆಹಾರಗಳ ವಿರುದ್ಧವಾಗಿ ರಕ್ಷಣೆಯನ್ನು ಒದಗಿಸುತ್ತದೆ.

ಎದೆಹಾಲು ಯಾವಾಗಲೂ ಲಭ್ಯವಾಗುತ್ತದೆ ಮತ್ತು ಅದಕ್ಕೆ ತಯಾರಿಕೆಯ ಸಿದ್ಧತೆಯ ಅವಶ್ಯಕವಿಲ್ಲ. ಅದು ಅಂಟುರೋಗದಿಂದ ಮುಕ್ತವಾಗಿರುತ್ತದೆ ಮತ್ತು ಖಂಡಿತವಾಗಿ ಮಕ್ಕಳ ಇತರ ಆಹಾರ ಪದಾರ್ಥಗಳಿಗಿಂದ ಅದು ತುಂಬಾ ಅಗ್ಗ.

## 7. ಬೆಳವಣಿಗೆಯನ್ನು ಉತ್ತೇಜಿಸುವ ಅಂಶ

ತಾಯಿಯ ಹಾಲಿನಲ್ಲಿ ಬೆಳವಣಿಗೆಯನ್ನು ಉತ್ತೇಜಿಸುವ ಅಂಶಗಳನ್ನು ಗುರುತಿಸಲಾಗಿದೆ. ಇದನ್ನು ಸಮನ್ವಯಗೊಳಿಸಲಾಗುವುದಿಲ್ಲ. ಆದ್ದರಿಂದ ಎದೆಹಾಲು ಕುಡಿದ ಮಕ್ಕಳು ಸ್ಪಷ್ಟವಾಗಿ ಆರೋಗ್ಯವಾಗಿ ಸೀಸೆ ಹಾಲು ಕುಡಿವ ಮಕ್ಕಳಿಗಿಂತ ಅನಾಯಾಸವಾಗಿ ಬೆಳೆಯಬಲ್ಲವು.

## 8. ಲವಣದ ಸಾರಾಂಶ

ಅದರ ಲವಣದ ಸಾರಾಂಶ ಬಹಳ ಕಡಿಮೆ. ಮಕ್ಕಳ ಮೂತ್ರಪಿಂಡಗಳಿಗೆ ಉತ್ತಮವಾಗಿ ಹೊಂದಿಕೊಳ್ಳತಕ್ಕದ್ದು. ಏಕೆಂದರೆ ಮಗುವಿಗೆ ಸ್ವಲ್ಪ ಹೆಚ್ಚಿನ ನೀರಿನ ಅಗತ್ಯವಿರುತ್ತದೆ. ಆದ್ದರಿಂದ ಎದೆ ಹಾಲು ಕುಡಿತ ಮಕ್ಕಳು ಮೂತ್ರಪಿಂಡ ರೋಗವನ್ನು ಹೊಂದುವುದರಲ್ಲಿ ಕಡಿಮೆ ಅವಕಾಶವನ್ನು ಪಡೆದಿರುತ್ತದೆ.

## 9. ಅನ್ನಾಂಗ ಸಾರಾಂಶ

ತಾಯಿ ಚೆನ್ನಾಗಿ ಯುಕ್ತವಾಗಿ ಊಟ ಮಾಡಿದರೆ ಅವಳ ಹಾಲಿನ ಅನ್ನಾಂಗ ಸತ್ವ ಹೆಚ್ಚಿರುತ್ತದೆ.

## 10. ಗರ್ಭದ ಪೂರ್ವಸ್ಥಿತಿ

ತಾಯಿಗೆ ಮಾನಸಿಕವಾಗಿ ಮತ್ತು ದೈಹಿಕವಾಗಿ ಸಹಾಯಗವಾಗುತ್ತದೆ. ಮಗುವನ್ನು ನೋಡಿಕೊಳ್ಳುವುದು ಪ್ರತಿಚ್ಛಾಯೆಗಳನ್ನು ರೂಢಿಸುತ್ತದೆ. ಅದು ಅವಳ ಶಿಶುಜನಾಂಗಗಳನ್ನು ಅವುಗಳ ವಿಶ್ರಾಂತ ಸ್ಥಿತಿಗೆ ತರಲು ಸಹಾಯ ಮಾಡುತ್ತದೆ. ಗರ್ಭ ತನ್ನ ಗರ್ಭಧಾರಣೆಯ ಹಿಂದಿನ ಆಕಾರಕ್ಕೆ ಬಹುಬೇಗ ಬರಲು ಸಹಾಯಕವಾಗುತ್ತದೆ.

## 11. ಗರ್ಭಾಶಯದ ಅಂಡಾಣುಗಳ ವಿಸರ್ಜನೆ

ಹಾಲೂಡಿಸುವ ತಾಯಿ, ಅಂಡಾಣುಗಳ ವಿಸರ್ಜನೆಯನ್ನು ತಡೆಹಿಡಿಯುವುದರ ಮೂಲಕ ಹೊಸ ಗರ್ಭಧಾರಣೆಯನ್ನು ವಿಳಂಬ ಮಾಡಲು ಸಹಾಯ ಮಾಡುವಂಥ ಚೋದಕ ದ್ರವಗಳನ್ನು ಕೂಡ ಉತ್ಪತ್ತಿ ಮಾಡುತ್ತಾಳೆ. ಗರ್ಭಧಾರಣೆಗಳ ಅಂತರ ತಾಯಿಗೆ ವಿಶ್ರಾಂತಿಯನ್ನು ಮತ್ತು ತನ್ನ ಮಗುವಿಗೆ ಹಾಗೂ ಅವಳಿಗೆ ಮತ್ತು ಅವಳ ಕುಟುಂಬಕ್ಕೆ ಅಗತ್ಯವಾದ ಕಾಲವನ್ನು ಕೊಡುತ್ತದೆ. ಇದು ಅಂತರ ನೀಡುವಿಕೆ ಮತ್ತು ಕುಟುಂಬ ಯೋಜನೆಯ ಅತಿ ಉತ್ತಮವಾದ ಸಹಜವಾದ ಮಾರ್ಗ (ವಿಶೇಷವಾಗಿ ಸಂಪೂರ್ಣ ಸ್ತನ್ಯಪಾನ)-ಮೊದಲ 3 ತಿಂಗಳಿಂದ 6 ತಿಂಗಳವರೆಗೆ)

## 12. ಕ್ಯಾನ್ಸರ್ ಮತ್ತು ಸ್ತನ್ಯಪಾನ

ತಾಯಿ ತನ್ನ ಮಗುವಿಗೆ ಎದೆಹಾಲು ನೀಡಿದರೆ ಕ್ಯಾನ್ಸರಿನ ಘಟನೆ ಅಥವಾ ದುರ್ಮಾಂಸಗಳ ಸಂದರ್ಭಗಳೂ ತೀರ ಉಪೇಕ್ಷಿತವಾದುದು, ಮಕ್ಕಳಿಗೆ ಹಾಲೂಡದ ತಾಯಂದಿರಿಗೆ ಹೋಲಿಸಿದರೆ.

ತಾಯಂದಿರು ಎದೆಹಾಲನ್ನು ಮಕ್ಕಳಿಗೆ ಉಣಿಸಿದರೆ ಮೊಲೆಗಳು ತಮ್ಮ ತಮ್ಮ ಸಹಜ ಕಾರ್ಯಗಳನ್ನು ಎಂದರೆ ಯಾವ ಉದ್ದೇಶದಿಂದ ರೂಪಿತವಾಗಿಯೋ ಅವುಗಳನ್ನು ಸಫಲಗೊಳಿಸುತ್ತದೆ.

ಸ್ತನ್ಯಪಾನ ಮೊಲೆಗಳ ರೂಪವನ್ನು ಮತ್ತು ದೇಹಾರೋಗ್ಯವನ್ನು ಸುಧಾರಿಸುತ್ತದೆ. ಮತ್ತು ಗರ್ಭದ ಸಂಕೋಚನವನ್ನು ತೀವ್ರಗೊಳಿಸುವುದರಿಂದ ಉದರವನ್ನು ಚಪ್ಪಟೆಗೊಳಿಸುತ್ತದೆ. ಅದು ಕ್ಯಾಲೋರಿಗಳನ್ನು ಸುಟ್ಟು ತೂಕವನ್ನು ಕಡಿಮೆ ಪ್ರಮಾಣದಲ್ಲಿ ಇಡುತ್ತದೆ.

## 8. ಸ್ತನ್ಯಪಾನದ ಸಹಜ ವಿಧಾನ

ಎದೆಹಾಲಿನ ಕೆಲವು ಸ್ರಾವಗಳು ಹೆರಿಗೆಯಾದ ಮೊದಲ ಕೆಲವು ದಿವಸಗಳ ನಂತರ ಆರಂಭವಾಗುತ್ತವೆ. ಅದನ್ನು 'ಪ್ರಥಮ ಸ್ತನ್ಯ' ಎಂದು ಕರೆಯುತ್ತಾರೆ. ಆ ಅವಧಿಯಲ್ಲಿ ಮಗುವಿಗೆ ಅದು ಹೆಚ್ಚು ಯುಕ್ತವಾದ ಹೊಂದಿಕೊಳ್ಳುವಂಥ ಆಹಾರ. ಕಾರಣ ಮಗುವಿಗೆ ಬೇಕಾದ ಪೋಷಕಾಂಶಗಳ ಉನ್ನತ ಮಟ್ಟದ ಸಾರವನ್ನು ಅದು ಒಳಗೊಂಡಿರುವುದರಿಂದ ಇದಕ್ಕಾಗಿಯೇ ಹೊಸದಾಗಿ ಹುಟ್ಟಿದ ಮಗುವನ್ನು ಹುಟ್ಟಿದ ಕೂಡಲೇ ತಾಯಿಯ ಮೊಲೆಗೆ ಹಚ್ಚಬೇಕು. ಅಥವಾ ಕೊನೆಯ ಪಕ್ಷ ಮೊದಲ ಗಂಟೆಯ ಒಳಗೆ ಮಗುವಿಗೆ ಸಕ್ಕರೆ ನೀರನ್ನಾಗಲಿ, ಮಗು ಹಾಲಿನ ತಯಾರಿಕೆಗಳನ್ನಾಗಲಿ ಕೊಡುವ ಅವಶ್ಯಕತೆಯಿರುವುದಿಲ್ಲ.

ಮೊದಲ ಕೆಲವು ದಿನಗಳಲ್ಲಿ ಮೊಲೆಹಾಲು ಬಣ್ಣದಲ್ಲಿ, ಸ್ಥಿರತೆಯಲ್ಲಿ ಬದಲಾವಣೆ ಹೊಂದುತ್ತದೆ, ಆದರೆ ಅದರ ಪುಷ್ಟಿಕಾರಕ ಮತ್ತು ಅಪರಿಣಾಮಕಾರಿ ವಿರುದ್ಧದ ಗುಣಗಳು ಒಂದೇ ರೀತಿ ಉಳಿದಿರುತ್ತವೆ.

ತಾಯಿ ಮಗುವಿಗೆ ಎದೆಹಾಲು ಉಣಿಸಿದರೆ ತಾಯಿ ಉತ್ಪಾದಿಸುವ ಹಾಲಿನ ಪ್ರಮಾಣ ತಾಯಿಯ ಹಾಲು ಬೆಳೆಯುವ ಮಗುವಿಗೆ ಅಗತ್ಯತೆಯನ್ನು ಮೀರಿ ಹೆಚ್ಚುತ್ತದೆ. ಮಗುವಿಗೆ ಬೇಕಾದ ಸುಮಾರು ನಾಲ್ಕರಿಂದ ಆರು ತಿಂಗಳವರೆಗೆ ಮಾತ್ರ. ಆದರೆ ಸ್ತನ್ಯಪಾನ 9 ತಿಂಗಳಿಂದ ಒಂದು ವರ್ಷದವರೆಗೆ ಮುಂದುವರಿಯಬಹುದು.

## ಎದೆ ಹಾಲಿನ ಉಣಿಸಿಗೆ ಸಹಾಯ

ತನ್ನ ಮಗುವಿನ ಅಗತ್ಯತೆಗೆ ಸಮೃದ್ಧ ಹಾಲನ್ನು ತಾಯಾರಿಸುವ ಭೌತಿಕ ಸಾಮರ್ಥ್ಯ ತಾಯಿಗಿದ್ದರೂ ಕೂಡ ತನ್ನ ಹಾಲನ್ನು ಕೈ ಬಿಡಲು ಅನೇಕ ಬಿಕ್ಕಟ್ಟುಗಳು ಅವಳಿಗೆ ತೊಡಕುಗಳನ್ನು ತಂದೊಡ್ಡಬಹುದು. ಹಾಗಿದ್ದರೆ ಅವಳಿಗೆ ತಿಳುವಳಿಕೆಯ ನೆರವು ಅಗತ್ಯ, ಸಾಧ್ಯವಾದರೆ ಇನ್ನೊಬ್ಬ ಯಶಸ್ವಿ ಎದೆಹಾಲು ಕೊಡುವವರಿಂದ.

ಯಾವುದೇ ಕೆಲವು ಗಂಭೀರ ಕಾರಣಗಳಿಂದ (ಎದೆ ಗಾಯಗಳು ಇತ್ಯಾದಿ) ತಾಯಿ ಮಗುವಿಗೆ ಹಾಲುಣಿಸಲಾಗದಿದ್ದರೆ ಅವಳು ತನ್ನ ಮಗುವನ್ನು ಅದಷ್ಟು ಎದೆಯ ಹತ್ತಿರಕ್ಕೆ ಸೆಳೆದಿಟ್ಟುಕೊಂಡು ತಾನೇ ಶೀಶೆಯ ಹಾಲನ್ನು ಕುಡಿಸಬಹುದು. ಉದ್ಯೋಗಸ್ಥ ಮಹಿಳೆಯರು ತಮ್ಮ ಮಕ್ಕಳನ್ನು ಬಿಟ್ಟು ಬಿಟ್ಟು ಕೆಲಸಕ್ಕೆ ಹೋಗಬೇಕಾದರೆ, ತಮ್ಮ ಮಕ್ಕಳಿಗೆ ಅಂಥ ಅವಧಿಯಲ್ಲಿ ಎಂದರೆ ಮನೆಯಲ್ಲಿರುವಾಗ ಮಗುವಿಗೆ ಹಾಲುಣಿಸಬೇಕು. ನಿಜದಲ್ಲಿ ಇದು ಭಾಗಶಃ ತಾಯಿ ಹೊರಗಿರುವ ಕಾಲದ ವಿರಹವನ್ನು ಪರಿಹರಿಸಬಹುದು. ಆದ್ದರಿಂದ ಉದ್ಯೋಗಸ್ಥ ಮಹಿಳೆಯರು ಹೆರಿಗೆ ರಜದ ನಂತರ ತಮ್ಮ ಕೆಲಸವನ್ನು ಪುನಃ ಆರಂಭಿಸಿದಾಗ ಹಾಲುಣಿಸುವ ಕ್ರಿಯೆಗೆ ಅದನ್ನು ಮುಂದುವರಿಸಲು ಪ್ರೋತ್ಸಾಹ ಕೊಡಬೇಕು.

## 9. ಮಾನಸಿಕ ಮತ್ತು ಸಾಮಾಜಿಕ ಬೆಳವಣಿಗೆಯ ಮೈಲುಗಲ್ಲುಗಳು

ಮಾನಸಿಕ ಮತ್ತು ಸಾಮಾಜಿಕ ಅಭಿವೃದ್ಧಿ ಶಾರೀರಿಕ ಬೆಳವಣಿಗೆಯ ಜೊತೆ ಜೊತೆಗೆ ಕೈ ಹಿಡಿದೇ ಮುಂದುವರಿಯುತ್ತದೆ.

ಹುಟ್ಟಿನಂದು : ಮಗು ಚೀಪುತ್ತದೆ, ನುಂಗುತ್ತದೆ. ಚಲನವಲನಗಳು ಉದ್ದೇಶ ರಹಿತವಾದವು. ಅವನು ಹಸಿವಿನಿಂದ ನಳುತ್ತಾಳೆ ಮತ್ತು ಕೂಗನ್ನು ಕೂಗುತ್ತಾನೆ. ಅವನನ್ನು ಯೋಗ್ಯವಾಗಿ ಎಚ್ಚರಿಕೆಯಿಂದ ನೋಡಿಕೊಂಡರೆ ತೃಪ್ತಿ ಹೊಂದುತ್ತಾನೆ.

**1**ನೆಯ ತಿಂಗಳು: ಚಲಿಸುವ ದೀಪವನ್ನು ಅನುಸರಿಸುತ್ತಾನೆ.

**2**ನೆಯ ತಿಂಗಳು: ತನಗೆ ತಾನೇ ನಗುತ್ತಾನೆ, ಕೂಜಿತ ಧ್ವನಿಯನ್ನು ಉಚ್ಚರಿಸುತ್ತಾನೆ.

**3**ನೆಯ ತಿಂಗಳು: ತಲೆ ನಿಯಂತ್ರಣ ಸಾಧಿಸುತ್ತಾನೆ. ತಾಯಿಯನ್ನು ಗುರುತಿಸುತ್ತಾನೆ. ತಾಯಿಯನ್ನೇ ಮೊದಲು ಬಯಸುತ್ತಾನೆ. ತಾಯಿ ಹತ್ತಿರ ಬಂದಾಗ ಅಳುವುದನ್ನು ನಿಲ್ಲಿಸುತ್ತಾನೆ.

**4**ನೆಯ ತಿಂಗಳು: ಕೈಗಳ ನಿಯಂತ್ರಣ ಸಾಧಿಸುತ್ತಾನೆ. ವಸ್ತುಗಳನ್ನು ಹಿಡಿದುಕೊಳ್ಳುತ್ತಾನೆ. ಬಹುಕಾಲದವರೆಗೆ ತಲೆಯನ್ನು ಹಿಡಿದುಕೊಳ್ಳುತ್ತಾನೆ. ಅವನು ನಗುತ್ತಾನೆ.

**5**ನೆಯ ತಿಂಗಳು: ಹೊಟ್ಟೆಯ ಮೇಲೆ, ಬೆನ್ನಿನ ಮೇಲೆ ಹೊರಳಾಡುತ್ತಾನೆ. ಬೆಂಬಲ ದೊರಕಿದರೆ ಅವನು ಗಟ್ಟಿಯಾಗಿ ಕುಳಿತುಕೊಳ್ಳುಬಲ್ಲ.

**6**ನೆಯ ತಿಂಗಳು: ನೇರವಾಗಿ ಎದ್ದು ಕುಳಿತುಕೊಳ್ಳುತ್ತಾನೆ ಮತ್ತು ತನಗೆ ತಾನೇ ಕುಳಿತು ಕೊಳ್ಳಲು ಯತ್ನಿಸುತ್ತಾನೆ. ಕೆರಳಿಸಿದರೆ ಅಳುತ್ತಾನೆ. ಉದಾ: ಅವನ ಆಟದ ಸಾಮಾನು ಕಿತ್ತುಕೊಂಡರೆ.

**7**ನೆಯ ತಿಂಗಳು: ಕಾಲಿನಿಂದ ಬಾಯಿಯವರೆಗೆ ಆಡುತ್ತಾನೆ.

**8**ನೆಯ ತಿಂಗಳು: ಹೆಬ್ಬಟ್ಟನ್ನು ಮತ್ತು ತೋರುಬೆರಳನ್ನು ಬಳಸುತ್ತಾನೆ.

**9**ನೆಯ ತಿಂಗಳು: ಕತ್ತರಿ ಹಿಡಿತ, ನಿಲ್ಲಲು ಯತ್ನಿಸುತ್ತಾನೆ. ಆದರೆ ಆಗಾಗ ಬೀಳುತ್ತಾನೆ.

**10**ನೆಯ ತಿಂಗಳು: ಅಂಬೆಗಾಲಿಡುತ್ತಾನೆ ತೆವಳುತ್ತಾನೆ ಅಮ್ಮ, ಅಪ್ಪ ಎಂಬ ಕೆಲವು ಪದಗಳನ್ನು ಉಚ್ಚರಿಸಲು ಆರಂಭಿಸುತ್ತಾನೆ.

**11**ನೇ ತಿಂಗಳು: ಅಲ್ಪಾವಧಿಯವರೆಗೆ ನಿಲ್ಲುವ ಸ್ಥಿತಿಗೆ ಎಳೆದು ನಿಲ್ಲಲು ಯತ್ನಿಸುತ್ತಾನೆ.

ಒಂದು ವರ್ಷ: ಸ್ವಲ್ಪ ಬೆಂಬಲದಿಂದ ಹೆಜ್ಜೆಯಿಡುತ್ತಾನೆ. ಸಣ್ಣಪುಟ್ಟ ಸರಳ ಆಟಗಳನ್ನು,

ಚೇಷ್ಟೆಗಳನ್ನು ಮಾಡುತ್ತಾ ಆನಂದಪಡುತ್ತಾನೆ.

**14 ರಿಂದ 16:** ಹೆಚ್ಚು ಮಕ್ಕಳು ನಡೆಯಲು ಕಲಿಯುತ್ತವೆ. ಮಗು 20 ರಿಂದ 24ರ ಒಳಗೆ ನಡೆಯದಿದ್ದರೆ ವೈದ್ಯರನ್ನು ಕಂಡು ಸಲಹೆ ಪಡೆಯಬೇಕು.

**15 ರಿಂದ 16:** ಮೆಟ್ಟಿಲುಗಳನ್ನು ಹತ್ತುತ್ತಾನೆ, ಚಮಚವನ್ನು ಬಳಸುತ್ತಾನೆ, ಅಣಕಿಸುತ್ತಾನೆ. ಆಟದ ಸಾಮಾನುಗಳೊಡನೆ ಆಡಲು ಇಷ್ಟಪಡುತ್ತಾನೆ. ಕೆಲವು ನಿರ್ದಿಷ್ಟ ಪದಗಳನ್ನು ಅವನು ಹೇಳಬಲ್ಲ, ಆಡಬಲ್ಲ.

**2ನೆಯ ವರ್ಷ:** ಕಣ್ಣು, ಮೂಗು, ಬಾಯಿಗಳನ್ನು ಬೆಟ್ಟಿಟ್ಟು ತೋರಿಸುತ್ತಾನೆ. ತನಗೆ ತಾನೇ ತಿನ್ನಲು ಅಪೇಕ್ಷಿಸುತ್ತಾನೆ ಅವನು ಪ್ರತಿಯೊಂದಕ್ಕೂ ಬೇಡ ಬೇಡ ಎನ್ನುತ್ತಾನೆ.

**3ನೆಯ ವರ್ಷ:** ತನಗೆ ತಾನೇ ಊಟ ಮಾಡುತ್ತಾನೆ, ಹಾಸಿಗೆ ಒದ್ದೆ ಮಾಡುವುದಿಲ್ಲ. ಇತರ ಮಕ್ಕಳೊಡನೆ ಇರಲು ಇಷ್ಟಪಡುತ್ತಾನೆ. ಗುಂಪಿನಲ್ಲಿ ಆಟ ಆಡಲು ಆನಂದ ಪಡೆಯುತ್ತಾನೆ. ತನ್ನ ಆಟದ ಸಾಮಾನುಗಳನ್ನು ತಾನೇ ಜೋಡಿಸಿಟ್ಟುಕೊಳ್ಳುತ್ತಾನೆ. ತನಗೆ ತಾನೇ ಉಡುಪು ಧರಿಸಿಕೊಳ್ಳಲು ಇಚ್ಛಿಸುತ್ತಾನೆ. ಆಟದೊಡನೆ ನಗು ಹೆಚ್ಚು.

**4ನೆಯ ವರ್ಷ:** ಅಂಕಿಗಳನ್ನು ಒಂದು, ಎರಡು, ಮೂರು, ಇತ್ಯಾದಿ ಪುನಃ ಪುನಃ ಹೇಳುತ್ತಾನೆ.

**5ನೆಯ ವರ್ಷ:** ವಾಕ್ಯಗಳನ್ನು ಮತ್ತೆ ಮತ್ತೆ ಹೇಳುತ್ತಾನೆ. ತನ್ನ ಮನೆಯನ್ನೇ ಪ್ರೀತಿಸುತ್ತಾನೆ. ಕತ್ತಲೆಗೆ ಭೂತಗಳಿಗೆ ಭಯಪಡುತ್ತಾನೆ. ಜವಾಬ್ದಾರಿ ತಗೆದುಕೊಳ್ಳಲು ಆಸೆ ಪಡುತ್ತಾನೆ.

## 10. ಪೋಷಕತ್ವದ ಜವಾಬ್ದಾರಿ

ಅಪ್ಪ ಅಮ್ಮ ಇಬ್ಬರಿಗೂ ಫಲವತ್ತತೆಯ ಎಚ್ಚರಿಕೆಯ ಬಗ್ಗೆ ಸೂಕ್ತ ಸೂಚನೆಗಳನ್ನು ಕೊಡಬೇಕು. ಆಗ ಅವರು ಕುಟುಂಬ ಯೋಜನೆಯನ್ನು ಬಳಕೆಗೆ ತರಬೇಕು. ತಾಯಿ ಮತ್ತು ಮಗು ಇಬ್ಬರ ಆರೋಗ್ಯವೂ ಮುಖ್ಯ. ಅದಕ್ಕಾಗಿ ಅಂತರ ಅವಶ್ಯ. ತಾಯಿ ಆರೋಗ್ಯದಿಂದಿರಲು ಇದು ಒಳ್ಳೆಯ ಅವಕಾಶವನ್ನು ಕೊಡುತ್ತದೆ. ಅವಳ ಮಗುವಿಗೆ ಆರಂಭದ ವರ್ಷಗಳಲ್ಲಿ ಆರೈಕೆಯನ್ನು ಮತ್ತು ಗಮನವನ್ನು ಕೊಡಲು ಸದವಕಾಶವನ್ನು ಒದಗಿಸುತ್ತದೆ.

ಭಾರತ ಸರ್ಕಾರ ಜನನ ಸಂಖ್ಯೆ ದಂಪತಿಗಳಿಂದ ಎಂದರೆ ಕುಟುಂಬ ಯೋಜನೆ ಮಾರ್ಗಗಳನ್ನು ಶಸ್ತ್ರಚಿಕಿತ್ಸೆ ಅಥವಾ ಕಾಯಂ ಮಾರ್ಗಗಳಿಂದ ಮಿತಿಗೊಳಿಸುವುದರ ಬದಲು

ಕಂಡುಕೊಂಡಿರುವುದರ ಮೂಲಕ ಕಡಿಮೆಯಾಗುತ್ತಿರುವುದನ್ನು ಕಂಡುಕೊಂಡಿದೆ. (ಕೇಂದ್ರ ಕರೆ ಸಪ್ಟೆಂಬರ್ 18, ಹೊಸದೆಹಲಿ)

ಅನೇಕ ದೇಶಗಳಲ್ಲಿ ಸಂಶೋಧನೆ ಸಹಜ ಕುಟುಂಬ ಯೋಜನೆಯ ಅಂಡಾಣು ಚಿಕಿತ್ಸಾ ವಿಧಾನ (Ovulation Method O.M.) ಹೆಚ್ಚು ಕ್ಷೇಮಕರ, ಪರಿಣಾಮಕಾರಿ ಮತ್ತು ಸ್ವೀಕಾರಾರ್ಹ ಎಂಬುದನ್ನು ತೋರಿಸಿಕೊಟ್ಟಿದೆ. ಅಮೇರಿಕ ಸಂಯುಕ್ತ ಸಂಸ್ಥಾನಗಳ 85ನೇ ಡಿಸೆಂಬರ್ ತಿಂಗಳ ಜನಸಂಖ್ಯಾ ವರದಿಗಳ ಈ ಮುಂದಿನ ಅಂಕಿ ಸಂಖ್ಯೆಗಳನ್ನು ಕೊಟ್ಟಿದೆ.

## ಸಹಜ ಕುಟುಂಬ ಪರಿಣಾಮಕಾರಿ ಪ್ರಮಾಣ ಅನುಕೂಲಗಳು

| ಯೋಜನೆ | ಗರಿಷ್ಠ | ಕನಿಷ್ಠ | |
|---|---|---|---|
| | ಶೇ.94-96 | ಶೇ.75-85 | ಯಾವುದೇ ಸರಬರಾಜಿನ ಅಗತ್ಯವಿಲ್ಲ. ಯಾವುದೇ ಪಾರ್ಶ್ವ ಪರಿಣಾಮಗಳಿಲ್ಲ<br>ಕುಟುಂಬ ಯೋಜನೆಗೆ ಪುರುಷರು ಹೊಣೆಯನ್ನು ಹಂಚಿ ಕೊಳ್ಳುತ್ತಾರೆ ಹೆಂಗಸರು ತಮ್ಮ ದೇಹದ ಬಗ್ಗೆ ತಿಳಿದು ಕೊಳ್ಳುತ್ತಾರೆ. |
| ಪಂಚಾಂಗದ ಲಯ | ಶೆ.85 | ಶೆ.70-80 | ಯಾವುದೇ ಸರಬರಾಜಿನ ಅಗತ್ಯವಿಲ್ಲ. ಯಾವುದೇ ಪಾರ್ಶ್ವ ಪರಿಣಾಮಗಳಿಲ್ಲ.<br>ಪುರುಷರು ಕುಟುಂಬ ಯೋಜನೆಗೆ ಹೊಣೆ ಹೋರುತ್ತಾರೆ |

## 11. ಸಹಜ ಕುಟುಂಬ ಯೋಜನೆ

ಅಂಡಾಣು ಚಿಕಿತ್ಸಾ ವಿಧಾನ (OM) ದಿಂದ

ಶ್ರೀಮತಿ ಶಶಿ ದೇಶಪಾಂಡೆಯವರೊಡನೆ ಒಂದು ಸಂದರ್ಶನ.

ಓ.ಎಂ.ಎಂದರೆ ಏನು ?

ಹೆಂಗಸಿನ ಫಲವತ್ತತೆಯ ಅವಧಿಯ ಎಚ್ಚರಿಕೆಯನ್ನು ಬಳಸಿಕೊಂಡು

ಗರ್ಭಧಾರಣೆಯನ್ನು ತಡೆಗಟ್ಟುವ ಒಂದು ಮಾರ್ಗ.

ಹೆಂಗಸು ಬಹುಕಾಲದವರೆಗೆ ಫಲವತ್ತತೆಯನ್ನು ಹೊಂದಿರುವುದಿಲ್ಲ ಎಂಬುದನ್ನು ನೆನಪ್ಪಿಸಲ್ಲಿಡಿ. ಆದ್ದರಿಂದ ಫಲವತ್ತತೆಯ ಅವಧಿಯಲ್ಲಿ ಸಂಭೋಗ ಕ್ರಿಯೆಯನ್ನು ತಡೆಗಟ್ಟುವುದರಿಂದ ಗರ್ಭ ಧರಿಸುವಿಕೆಯನ್ನು ತಡೆಹಿಡಿಯಬಹುದು.

## ಫಲವತ್ತತೆಯ ಅವಧಿಯುಯನ್ನು ಹೇಗೆ ಒಬ್ಬರು ಗುರುತಿಸಬಹುದು?

ಹೆಂಗಸು ಫಲವತ್ತತೆಯ ಅವಧಿಯನ್ನು ಗುರುತಿಸಲು ಅಂಡಾಣು ಕ್ರಿಯೆಯ ಮಾರ್ಗ ಸಹಾಯ ಮಾಡುತ್ತದೆ. ಅವಳು ತನ್ನ ಮುಟ್ಟಿನ ಆವರ್ತದಲ್ಲಿ ತನ್ನ ಜನನಾಂಗದ ವೇದನೆಗಳ ಮತ್ತು ಕುತ್ತಿಗೆಯ ಲೋಳೆಯ ಬದಲಾವಣೆಗಳನ್ನು ಗಮನಿಸುವುದರ ಮೂಲಕ ಇದನ್ನು ಗುರುತಿಸುತ್ತಾಳೆ.

## ಇದನ್ನು ಹೇಗೆ ಮಾಡಲಾಗುತ್ತದೆ ?

ಪ್ರತಿಯೊಬ್ಬ ಹೆಂಗಸು ಅಂಡಾಣು ಕ್ರಿಯೆಯ ಕಾಲದಲ್ಲಿ ಮಾತ್ರ ಕುತ್ತಿಗೆಯಿಂದ ಹೊರಬರುವ ಲೋಳೆಯ ವಿಸರ್ಜನೆಯನ್ನು ಹೊಂದಿರುತ್ತಾಳೆ. ಈ ವಿಸರ್ಜನೆ ಅವಳಿಗೆ ಒಂದು ಮಾದರಿಯ ಒದ್ದೆಯ ಸಂವೇದನೆಯನ್ನುಂಟು ಮಾಡುತ್ತದೆ. ಆವರ್ತನೆಯ ಕಾಲವನ್ನು ಅವಲಂಬಿಸಿ ಕೋಳೆ ತನ್ನ ಲಕ್ಷಣಗಳನ್ನು ಪರಿವರ್ತಿಸುತ್ತದೆ. ಒದ್ದೆಯ ಸಂವೇದನೆ ಮತ್ತು ಲೋಳೆಯ ಗುಣಮಟ್ಟ ಅಂಡಾಣು ಕ್ರಿಯೆಯ ಆಗಮನದ ಎಚ್ಚರಿಕೆಯನ್ನು ನೀಡುತ್ತದೆ. ಮತ್ತು ಇದು ಫಲವತ್ತತೆಯ ಅವಧಿಗೆ ಜೊತೆಗೂಡುತ್ತದೆ. ಅಂಡಾಣು ಕ್ರಿಯೆ (Ovulation) ವಿಧಾನ ಈ ಬದಲಾವಣೆಗಳನ್ನು ಗಮನಿಸಲು ಮತ್ತು ಗುರುತಿಸಲು ಹೆಂಗಸಿಗೆ ಸಹಾಯ ಮಾಡುತ್ತದೆ.

## ಇದು ಕಲಿಯಲು ಕಷ್ಟವಾದ ಕಾರ್ಯ ವಿಧಾನವಲ್ಲವೆ ?

ಒಳ್ಳೆಯ ಶಿಕ್ಷಣದಿಂದ ಕಷ್ಟವಲ್ಲ. ಹೆಂಗಸು ಒಂದು ನಕ್ಷೆಯನ್ನು ಇಟ್ಟುಕೊಳ್ಳಬೇಕು. ಉಪಾಧ್ಯಾಯನ ಮಾರ್ಗದರ್ಶನದಡಿ ನೋಡುವ ಕಾಣಿಕೆಗಳನ್ನು ಅರ್ಥ ಮಾಡಿಕೊಳ್ಳಲು ಕಲಿಯಬೇಕು. ಒಂದು ವ್ಯಾಸಂಗದಲ್ಲಿ ಶೇ. 97 ಜನ ಸ್ತ್ರೀಯರು ಮೊದಲ ಅಮೃತ್ತದಲ್ಲೇ ಇದನ್ನು ಸರಿಯಾಗಿ ಕಲಿತರು. ಹೆಂಗಸು ತಾನು ತನ್ನ ಶರೀರದ ಬಗ್ಗೆತನಗೆ ಯಾವಾಗಲೂ ಗೊತ್ತಿರುವುದನ್ನು ತಾನು ಕಲಿಯುತ್ತಿದ್ದೇನೆ ಎಂದು ತಿಳಿದುಕೊಳ್ಳುತ್ತಾಳೆ. ಆದರೆ ಅವಳಿಗೆ ಅದು ತಿಳಿದಿದೆ ಎಂಬುದನ್ನು ಅವಳು ತಿಳಿದಿರುವುದಿಲ್ಲ ಅಥವಾ ಅದು ಅವಳ ಫಲವತ್ತತೆಯ ಅವಧಿಯನ್ನು ಸೂಚಿಸುತ್ತದೆ ಎಂಬುದು ಅವಳಿಗೆ ಗೊತ್ತಿರುವುದಿಲ್ಲ.

## ಪ್ರತಿಯೊಂದು ಆವರ್ತದಲ್ಲಿ ವಿಮುಖವಾಗಿರುವ ಅವಧಿಯ ವಿಸ್ತಾರ ಎಷ್ಟು?

ಅದು 5 ರಿಂದ 9 ದಿನಗಳವರೆಗೆ ವ್ಯತ್ಯಾಸವಾಗುತ್ತದೆ.

ಇದು ವಿವಾಹದಲ್ಲಿ ಒತ್ತಡವನ್ನು ಮತ್ತು ಬಿಗಿಯನ್ನು ಉಂಟುಮಾಡುವುದಿಲ್ಲವೇ ?

ಆದರೆ ವಿರುದ್ಧವಾಗಿ ಹೇಳುವುದಾದರೆ ಜೊತೆಯಾಗಿ ಕೂಡಿ ಕೆಲಸ ಮಾಡಿದರೆ ಇದುವರೆಗೆ ಆಡದಿದ್ದ ವಿಷಯವನ್ನು ಸಂಭಾಷಣೆಯ ಮೂಲಕ ಆರಂಭಿಸಿದರೆ ವಿಮುಖವಾದ ಕೆಲವು ದಿನಗಳ ಅನಂತರ ಹೊಸದಾಗಿ ಮತ್ತು ತನ್ನಷ್ಟಕ್ಕೆ ತಾನೆ ಹೊರಹೊಮ್ಮಿದರೆ- ಇವೆಲ್ಲವೂ ದಂಪತಿಗಳು ಹೆಚ್ಚು ನಿಕಟವರ್ತಿಗಳಾಗುವಂತೆ ಸಹಾಯ ಮಾಡುತ್ತದೆ.

## ಈ ಮಾರ್ಗ ಎಷ್ಟು ಪರಿಣಾಮಕಾರಿ

ಅದು ಎರಡು ವಿಷಯಗಳನ್ನು ಅವಲಂಬಿಸುತ್ತದೆ.

1. ಶಿಕ್ಷಣದ ಗುಣಮಟ್ಟ : ಎರಡು, ದಂಪತಿಗಳ ಉದ್ದೇಶ. ಪರಂತು ದಂಪತಿಗಳು ಮಾರ್ಗದ ಅಗತ್ಯತೆಗಳನ್ನು ಅರಿತವರಾಗಿರಬೇಕು ಮತ್ತು ಗರ್ಭಧಾರಣೆಯನ್ನು ತಪ್ಪಿಸಿಕೊಳ್ಳಲು ನಿಜವಾಗಿ ಆಶೆಯುಳ್ಳವರಾಗಿರಬೇಕು. ಈ ಮಾರ್ಗ ಶೇ. 98ರಷ್ಟು ಪರಿಣಾಮಕಾರಿ.

ಆದ್ದರಿಂದ ಒಂದು ಓ.ಎಂ. ನಕ್ಷೆಯನ್ನು ಪಡೆಯಿರಿ ಮತ್ತು ಅದನ್ನು ಸಹಜವಾಗಿ ಓ.ಎಂ. ಮಾರ್ಗದಲ್ಲಿ ತಯಾರಿಸಿಕೊಳ್ಳಿ



ಒಣದಿನಗಳು : ಫಲವತ್ತಿಲ್ಲದ ದಿನಗಳು

ವಿವರಗಳಿಗೆ ಮತ್ತು ನಕ್ಷೆಗೆ ''ಸಹ ಕುಟುಂಬ ಯೋಜನೆ''ಯನ್ನು ಕುರಿತು ಓದಿ.

## ಈ ಮಾರ್ಗವನ್ನು ಬಳಸಲಾರದವರು ಯಾರಾದರೂ ಇದ್ದಾರೆಯೇ ?

ಅಪರೂಪವಾಗಿ ಯಾರೊಬ್ಬರೂ ಇಲ್ಲ. ಹೆಂಗಸಿನ ನಿಯಮಬದ್ಧ ಅಥವಾ ಅನಿಯಮಬದ್ಧ ಆವರ್ತನೆಗಳು ಅಷ್ಟು ಮುಖ್ಯವಲ್ಲ. ಫಲವತ್ತತೆಯ ಅವಧಿಯನ್ನು ಲೋಳೆಯ

ಚಿಹ್ನೆ ಮೂಲಕ ಕಂಡುಹಿಡಿಯಬಹುದು. ಎದೆ ಹಾಲೂಡುವ ಹೆಂಗಸರು ಖಾಯಂ ಆಗಿ ಮುಟ್ಟು ನಿಲ್ಲುವುದಕ್ಕಿಂತ ಮುಂಚಿನ ಹೆಂಗಸರು, ಗುಳಿಗೆಗಳನ್ನು ಬಿಟ್ಟು ಬಿಟ್ಟಿರುವವರು-ಇವರೆಲ್ಲರೂ ಈ ಮಾರ್ಗವನ್ನು ಬಳಸಬಹುದು.

## ಈ ಮಾರ್ಗದ ಪ್ರಧಾನ ಅನುಕೂಲಗಳು ಯಾವುವು ?

ಅದರ ರಕ್ಷಣೆಯೆಂದರೆ:-

1. ಅದು ಯಾವುದೇ ಔಷಧಗಳನ್ನು, ರಾಸಾಯನಿಕಗಳನ್ನು, ಯಾವುದೇ ಚಿಕಿತ್ಸೆಯನ್ನು ಬಳಸುವುದಿಲ್ಲ. ಅದಕ್ಕೆ ಯಾವುದೇ ಸಲಕರಣೆಯ ಅಗತ್ಯವಿಲ್ಲ.
2. ಅದು ಹೆಂಗಸಿನ ಶರೀರದೊಳು ಏನನ್ನೂ ಬಿಡುವುದಿಲ್ಲ.
3. ಹೆಚ್ಚು ಮುಖ್ಯವಾದುದೆಂದರೆ ಶರೀರದ ಸಹಜ ಕಾರ್ಯಕ್ರಮಕ್ಕೆ ಕ್ರಿಯೆಗೆ ಯಾವುದೇ ಅಡೆತಡೆಯಿರುವುದಿಲ್ಲ.
4. ಆದ್ದರಿಂದ ಅದು ಪೂರ್ಣವಾಗಿ ತೊಡಕುರಹಿತ

## ಅದರ ಇತರ ಅನುಕೂಲಗಳು ಯಾವುವು ?

ಅದು ತುಂಬ ಸರಳ-ಒಮ್ಮೆ ನೀವು ಅದನ್ನು ಕಲಿತುಬಿಟ್ಟರೆ ನೀವು ಜೀವನಾದ್ಯಂತ ಮುಂದುವರಿಸಬಹುದು.

ಅದು ಅಗ್ಗ-ನೀವು ಮಗುವನ್ನು ಹೊಂದಬೇಕು ಎಂದು ನಿರ್ಧರಿಸಿದರೆ ಆರೋಗ್ಯದಾಯಕ ಮಗುವನ್ನು ಪಡೆಯಲು ಖಚಿತಗೊಳಿಸಿಕೊಳ್ಳಲು ಫಲವತ್ತತೆಯ ಅವಧಿಯನ್ನು ಅರಿಯುವ ಅದೇ ಜ್ಞಾನವನ್ನು ಬಳಸಬಹುದು.

## ಅತ್ಯಂತ ದೊಡ್ಡ ಅನುಕೂಲವೆಂದರೆ

ಹೆಂಗಸಿಗೆ ಅವಳ ಶರೀರಜ್ಞಾನದಿಂದ ಅವಳಿಗೆ ದೊರಕುವ ಆತ್ಮಭರವಸೆ. ದಂಪತಿಗಳಿಗೆ ಅವರು ಆತ್ಮ ನಿಯಂತ್ರಣವನ್ನು ಸಾಧಿಸಿಕೊಳ್ಳುವ ಸಾಮರ್ಥ್ಯದ ಆತ್ಮನಂಬಿಕೆ, ಅವರು ಜೊತೆ ಜೊತೆಯಾಗಿಯೇ ಕೆಲಸ ಮಾಡುತ್ತಿದ್ದೇವೆ. ಎಂಬ ತಿಳಿವಳಿಕೆ. ಇವೆಲ್ಲವೂ ವಿವಾಹವನ್ನು ಸಂಪದ್ಭರಿತವನ್ನಾಗಿ ಮಾಡುತ್ತವೆ. ಆದ್ದರಿಂದ ಕುಟುಂಬ ಒಂದು ಪೂರ್ಣತೆಯನ್ನು ಪಡೆಯುತ್ತದೆ.

## 12. ಉದ್ಯೋಗಸ್ಥ ಮಹಿಳೆ ಮತ್ತು ತಾಯಿ

ಪ್ರತಿಯೊಬ್ಬ ವಿವಾಹಿತ ದಂಪತಿಗಳು (CREST 14 High SL Bangalore-05) ದರಿಂದ ಯೋಜನೆಯನ್ನು ಹೊಂದಿರುವುದು ತುಂಬಾ ಮುಖ್ಯವಾದ ವಿಷಯ.

ಹೆಂಡತಿ ಮನೆಯಿಂದ ಹೊರಗೆ ಕೆಲಸ ಮಾಡುತ್ತಾಳೆ. ಅವಳು ಅಂತಿಮವಾಗಿ ಕೆಲಸ ಮಾಡುತ್ತಾಳೋ ಅಥವಾ ಇಲ್ಲವೊ ? ಆದರೆ ವಿವಾಹಿತ ದಂಪತಿಗಳು ಈ ಮುಂದಿನ ಅಂಶಗಳ ಹೆಂಡತಿಯ ಉದ್ಯೋಗ ಅನುಕೂಲವಾಗಿರಲಿ ಮತ್ತು ಅನಾನುಕೂಲವಾಗಿರಲಿ ಮೌಲ್ಯಮಾಪನವನ್ನು ಮಾಡಬೇಕಾದುದಂತೂ ಉಚಿತವಾದುದು.

## ಉದ್ಯೋಗಿ ಹೆಂಡತಿ ಮತ್ತು ತಾಯಿ

| | ಪರವಾಗಿ | ವಿರೋಧವಾಗಿ |
|---|---|---|
| 1. | ಉದ್ಯೋಗಸ್ಥಳಾದ ಮಹಿಳೆ ಎಂದರೆ ಅದು ಕುಟುಂಬದ ಆಧಾಯಕ್ಕೆ ಹೆಚ್ಚಿನದು. ಅದು ಕುಟುಂಬಕ್ಕೆ ಆರ್ಥಿಕ ಭರವಸೆಯನ್ನು ನೀಡಬಲ್ಲದು. ಗಂಡ ಅದನ್ನು ಸ್ವಾಗತಿಸಬಹುದು. | ಉದ್ಯೋಗಸ್ಥ ಮಹಿಳೆ ಎಂದರೆ ಆಹಾರ ಬಟ್ಟೆ ಮತ್ತು ಗೃಹಸೇವೆ ಇವುಗಳಿಗೆ ಹೆಚ್ಚಿದ ವೆಚ್ಚ. ನಿವ್ವಳ ಲಾಭ ಎಷ್ಟರದು ? ಬಹುಶಃ ಕುಟುಂಬ ಆರ್ಥಿಕ ಭರವಸೆ ವಿಷಯದಲ್ಲಿ ತಪ್ಪು ಕಲ್ಪನೆ ಹೊಂದಿರಬಹುದು, ಅದೇ ರೀತಿ ಅವನು ಬಹಿರಂಗವಾಗಿ ವಿರೋಧಿಯಾಗಬಹುದು. |
| 2. | ಕೆಲಸವುಳ್ಳ ಹೆಂಡತಿ ಜ್ಞಾನವನ್ನು ಅಥವಾ ವೃತ್ತಿಪರ ಶಿಕ್ಷಣವನ್ನು ಬಳಸಿಕೊಳ್ಳುವ ಅವಕಾಶವಿರುತ್ತದೆ. ಆದ್ದರಿಂದ ಅವಳ ತೃಪ್ತಿ ಹೆಚ್ಚುತ್ತದೆ. ಮತ್ತು ಅವಳಿಗೆ ಒಂದು ರೀತಿ ಸಂತೃಪ್ತಿಯ ಭಾವವನ್ನು ತಂದು ಕೊಡುತ್ತದೆ. | ಅವಳ ಗಂಡು ಅಂಜಿಕೆಯ ಭಾವವನ್ನು ಹೊಂದಬಹುದು ಹಾಗೂ ಅಭಾವದ ಭಾವನೆಯನ್ನು ಬೆಳೆಸಿಕೊಳ್ಳಬಹುದು. ಒಂದು ವೇಳೆ ಅವಳು ಅವನಿಗೆ ಸಮಾನ ಅಥವಾ ಅವನಿಗಿಂತ ಮೇಲಂತಸ್ತನ್ನು ಪಡೆದರೆ ಅವನು ಬಹಿರಂಗವಾಗಿಯೇ ವಿರೋಧಿಯಾಗಬಹುದು. |
| 3. | ಉದ್ಯೋಗಸ್ಥ ಹೆಂಡತಿ ತನ್ನ ಸಂಪರ್ಕಗಳನ್ನು ವಿಸ್ತರಿಸಿಕೊಳ್ಳಬಹುದು- ವಯಸ್ಕರೊಡನೆ, ಅಧಿಕತರ ಗೆಳೆತನಗಳನ್ನು ಮತ್ತು ಗಂಡಸರೊಡನೆ | ಮನೆಯಿಂದ ಹೊರಗೆ ಕೆಲಸ ಮಾಡುವುದರಿಂದ ಹೆಂಡತಿ ಗಂಡನ ಅಥವಾ ಮಕ್ಕಳ ಆಸಕ್ತಿಗಳ ಬಗ್ಗೆ ಹೆಚ್ಚಿನ ಅಸಮರ್ಥತೆಯನ್ನು ಅಥವಾ ಅವರಲ್ಲಿ ಭಾಗಿಯಾಗಲು |

| | | |
|---|---|---|
| | ಅವಳ ಸಂಬಂಧಗಳು, ಅವಳು ಸಿದ್ಧ ವಾಗಿಲ್ಲದಿದ್ದರೆ ಅಪಾಯಕ್ಕೆ ದಾರಿ ಮಾಡಿ ಕೊಡಬಹುದು. | ಅನಿಚ್ಛೆಯನ್ನು ತೋರಿಸಬಹುದು. ಅದು ಕುಟುಂಬದ ಬಂಧುತ್ವಕ್ಕೆ ಮತ್ತು ಒಗ್ಗಟ್ಟಿಗೆ ನಿಜವಾಗಿ ಅಪಾಯದ ಹೆದರಿಕೆಯ ನ್ನುಂಟು ಮಾಡಬಹುದು. |
| 4. | ಕುಟುಂಬಕ್ಕೆ ಹೆಚ್ಚಿನ ಸೌಲಭ್ಯಗಳನ್ನು ಒದಗಿಸಬಹುದು. ವಿಶಾಲವಾದ ಮನೆ ಮತ್ತು ಮನೋರಂಜನೆಯ ಮತ್ತು ವಿದ್ಯಾಭ್ಯಾಸದ ಅವಕಾಶ ಗಳನ್ನು ತಂದುಕೊಡಬಹುದು. | ಕೆಲಸದ ವೇಳೆಗಳ ನಂತರ ತಾಯಿಗೆ ಮನೆಯ ಯೋಗಕ್ಷೇಮ ನೋಡಿ ಕೊಳ್ಳಲು ಕಾಲ ಸ್ವಲ್ಪವೇ ಉಳಿಯ ಬಹುದು. ಮತ್ತು ಹಾಗೇ ಅವಳ ವೈಯ ಕ್ತಿಕ ಪ್ರಭಾವ ಕಡಿಮೆ ಬೀಳಬಹುದು. |

ಮದುವೆಯಲ್ಲಿ ಅತಿಮುಖ್ಯವಾದ ಅಂಶವೆಂದರೆ ಗಂಡ ಹೆಂಡಿರ, ತಂದೆ ಮಕ್ಕಳ ನಡುವಿನ ಸುಖಸಂಬಂಧ, ಹೆಂಗಸು ಮನೆಯಿಂದ ಹೊರಗೆ ಕೆಲಸ ಕೈಗೊಳ್ಳುವುದರಿಂದ ಕೆಟ್ಟು ಹೋಗಬಾರದು. ವಿವಾಹ ಅವಳ ಮೊದಲ ಮತ್ತು ಅವಶ್ಯಕ ವೃತ್ತಿ ಎಂಬುದನ್ನು ಆಕೆ ಅರ್ಥ ಮಾಡಿಕೊಳ್ಳಬೇಕು. ಆದ್ದರಿಂದ ಮನೆಯಲ್ಲಿನ ಸುಖವನ್ನು ಕಾಪಾಡಿಕೊಂಡು ಬರಲು ತನ್ನ ವೃತ್ತಿ ಜೀವನವನ್ನು ಬೇಕಾದರೂ ತ್ಯಾಗ ಮಾಡಲು ಅವಳು ಇಚ್ಛಾಪೂರ್ವಕವಾಗಿ ಸಿದ್ಧಳಿರಬೇಕು.

## 13. ಆರೋಗ್ಯ-ಪಥ್ಯ ಮತ್ತು ಆರೋಗ್ಯಶಾಸ್ತ್ರ

ಆರೋಗ್ಯ ಪ್ರತಿಯೊಬ್ಬ ವ್ಯಕ್ತಿಯ ಮೂಲಹಕ್ಕು. ಆರೋಗ್ಯ ಮನೋಭಾವುಕವಾದುದ್ದು, ಸಾಮಾಜಿಕವಾದುದು ಮತ್ತು ಆಧ್ಯಾತ್ಮಿಕ ಕಲ್ಯಾಣದಿಂದ ಕೂಡಿದ್ದು. ಅದು ಬರಿಯ ಖಾಯಿಲೆಯ ಅಭಾವವಲ್ಲ, ದೋಷವಲ್ಲ ಅಥವಾ ವೈಕಲ್ಯವಲ್ಲ. ಆರೋಗ್ಯ ಗರ್ಭಧಾರಣೆಗೆ ಮುಂಚೆಯೇ ತಾಯಿ ಮತ್ತು ತಂದೆಯರ ಆರೋಗ್ಯಕ್ಕಿಂತ ಮುಂಚೆಯೇ ಆರಂಭವಾಗುತ್ತದೆ.

## 14. ತರುಣ ಆರೋಗ್ಯ : ತರುಣ ಅವಶ್ಯಕತೆಗಳು

ಸಮತೋಲನದ ಪಥ್ಯ. ಸಸಾರಜನಕ, ಶರ್ಕ ಪಿಷ್ಠಾದಿಗಳು, ಕೊಬ್ಬು, ಖನಿಜಗಳು, ವಿಟಮಿನ್ನುಗಳು ಮತ್ತು ಪ್ರಮಾಣರೀತ್ಯ ನೀರು ಎಲ್ಲವೂ ದಿನಕ್ಕೆ ಒಟ್ಟು 2400 ಕ್ಯಾಲೋರಿಗಳನ್ನು ಒಳಗೊಂಡಿರಬೇಕು.

ಹುಡುಗ ಅಥವಾ ಹುಡುಗಿಯರ ಶರೀರ ವ್ಯಾಯಾಮದಲ್ಲಿ ಅಥವಾ ಹೆಚ್ಚು ಶ್ರಮದಾಯಕ ಕಾರ್ಯಕ್ರಮದಲ್ಲಿ ತೊಡಗಿದ್ದರೆ ಈ ಪ್ರಮಾಣ 3000 ಕ್ಯಾಲೋರಿಗೆ

ಹೆಚ್ಚುತ್ತದೆ.

ಭಾರತದಲ್ಲಿ ಸಸಾರಜನಕ ತುಂಬ ದುಬಾರಿ. ಪಥ್ಯದ ಸಸಾರಜನಕದ ಅಭಾವವನ್ನು ಸಾಮಾನ್ಯವಾಗಿ ಎದುರಿಸಲಾಗುತ್ತದೆ. ಅದು ರಕ್ತಹೀನತೆಗೆ ದಾರಿ ಮಾಡಿಕೊಡುತ್ತದೆ ಮತ್ತು ಅನೇಕ ಖಾಯಿಲೆಗಳಿಗೆ ಮುಂಚಿತವಾಗ್ಗಿಯೇ ಸಿದ್ಧಪಡಿಸುತ್ತದೆ. ಆದ್ದರಿಂದ ಸಮತೋಲನ ಪಥ್ಯ ಆರೋಗ್ಯಕ್ಕೆ ತುಂಬ ಮುಖ್ಯ. ಮತ್ತು ವಿಶೇಷವಾಗಿ ವ್ಯಾಸಂಗಗಳಿಗೆ ಅದು ಅತಿ ಮುಖ್ಯ. ಮಾನಸಿಕ ಚಟುವಟಿಕೆ ವಿಶೇಷವಾಗಿ ಪೌಷ್ಠಿಕ ಆಹಾರವನ್ನು ಅವಲಂಬಿಸುತ್ತದೆ.

## 15. ಉಡುಪು

ಉಡುಪು ಹಗುರುವಾಗಿರಬೇಕು, ಹಿತವಾಗಿರಬೇಕು. ಬಿಗಿಯಾದ ಒಳಅಂಗಿಯನ್ನು ವಿಶೇಷವಾಗಿ ನಿದ್ರೆಯ ಸಮಯದಲ್ಲಿ ತಪ್ಪಿಸಬೇಕು.

ನಿಮಗೆ ವ್ಯಕ್ತಿಗತವಾಗಿ ಯಾವುದು ಹೊಂದುತ್ತದೆಯೋ ಅದೇ ನಿಮಗೆ ಸೊಗಸಾದುದು, ನಾಗರಿಕವಾದುದು. ಚಂಚಲತೆಯ ಸೊಗಸುಗಳನ್ನು ಅನುಕರಿಸಬೇಡಿ. ತುಟಿಯ ಕ್ರೀಮ್ಸ್, ಕಾಸ್ಮೆಟಿಕ್ಸ್‌ನ್ನು ಮತ್ತು ತುಟ್ಟಿಯ ಶಾಂಪುಗಳನ್ನು ಆದಷ್ಟು ದೂರವಿಡಿ. (ಸೀಗೆಕಾಯಿ ಉತ್ತಮ) ಚರ್ಮ ಹಾಳುಗಳನ್ನು ಹೊರಹಾಕುವ ಒಂದು ಅಂಗ. ರಂಧ್ರಗಳನ್ನು ತೆರೆದಿಟ್ಟು ಅದು ಉಸಿರಾಡುವುದಕ್ಕೆ ಮುಕ್ತವಾಗಿ ಬಿಡಬೇಕು.

ಹೆಚ್ಚು ಸುವಾಸನಾಯುಕ್ತ ಸಾಬೂನುಗಳನ್ನು ತಪ್ಪಿಸಬೇಕು.

## 16. ನಿಯಮಬದ್ಧ ವ್ಯಾಯಾಮ

ಎಲ್ಲಾ ವಯಸ್ಸಿನವರಿಗೆ ಇದು ಅಗತ್ಯ. ಅದರಲ್ಲೂ ವಿಶೇಷವಾಗಿ ಮಕ್ಕಳಿಗೆ ಮತ್ತು ತರುಣರಿಗೆ. ಒಬ್ಬರು ಅಥವಾ ಇಬ್ಬರು ಪೋಷಕರು ಕುಳ್ಳಾಗಿದ್ದರೆ ಮಕ್ಕಳು ತಮ್ಮ ಹುಟ್ಟಿದ ದತ್ತಿಯನ್ನು ಒಳ್ಳೆಯ ಮತ್ತು ನಿಯಮಬದ್ಧ ವ್ಯಾಯಾಮಗಳಿಂದ ವೃದ್ಧಿಪಡಿಸಿಕೊಳ್ಳಬಲ್ಲವು. 21 ವರ್ಷಗಳ ನಂತರ ಬೆಳವಣಿಗೆ ನಿಕೃಷ್ಟ. ಸರಿಯಾದ ಯೋಗ್ಯ ಆಹಾರಗಳಿಂದ, ವಿಶ್ರಾಂತಿಯಿಂದ ಮತ್ತು ವ್ಯಾಯಾಮದಿಂದ ತಕ್ಕಮಟ್ಟಿಗೆ ಎತ್ತರವನ್ನು ಹೆಚ್ಚಿಸಿಕೊಳ್ಳಬಹುದು. ವ್ಯಾಯಾಮ ಸ್ನಾಯುಗಳನ್ನು ಬಲಿಯುತವನ್ನಾಗಿ ಮಾಡುತ್ತದೆ. ರಕ್ತಚಲನೆಯನ್ನು ವೃದ್ಧಿಗೊಳಿಸುತ್ತದೆ ಮತ್ತು ಅಂಗಾಂಗಗಳನ್ನು ಚೋದಿಸುತ್ತದೆ.

ಅದರಲ್ಲೂ ವಿಶೇಷವಾಗಿ ಹುಡುಗರಿಗೆ ಆಟಗಳು ಮೇಲೆ ಬೀಳುವ ಪ್ರವೃತ್ತಿಗಳಿಗೆ ಮತ್ತು ಶಾರೀರಿಕ ಶಕ್ತಿಗೆ ದಾರಿ ಮಾಡಿಕೊಡುವ ಲೈಂಗಿಕ ಶಕ್ತಿಗಳಿಗೆ ಒಳ್ಳೆಯ ಆರೋಗ್ಯದಾಯಕ ಮಾರ್ಗಗಳನ್ನು ಒದಗಿಸುತ್ತವೆ.

ಆರೋಗ್ಯಕರ ವಾತಾವರಣ ಒಳ್ಳೆಯ ವಂಶಪರಂಪರೆಯ ಗುಣಗಳನ್ನು ಬೆಳೆಸಿಕೊಳ್ಳಲು ತುಂಬಾ ಅವಶ್ಯಕ ಹಾಗೂ ಸಂಭವಿಸುವ ಕೆಡುಕಿನ ಯಾವುದೇ ಗುಣಗಳನ್ನು ಅಡಗಿಸಿಡಲು

ವಾತಾವರಣ ಅವಶ್ಯಕ. ವಿನೋದ, ಕ್ರೀಡೆ ಮತ್ತು ವಿರಾಮಕ್ಕೆ ಸನ್ನಿವೇಶಗಳು ಇವೆಲ್ಲಾ ಬದುಕಿನ ಆಶಾದಾಯಕ ಮತ್ತು ಧನಾತ್ಮಕ ದೃಷ್ಟಿಗೆ ತುಂಬಾ ಮುಖ್ಯ. ಇದೇ ಆರೋಗ್ಯ. ಪೂರ್ಣ ವ್ಯಕ್ತಿಗೆ ಬಂಗಾರದ ಗುರುತು. ಯೋಗ ಉತ್ತಮ ರೂಪದ ವ್ಯಾಯಾಮ.

## 17. ಆರೋಗ್ಯಶಾಸ್ತ್ರ

ಇಂಗ್ಲೀಷಿನ 'ಹೈಜಿಯನ್' ಎಂಬ ಶಬ್ದ ಗ್ರೀಕರ ದೇವತೆ 'ಹೈಜಿಯ' ಎಂಬುವಳ ಹೆಸರಿನಿಂದ ಹುಟ್ಟಿ ಬಂದಿದೆ. ಅವಳ ಧ್ಯೇಯವೆಂದರೆ 'ದೈವತ್ವಕ್ಕೆ ಎರಡನೆಯದೆ ಶುಭ್ರತ್ವ'

ಭಾರತದಲ್ಲಿ 'ದಿನನಿತ್ಯದ ಸ್ನಾನ' ಅವಶ್ಯಕ. ಹಾಗೆಯೇ ಒಳವಸ್ತ್ರದ ನಿತ್ಯದ ಬದಲಾವಣೆಯೂ ಕೂಡ.

ಕೂದಲು ಬಾಚಿಕೊಳ್ಳುವುದು, ಹಲ್ಲುಜ್ಜುವುದು ಮತ್ತು ಉಗುರು ಕತ್ತರಿಸಿ ಶುದ್ಧ ಮಾಡಿಕೊಳ್ಳುವುದು. ಒಳ್ಳೆಯ ಆಕರ್ಷಕ ನೋಟವನ್ನು ತಂದುಕೊಡುತ್ತದೆ.

ಲೆಂಗಿಕ ಆರೋಗ್ಯ ಗಂಡಸರಿಗೂ ಹೆಂಗಸರಿಗೂ ತುಂಬಾ ಮುಖ್ಯವಾದುದು. ಅದರಲ್ಲೂ ಹುಡುಗಿಯರಿಗೆ ಮುಟ್ಟಿನ ಸಮಯದಲ್ಲಂತೂ ಅದು ವಿಶೇಷವಾಗಿ ಮುಖ್ಯ.

ಭಾರತದಲ್ಲಿ ನಾವು ಕಡಿಮೆ ಕ್ಯಾಲ್ಸಿಯಂ (ಸುಣ್ಣ) ಮತ್ತು ಕಬ್ಬಿಣವನ್ನು ಬಳಸುತ್ತೇವೆ. (1500-600 ಮಿ.ಗ್ರಾಂ ಒಂದು ದಿನಕ್ಕೆ ತರುಣನೊಬ್ಬನಿಗೆ ಶಿಫಾರಸ್ಸು ಮಾಡಿರುವ ಪ್ರಮಾಣ) ಮತ್ತು 25-35 ಮಿ.ಗ್ರಾಂ ದಿನಕ್ಕೆ) ಸಸ್ಯಹಾರಿಯಾದರೂ ಹಾಲು, ಬೇಳೆಗಳು ಮತ್ತು ಸೊಪ್ಪು ಮೊದಲಾದ ತರಕಾರಿಗಳನ್ನು ಅಧಿಕ ಪ್ರಮಾಣದಲ್ಲಿ ಸ್ವೀಕರಿಸಬೇಕು.

## 18. ತರುಣನೊಬ್ಬನಿಗೆ ಸೂಚಿಸಿರುವ ಪಥ್ಯ

ಬೆಳಗಿನ ತಿಂಡಿ : ಹಾಲು 6 ಔನ್ಸ್, ಕಾಫಿ ಅಥಾ ಟೀ. ಸಕ್ಕರೆ, ಬ್ರೆಡ್ (2 ತುಂಡು)-ಮೊಟ್ಟೆ ಅಥವಾ ಚಪಾತಿ-3, ಇಡ್ಲಿ, ದೋಸೆ.

ಬೆಳಗಿನ ಮಧ್ಯ: ಕುರುಕಲು ಅಥವಾ ಹಣ್ಣು (ಪರಂಗಿ) ಅಥವಾ ಕಡಲೆಕಾಯಿ

ಮಧ್ಯಾಹ್ನ : ಅಕ್ಕಿ 4 ಔನ್ಸ್‌ಗಳು (ಬೇಯಿಸಿದಾಗ 12 ಔನ್ಸ್)

ಮಾಂಸ 4 ಔನ್ಸ್‌ಗಳು

ಬೇಳೆ - 1 ಔನ್ಸ್ (ಬೇಯಿಸಿದ ಮೇಲೆ 3ಔನ್ಸ್)

ಮೊಸರು 3 ಔನ್ಸ್‌ಗಳು

ಕುಡಿಗಳು, ತರಕಾರಿಗಳು ಮತ್ತು ಹಸಿರು ಸೊಪ್ಪು 3 ಔನ್ಸ್‌ಗಳು

4.00 ಗಂಟೆಗೆ: ಹಾಲು 6 ಔನ್ಸ್‌ಗಳು

ಕಾಫಿ ಅಥವಾ ಟಿ, ಸಕ್ಕರೆ

ಬಾಳೆಹಣ್ಣು - 1

7.00 ಗಂಟೆಗೆ: ಅಕ್ಕಿ 3 ಔನ್ಸಗಳು (ಬೇಯಿಸಿದಾಗ 9ಔನ್ಸಗಳು)

ಮಾಂಸ 3 ಔನ್ಸ, ತರಕಾರಿ ಮತ್ತು ಸೊಪ್ಪು 3 ಔನ್ಸ್

9.00 ಗಂಟೆಗೆ: ಸಾಧ್ಯವಾದರೆ 6 ಔನ್ಸ್‌ಗಳು

ದಿನನಿತ್ಯದ ಅನುಮತಿಗಳು. ಸಕ್ಕರೆ ಅಥವಾ ಬೆಲ್ಲ - 11 ಔನ್ಸ್. ಅಡಿಗೆಯಲ್ಲಿನ ಎಣ್ಣೆ- 4ಔನ್ಸ್‌ಗಳು. ಅಕ್ಕಿಯ ಬದಲು ಚಪಾತಿ (ಗೋಧಿ) ಯನ್ನು ಆಗಾಗ ಬಳಹಬಹುದು. ಬೆಲ್ಲ ಸಕ್ಕರೆಗಿಂತ ಹೆಚ್ಚು ಪುಷ್ಟಿದಾಯಕ. ಅದರಲ್ಲಿ ಕಬ್ಬಿಣ ಮತ್ತು ಹೆಪ್ಪು ಇರುತ್ತದೆ. ರಾಗಿ ಕೂಡ ಒಂದು ಉತ್ತಮ ಧಾನ್ಯ. ಅದರಲ್ಲಿ ಕಬ್ಬಿಣದ ಮತ್ತು ಸುಣ್ಣದ ಅಂಶ ತುಂಬಿರುತ್ತದೆ.

ಸಸ್ಯಾಹಾರಿಯಾದರೆ: ದಿನವೂ 6 ಔನ್ಸ್‌ಗಳ ತರಕಾರಿಯನ್ನು ಬಳಸಬೇಕು. 3ಔನ್ಸಿನ ಬೇಳೆ ಮತ್ತು ಸೋಯಾ ತಯಾರಿಕೆಗಳು.

## ವರ್ಗ ಚಟುವಟಿಕೆ

### 1. ಅಭ್ಯಾಸ

ನಾನೊಬ್ಬ ವಾಸ್ತವಿಕ ಪೋಷಕನೆ, ನೀವುಎಂದಾದರೂ ಕೈಗೊಳ್ಳಬಹುದಾದ ಮುಖ್ಯ ತೀರ್ಮಾನಗಳಲ್ಲಿ ಒಂದನ್ನು ಕುರಿತ ವಿಷಯದ ಬಗ್ಗೆ ಇಲ್ಲಿ ಕೆಲವು ಆಲೋಚನೆಯ ಪ್ರಶ್ನೆಗಳಿವೆ.

ನನಗೆ ಬೇಕಾದ ಜೀವನ ರೀತಿಗೆ ಹೊಂದತಕ್ಕ ಮಗುವನ್ನು ಹೊಂದುವ ಮತ್ತು ಬೆಳೆಸುವ ಆಸೆಯನ್ನು ಹೊಂದಿರುವುದು.

1. ಬದುಕಿನಿಂದ ನನಗಾಗಿ ಏನು ಬೇಕಾಗಿದೆ ? ನಾನು ಯಾವುದನ್ನು ಮುಖ್ಯ ಎಂದು ಭಾವಿಸುತ್ತೇನೆ ?
2. ನಾನು ಮಗುವನ್ನು ಮತ್ತು ಕೆಲಸವನ್ನು ಒಂದೇ ವೇಳೆಯಲ್ಲಿ ನಿರ್ವಹಿಸಬಲ್ಲನೇ ? ಎರಡಕ್ಕೂ ನನ್ನಲ್ಲಿ ಕಾಲ ಮತ್ತು ಶಕ್ತಿ ಇದೆಯೇ ?
3. [illegible] ಮಾಡಬೇಕಾದುದನ್ನು, ನಾನು ಮಾಡಲು ಇಷ್ಟಪಟ್ಟಾಗ, ನನ್ನ ಸ್ವಾತಂತ್ರ್ಯವನ್ನು ಬಿಟ್ಟುಕೊಡಲು ನಾನು ಸಿದ್ಧನಾಗಿರಬಲ್ಲನೆ ?

4. ನನ್ನ ಸಾಮಾಜಿಕ ಬದುಕನ್ನು ಮೋತಗೊಳಿಸಲು ಮತ್ತು ಮನೆಯಲ್ಲಿ ಹೆಚ್ಚು ಕಾಲ ಕಳೆಯಲು ನಾನು ಇಷ್ಟ ಪಡಬಲ್ಲನೆ ? ನಾನು ನನ್ನ ಮುಕ್ತ ಸಮಯವನ್ನು ಮತ್ತು ರಹಸ್ಯವನ್ನು ತಪ್ಪಿಸಬಲ್ಲೆನೆ ?

5. ನಾನು ಮಗುವನ್ನು ಬೆಂಬಲಿಸಲು ನನಗೆ ಸಾಧ್ಯವೆ ? ಮಗುವನ್ನು ಬೆಳೆಸಲು ಎಷ್ಟು ಕಷ್ಟ ಎಂಬುದು ನನಗೆ ಗೊತ್ತಿದೆಯೆ ?

## 2. ಚರ್ಚಿಸಿ

1. ಪೋಷಕತ್ವ ಎಂದರೆ ಏನು ? ಅದನ್ನು ಒಂದು ಬದುಕು ಎಂದು ಮಾನ್ಯತೆ ಹೊಂದಿದೆಯೆ ? ಅದಕ್ಕಾಗಿ ಏನು ತರಬೇತಿ ಕೊಡಲಾಗುತ್ತದೆ.

2. ಪ್ರತಿಯೊಂದು ಸಲ ಮಗು ಹುಟ್ಟಿದಾಗಲೂ ದೇವರು ಮಾನವ ಜಾತಿಯ ಬಗ್ಗೆ ಆಯಾಸ ಗೊಂಡಿಲ್ಲ ಎಂಬುದನ್ನು ನಮಗೆ ತೋರಿಸಿಕೊಡುತ್ತದೆ.

-ರವೀಂದ್ರನಾಥ ಠಾಕೂರ್

3. ಬಡತನ ದುರದೃಷ್ಟ, ಆದರೆ ಪ್ರೀತಿಯ ಅಭಾವ ಒಂದು ಅತಿ ದೊಡ್ಡ ಬಡತನ.

-ಮದರ್ ಥೆರೆಸಾ

## 3. ಅಭ್ಯಾಸ

ನಿಮ್ಮ ಸ್ವಂತ ಪಥ್ಯದ ಕ್ಯಾಲೋರಿ ಮೌಲ್ಯವನ್ನು ಲೆಕ್ಕ ಹಾಕಿ.

4. ಅಂಗವಿಕಲರ ಗೃಹಕ್ಕೆ/ಕೇಂದ್ರಕ್ಕೆ ಒಂದು ಭೇಟಿ.

5. ತರಗತಿ (ವರ್ಗ) ಅಂಗವಿಕಲ ಮಗುವನ್ನು ಒಂದು ವರ್ಷದವರೆಗೆ ದತ್ತು ತೆಗೆದುಕೊಳ್ಳುತ್ತದೆ. ಮತ್ತು ಹಣವನ್ನು ಶೇಖರಿಸಿಸುತ್ತದೆ. ಅವಳನ್ನು/ಅವನನ್ನು ಇತ್ಯಾದಿ ಭೇಟಿ ಮಾಡುತ್ತಾರೆ.

6. 'ಮಕ್ಕಳ ಪೋಷಣೆ' ಮೇಲೆ ಚಲನಚಿತ್ರ.

7. 'ಪೋಷಣೆ' ಮತ್ತು 'ಸಮತೋಲನ ಪಥ್ಯ' ಇವುಗಳ ಮೇಲೆ ಮಾತುಕತೆ (ಭಾಷಣ)



ಅಧ್ಯಾಯ ೧೫

# ಜನಸಂಖ್ಯೆ ಶಿಕ್ಷಣ ಮತ್ತು ಕುಟುಂಬ ಯೋಜನೆ

ಮಾನವನ ಇತಿಹಾಸ, ಶಿಕ್ಷಣ ಮತ್ತು ಅಪಘಾತಗಳ ನಡುವಿನ ಹೆಚ್ಚು ಹೆಚ್ಚಾದ ಸ್ಪರ್ಧೆಯಾಗಿ ಹೆಚ್ಚು ನಡೆಯುತ್ತಿದೆ. ಎಚ್.ಜಿ.ವೆಲ್ಸ್.

ಜನಸಂಖ್ಯೆ ಶಿಕ್ಷಣ ಜನರ ಮೇಲೆ, ಜನಸಂಖ್ಯೆ ಚಲನಶೀಲ ಶಕ್ತಿಯ ಅಘಾತದ ಅರಿವನ್ನು ಕೆರಳಿಸುವಿಕೆಯೇ ಆಗಿದೆ.

ಅದರ ಗುರಿ ವಿಶೇಷವಾಗಿ ತರುಣರಲ್ಲಿ, ಪಿತೃಮಾತೃತ್ವದ ಹೊಣೆಗಾರಿಕೆಯ ತತ್ವಗಳನ್ನು ಮನಸ್ಸಿನಲ್ಲಿ ನೆಲಗೊಳಿಸುವುದು.

ತರುಣರೇ ಜನಸಂಖ್ಯಾ ನಿರ್ಣಯಗಳನ್ನು ಕೈಕೊಳ್ಳುವವರು. ಅವರ ಪಾತ್ರವನ್ನು ಅದರ ಪ್ರಮುಖತೆಯನ್ನು ಅವರು ಅರ್ಥಮಾಡಿಕೊಳ್ಳುವುದು ಮತ್ತು ಆರೋಗ್ಯದಾಯಕ ಪ್ರವೃತ್ತಿಗಳನ್ನು ಅಭಿವೃದ್ಧಿ ಪಡಿಸಿಕೊಳ್ಳುವುದು ತೀರ ಅಭಿವೃದ್ಧಿ ಅವಶ್ಯ.

ಇದೇ ಜನಸಂಖ್ಯೆ ಶಿಕ್ಷಣದ ಗುರಿ. ಅದನ್ನು ಕೌಟುಂಬಿಕ ಜೀವನ ಶಿಕ್ಷಣದ ಜೊತೆ ಒಟ್ಟುಗೂಡಿಸಬೇಕು.

ಜನಸಂಖ್ಯೆಯೇ ಜನ. ಜನರ ಕ್ಷೇಮವನ್ನು ನೋಡಿಕೊಳ್ಳಿ ಜನಸಂಖ್ಯೆ ತನ್ನನ್ನು ತಾನೇ ನೋಡಿಕೊಳ್ಳುತ್ತದೆ.

| ಅಂಕಿ ಅಂಶಗಳು | ಇತ್ತೀಚಿಗೆ ದೊರಕುವ ಅಂಕಿಗಳು |
|---|---|
| ಪ್ರದೇಶ ೮೫ | ೩೨,೮೭,೭೮೨ ಚ.ಕಿ.ಮಿ. |
| ಕೋಟಿ ಸಂಖ್ಯೆಯಲ್ಲಿ ಒಟ್ಟು ಜನಸಂಖ್ಯೆ | ೮೨೦ ಕೋಟಿ |
| ಕೋಟಿ ಸಂಖ್ಯೆಯಲ್ಲಿ ಮಹಿಳೆಯರ ಜನಸಂಖ್ಯೆ | ೩೯೭ ಕೋಟಿ |
| ಪ್ರತಿ ಹೆಂಗಸಿಗೆ ಮಕ್ಕಳ ಸಂಖ್ಯೆ (೧೯೮೦ ರಿಂದ ೮೫) | ೪.೨ ಕೋಟಿ |
| ಜನನ ಪ್ರಮಾಣ ದರ ೧೯೮೬ | ೩೨.೬ |
| ಮರಣ ಪ್ರಮಾಣ ದರ ೧೯೮೬ | ೧೧.೧ |
| ಬೆಳವಣಿಗೆ ಪ್ರಮಾಣ ೧೯೮೯ | ೨೧.೫ ಅಥವಾ ಶೇ ೨೦ |
| ಶಿಶು ಮರಣ ಪ್ರಮಾಣ ದರ ೧೯೮೬ | ೯೬ |

| | |
|---|---|
| ೧೫ ವರ್ಷ ವಯಸ್ಸಿನ ಜನಸಂಖ್ಯೆ ಶೇಕಡಾ (೮೫) | ३೮೦೦ |
| ೧೫ ರಿಂದ ೧೯ ವರ್ಷ ವಯಸ್ಸಿನ ಜನಸಂಖ್ಯೆ ಶೇಕಡಾ ೮೫ | ೧೧೦೦ |
| ಸ್ತ್ರೀಯರಲ್ಲಿ ಫಲವತ್ತತೆಯ ಪ್ರಮಾಣದರ ವಯಸ್ಸು | |
| ೧೫ ರಿಂದ ೧೯ | ೪೦.೮ |
| ೧೫ ರಿಂದ ೧೯ ಕಿಂದ ಒಟ್ಟು ಫಲವತ್ತತೆಯ ಪ್ರಮಾಣದರ | ೪.೫ |
| ಸ್ತ್ರೀಯರ ಕಾಣಿಕೆ ಶೇಕಡಾವಾರು | ೨೦.೦೦ |
| ನಗರ ಜನಸಂಖ್ಯೆ ೮೧ | ೨೩.೩ |
| ಗ್ರಾಮೀಣ ಜನಸಂಖ್ಯೆ ೮೧ | ೭೬.೭೦ |
| ಪ್ರತಿ ಜಿ.ಎನ್.ಪಿ. ತಲೆಯೊಂದಕ್ಕೆ ೮೭ ರೂ. | ೨೯೭೪.೫ |
| ಪ್ರತಿ ವೈದ್ಯನಿಗೆ ಜನಸಂಖ್ಯೆ ೮೭ | ३೭३೦ |
| ಆಸ್ಪತ್ರೆ ಹಾಸಿಗೆಗೊಂದಕ್ಕೆ ಜನಸಂಖ್ಯೆ ೮೭ | ೧೯೬೧ |
| ಮಧ್ಯಮ ಶಾಖೆ ಪ್ರವೇಶ ಪುರುಷರು: ಸ್ತ್ರೀಯರು | ३೯ :೨೦ |
| ವಿವಾಹದಲ್ಲಿ ಕಾನೂನಿನ ವಯಸ್ಸು (ಸ್ತ್ರೀ :ಪುರುಷ) | ೧೮ :೨೧ |
| ವಿವಾಹಿತ ಸ್ತ್ರೀಯರ ಶೇಕಡಾವಾರು ೨೦ | ೫೦ |
| ಜನಸಂಖ್ಯೆ ಸಾಂದ್ರತೆ ೮೧ | ೨೧೬ ಚ.ಕಿ.ಮೀ. |
| ಬದುಕಿನ ನಿರೀಕ್ಷಣೆ (ಸ್ತ್ರೀ : ಪುರುಷ) | ೫೪.೫ ೫೫ |

ಜನನದ ಪ್ರಮಾಣದ ಕಡಿಮೆಯಾಗುತ್ತಿದೆ. ಸಾವಿನ ಪ್ರಮಾಣ ಧುಮುಕಿದೆ. ಆ ಎರಡರ ನಡುವಿನ ವ್ಯತ್ಯಾಸ, ಹುಟ್ಟಿನ ಪ್ರಮಾಣ ಹೆಚ್ಚು ಕಡಿಮೆ ಶೇಕಡಾ ಎರಡರಷ್ಟು. ಭಾರತ ವಿಶ್ವ ಜನಸಂಖ್ಯೆಯ ಶೇಕಡ ೧೫ ರಷ್ಟಕ್ಕೆ ಲೆಕ್ಕಕೊಡುತ್ತದೆ. ಹಾಗೂ ಅಭಿವೃದ್ಧಿ ಪ್ರಪಂಚದ ಶೇಕಡಾ ೨೧ರಷ್ಟು ಮತ್ತು ವಿಶ್ವದ ಭೂಪ್ರದೇಶಕ್ಕೆ ಅನ್ವಯಿಸಿದಂತೆ ಶೇಕಡಾ ೨.೪ ಮಾತ್ರ.

**ಹುಟ್ಟಿನ ಅಧಿಕ ಪ್ರಮಾಣಕ್ಕೆ ಕಾರಣಗಳು**

೧. ವಿವಾಹದ ಸರ್ವವ್ಯಾಪಕತ್ವ

೨. ಮಕ್ಕಳು ಆರ್ಥಿಕ ಬಂಡವಾಳ

३. ಗ್ರಾಮೀಣ ಪ್ರದೇಶಗಳಲ್ಲಿ ವಿಶೇಷವಾಗಿ ವಿವಾಹಕ್ಕೆ ಚಿಕ್ಕ ವಯಸ್ಸು.

೪. ಪುರುಷ ಲಿಂಗಕ್ಕೆ ಆದ್ಯತೆ.

೫. ಅಧಿಕ ವಯಸ್ಸಿನ ಬಾಲಕಃಮಗುವಿನ ಮರಣ, ನಷ್ಟವನ್ನು ಸರಿತೂಗಿಸಲು ಕರೆ.

೬. ಧಾರ್ಮಿಕ ಮತ್ತು ಸಾಮಾಜಿಕ ಪ್ರತಿಷ್ಠೆ.

**ಮರಣ ಪ್ರಮಾಣ ಇಳಿದುದಕ್ಕೆ ಕಾರಣಗಳು.**

೧. ಸುಧಾರಿತ ಆರೋಗ್ಯ ಸೌಲಭ್ಯಗಳು.

೨. ಸಿಡುಬು, ಕಾಲರ ಪ್ಲೇಗ ವಿಷಮಶೀತಜ್ವರ ಕ್ಷಯ ಇವುಗಳ ತಡೆಗಟ್ಟುವಿಕೆ ಆದ್ದರಿಂದ ಮರಣ ಸಂಖ್ಯೆಯಲ್ಲಿ ಬೀಳು.

३. ಬರ ಅಥವಾ ಸಾಂಕ್ರಾಮಿಕ ರೋಗಗಳಿಲ್ಲದಿರುವುದು.

೪. ಯುದ್ಧಗಳಿಲ್ಲದಿರುವುದು.

೫. ಸುಧಾರಿತ ನಿರ್ಮಲೀಕರಣ ಮತ್ತು ಆರೋಗ್ಯ ಶಿಕ್ಷಣ.

### ಜನಸಂಖ್ಯಾ ನಿಯಂತ್ರಣ

೧. ಶಿಕ್ಷಣ ವಿಶೇಷವಾಗಿ ಸ್ತ್ರೀಯರಿಗೆ (ಭಾರತದಲ್ಲಿ ಅಕ್ಷರಸ್ತರ ಒಟ್ಟು ಪ್ರಮಾಣ ಶೇಕಡಾ ೩೦ ಹೆಂಗಸರಲ್ಲಿ ಇದು ಶೇಕಡಾ ೧೮ ಗ್ರಾಮೀಣ ಪ್ರದೇಶಗಳಲ್ಲಿ ಶೇಕಡಾ ೯ ಮಾತ್ರ).

೨. ವಿವಾಹದ ವಯಸ್ಸನ್ನು ಹೆಚ್ಚಿಸಲು ಬಲವಂತ ಪಡಿಸುವುದು ( ವಿವಾಹದ ಕಾನೂನುಬದ್ಧ ವಯಸ್ಸು ಹುಡುಗಿಯರಿಗೆ ೧೮ ವರ್ಷ ಹುಡುಗಿಯರಿಗೆ ೨೧ ವರ್ಷ ಇದನ್ನು ಸರಿಯಾಗಿ ಜಾರಿಗೆ ತರುತ್ತಿಲ್ಲ).

೩. ಕುಟುಂಬ ಯೋಜನೆ ಮಾಹಿತಿ ಮತ್ತು ಬಳಕೆ.

೪. ವ್ಯವಸಾಯದ ಆಧುನೀಕರಣ

೫. ಮುದಿ ವಯಸ್ಸಿನ ನಿವೃತ್ತಿ ವೇತನ ಮತ್ತು ಭದ್ರತಾ ಸೌಲಭ್ಯಗಳು

೬. ವಿವಾಹಕ್ಕೆ ಸಿದ್ಧತೆ ಮತ್ತು ಶಾಲೆಗಳಲ್ಲಿ ಕಾಲೇಜುಗಳಲ್ಲಿ ಮತ್ತು ಕಲ್ಯಾಣ ಕೇಂದ್ರಗಳಲ್ಲಿ ಪೋಷಕತ್ವ.

೭. ಮನುಷ್ಯನ ಪೂರ್ಣ ಅಭಿವೃದ್ಧಿಗೆ ಬಡತನರೇಖೆಯ ಕೆಳಗಿರುವವರಿಗೆ ಎತ್ತರಿಸಿದ ಮಟ್ಟದ ಬದುಕು.

ಜನಸಂಖ್ಯೆಯ ಬೆಳವಣಿಗೆಯನ್ನು ವರ್ಣಿಸುವುದಕ್ಕೆ 'ಜನಸಂಖ್ಯಾ ಸ್ಫೋಟ', ಎಂಬ ಪದವನ್ನು ಬಳಸುತ್ತಾರೆ. ಇದು ಸಂಪನ್ಮೂಲಗಳ ಬೆಳವಣಿಗೆಯನ್ನು ಮೀರುತ್ತದೆ. ಆದ್ದರಿಂದ ಸನ್ನಿವೇಶ ಸ್ಫೋಟಕಾವಸ್ಥೆಯಿಲ್ಲದೆ, ಹಿಂಸೆ, ಹಸಿವು, ನಿರುದ್ಯೋಗ, ಬಡತನ ಮತ್ತು ಅನರಕ್ಷತೆ ಇವುಗಳೇ ಪರಿಣಾಮ.

ಜನಸಂಖ್ಯೆ ಶಕ್ತಿಗಳು ಜನಸಂಖ್ಯೆಯಲ್ಲಿನ ಬದಲಾವಣೆಗಳಿಗೆ ಅನ್ವಯಿಸುತ್ತವೆ. ಇದಕ್ಕೆ ಕಾರಣ ಜನಸಂಖ್ಯೆಯನ್ನು ನೇರವಾಗಿ ಪ್ರಭಾವಿಸುವ ಹುಟ್ಟಿನ ಪ್ರಮಾಣ, ಮರಣ ಪ್ರಮಾಣ ಮತ್ತು ವಲಸೆ ಮತ್ತು ಇತರ ಅಂಶಗಳು.

ಜನಸಂಖ್ಯೆಯನ್ನು ಕುರಿತು, ವಿವರವಾದ ಮಾಹಿತಿಗೆಃ ಉಲ್ಲೇಖಗಳಿಗೆ ಆಕ್ಸಫರ್ಡ್ ಮತ್ತು ಇಂಡಿಯಾ ಬುಕ್ ಹೌಸ ಪ್ರಕಟಿಸಿದ ಬದುಕಿನ ವೈಶಿಷ್ಟದ ಜನಸಂಖ್ಯಾ ಶಿಕ್ಷಣ ಎಂಬ ಪುಸ್ತಕವನ್ನು ಓದಿ.

ಕುಟುಂಬ ಯೋಜನೆಯ ತಿಳುವಳಿಕೆಗೆ ಅಗತ್ಯವಾದದ್ದೆಂದರೆ, ಶಿಕ್ಷಣಕ್ಕೆ ಎರಡನೆಯದಾಗಿ ಕುಟುಂಬ ಯೋಜನೆ.

### ಕುಟುಂಬ ಯೋಜನೆ ಎಂದರೇನು

ಕುಟುಂಬ ಯೋಜನೆ ಎಂದರೆ ತಮ್ಮ ಕುಟುಂಬದ ಪೂರ್ಣ ವೃದ್ಧಿಗೆ ತಮ್ಮ ಅಗತ್ಯಗಳನ್ನು ಲೆಕ್ಕಕ್ಕೆ ತೆಗೆದುಕೊಂಡು ತಾಯಿತಂದೆಗಳು ತಮ್ಮ ಮಕ್ಕಳ ಸಂಖ್ಯೆ ಮತ್ತು ಮಕ್ಕಳನ್ನು ಪಡೆಯುವ ಅಂತರಕ್ಕೆ ಸಂಬಂಧಿಸಿದಂತೆ ಯೋಚಿಸುವುದು, ಅಷ್ಟೇ ಅಲ್ಲದೆ ಮಕ್ಕಳನ್ನು ಪಡೆಯದಿರುವ ಅಫಲಿತ ದಂಪತಿಗಳಿಗೆ ಗರ್ಭಧರಿಸುವುದಕ್ಕೆ ಸಹಾಯ ಮಾಡುವದನ್ನು ಗುರುತಿಸುವುದೂ ಕೂಡ.

**ಕುಟುಂಬ ಯೋಜನೆಯನ್ನು ಯಾವಾಗ ಬಳಸುವದು**

ಕುಟುಂಬ ಯೋಜನಾ ಕ್ರಮಗಳನ್ನು ಮಕ್ಕಳ ಅಂತರವನ್ನು ನಿರ್ಧರಿಸಿಕೊಳ್ಳುವುದು ಮತ್ತು ಕುಟುಂಬದಲ್ಲಿ ಮಕ್ಕಳ ಸಂಖ್ಯೆಯನ್ನು ಮಿತಿಗೊಳಿಸುವುದು.

**ಕುಟುಂಬ ಯೋಜನೆಯ ಮಾರ್ಗಗಳ ವರ್ಗೀಕರಣ**

ಇದನ್ನು ಅವರ ಕ್ರಿಯಾ ರೀತಿಗನುಸಾರವಾಗಿ ನಡೆಸತಕ್ಕದ್ದು.

೧. ಖಾಯಂ ಆದ ಅಥವಾ ರದ್ದು ಪಡಿಸಲಾಗದ ಮಾರ್ಗಗಳು ಚಿಕಿತ್ಸಾ ಮಾರ್ಗಗಳು ಅಥವಾ ಸಂತಾನಶಕ್ತಿಹರಣ.

ಅ. ಗಂಡಸು -ವ್ಯಾಸೆಕ್ಟೆಮಿ

ಆ. ಹೆಂಗಸು- ಟ್ಯೂಬೆಕ್ಟೆಮಿ

೧೧. ತಾತ್ಕಾಲಿಕ ಅಥವಾ ರದ್ದುಪಡಿಸಬಹುದಾದಾ ಮಾರ್ಗಗಳು

೧. ನಡತೆಯ ಮಾರ್ಗಗಳು

ಅ. ತಡೆಹಿಡಿಯುವ ಸಂಭೋಗ

ಬ. ಮೀಸಲಿಟ್ಟ ಸಂಭೋಗ

೨. ನೈಸರ್ಗಿಕ ಅಥವಾ ಶಾರೀರಿಕ ಮಾರ್ಗಗಳು- ೧೪ನೆಯ ಅಧ್ಯಾಯದಲ್ಲಿ ವಿವರಿಸಿರುವ N.F.P. ಮೂರು ಮಾರ್ಗಗಳೆಂದರೆ:

ಅ. ಓವ್ಯಲೇಷನ್ ಮಾರ್ಗ (ಬಿಲ್ಲಿಂಗ್ಸ್)

ಆ. ಸಿಂಪ್ಟಾಥರ್ಮಿಕ್ ಮಾರ್ಗ

ಇ. ಬಾಸಲ್‌ಬಾಡಿ ಟೆಂಪರೇಚರ್ ಮಾರ್ಗ

೩. ರಾಸಾಯನಿಕ ಮಾರ್ಗಗಳು

ಅ. ಫೋಮ್ ಗುಳಿಗೆಗಳು.

ಆ. ಸ್ಪರ್ಮಿ ಸೈಡಲ್ ಜೆಲ್ಲಿಸ್, ಪೋಮ್ಸ್, ಪೇಸ್ಟ್ ಮತ್ತು ಕ್ರೀಮ್

ಆ. ಸ್ಪಾಂಚ್ ಅಥವಾ ಡಚಸ್.

೪. ಯಾಂತ್ರಿಕ ಅಥವಾ ತಡಬೇಲಿಯ ಮಾರ್ಗಗಳು

ಅ. ಕಾಂಡಮ್ ಅಥವಾ ನಿರೋಧ

ಆ. ಡಯಾಫ್ರಂ ಅಥವಾ ಸರ್ವಿಕಲ್ ಟೋಪಿ.

೫. ಐ.ಯು.ಡಿ. ಅಥವಾ ಲೂಪ್

ಇಂಟ್ರಯುಟರಿನ್ ಡಿವೈಸ್

೬. ಹಾರ್ಮೋನಲ್ ಮಾರ್ಗಗಳು

ಅ. ಕಾಂಟ್ರಸೇಪ್ಟಿವ್ ಗುಳಿಗೆ - ಹೆಂಗಸರಿಗೆ

ಆ. ಕಾಂಟ್ರಸೇಪ್ಟಿವ್ ಗುಳಿಗೆ -ಗಂಡಸರಿಗೆ

ಇ. ಡಿಪೊ ಪ್ರೊವೆರಾ - ಇಂಜೆಕ್ಟಬೆಲ್

ಈ. ಹಾರ್ಮೋನಲ್ ಇಂಪ್ಲಾಂಟ್ಸ್ - ಹೆಂಗಸರಿಗೆ

೧. ನಡತೆಯ ಮಾರ್ಗಗಳು

ಅ. ತಡೆಹಿಡಿಯುವ ಸಂಭೋಗ.

ಹೆಸರೇ ಹೇಳುವಂತೆ ಇದು ಒಂದು ರೀತಿಯ ತಡೆಹಿಡಿದ ಸಂಭೋಗ ಅಥವಾ ರತಿಕ್ರಿಯೆ.

ಕ್ರಿಯೆ :

ಇದೊಂದು ನಡತೆಯ ಮಾರ್ಗ, ಇದರಲ್ಲಿ ಗಂಡಸು ಹೆಂಗಸಿನ ಯೋನಿಯಿಂದ ತನ್ನ ಶಿಶ್ನವನ್ನು ವೀರ್ಯಸ್ಖಲನಕ್ಕೆ ಮೊದಲೇ ಹಿಂತೆಗೆದುಕೊಳ್ಳುತ್ತಾನೆ.

ಅನುಕೂಲಗಳು

ವೆಚ್ಚವಿಲ್ಲದಿರುವುದು.

ಅನಾನುಕೂಲಗಳು

೧. ಅಪೂರ್ಣ ಲೈಂಗಿಕ ಆನಂದ
೨. ಸಾಕಷ್ಟು ಮುಂಚಯೇ ಶಿಶ್ನವನ್ನು ಹಿಂದಕ್ಕೆ ಸೆಳೆದು ಕೊಳ್ಳದಿದ್ದರೆ ಅದು ತಪ್ಪಿ ಹೋಗಬಹುದು. ಅಥವಾ ಬೇರೆ ರೀತಿಯಲ್ಲಿಯೂ ಆ ತಪ್ಪು ಸಂಭವಿಸಬಹುದು. ಏಕೆಂದರೆ ಶಿಶ್ನದ ಮೂತಿಯಲ್ಲಿ ಯಾವಾಗಲೂ ವೀರ್ಯಣುಗಳಿಂದSparm ಕೂಡಿದ ಸೀಮನ್ ಇದ್ದೇ ಇರುತ್ತದೆ.
೩. ಪಾಲುದಾರರಿಬ್ಬರಿಗೂ ಮಾನಸಿಕವಾಗಿ ಅಸಂತುಷ್ಟಿ: ತಡೆ ಉಂಟಾದದ್ದರಿಂದ.
೪. ಹಿಂದೆಗೆದದ್ದು ಸಕಲಾದಲ್ಲಿ ಆಗಲಿಲ್ಲ ಎಂಬ ಹೆದರಿಕೆ.

ಪರಿಣಾಮತ್ವ

ಅಂದಾಜು ಮಾಡುವುದು ಕಷ್ಟ. ಆದರೆ ತುಂಬ ಉನ್ನತ ಮಟ್ಟದ್ದು. ಸುಮಾರು ಶೇಕಡಾ ೩೦.

ಸಂಭೋಗದ ಮೀಸಲಾತಿ

ಸಾಮಾನ್ಯವಾಗಿ ನಡೆಯುವ ಸಂಭೋಗ ಕ್ರಿಯೆಯಲ್ಲಿ ಗಂಡಸು, ತನ್ನನ್ನು ತಾನು ಹತೋಟಿಯಲ್ಲಿಯಿಟ್ಟು ಕೊಳ್ಳುವುದರಿಂದ, ವಿಸರ್ಜನೆ ಸಂಭವಿಸುವುದರಿಂದ ತಡೆ ಹಿಡಿಯಬಹುದು. ಮುದಿ ದಂಪತಿಗಳಿಗೆ ಸೂಕ್ತವಾಗಬಹುದು. ಈ ಮಾರ್ಗವನ್ನು ಬಳಸುವಲ್ಲಿ ಯಾವುದೇ ನೈತಿಕ ಅಡ್ಡಿಯಿರುವುದಿಲ್ಲ.

೨. ನೈಸರ್ಗಿಕ ಅಥವಾ ಶಾರೀರಿಕ ಮಾರ್ಗಗಳು ಅಥವಾ NEP

೧೪ನೆಯ ಅಧ್ಯಾಯದಲ್ಲಿ ವರ್ಣಿಸಿರುವ NEP ಬಗ್ಗೆ ಓದಿ ನೋಡಿ.

೩. ರಾಸಾಯನಿಕ ಮಾರ್ಗಗಳು

ಸ್ತ್ರೀಯರು ಬಳಸುವ ಈ ಮಾರ್ಗಗಳು. ಫೋಮ್ ಗುಳಿಗೆಗಳು, ಜೆಲ್ಲಿಗಳು ಅಥವಾ ಕ್ರೀಮ್ ಇವುಗಳನ್ನು ಸಂಭೋಗಕ್ರಿಯೆಗೆ ಮೊದಲು ಯೋನಿಯಲ್ಲಿ ಅಡಗಿಸಿಡಬೇಕು. ಟುಡೆ ಎಂದು ಕರೆಸಿಕೊಳ್ಳುವ ಸಪೋಸಿಟರಿಗಳು ಭಾರತದಲ್ಲಿ ಮಾರಾಟವಾಗುತ್ತಿವೆ.

**ಕ್ರಿಯೆ**

ಈ ರಾಸಾಯನಿಕಗಳು ಧಾತುಗಳನ್ನು ನಾಶಮಾಡುವುದರ ಮೂಲಕ ಕ್ರಿಯಾ ಶೀಲವಾಗುತ್ತವೆ. ಅವು ಧಾತುಗಳನ್ನು ಬದುಕಲು ಬಿಡುವುದಿಲ್ಲ ಮತ್ತು ಗರ್ಭಾಶಯವನ್ನು ಫಲವತ್ತಾಗಿಸಲು ಕೊಳವೆಗೆ ನುಗ್ಗಿ ಹೋಗುತ್ತವೆ.

**ಫೋಮ್ ಗುಳಿಗೆಗಳು**

ಎರಡು ಗುಳಿಗೆಗಳನ್ನು ನೀರಿನಲ್ಲಿ ನೆನಸಬೇಕು ಮತ್ತು ಯೋನಿಯಲ್ಲಿ ಮೇಲುಗಡೆ ಸ್ತ್ರೀ ಇಟ್ಟುಕೊಳ್ಳಬೇಕು ೩೫ ನಿಮಿಷಗಳವರೆಗೆ ಸಂಭೋಗಾರಂಭಕ್ಕೆ ಮೊದಲು, ಅವು ದಪ್ಪಫೋಮ್ ಆಗುತ್ತವೆ ಮತ್ತು ಧಾತುಗಳನ್ನು ಸೆರೆಹಿಡಿದು ನಾಶಮಾಡುತ್ತವೆ.

**ಗರ್ಭನಿರೋಧಕ ಜೆಲ್ಲಿಗಳು ಅಥವಾ ಕ್ರೀಂ**

ಇವು ಧಾತುನಾಶಕಗಳೇ. ಹೆಂಗಸು ಸಂಭೋಗಕ್ರಿಯೆಗೆ ಮುಂಚೆ ಬಳಸುತ್ತಾಳೆ ಏರೊಸೋಲ್‌ಗಳನ್ನು ಬಳಸಲಾಗುತ್ತದೆ.

**ಸ್ಪಂಜು :** ಟುಡೆ ಎಂದು ಕರೆಯಲಾಗುತ್ತದೆ. ಇದೊಂದು ಕೊರಳಿನ ಟೋಪಿ. ಕೊರನ್ನು ಅಡ್ಡಗಟ್ಟುವುದಲ್ಲದೆ, ಧಾತುನಾಶಕಗಳನ್ನು ಬಿಡುಗಡೆ ಮಾಡುತ್ತದೆ ಮತ್ತು ವೀರ್ಯವನ್ನು ಹೀರಿಕೊಳ್ಳುತ್ತದೆ. ಅದನ್ನು ೨೪ ಗಂಟೆಗಳವರೆಗೆ ಇಟ್ಟುಕೊಳ್ಳಲಾಗುತ್ತದೆ.

**ಅನುಕೂಲಗಳು**

ಏನೂ ಇಲ್ಲ.

**ಅನಾನುಕೂಲಗಳು**

೧. ಗಂಡಸಾಗಲಿ ಹೆಂಗಸಾಗಲಿ ರಸಾಯನಿಕಗಳ ಬಗ್ಗೆ ಅನಿಚ್ಛೆಯ ಪ್ರತಿಕ್ರಿಯೆಯನ್ನು ವೃದ್ಧಿಪಡಿಸಿಕೊಳ್ಳಬಹುದು. ಇದರಿಂದ ಅವುಗಳ ಬಳಕೆಯನ್ನು ನಿಲ್ಲಿಸುವುದು ಅಗತ್ಯವಾಗಬಹುದು, ಅವುಗಳನ್ನು NEP ಜೊತೆಗೆ ಬಳಸಬಾರದು ಏಕೆಂದರೆ ಅವು ಮ್ಯುಕಸ್ ಕಾಣ್ಕೆಗಳೊಡನೆ ಗಲಿಬಿಲಿಯುಂಟು ಮಾಡಬಹುದು. ಧಾತುನಾಶಕ ಬಳಕೆ, ಧಾತುನಾಶಕಗಳನ್ನು ಬಳಸಿದ ಸ್ತ್ರೀಯರಲ್ಲಿ ಹುಟ್ಟಿದ ಮಕ್ಕಳಲ್ಲಿ, ಹುಟ್ಟಿನಿಂದಲೇ ಬರುವ ಅಸಾಧಾರಣ ಕುರುಹುಗಳೊಡನೆ ಸೇರಿರುವುದರಲ್ಲಿ ಕಂಡು ಬಂದಿದೆ. ಇದೊಂದು ಗಂಭೀರ

ಸಮಸ್ಯೆ. ಇದಕ್ಕೆ ಸಾರ್ವಜನಿಕ ಶಿಕ್ಷಣ ಅಗತ್ಯ. (ಧಾತುನಾಶಕ ಬಳಕೆದಾರರಲ್ಲಿ ಹುಟ್ಟಿದ ಅಸಾಧಾರಣ ರೋಗಗಳು ಶೇಕಡಾ ೨ರಷ್ಟು).

೨. ಹೆಚ್ಚಿನ ವೆಚ್ಚ.

೩. ಎಲ್ಲ ಧಾತುಗಳು ನಾಶವಾಗದಿರುವುದರಿಂದ ಎಷ್ಟೋ ವೇಳೆ ಇದು ವಿಫಲವಾಗುತ್ತದೆ.

೪. ಗಲೀಜು ಮತ್ತು ಅಸೌಂದರ್ಯ

೫. ಹೆಚ್ಚು ಜನ ಸ್ತ್ರೀಯರು ಅವುಗಳನ್ನು ತಮ್ಮ ದೇಹದಲ್ಲಿಟ್ಟು ಕೊಳ್ಳಲು ಇಷ್ಟಪಡುವುದಿಲ್ಲ.

೬. ರಕ್ತ ಪ್ರವಾಹದಲ್ಲಿ ಹೀರಿಕೊಳ್ಳುತ್ತದೆ, ಹಾಲಿನಲ್ಲಿ ಸೇರುತ್ತದೆ ಎದೆ ಹಾಲು ಕುಡಿಯುವ ಮಕ್ಕಳಿಗೆ ಕೆಡಕುಂಟು ಮಾಡುತ್ತದೆ. I.C.M.R

**ಪರಿಣಾಮಕಾಂತ್ರ** ಸುಮಾರು ಶೇಕಡಾ ೭೦

**೪ ಯಾಂತ್ರಿಕ ಅಥವಾ ಅಢತಡೆಯ ಮಾರ್ಗಗಳು**

**ಕ್ರಿಯೆ**

ಅವು ಅಡ್ಡಗೋಡೆಯ ಹಾಗೆ ಕ್ರಿಯಾಶೀಲವಾಗುತ್ತವೆ. ಧಾತು ಅಂಡವನ್ನು ಮುಟ್ಟಲು ಅಡ್ಡಿ ಮಾಡುತ್ತದೆ.

**ಎ. ಕರುಳಿನ ಪೊರೆ**

ಹೆಂಗಸರು ಉಪಯೋಗಿಸುತ್ತಾರೆ, ಸರಿಯಾದ ಆಕಾರವನ್ನು ಗೊತ್ತುಪಡಿಸಲು ಮೊದಲಿಗೆ ವೈದ್ಯ ಅದನ್ನು ಜೋಡಿಸುತ್ತಾನೆ. ಅದನ್ನು ರಬ್ಬರಿನಿಂದ ತಯಾರಿಸಿರುತ್ತದೆ.

ಸ್ಪ್ರಿಂಗ್ ಅಂಚಿನಿಂದ ಕೂಡಿರುತ್ತದೆ ಮತ್ತು ಮೂರು ಆಕಾರಗಳಲ್ಲಿ ದೊರಕುತ್ತದೆ.

**ಮಾರ್ಗ**

ಸಂಭೋಗ ಕ್ರಿಯೆಗೆ ಮುಂಚೆ ಹೆಂಗಸು ಕರುಳು ಪೊರೆಯನ್ನು ಒಂದು ಸ್ಥಿತಿಯಲ್ಲಿ ಇಟ್ಟುಕೊಳ್ಳುತ್ತಾಳೆ. ಮೊದಲ ಧಾತುನಾಶಕ ಕ್ರೀಂನಿಂದ ಅದನ್ನು ಮೃದುವಾಗಿ ಮಾಡಲಾಗುತ್ತದೆ. ಅದು ಧಾತುಗಳನ್ನು ನಾಶಮಾಡುತ್ತದೆ ಮತ್ತು ನಿಧಾನವಾಗಿ, ಯೋನಿಯೊಳಕ್ಕೆ ತುರುಕಲಾಗುವುದು. ಆಗ ಕಂಠನಾಳಕ್ಕೆ ಜೋಡಿಸಲಾಗುತ್ತದೆ. ಮುಚ್ಚಳ ಮುಚ್ಚಿ ಕಂಠನಾಳವನ್ನು ಮುಚ್ಚಿ ಧಾತುಗಳು ಪ್ರವೇಶಿಸದಂತೆ ಮಾಡಲಾಗುತ್ತದೆ. ಸಂಭೋಗವಾದ ಮೇಲೆ ೮೧೦ ಗಂಟೆಗಳ ನಂತರ, ಅದನ್ನು ತೆಗೆದು ತೊಳೆದು ಪುನಃ ಬಳಸಲು ಒಣಗಿಸಲಾಗುತ್ತದೆ.

**ಅನುಕೂಲಗಳು**

ರದ್ದು ಮಾಡತಕ್ಕ ವಿಧಾನ.

**ಅನಾನುಕೂಲಗಳು**

೧. ಕರುಳಿನ ಪೊರೆ ಜನನಾಂಗಗಳ ಕೈ ಕೆಲಸಗಳನ್ನು ಒಳಗೊಳ್ಳುತ್ತದೆ.

೨. ಕಚ್ಚಾರಬ್ಬರು ವಿಷಯಕ್ಕೆ ಅನಿಚ್ಛೆ ಮತ್ತು ಅಥವಾ ಧಾತುನಾಶಕಕ್ಕೆ ವೇಷ ಬೆಳೆಯಬಹುದು.
೩. ಜೊತೆಗೆ ವಸ್ತಿಕುಹರದಲ್ಲಿ (Peteria) ನೋವು, ಸ್ನಾಯು ಹಿಡಿತ, ಮೂತ್ರನಾಳಗಳ ಸ್ಥಿರತೆ, ಚೀಲಗಳ ಕೆರಳುವಿಕೆ ಅಥವಾ ಮೂತ್ರದ್ವಾರದ ಸೋಂಕು ಇವುಗಳು ಅದರ ಬಳಕೆಯಿಂದ ಕಂಡುಬರಬಹುದು.
೪. ಸಂಭೋಗ ಸುಖಕ್ಕೆ ಅಡತಡೆ ಉಂಟಾಗಬಹುದು.
೫. ವೆಚ್ಚದಾಯಕ (ಕಾಲಕಾಲಕ್ಕೆ ಬದಲಾಯಿಬೇಕಾಗುತ್ತದೆ).

**ಪರಿಣಾಮಕಾರಿತ್ವ**

ತನಗೆ ತಾನೆ ಬಳಸಿದರೆ ಶೇಕಡಾ ೫೦. ಧಾತುನಾಶಕ ಕ್ರೀಮಿನೊಡನೆ ಅಥವಾ ಜೆಲ್ಲಿಯೊಡನೆ ಬಳಸಿದರೆ ಶೇಕಡಾ ೭೫.

**ಬಿ. ಕೊಂಡಮ್ ಅಥವಾ ನಿರೋಧ**

ಇದೊಂದು ಸಂತಾನಹರಣ ಉಪಕರಣ. ಇದನ್ನು ತೆಳುವಾದ ರಬ್ಬರಹಾಳೆಯಿಂದ ತಯಾರಿಸಿರುತ್ತದೆ. ಗಂಡಸಿನಿಂದ ಇದು ಉಪಯೋಗಿಸಲ್ಪಡುತ್ತದೆ. ಅದನ್ನು ಎನಿಗುರಿದವಿ ಶಿಶ್ನಕ್ಕೆ ತೊಡಗಿಸಲಾಗುತ್ತದೆ. ವೀರ್ಯಾಣುಗಳು, ಗರ್ಭದೊಳಕ್ಕೆ ಪ್ರವೇಶಿಸಲು ಸಾಧ್ಯವಾಗದಂತೆ ತಡೆಯುತ್ತದೆ. ಅದನ್ನು ಹಿಂದೆಗೆದುಕೊಳ್ಳುವುದರಲ್ಲಿ ಎಚ್ಚರದಿಂದಿರಬೇಕು. ಇಲ್ಲದಿದ್ದರೆ ಕೊಂಡಮ್ ಜಾರಿಹೋಗುವುದರಲ್ಲಿ ಪರಿಣಾಮ ಹೊಂದಬಹುದು ಆದರಿಂದ ಎಚ್ಚರ ಅಗತ್ಯ. ವಿಸರ್ಜನೆಯ ನಂತರ, ರಬ್ಬರ ಚೀಲ ವೀರ್ಯಾಣುಗಳನ್ನು ಸೆರೆಹಿಡಿದುಕೊಂಡು ಅವು ಅಂಡಾಶಯಕ್ಕೆ ಸೇರದಂತೆ ತಡೆಹಿಡಿದಿಟ್ಟುಕೊಳ್ಳುತ್ತದೆ.

**ಅನುಕೂಲಗಳು**

೧. ಲಿಂಗ ವರ್ಗಾವಣೆ ರೋಗಗಳನ್ನು STD ತಡೆಯಲೂ ಬಳಸಲಾಗುತ್ತದೆ.
೨. ಹೆಚ್ಚು ವೆಚ್ಚವಿಲ್ಲದ್ದು.

**ಅನಾನುಕೂಲಗಳು**

೧. ಅದನ್ನು ಶಿಶ್ನ ನಿಗರಿದ ಮೇಲೆ ತೊಡಗಿಸಬೇಕಾಗಿರುವದರಿಂದ ಸಂಭೋಗ ಕ್ರಿಯೆಯನ್ನು ತಡೆ ಹಿಡಿಯುತ್ತದೆ.
೨. ವಿಫಲಗೊಳ್ಳಲೂ ಬಹುದು, ಅದರಲ್ಲಿ ಅತಿಸೂಕ್ಷ್ಮ ರಂಧ್ರಗಳಿರಬಹುದಾದರಿಂದ ಧಾತುಗಳು ತಪ್ಪಿಸಿಕೊಂಡು ಹೋಗಬಹುದು.
೩. ರಬ್ಬರ್ ಅಥವಾ ಪ್ಲಾಸ್ಟಿಕ್ ಕಾರಣದಿಂದ ಅನಿಚ್ಚೆಲ ಪ್ರತಿಕ್ರಿಯೆ ಸಾಧ್ಯ.
೪. ಸಂಭೋಗ ಸುಖಕ್ಕೆ ಅಡತಡೆಯೊಡ್ಡುತ್ತದೆ.
೫. ಸೋಂಕು ಕೊಂಡಮ್ ಅನ್ನು ಮರಳಿ ಉಪಯೋಗಿಸಿದಾಗ/ ಹೆಂಡತಿಯಲ್ಲಿ ಸೇರಬಹುದು.
೬. ಜೊತೆಗೆ, ಕೊಂಡಮ್ ಅನ್ನು ಬಳಸಿದಾಗ ಕೆಲವು ಗಂಡಸರಿಗೆ ನಿಗುರುವಿಕೆಯನ್ನು ಹಾಗೆಯೇ ಉಳಿಸಿಕೊಳ್ಳುವುದಾಗುವುದಿಲ್ಲ. ಗಂಡಸು ಅಥವಾ ಹೆಂಗಸು ಅಥವಾ ಇಬ್ಬರೂ ರಬ್ಬರಿನ ಬಳಕೆಗೆ ತಮ್ಮ ಅನಿಚ್ಛೆಯ ಪ್ರತಿಕ್ರಿಯೆಯನ್ನು ಹೊಂದಬಹುದು.

ಬಳಸುವವರಿಗೆ, ಒಳ್ಳೆಯ ಲೋಳೆಯ ಪದಾರ್ಥವನ್ನು ಕಾಣುವ ಕೆಲಸಕ್ಕೆ ಮಧ್ಯೆ ಪ್ರವೇಶಿಸಬಹುದು ಮತ್ತು ಸಹಜ ಮಾರ್ಗಗಳಿಗಿಂತ ಅವು ಕಡಿಮೆ ಪರಿಣಾಮವನ್ನು ಹೊಂದುವಂಥದಾಗಿರಬಹುದು.

**ಪರಿಣಾಮಿಕಾರಿತ್ವ**

ಸುಮಾರು 55-65.

**೫. ಬಳೆ (Loop) ಗರ್ಭನಿರೋಧಕ ಉಪಕರಣ.**

ಅನೇಕ ಬಗೆಯ ಗರ್ಭನಿರೋಧ ಉಪಕರಣಗಳು ಇಂದು ಮಾರುಕಟ್ಟೆಯಲ್ಲಿ ದೊರಕುತ್ತವೆ. ಅವುಗಳಲ್ಲಿ ಕೆಲವನ್ನು ಹಿಂದಕ್ಕೆ ತೆಗೆದುಕೊಳ್ಳಲಾಗಿದೆ.

ಲಿಪ್‌ಸ್ ಬಳೆಯಂಥ ಉಪಕರಣಗಳು ಪಾಲಿಥಿನ್ ಪ್ಲಾಸ್ಟಿಕ್ ಮಾದರಿಯಿಂದ ಮಾಡಿದವು. ಅದು ಬೇರಿಯಂ ಸಲ್ಫೇಟ್ ಅನ್ನು ಒಳಗೊಂಡಿರುತ್ತದೆ. ಬೇರಿಯಂ ಸಲ್ಫೇಟ್ ಅದರಲ್ಲಿರುವುದು ಏಕೆಂದರೆ ಗರ್ಭನಿರೋಧಕ ಉಪಕರಣವನ್ನು ಏಕ್ಸರೇ ಮೂಲಕ ನೋಡಬಹುದು.

ಲಿಪ್ಸ್ ಬಳೆಯನ್ನು ೧೯೮೫ನೇ ಅಕ್ಟೋಬರ್‌ನಲ್ಲಿ ಅಮೇರಿಕ ಸಂಯುಕ್ತ ಸಂಸ್ಥಾನದಲ್ಲಿ ಹಿಂತೆಗೆದುಕೊಳ್ಳಲಾಯಿತು. ಕಾಪರ್ ಟಿ ಮತ್ತು ಕಾಪರ್ ೭ ಗಳೂ ಉಪಕರಣಗಳೇ ಅವುಗಳ ಬುಡವನ್ನು ತಾಮ್ರದ ತಂತಿ ಸುತ್ತಿಕೊಂಡಿರುತ್ತದೆ. ಪ್ರೊಗ್ರೆಸ್ಟೆರೋನ್ ಟಿ ಕೂಡ ಒಂದು ಉಪಕರಣ. ಅದರಲ್ಲಿ ಗರ್ಭದಲ್ಲಿ ನಿಧಾನವಾಗಿ ಬಿಡುಗಡೆ ಆಗುವ ಪ್ರೊಗ್ರೆಸ್ಟೆರೋನ್ ಅಡಗಿರುತ್ತದೆ. ಡಾಕನ್ ಪೀಲ್ಡ್ ಕೂಡ ಒಂದು ಉಪಕರಣ. ಅದನ್ನು ಮಾರುಕಟ್ಟೆಯಿಂದ ಬಹುಹಿಂದೆಯೇ ಹಿಂದೆಗೆದುಕೊಳ್ಳಲಾಗಿತ್ತು. ಕಾರಣ ಅದರ ಪ್ರತಿಕೂಲ ಪರಿಣಾಮಗಳು ಮತ್ತು ಸಂಬಂಧಿಸಿದ ಮರಣಗಳು.

೧೯೮೬ ರಲ್ಲಿ ಕಾಪರ್ ಟಿ ತಯಾರಕರು ಅದನ್ನು ಅಮೇರಿಕ ಮಾರುಕಟ್ಟೆಯಿಂದ ಹಿಂದಕ್ಕೆ ತೆಗೆದುಕೊಂಡರು. ಹೊಸದಾಗಿ ಫಲವತ್ತಾದ ಅಂಡಾಶಯದ ಸ್ಥಾಪನೆಯನ್ನು ತಡೆಹಿಡಿಯುವಲ್ಲಿ ಅದಷ್ಟು ಬೇಗನೆ ಅಭಿವೃದ್ಧಿಯ ಹಂತದಲ್ಲಿ ವಿವಿಧ ಕ್ರಿಯೆಗಳ ಮೂಲಕ ಐಯುಡಿ ಕೆಲಸ, ಪರಿಣಾಮವಾಗಿ, ಗರ್ಭಾಶಯ ಕೇಂದ್ರಿಕೃತವಾಗುತ್ತದೆ.

**ಕ್ರಿಯೆಯು ಬಗೆ**

ಅವು ಹೊರಗಿನ ಪದಾರ್ಥಗಳಾದುದುರಿಂದ ಕೊಳವೆಗಳನ್ನು ಮತ್ತು ಗರ್ಭಾಶಯಗಳನ್ನು ಸಂಕೋಚಗೊಳ್ಳುವುದನ್ನು ಕೂಡ ಹೆಚ್ಚಿಸಿಕೊಳ್ಳಬಹುದು ಮತ್ತು ಅಂಡಾಣು ಕ್ರಿಯೆಯ ನಂತರ ಸ್ತ್ರೀ ಅಂಡಾಣುಗಳನ್ನು ಹೊರಹಾಕಬಹುದು. ಈ ಮೂಲಕ ಫಲವತ್ತತೆಯನ್ನು ತಡೆಹಿಡಿಯಬಹುದು.

**ಮಾರ್ಗ**

ದುರ್ಮಾಂಸ ಪ್ರಾರಂಭದ ಗರ್ಭಧಾರಣೆಯೊಡನೆ, ಇಲ್ಲ ಯಾವುದೇ ಸೋಂಕಿಲ್ಲವೆಂದು ನಿರ್ಧರಿಸುವುದಕ್ಕೆ ವೈದ್ಯರು ಮೊದಲು ಪರೀಕ್ಷಿಸಿದ ನಂತರ ಬಳೆಯನ್ನು ವೈದ್ಯರು ಒಳಗೆ ತೂರಿಸುತ್ತಾರೆ. ಸರಿಯಾದ ಗಾತ್ರವನ್ನು ಆರಿಸಿಕೊಳ್ಳಬೇಕು.

ಬಳೆಯಲ್ಲಿ ಎರಡು ನೈಲಾನ್ ದಾರಗಳಿವೆ. ಅವು ಗರ್ಭಾಶಯದಲ್ಲಿ ಜೋತು ಬಿದ್ದಿರುತ್ತವೆ.

ಇವುಗಳಿಂದ ಬಳೆಯನ್ನು ತೆಗೆದು ಹಾಕಬಹುದು ಅಥವಾ ಆ ಸ್ಥಿತಿಯಲ್ಲಿ ಸ್ಥಿರಗೊಳಿಸಬಹುದು.

**ಅನಕೂಲಗಳು**

ಒಮ್ಮೆ ಒಳಗೆ ಸೇರಿಸಿಬಿಟ್ಟರೆ ವರ್ಷಾನುಗಟ್ಟಲೆ ಇಟ್ಟಿರಬಹುದು. ಆಗ ಯಾವುದೇ ಉದ್ದೇಶಗಳ ಅಗತ್ಯಬೇಕಾಗಿಲ್ಲ, ಕಾಲಕಾಲಕ್ಕೆ ಅದನ್ನು ಮತ್ತೆ ಮತ್ತೆ ಸೇರಿಸಬಹುದು.

**ಅನಾನುಕೂಲಗಳು**

೧. ಮೊದಲ ಸೇರಿಸಿದಲ್ಲಿ ಖರ್ಚು ಹೆಚ್ಚು, ಏಕೆಂದರೆ ವೈದ್ಯಕೀಯ ಸಿಬ್ಬಂದಿ ಮತ್ತು ಸೌಕರ್ಯಗಳು ಅದಕ್ಕೆ ಅಗತ್ಯ.

೨. ಬೆನ್ನೋವು ಮತ್ತು ವಿಸರ್ಜನೆ.

೩. ರಕ್ತಸ್ರಾವ ತೀವ್ರವಾಗಬಹುದು.

೪. ಬಳೆ ಗರ್ಭಾಶಯವನ್ನು ತೂತುತೂತುಗಳಾಗಿ ಮಾಡಬಹುದು ಮತ್ತು ಇತರ ಅಂಗಾಂಗಗಳನ್ನು ಪ್ರವೇಶಿಸಬಹುದು.

**ಪರಿಣಾಮಕಾರಿತ್ವ**

ವರ್ಷವೊಂದಕ್ಕೆ ಸುಮಾರು ೭೫ % ಅಮೇರಿಕಾದಲ್ಲಿ ಪ್ರಧಾನ ತೊಡಕುಗಳಿಗಾಗಿ ಅಂತರ ಗರ್ಭಕೋಶ ಉಪಕರಣಗಳಿಂದ (೧೫೦೦೦ ಹೆಂಗಸರನ್ನು ಆಸ್ಪತ್ರೆಗೆ ಸೇರಿಸಲಾಗುತ್ತದೆ) ಉಂಟಾಗಿದೆ ಎಂದು ಅಂದಾಜು ಮಾಡಲಾಗಿದೆ.

**ಅಕ್ಕಪಕ್ಕದ ಪರಿಣಾಮಗಳು**

ಅ. ಹಲವಾರು ಡಿಸ್ಮೆನೇರ್ರಿಯ.

ಆ. ಅಧಿಕ ಋತುಸ್ರಾವ

ಇ. ಕಟಿಭಾಗದ ದಾಹಕ ರೋಗ

ಈ. ಗರ್ಭಾಶಯದ ರಂಧ್ರಗಳು

ಉ. ಉಪಕರಣ ತತ್‌ಕ್ಷಣದ ಹೊರಹಾಕುವಿಕೆ

ಊ. ಹೊರಗೆ ತೆಗೆದ ನಂತರ ಅಫಲತ್ವತೆ.

ನಿರಂತರವಾದ ಪ್ರಮಾಣ ಬಹುನಿಧಾನ ಸುಮಾರು ೭೫ ಉಬಂದು ವರ್ಷದ ಕೊನೆಯಲ್ಲಿ ಮತ್ತು ಎರಡು ವರ್ಷದಲ್ಲಿ ಶೇಕಡಾ ೫೦. ಅಂಥ ಹೆಚ್ಚಿನ ಅನಿರಂತರ ಪ್ರಮಾಣದಲ್ಲಿ ಹೊಂದಿಸಿದ ಗರ್ಭಧಾರಣೆ ೧೦೦ ಸ್ತ್ರೀ ವರ್ಷಗಳಿಗೆ ಒಂದರಂತೆ ೨೫ ಗರ್ಭಧಾರಣೆಗಳನ್ನು ಅಂದಾಜು ಮಾಡಲಾಗಿದೆ. ( ಒಂದು ವರ್ಷದಲ್ಲಿ ೧೦೦ ಜನ ಸ್ತ್ರೀಯರು ಬಳಸುವ ದಾಮಾಪಾ).

**೬. ಜೋದಕಸ್ರಾವದ ಮಾರ್ಗಗಳು**

ಗರ್ಭನಿರೋಧಕ ಗುಳಿಗೆ.

**ಕ್ರಿಯೆ**

ಗುಳಿಗೆ ಎಂದು ಸಾಮಾನ್ಯವಾಗಿ ಪ್ರಸಿದ್ಧವಾಗಿರುವ ಈ ಪದಾರ್ಥಗಳನ್ನು ಗರ್ಭಧಾರಣೆ

ತಡೆಯಲು ಬಳಸಲಾಗುತ್ತಿದೆಃ ಗರ್ಭಧರಿಸುವುದನ್ನು (Eovulation) ಪ್ರತಿಬಂಧಿಸುವ ಅಥವಾ ಅಡಗಿಸುವ ಕ್ರಮದಿಂದ ೨ ಕಂಠದ ಲೋಳೆಯ ಪದಾರ್ಥವನ್ನು ಬದಲಾಯಿಸುವುದು. ೩ಗರ್ಭಕೊಶದ ಒಳಪೊರೆಯನ್ನು ಪರಿವರ್ತಿಸುವುದು ಇವುಗಳಿಂದ ಮಾರ್ಗ ವಾಡಿಕೆಯಾಗಿ ಒಸ್ಟ್ರೊಜನ್ ಮತ್ತು ಪ್ರೊಗೆಸ್ಟ್ರೋನ್‌ಗಳನ್ನು ಒಳಗೊಂಡಿರುವ ಗುಳಿಗೆಗಳನ್ನು ಮುಟ್ಟಾಗುವ ಆವರ್ತನದ ೫ನೆಯ ದಿನದಿಂದ ಆರಂಭಿಸಿ ೨೧ ದಿನಗಳವರೆಗೆ ಕೊಡಲಾಗುವುದು.

೨೧ ದಿನಗಳವರೆಗೆ ತೆಗೆದುಕೊಂಡ ನಂತರ ೭ ದಿನಗಳ ವಿರಾಮದ ನಂತರ ಮತ್ತು ಮುಂದುವರಿಸಿದಾಗ, ಗುಳಿಗೆಗಳನ್ನು ಮತ್ತೆ ಆರಂಭಿಸಿದಾಗ ೫ನೆಯ ದಿನ ಋತುಸ್ರಾವ ಸಂಭವಿಸುತ್ತದೆ. ಸಾಮಾನ್ಯವಾಗಿ ಬಳಕೆಯಲ್ಲಿರುವ ಜೊತೆಗೂಡಿದ ಸಿದ್ಧತೆಗಳೆಂದರೆ ಲಿಂಡಾಯಲ್, ಚವ್ಯಲೆನ್, ಅನೊವ್ಯುಲರ್, ಗೈನೊವ್ಯುಲರ್ ಇತ್ಯಾದಿ, ಪರಿಣಾಮಕಾರಿ ತಯಾರಿಕೆಗಳು. ಆರ್ಥೋನೇವಿನ್ ಮತ್ತು ಶ್ರೇಣಿ ೨೮ ಏಳು ದಿನಗಳ ಕಬ್ಬಿಣದ ಪ್ಲೇಸ್ ಮತ್ತು ವಿಟಮಿನ್ಸ್ ಗಳನ್ನು ಒಳಗೊಳ್ಳುತ್ತದೆ.

**ಅನುಕೂಲಗಳು**

೧. ಕ್ರಮಬದ್ಧವಾಗಿ ತೆಗೆದುಕೊಂಡಾಗ ಗುಳಿಗೆ ಹೆಚ್ಚು ಪರಿಣಾಮಕಾರಿ 96-98% ಏಳು ದಿನಗಳ ಚಿಕಿತ್ಸೆಯ ನಂತರ ಅನೊವ್ಯುಲರ್ ಅವಧಿಯನ್ನು ಖಚಿತಪಡಿಸುತ್ತದೆ.

೨. ಸಂಭೋಗ ಕ್ರಿಯೆಗೆ ಮಧ್ಯೆ ತಡೆಮಾಡುವುದಿಲ್ಲ. ಗಂಡಸಿನ ಸಂತಾನಹರಣ ಗುಳಿಗೆಗಳು ಸ್ಪವೋಟೋಜಿನಿಸ್ ಅನ್ನು ಅಡಗಿಸಿಬಿಡುತ್ತದೆ. ಆದರೆ ವಿಷಪೂರ್ಣವಾದುದು ಮತ್ತು ಗಂಡಸರು ಇದನ್ನು ಸಾಮಾನ್ಯವಾಗಿ ಬಳಸುವುದಿಲ್ಲ.

**ಅನುಕೂಲಗಳು**

ಕ್ರಮವಾಗಿ ತೆಗೆದುಕೊಂಡರೆ ಪರಿಣಾಮಕಾರಿ

**ಅನಾನುಕೂಲಗಳು**

೧. ತಡೆಯೊಡ್ಡುತ್ತದೆ ಅಥವಾ ಬಹಿಷ್ಕೃಯಾದಾಗ ಅಂತರಿಕ ರಕ್ತಸ್ರಾವ.

೨. ತೂಕದ ಹೆಚ್ಚಳ, ನಸಿಯ ಮತ್ತು ವಾಂತಿ ಚರ್ಮದ ಬಣ್ಣದ ಬದಲಾವಣೆ.

೩. ಋತುಸ್ರಾವದಲ್ಲಿ ಕಡಿಮೆ ಬೀಳುವುದು.

೪. ಮೂತ್ರ ರೋಗದ ಸ್ಥಿತಿಯಂತಹುದನ್ನು ಸೃಷ್ಟಿಸುತ್ತದೆ. ಮತ್ತು ಶರೀರದಲ್ಲಿ ೧೩೦ ಕ್ಕೂ ಹೆಚ್ಚಿನ ಜೀವದ್ರವ್ಯ ಪರಿಣಾಮ ಕಾರ್ಯವಿಧಾನವನ್ನು ಪ್ರಭಾವಿಸುತ್ತದೆ.

೫. ಸ್ತ್ರೀಯರಲ್ಲಿ ಲೈಂಗಿಕ ತುಟಿತನವನ್ನು ಕಡಿಮೆಮಾಡುತ್ತದೆ. ಆ ಮೂಲಕ ವೈವಾಹಿಕ ಸಂಬಂಧವನ್ನು ಪ್ರತಿ ಕೂಲವಾಗಿ ಪ್ರಭಾವಿಸುತ್ತದೆ.

**ಗಂಭೀರವಾದ ಅಕ್ಕಪಕ್ಕದ ಪರಿಣಾಮಗಳು**

೧. ಥ್ರೊಂಬೆಯೆಂಬಾಲಿಸಂ.

ಅ. ಪಲ್ಮನರಿ ಎಂಬೇಲಸ್

ಆ. ಮೈಯೊ ಕಾರ್ಡಿಯಲ್ ಇನ್‌ಫಾರ್ಕ್ಟ್

೯. ಸೆರಿಬ್ರಲ್ ಎಂಬೋಲಸ್.

೨. ಕಂಠದ ಕ್ಯಾನ್ಸರ್.

೩. ಮೂತ್ರಪಿಂಡಗದ ಊತಗಳು

೪. ಗಾಲ್‌ಬ್ಲಾಡರ್ ಕಾಯಿಲೆ

೫. ಹೈಪರ್‌ಟೆನ್ಶನ್ (ಅತಿಒತ್ತಡ)

೬. ಅಫವಲತ್ತತೆ.

ಇದರ ಜೊತೆಗೆ ಗರ್ಭನಿರೋಧದ ಬಾಹ್ಯ ಔಷಧಿಗಳನ್ನು ಹೆರಿಗೆಯ ನಂತರದ ಅವಧಿಯಲ್ಲಿ ಕೊಡುವುದು. ಹಾಲು ಹುಟ್ಟುವುದಕ್ಕೆ ತಡೆಯೊಡ್ಡಬಹುದು. ಎದೆ ಹಾಲಿನ ಪ್ರಮಾಣ ಮತ್ತು ಗುಣ ಕಡಿಮೆಯಾಗುವ ಸಾಧ್ಯತೆಯಿರುತ್ತದೆ. ಅಷ್ಟೇ ಅಲ್ಲದೆ, ಗರ್ಭ ನಿರೋಧಕದ ಬಾಹ್ಯ ಔಷಧಿಗಳಲ್ಲಿರುವ ಚೋದಕಸ್ರಾವದ ಏಜೆಂಟ್ಸ್‌ಗಳನ್ನು (ಕಾರಕಗಳನ್ನು) ಅವುಗಳನ್ನು ಸೇವಿಸುವ ತಾಯಂದಿರ ಹಾಲಿನಲ್ಲಿ ಗುರುತಿಸಲಾಗಿದೆ. ಆದರೆ ಮಕ್ಕಳಲ್ಲಿ ಅವುಗಳ ನಿರ್ದಿಷ್ಟ ಪರಿಣಾಮಗಳನ್ನು ಇನ್ನೂ ನಿರ್ಧರಿಸಲಾಗಿಲ್ಲ. ಆದರೆ ಅವು ಸ್ಪಷ್ಟವಾಗಿ ಗೋಚರಿಸುತ್ತಿರುವದಂತೂ ಖಂಡಿತ.

ಆದಾಗ್ಯೂ ಆದರ ಸತತ ಪ್ರಮಾಣ ಸುಮಾರಾಗಿ ಕಡಿಮೆಯೆ. ಹ್ಯಾಚರ್ ಸೂಚಿಸುತ್ತಾನೆ. ಅದರ ಬಳಕೆಯ ಮೊದಲ ವರ್ಷದ ಅವಧಿಯಲ್ಲಿ ರೋಗಿಗಳಲ್ಲಿ ಶೇಕಡಾ ೪೫ ರಿಂದ ೭೫ ರವರೆಗೆ ಗರ್ಭನಿರೋಧಕ ಗುಳಿಗೆಗಳನ್ನು ಸತತವಾಗಿ ಉಪಯೋಗಿಸುತ್ತಿರುತ್ತಾರೆ.

**ಡಿಪೊಪ್ರೂವೆರ**

ಡಿಪೊಪ್ರೊವೆರ ಚೋದಕಸ್ರಾವದ ಒಂದು ಬಲಿಷ್ಠ ಡಿಪೋ ಡೋಸ್ ( ಒಸ್ಟ್ರೆಜೆನ್ ಪ್ರೊಗೆಸ್ಟೋಜೆನ್ ) ಇದನ್ನು ಹೆಂಗಸಿನ ದೇಹದೊಳಕ್ಕೆ ಚುಚ್ಚುಮದ್ದಿನಿಂದ ಸೇರಿಸಲಾಗುತ್ತದೆ. ಇದು ೧ ರಿಂದ ೩ವರ್ಷಗಳ ಕಾಲದ ಅವಧಿಯ ತನಕ ಕ್ರಿಯಾಶೀಲವಾಗಿರುತ್ತದೆ.

**ಒಳಸೇರಿಸುವುದು**

ಒಳಸೇರಿಸುವದು (ನಾರಪ್ಲಾಂಟ್ಸ್) ಚೋದಕಸ್ರಾವದ ಗುಳಿಗೆಗಳನ್ನು (ಪೆಲೆಟ್‌ಗಳು) ಹೆಂಗಸಿನ ತೊಡೆ ಅಥವಾ ಭುಜಗಳ ಒಳಕ್ಕೆ ಚಿಕಿತ್ಸೆಯಿಂದ ಸೇರಿಸಲಾಗುತ್ತದೆ. ಅದು ೫ ವರ್ಷಗಳ ವರೆಗೆ ಕ್ರಿಯಾಶೀಲವಾಗಿರುತ್ತದೆ. ಎರಡೂ ಅಕ್ಕಪಕ್ಕ ಎಪಾರ್ಶ್ವಏ ಪರಿಣಾಮಗಳನ್ನು ಹೊಂದಬಹುದು.

ಜಪಾನಿನಲ್ಲಿ ಇದನ್ನು (ಗುಳಿಗೆಯನ್ನು) ಆರೋಗ್ಯದ ಕಾರಣಗಳಿಗಾಗಿ ಬಹಿಷ್ಕರಿಸಲಾಗಿದೆ ಡಿಪೊಪ್ರೊವೆರ ಅಥವಾ ಧೀರ್ಘಕಾಲ ಕ್ರಿಯಾತ್ಮಕವಾಗಿರುವ ಚುಚ್ಚುಮದ್ದುಗಳನ್ನು ಅಮೇರಿಕ ಬಹಿಷ್ಕರಿಸಿದೆ. ಕಾರಣ ಅವುಗಳ ಪಾರ್ಶ್ವಪರಿಣಾಮಗಳಿಗಾಗಿ. ಚೋದಕಸ್ರಾವದ ಒಳಸೇರಿಸುವ ಪದಾರ್ಥಗಳು ಕೂಡ ಅಷ್ಟೇ ಪ್ರಮಾಣದಲ್ಲಿ ಅಪಾಯಕಾರಿ. ಆದ್ದರಿಂದ ಅವುಗಳನ್ನು ಬಳಸಬಾರದು.

೧೧೧ ಕಾಯಂ ಅಥವಾ ರದ್ದು ಪಡಿಸಲಾಗದ ಮಾರ್ಗಗಳು ನಿರ್ವೀರ್ಯೀಕರಣ ಅಥವಾ ಚಿಕಿತ್ಸಕ ಕ್ರಮಗಳು

ಅ. ಸ್ತ್ರೀಯರಲ್ಲಿ ಟ್ಯೂಬೆಕ್ಟೆಮಿ

ಹೊಟ್ಟೆಯ ಮೇಲೆ ಮಾಡುವ ಗಾಯದ ಮೂಲಕ ಇದನ್ನು ಸಾಮಾನ್ಯವಾಗಿ ನಡೆಸುತ್ತಾರೆ, ಕೊಳವೆಗಳನ್ನು ಕಟ್ಟುತ್ತಾರೆ ಮತ್ತು ಕಚ್ಚುಮಾಡುತ್ತಾರೆ. ಹೆಂಗಸಿಗೆ ಸಂಬಂಧಿಸಿದ ಪ್ರಧಾನ ಶಸ್ತ್ರ ಕ್ರಿಯೆಗೆ ಅನುಭವಸ್ಥ ವೈದ್ಯನೇಬೇಕು, ಯೋನಿನಾಳದ ನಿರ್ವೀರಿಕರಣವನ್ನು ಬಹು ಅಪರೂಪವಾಗಿ ಮಾಡುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿ ಕೊಳವೆಗಳನ್ನು ಮುಚ್ಚಲು ಕ್ಲಿಪ್ಪುಗಳನ್ನು. ಚುಚ್ಚುಮದ್ದುಗಳನ್ನು ಬಳಸುತ್ತಾರೆ.

ಅನುಕೂಲಗಳು

ಇದೊಂದು ಕಾಯಂ ಪದ್ಧತಿ.

ಅನಾನುಕೂಲಗಳು

೧. ಇದೊಂದು ಕಾಯಂಪದ್ಧತಿ.
೨. ಪ್ರಧಾನ ಉದರದ ಶಸ್ತ್ರಕ್ರಿಯೆ ಮತ್ತು ಅರಿವಳಿಕೆಯ ಅಸ್ತಿತ್ವ.
೩. ಸೋಂಕು
೪. ಮಾನಸಿಕ ಸಮಸ್ಯೆಗಳ ಸಾಧ್ಯತೆ
೫. ಮುಟ್ಟಿ ಅಡಚಣೆಗಳು
೬. ಗರ್ಭಾಶಯಕ್ಕೆ ರಕ್ತಸರಬರಾಜು ತಡೆಯಾಗುವುದರಿಂದ ಗರ್ಭಾಶಯದ ನಿಷ್ಕ್ರಿಯತೆ.

ಪರಿಣಾಮಕಾರಿತ್ವ.

೯೬-೯೮%.

ಬಿ. ವ್ಯಾಸೆಕ್ಟಮಿ

ಗಂಡಸಿನಲ್ಲಿ ಕೊಳವೆಗಳನ್ನು (Var Deterens) ಕತ್ತರಿಸಲಾಗುವುದು. ಮತ್ತು ವೃಷಣ (ಅಂಡಕೋಶ)ದಲ್ಲಿ ಕತ್ತರಿಸುವುದರ ಮೂಲಕ ಬಂಧಿಸುವುದಾಗುತ್ತದೆ. ಆದ್ದರಿಂದ ಧಾತುಗಳಿಂದ ತುಂಬಿದ ವೀರ್ಯ ವಿಸರ್ಜನೆಯಾಗುವುದಿಲ್ಲ.

ಅನಾನುಕೂಲಗಳು

೧. ಕಾಯಂ ಪದ್ಧತಿ, ರದ್ದು ಮಾಡುವಿಕೆಗೆ ಗ್ಯಾರಂಟಿ ಕೊಡಲಾಗುವುದಿಲ್ಲ.
೨. ಶಿಖಂಡಿತನಕ್ಕೆ, ನರಗಳ ಒತ್ತಡದಿಂದ ಮಾನಸಿಕ ಪರಿಣಾಮಗಳನ್ನು ಗುರುತಿಸಲಾಗುವುದು.

ಪರಿಣಾಮಕಾರಿತ್ವ

96-98%

ಲ್ಯಾಪರೋಸ್ಕೋಪಿ

ಅಂಡನಾಳದ ಕೊಳವೆಯನ್ನು ಮುಚ್ಚುವ ಕಾರ್ಯವಿಧಾನವನ್ನು ವಿವಿಧ ರೀತಿಗಳಲ್ಲಿ

ನಡೆಸಲಾಗುವುದು. ಚಿಕಿತ್ಸೆಯ ಜೊತೆಗೆ ಬಳಸುವ ಎರಡು ವಿಧಾನಗಳೆಂದರೆ, ಉಪರೊಸ್ಕೊಪಿ ಅಥವಾ ಸಣ್ಣಲ್ಯಾಪರೇ ಸ್ಕೊಪ.

ವ್ಯಾಸಕ್ಟೆಮಿಗಳನ್ನು ಮಾಡಿಸಿಕೊಂಡ ಪುರುಷರು ಶಸ್ತ್ರ ಕ್ರಿಯೆ ಆದ ಮೂರು ತಿಂಗಳವರೆಗೆ ಸಧೃಢವಾಗಿ ಫಲವತ್ತಾಗಿರುತ್ತಾರೆ. ಏಕೆಂದರೆ ವೀರ್ಯಾಣುಗಳು ಕೊಳವೆಯ ಅಂಚಿನಲ್ಲಿ ಇನ್ನೂ ಉಳಿದುಕೊಂಡಿರುತ್ತವೆ. ವ್ಯಾಸೆಕ್ಟೆಮಿ ಮಾಡಿಸಿಕೊಂಡ ಅನೇಕ ಜನ ಗಂಡಸರು ತಮ್ಮ ಫಲವತ್ತತೆಯನ್ನು ಪೂರ್ಣವಾಗಿ ಕಳೆದುಕೊಳ್ಳಲು ಇಚ್ಛೆ ಪಡುವುದಿಲ್ಲ. ತಮ್ಮ ಸ್ವಂತ ವೀರ್ಯಾಣುಗಳನ್ನು, ಮುಂದೇನಾದರೂ ತಮ್ಮ ಮನಸ್ಸು ಬದಲಾದರೆ ಉಪಯೋಗಕ್ಕೆ ಇರಲಿ ಎಂದು. ಧಾತು ಬ್ಯಾಂಕಿ ನಲ್ಲಿ ಸಂಗ್ರಹಿಸಿಟ್ಟು ಕೊಳ್ಳುತ್ತಾರೆ.

ವ್ಯಾಸೆಕ್ಟೆಮಿಯ ತೊಡಕುಗಳೆಂದರೆ ಹೆಚ್ಚಿಗೆ ಭಾಗ, ತಿಳಿದಿರುವುದಿಲ್ಲ. ಶೇಕಡಾ ೨೦ರಷ್ಟು ಜನ ವ್ಯಾಸೆಕ್ಟೆಮಿ ಆದನಂತರ ಅಶಕ್ತರೆಂಬ ಭಾವನೆಯನ್ನು ಹೊಂದಿರುತ್ತಾರೆ. ವೀರ್ಯಧಾತುಗಳ, ಕಾಯಂ ತಡೆಹಿಡಿಯುವಿಕೆಯ ಪರಿಣಾಮಗಳೇನು ಎಂಬುದನ್ನು ನಿರ್ಧರಿಸುವ ಕಾರ್ಯ ವಿಧಾನ ಇನ್ನೂ ಈಗಲೂ ಶೋಧನೆಯ ಹಂತದಲ್ಲೇ ಇದೆ. ಕೆಲವು ಅಧ್ಯಯನಗಳು ನೀಡಿರುವ ಸೂಚನೆಗಳೆಂದರೆ, ಶರೀರ ವಿರೋಧಿ ಉತ್ಪನ್ನಗಳು ವೀರ್ಯಾಣುಗಳು ಹಿಂದಕ್ಕೆ ಹರಿಯುವುದರಿಂದ ಅದರ ಫಲವಾಗಿ ಅರ್ಥೈಟಿಸ್ ಅಥವಾ ಅರ್ಟರಿಯೊ ನಿರೊಸಿಸ್ ಕೂಡ, ಅಥವಾ ಹೆಚ್ಚಿನ ಒತ್ತಡ ಇತ್ಯಾದಿಗಳಿಗೆ ಕಾರಣವಾದ ಚೋದಕಸ್ರಾವದ ಏರುಪೇರುಗಳು ಉಂಟಾಗಬಹುದು.

(ಪಾರ್ಶ್ವಕ ಪರಿಣಾಮಗಳಿಗೆ ಮತ್ತು ಗರ್ಭನಿರೋಧಕ ತೊಡಕುಗಳಿಗೆ ಮತ್ತು ನಿರ್ವಿಯಿಕರಣಕ್ಕೆ ಕ್ರೆಸ್ಟ್ ನಿಂದ ಮನೊಗ್ರಾಫ್ ನ್ನು ನೋಡಿ).

## ವರ್ಗ ಚಟುವಟಿಕೆ

೧. ಚರ್ಚಿಸಿ

೧. ಕುಟುಂಬ ಯೋಜನೆ ಕುಟುಂಬಗಳ ಅನುಕೂಲಗಳಿಗಾಗಿಯೇ ಇರುವುದು.

೨. ಭಾರತದಲ್ಲಿ ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಕುಟುಂಬ ಯೋಜನೆಯನ್ನು ಏಕೆ ಸ್ವೀಕರಿಸಿಲ್ಲ.

೩. ಕೆಲವು ಪಾಶ್ಚಿಮಾತ್ಯ ದೇಶಗಳಲ್ಲಿ , ಈಗ ಮಕ್ಕಳನ್ನು ಪಡೆಯಲು ದಂಪತಿಗಳಿಗೆ ಪ್ರೋತ್ಸಾಹ ನೀಡುತ್ತಿದ್ದಾರೆ.

೨. ಅಭ್ಯಾಸ

೧. ಗರ್ಭಾಣುಕ್ರಿಯೆಯ (Ovulation) ದಾಖಲೆಯನ್ನು ವಿದ್ಯಾರ್ಥಿನಿಯರು ಸಂಗ್ರಹಿಸಬೇಕು.

೨. ಕುಟುಂಬ ಯೋಜನೆ ಮಾರ್ಗಗಳ ಮೇಲೆ ಪ್ರದರ್ಶನಗಳು

೩. ಚಲನಚಿತ್ರಗಳು.

ಅಧ್ಯಾಯ ೧೬

# ಮಾನಸಿಕ ಆರೋಗ್ಯ

## ಮಾನಸಿಕ ಆರೋಗ ಮತ್ತು ಮಾನಸಿಕ ಆರೋಗ್ಯ ಶಾಸ್ತ್ರ

ಮಾನಸಿಕ ಆರೋಗ್ಯ ಸಾಮಾನ್ಯ ಆರೋಗ್ಯದ ಒಂದು ಅಂತರಿಕ ಭಾಗ. ಅದನ್ನು ಆರೋಗ್ಯಶಾಸ್ತ್ರವನ್ನಾಗಿ ಬೆಳಸಬಹುದು. ಅದೇ ಅಭ್ಯಾಸ ಮತ್ತು ನಿತ್ಯಜೀವನದ ವಿಶಿಷ್ಟ ನಂಬಿಕೆಗಳಲ್ಲಿ ಮತ್ತು ಮುಂದಿನವುಗಳಿಗೆ ಸಹಾಯಕವಾಗುವಂಥ ಸ್ವಭಾವಗಳಲ್ಲಿ ಬಳಕೆಯಲ್ಲಿವೆ.

ಅ. ಬದುಕಿನ ದಿನ ದಿನದ ಘಟನೊಗಳೊಡನೆ ತೃಪ್ತಿಕರವಾಗಿ ವ್ಯವಹರಿಸುವುದು.

ಆ. ಅತ್ಯಂತ ಕಡಿಮೆ ಪೇಚಾಟದಿಂದ ಒತ್ತಾಯದ ಸನ್ನಿವೇಶಗಳಲ್ಲಿ ವಿವಿಧ ಘಟನೆಗಳ ಮತ್ತು ವ್ಯಕ್ತಿಗಳ ಸಂಬಂಧದಲ್ಲಿ ಕೆಲವು ಪಾತ್ರಗಳನ್ನು ನಿರ್ವಹಿಸುವುದು.

ಇ. ಆತ್ಮ ಸಂಯಮದ ರೀತಿಯಿಂದ ಕಲಹಗಳನ್ನು ನಿರ್ಧರಿಸುವುದು.

ಈ. ಮೇಲ್ಕಂಡ ಸನ್ನಿವೇಶಗಳಲ್ಲಿ ಸೂಚಿಸಿದಾಗಲೆಲ್ಲ ಸಹಾಯವನ್ನು ಪಡೆಯುವುದು.

## ಮಾನಸಿಕ ಆರೋಗ್ಯ

ಎಂದರೆ ಶಬ್ದಗಳಲ್ಲಿ ಹೇಳುವುದಾದರೆ ವ್ಯಕ್ತಿತ್ವದ ಬೆಳವಣಿಗೆ ಪ್ರಯತ್ನ ಅದು ವ್ಯಕ್ತಿ ಸ್ವಭಾವವನ್ನು ಅಥವಾ ಭಾವಗಳ ಪಕ್ವತೆಯನ್ನು ಮತ್ತು ಕ್ರಿಯೆಗಳನ್ನು ವ್ಯಕ್ತಿಯ ಜೊತೆಗೆ ಬೆಳೆಸುತ್ತದೆ,

ಕೆಳಗಿನ ಚಿತ್ರದಲ್ಲಿ ಮನುಷ್ಯ ವ್ಯಕ್ತಿಯ ಅಥವಾ ಆತ್ಮ ಆಸ್ತಿಪಂಜರದ ರಚನೆಯ ಪೂರಕಗಳನ್ನು ನಾವು ಕಾಣಬಹುದು.



